# ಸಮಗ್ರ ದಾಸ ಸಾಹಿತ್ಯ

ಸಂಪುಟ : ೧೮ - ಭಾಗ ೪



# ನಂಜನಗೂಡು ತಿರುಮಲಾಂಬಾ ಮತ್ತು ಇತರ ಮಹಿಳಾ ಹರಿದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೮
ಭಾಗ–೪

# ನಂಜನಗೂಡು ತಿರುಮಲಾಂಬಾ ಮತ್ತು ಇತರ ಮಹಿಳಾ ಹರಿದಾಸರ ಕೀರ್ತನೆಗಳು

*ಸಂಪಾದಕರು*
ಡಾ. ರುಕ್ಮಿಣಿ ಗಿರಿಮಾಜಿ
ಹೆಚ್.ಎಸ್.ಪದ್ಮಾಮೂರ್ತಿ
ಪ್ರೊ. ನಾ.ಗೀತಾಚಾರ್ಯ
ಡಾ. ನೀ.ಕೃ.ರಾಮಶೇಷನ್
ಮೀನಾರಾವ್
ನಳಿನಿ ವೆಂಕಟೇಶ್

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA VOLUME - 18 Part 4** :
*Nanjanagoodu Tirumalamba Mathu Ithara Mahila Haridasara Keerthanegalu*, Edited by Dr. Rukmini Girimaji, H. S. Padmamurthy, Prof. Na. Geetacharya , Dr. N. K. Ramaseshan, Meena Rao and Nalini Venkatesh. Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 118+೭೬೦


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು - ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು - ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ

ಡಾ. ಟಿ. ಎನ್. ನಾಗರತ್ನ

ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ

ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)

ಡಾ. ಕೃಷ್ಣ ಕೊಲ್ಹಾರಕುಲಕರ್ಣಿ

ಡಾ. ಮಂದಾಕಿನಿ

ಪ್ರೊ. ಸುಧಾಕರ

ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯಮಯ ವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ.ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ.ರಾಮಮೂರ್ತಿ, ಶ್ರೀ ಸಿ.ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ.ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು–ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವಕ್ಕೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ಡಾ. ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

| ವಿಷಯ | | ಪುಟ |
|---|---|---|
| ೧. | ಮುನ್ನುಡಿ | 5 |
| ೨. | ಎರಡು ಮಾತು | 7 |
| ೩. | ಯೋಜನೆಯನ್ನು ಕುರಿತು | 9 |
| ೪. | ಪ್ರಕಾಶಕರ ಮಾತು | 11 |
| ೫. | ಸಂಪಾದಕ ಮಂಡಳಿಯ ನುಡಿ | 13 |
| ೬. | ಪ್ರಸ್ತಾವನೆ | 22 |
| ೭. | ಕೀರ್ತನೆಗಳ ಕ್ರಮಸೂಚಿ | ೯೧ |
| ೮. | ಕೀರ್ತನೆಗಳು | |

# ಪ್ರಸ್ತಾವನೆ

## ೧. ಯದುಗಿರಿಯಮ್ಮನವರು

ಕನ್ನಡ ನಾಡಿನಲ್ಲಿ ಮೊದಲ ಕವಯಿತ್ರಿ ಕಂತಿ. ಈಕೆ ನಾಗಚಂದ್ರನ ಸಮಕಾಲೀನಳೆಂದು ತಿಳಿದುಬರುತ್ತದೆ. ಆದರೆ ಈಕೆಯ ಇರುವಿಕೆಯ ಬಗ್ಗೆ ಅನುಮಾನಗಳಿವೆ. ದಾಖಲೆಗಳ ಪ್ರಕಾರ ಶಿವಶರಣೆಯರಾದ ಮಹಾದೇವಿಯಕ್ಕ, ನೀಲಾಂಬಿಕೆ, ಗಂಗಾಂಬಿಕೆ, ನಾಗಲಾಂಬಿಕೆ, ಮುಕ್ತಾಯಕ್ಕ – ವಚನಕಾರ್ತಿಯರು, ಮೊದಲ ಕವಿಯಿತ್ರಿಯರು. ಇವರ ಮತ್ತು ಕ್ರಿ.ಶ. ೧೪–೧೫ ನೇ ಶತಮಾನದ ಹರಿದಾಸರ ಪ್ರೇರಣೆನಂತರದ ಮಹಿಳಾ ಕೃತಿಕಾರಮೇಲಾಗಿದೆ. ಇವರಲ್ಲಿ ಶ್ರೀವೈಷ್ಣವ ಧರ್ಮ ಪ್ರತಿಪಾದಕರೂ ಇದ್ದಾರೆ.

ಸಂಚಿಯ ಹೊನ್ನಮ್ಮನ "ಹದಿಬದೆಯ ಧರ್ಮ"ದಲ್ಲಿ ಶ್ರೀವೈಷ್ಣವ ಮತಾಭಿಮಾನವು ಹಲವೆಡೆ ಅಭಿವ್ಯಕ್ತಗೊಂಡಿದೆ. ಮುಂದೆ ಸಾಗಿದಂತೆ, ೧೮ನೇ ಶತಮಾನದ ಅಂಚಿನಲ್ಲಿದ್ದ ಚೆಲುವಾಂಬೆ ತನ್ನ ಕೃತಿಗಳಲ್ಲಿ ಶ್ರೀವೈಷ್ಣವ ಭಕ್ತಿಗೆ ಪ್ರಾಧಾನ್ಯ ನೀಡಿದ್ದಾರೆ. ಹೀಗೆಯೇ ಶೃಂಗಾರಮ್ಮ ಎಂಬಾಕೆಯೂ ಅನೇಕ ಕೃತಿ ರಚಿಸಿರುವುದು ಕಂಡು ಬರುತ್ತದೆ. ತಿರುಮಲಾಂಬಾ ಅವರು ಈ ಪರಂಪರೆಯವರೇ ಆಗಿದ್ದಾರೆ. ದಾಸಸಾಹಿತ್ಯದ ಮಧ್ವ ಸಿದ್ಧಾಂತ ಪ್ರೇರಣೆಯಿಂದ ಬೆಳಕಿಗೆ ಬಂದ ಮಹಿಳಾ ಕೀರ್ತನಕಾರ್ತಿಯರು: ಹೆಳವನಕಟ್ಟೆ ಗಿರಿಯಮ್ಮ (೧೭೫೦), ಹರಪನಹಳ್ಳಿ ಭೀಮವ್ವ (ಸು ೧೮೦೩), ಗಲಗಲಿಯ ಅವ್ವ, ಆಕೆಯ ಶಿಷ್ಯೆ ಭಾಗಮ್ಮ, ಚ.ರಾ. ಚೆಲ್ಲಮ್ಮ (೧೮೫೦),ಗಣಪಕ್ಕ (೧೮೭೦) ಸುಂದರಾಬಾಯಿ (೧೮೭೫), ಪನ್ನಿ ಲಕ್ಷೀಬಾಯಿ (೧೮೮೦), ಓರಬಾಯಿ ಲಕ್ಷ್ಮಿದೇವಮ್ಮ (೧೮೯೦) ಅಂಬಾಬಾಯಿ (೧೯೦೦) ಮೈಸೂರು ವಿದ್ಯಾರಣ್ಯಪುರದ ಜೀವೂಬಾಯಿ – ಹೀಗೆ ಅನೇಕ ಮಹಿಳಾ ಕೀರ್ತನಕಾರ್ತಿಯರು ಬಂದು ಹೋಗಿದ್ದಾರೆ.

ಯದುಗಿರಿ ಅಮ್ಮನವರು ೧೮ನೇ ಶತಮಾನದ ಆರಂಭದ ನಂತರ ಬಂದು ಹೋದವರು. ಈಕೆಯ ಕಾಲ, ಸು ೧೮೨೦-೧೯೦೮. ನಂಜನಗೂಡು ತಿರುಮಲಾಂಬಾ ಇವರಿಗಿಂತ ತುಂಬಾ ಕಿರಿಯವರು.

ಭಕ್ತಿಸಾಹಿತ್ಯ ಪರಂಪರೆಯ ಒಂದು ವಿಶಿಷ್ಟ ಕೊಡುಗೆ, ಜಗತ್ತಿಗೆ, ಹರಿದಾಸ ಸಾಹಿತ್ಯ ಎಂದರೆ ಉತ್ಪ್ರೇಕ್ಷೆಯಾಗದು. ವೇದಾಂತ ತತ್ವದ ಮೂರು ಪ್ರಮುಖ ಶಾಖೆಗಳಾದ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳ ಪೈಕಿ, ಆಚಾರ್ಯ ಮಧ್ವರ (ಕ್ರಿ.ಶ. ೧೩ ನೇ ಶತಮಾನ ) ವೈಷ್ಣವಧರ್ಮ- ದ್ವೈತಸಿದ್ಧಾಂತ- ಶ್ರೀ ಹರಿಸರ್ವೋತ್ತಮತ್ವ - ಇದೆಲ್ಲದರ ಪ್ರಸಾರ ಕನ್ನಡ ನಾಡಿನ ಪಂಡಿತ - ಪಾಮರರಾದಿಯಾಗಿ ಎಲ್ಲರಿಗೂ ಆದದ್ದು, ಹರಿದಾಸರ ದಾಸಸಾಹಿತ್ಯ - ಕೀರ್ತನ ಸಂಪದದ ಮೂಲಕ, ಸುಮಾರು ೨೫೦ಕ್ಕೂ ಹೆಚ್ಚಿನ ಹರಿದಾಸರು ಆಗಿಹೋಗಿದ್ದಾರೆ. ಹಾಗೂ ಇನ್ನೂ ಕೀರ್ತನೆಗಳ ರಚನೆ ಬೆಳೆದೇ ಇದೆ. ಈ ದಿಸೆಯಲ್ಲಿ ಕ್ರಿ. ಶ. ೧೦೧೭-೧೧೩೭ರಲ್ಲಿ ಅವತರಿಸಿದ ಆಚಾರ್ಯ ರಾಮಾನುಜರು ಅವರ ಪ್ರಪತ್ತಿ ತತ್ವ - ಶರಣಾಗತಿ ತತ್ವ - ವಿಶಿಷ್ಟಾದ್ವೈತ ಸಿದ್ಧಾಂತ - ಪ್ರಸಾರಗೈದದ್ದು ಶ್ರೀಹರಿಪಾರಮ್ಯವನ್ನು, ಶ್ರೀವೈಷ್ಣವ ಹರಿದಾಸ ಸಾಹಿತ್ಯವೂ ಬೆಳೆದು ಬಂದು, ಅಲ್ಲಲ್ಲಿ ಮಿಂಚಿದೆ ಎಂಬುವುದು ತಿಳಿದು ಬಂದದ್ದು ವಿಶೇಷತ; ಕರ್ನಾಟಕದಲ್ಲಿ ಬೇಲೂರು ವೈಕುಂಠದಾಸರು ಮತ್ತು ಕನಕದಾಸರಲ್ಲಿ ಕಾಣುವ ಶ್ರೀವೈಷ್ಣವ ದಾಸತ್ವದ ಮೂಲಕ. ಇದೇ ರೀತಿ ಅದ್ವೈತ ತತ್ವದ ಪರಂಪರೆಯಲ್ಲಿ ತಿಮ್ಮಪ್ಪದಾಸರ ಕೀರ್ತನೆಗಳು, ಕೆಳದಿ ವೆಂಕಣ್ಣನ ಕೀರ್ತನೆಗಳು, ಬೇಟೆರಾಯ ದೀಕ್ಷಿತರ ಕೀರ್ತನೆಗಳು, ಹೀಗೆ ಬೆಳಕು ಕಂಡಿವೆ. ದಾಸಸಾಹಿತ್ಯದ ಇರವು, ವ್ಯಾಪ್ತಿಯಲ್ಲಿ ಶ್ರೀವೈಷ್ಣವ ಮತ್ತು ಅದ್ವೈತ ಪರಂಪರೆಯ ಕೀರ್ತನೆಗಳು ದ್ವೈತ ಪರಂಪರೆಗಿಂತ ಒಂದು ಭಿನ್ನ ಸ್ವರೂಪದವಾಗಿವೆ. ಎಂಬುವ ಮೌಲಿಕ ಸಂಶೋಧನೆಯೂ ಈಚೆಗೆ ಆಗಿದೆ. ಈ ನಿಟ್ಟಿನಲ್ಲಿ ಶ್ರೀವೈಷ್ಣವ ಕೀರ್ತನಕಾರ್ತಿಯಾದ ಯದುಗಿರಿಯಮ್ಮನವರ ಕೀರ್ತನೆಗಳು ಒಂದು ಗುರುತಾಗಿ ನಿಲ್ಲಬಲ್ಲುದು ಎನಿಸುತ್ತದೆ.

ಇವರದು ವಿಶಿಷ್ಟ ತೆರನಾದ ಕೀರ್ತನ ಸಂಕಲನ. ಓರ್ವ ಉತ್ಕಟಭಕ್ತೆಯಾಗಿ ಅಂತರಂಗ ನಿವೇದಿಸಿಕೊಂಡಿರುವ; ಅಭಿವ್ಯಕ್ತಿ ಸದಾಚಾರ ಸೇವಾಸಮಾಸಾದಿತ

ಜ್ಞಾನವೈರಾಗ್ಯ ಭೂಷಿತರಾದ ಶ್ರೀ ಯದುಗಿರಿ ಅಮ್ಮನವರು, ನೂರಾರು ಬಿಡಿ ಕೀರ್ತನೆಗಳಲ್ಲದೆ, ತಮ್ಮದೇ ಆದ ವಿಶಿಷ್ಟ ಕವಿತಾಕೌಶಲದಿಂದ ಶ್ರೀಭಾಗವತ ಕಥೆ, ಶ್ರೀಮದ್ರಾಮಾಯಣ, ಶ್ರೀ ಶ್ರೀರಂಗಧ್ಯಾನ – ಆಂಡಾಳ್ ಉತ್ಸವಾದಿಗಳು, ಹೀಗೆ ಕೆಲವು ದೀರ್ಘಕೃತಿಗಳನ್ನೂ ರಚಿಸಿದ್ದಾರೆ.

## ಅ) ಕವಿ–ಕಾಲ ವಿಚಾರ

ಯದುಗಿರಿಯಮ್ಮನವರು ಶ್ರೀವೈಷ್ಣವಧರ್ಮ ಅನುಸರಿಸಿದವರು. ಸಂಪ್ರದಾಯಸ್ಥ ಕುಟುಂಬದವರು. ಇವರ ಜೀವನಾವಧಿ ಕ್ರಿ. ಶ. ೧೮೨೮ – ೧೯೦೮ ಎಂದು ವಿದ್ವಾನ್ ಶ್ರೀರಘಸುತರು ಗುರುತಿಸಿರುತ್ತಾರೆ. ಕೃತಿಗಳ ಶೈಲಿ ಕೂಡ ಆ ಕಾಲಾವಧಿಯನ್ನು ಸ್ಪಷ್ಟಪಡಿಸುತ್ತದೆ. ಅಂದಿನ ಬೆಂಗಳೂರು, ಈಗಿನಷ್ಟು ಗಲಭೆ–ಗಲಿಬಿಲಿಗಳ ಕುದಿ ತುಂಬಿರದೆ, ವಿರಳವಾಗಿ ಇದ್ದು, ಸಂಸ್ಕೃತಿಯ ಪಾರಂಪರಿಕ ಮೌಲ್ಯಗಳನ್ನು ತುಂಬಿಕೊಂಡಿದ್ದ ಶಾಂತಪರಿಸರ ಇರಿಸಿಕೊಂಡಿತ್ತು. ಬೆಂಗಳೂರಿನ ಶ್ರೀ ತುಳಸಿತೋಟದ, ದೇವಸ್ಥಾನ, ಯದುಗಿರಿ ಅಮ್ಮನವರ ಕಾರ್ಯಕ್ಷೇತ್ರ ಆಗಿತ್ತು. ಅಲ್ಲದೆ, ಅಮ್ಮನವರು ಸುಮಾರು ಭಾರತವಿಡೀ ಯಾತ್ರೆ ಮಾಡಿದ್ದಾರೆ. ಆಗಿನ ಸಾರಿಗೆ ಸೌಲಭ್ಯವಿರದ ಕಾಲದಲ್ಲಿಯೂ ಬದರಿ – ಸೇತುರಾಮೇಶ್ವರ ಯಾತ್ರೆ ಮಾಡಿದ್ದಾರೆ. ತಾವು ಕಂಡ ಕ್ಷೇತ್ರಗಳು ಶ್ರೀರಂಗ, ಕಂಚಿ ( ಶ್ರೀ ವರದರಾಜ ), ಉಡುಪಿ , ಮೇಲುಕೋಟೆ (ತಿರುನಾರಾಯಣಪುರ ), ಶ್ರೀವಿಲ್ಲಿಪುತ್ತೂರು, ಶ್ರೀ ಪೆರಂಬುದೂರು, ಆಳ್ವಾರರ ದಿವ್ಯದೇಶಗಳು, ಹೀಗೆ ಅಲ್ಲಲ್ಲಿಯ ಅಧಿದೇವತೆಗಳನ್ನು ವಿಷ್ಣುಸ್ವರೂಪವನ್ನು ಮನಸಾರ ಭಕ್ತಿಯಿಂದ ಸ್ತುತಿಸಿದ್ದಾರೆ. ಸು. ೮೦ ವರ್ಷಗಳವರೆಗೆ ಜೀವಿಸಿದ್ದು ಕೊನೆಗಾಲದಲ್ಲಿ ತಮ್ಮ ಮೊಮ್ಮಕ್ಕಳ ಮೂಲಕ ತಮ್ಮ ರಚನೆಗಳನ್ನು ಬರೆಸಿದ್ದರೆಂದು ತಿಳಿದು ಬರುತ್ತದೆ. ಬಹು ಹಿಂದೆ ತೂಪ್ಪುಲ್ ವೆಂಕಟಾಚಾರ್ಯರೆಂಬುವ ಹಿರಿಯ ಶ್ರೀವೈಷ್ಣವರು, ಅಮ್ಮನವರ ಕೃತಿಗಳನ್ನು ಪ್ರಕಟಿಸಿದ್ದಾರೆ.

ಯದುಗಿರಿಯಮ್ಮ ಎಂಬುವ ಹೆಸರಿನ ಕೆಲವರು ಶ್ರೀವೈಷ್ಣವ ಮಹಿಳೆಯರು ಆಗಿಹೋಗಿದ್ದಾರೆ. "ಮಂಡ್ಯದ ಯುದುಗಿರಿಯಮ್ಮ ಟ್ರಸ್ಟ್" ಎಂಬುವ ಒಂದು ಶ್ರೀವೈಷ್ಣವ ಸಾಹಿತ್ಯ ಪ್ರಕಟನೆಯ ಸಂಸ್ಥೆಯ ಯದುಗಿರಿಯಮ್ಮ ಒಬ್ಬರಾದರೆ ಹಿಂದಿನ

ಕಾಲದ ಬೆಂಗಳೂರಿನ ಕಾಟನ್ ಪೇಟೆ (ಅರಳೆಪೇಟೆ ) ಗಲ್ಲಿಯೊಂದರಲ್ಲಿದ್ದ ರಘುಸುತರ ತಾಯಿಯ ದೊಡ್ಡಮ್ಮ-ಯದುಗಿರಿಯಮ್ಮ ಇನ್ನೊಬ್ಬರು. ಈಕೆಯೂ ತುಂಬಾ ಚೆನ್ನಾಗಿ ಹಾಡುತ್ತಿದ್ದರೆಂದೂ ಇವರೇ ಈ ಕೀರ್ತನಕಾರ್ತಿ ಯದುಗಿರಿಯಮ್ಮ ಎಂಬುದು ರಘಸುತರ ಅನಿಸಿಕೆ. ತುಳಸಿತೋಟದ ದೇವಸ್ಥಾನ, ಬಳೇಪೇಟೆಯಲ್ಲಿರುವ ಸುಗ್ರೀವ ವೆಂಕಟರಮಣಸ್ವಾಮಿ ದೇವಾಲಯ, ಅಲ್ಲೇ ಮೈಸೂರು – ಬೆಂಗಳೂರು ರಸ್ತೆ ತುಪ್ಪದಾಂಜನೇಯಸ್ವಾಮಿ, ಕೋಟೆ ವೆಂಕಟ್ರಮಣ, ಬಳೇಪೇಟೆ ಶ್ರೀನಿವಾಸ ಮಂದಿರ, ಹೀಗೆ ಇವೆಲ್ಲ ತುಂಬ ಪ್ರಾಚೀನ ದೇವಾಲಯಗಳು. ತುಳಸಿತೋಟದ ದೇವಾಲಯದ ಪರಿಸರದಲ್ಲಿ ಇರುತ್ತಿದ್ದವು. ಯದುಗಿರಿ ಅಮ್ಮನವರು ಪ್ರತಿನಿತ್ಯ ತಮ್ಮ ಪ್ರಾಣವೆಂಬಂತೆ ತುಳಸಿತೋಟದ ದೇವಾಲಯಕ್ಕೆ ಹೋಗುವುದಿತ್ತು. ಆಕೆ ಅನುಭವಿಸಿ ಹಾಡುತ್ತಿದ್ದ ಆರತಿಹಾಡು, ದೇವರ ನಾಮ, ಸಂಪ್ರದಾಯದ ಹಾಡುಗಳು ಎಲ್ಲರಿಗೂ ಪ್ರಿಯ, ಜನಜನಿತ ಆಗಿದ್ದವು , ಬಾಯಿಪಾಠವೇ ಆಗಿತ್ತು. ಮನೆಯ ಸಮಾರಂಭಗಳಲ್ಲಿ ಅಮ್ಮನವರನ್ನು ಕರೆಸಿ ಹಾಡಿಸುವ ಸಂಸ್ಕೃತಿಯೂ ಬೆಳೆದು ಬಂದಿತ್ತು. ಆಗ್ಗೆ ತುಂಬಾಪ್ರಸಿದ್ಧವಾಗಿದ್ದ ಕನ್ನಡ ಹಾಗೂ ತೆಲುಗಿನ ಪ್ರಾಂತ್ಯಗಳಲ್ಲೂ ಶ್ರೀರಾಮಮಂದಿರ " ಭಜನೆ ಮನೆ" ಗಳನ್ನು ಹುಟ್ಟುಹಾಕಿ ಗ್ರಾಮಗ್ರಾಮದಲ್ಲಿಯೂ ಶ್ರೀರಾಮಧ್ಯಾನ ಅವಿರತವಾಗಿ ನಡೆಸುವಂತೆ ಏರ್ಪಾಡು ಮಾಡಿದ್ದ ತುಳಸೀರಾಮದಾಸರ ಪ್ರಭಾವ, ಮನಸ್ಸಿನ ಮೇಲಾಗಿತ್ತೆಂದೂ ಅಮ್ಮನವರು ಅನೇಕ ಕನ್ನಡ – ತೆಲುಗು ಕೀರ್ತನೆಗಳನ್ನು ತುಳಸೀ ರಾಮದಾಸರದ್ದೆಂದು ತಿಳಿಯದಿದ್ದರೂ, ಹಾಡುವ ರೂಢಿ ಇತ್ತೆಂದೂ ರಘುಸುತರು ಅಭಿಪ್ರಾಯ ಪಡುತ್ತಾರೆ.

## (ಆ) ಜೀವನ ವಿವರ

೧೯ನೇ ಶತಮಾನದ ಆರಂಭದ ದಿನಗಳಲ್ಲಿ ದೊಡ್ಡದಾದ ಕುಟುಂಬದಲ್ಲಿ ಜನಿಸಿ, ಸಾಕಷ್ಟು ಅನುಭವ ಪಡೆದು, ಅಂಥದೆ ಇನ್ನೊಂದು ದೊಡ್ಡ ಕುಟುಂಬಕ್ಕೆ ಸೊಸೆಯಾಗಿ ತೆರಳಿದ ಯದುಗಿರಿ ಅಮ್ಮ ಹಿರಿಯರಿಂದ ತಳೆದುಬಂದ ಸಂಪ್ರದಾಯ ಸದಾಚಾರ ಪಾಲಕರಾಗಿದ್ದರಿಂದ ಮನೆ ಕೆಲಸ ಹೆಚ್ಚೇ ಆದರೂ, ಭಕ್ತಿಯಭಾವವೂ ಬಲಿಯಿತು. ಶಾಲೆಗೆ ಸೇರಿ, ವಿದ್ಯಾಭ್ಯಾಸ ಮುಂದುವರೆಸಿದ ಬಗ್ಗೆ ದಾಖಲೆ ಇಲ್ಲದಿದ್ದರೂ ಹಿಂದಿನ ಕಾಲದಲ್ಲಿ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಕಡಮೆಯೆ ಆದರೂ, ಯದುಗಿರಿ ಅಮ್ಮನವರು ತಮ್ಮ ಪಾಡಿಗೆ ತಾವು ಓದಿ ಅರ್ಥಮಾಡಿಕೊಳ್ಳಬಲ್ಲ

ಚೈತನ್ಯವುಳ್ಳವರಾಗಿದ್ದರು. ಕನ್ನಡ, ತಮಿಳು, ತೆಲುಗು ಓದಲು ಬರುತ್ತಿತ್ತು. ಸಂಸ್ಕೃತ ಸ್ವಲ್ಪ ಪರಿಚಯ. ನಾಲಾಯಿರ ದಿವ್ಯಪ್ರಬಂಧದ (ತಿರುವಾಯ್ಮೊಳಿ) ಪೂರ್ಣಪಾಠವು ಅಮ್ಮನವರಿಗಾಗಿತ್ತು. ಜ್ಞಾಪಕಶಕ್ತಿ ಚೆನ್ನಾಗಿತ್ತು. ಇಡೀ ದಿವ್ಯಪ್ರಬಂಧವನ್ನು ರಾಗವಾಗಿ ಹಾಡುತ್ತಿದ್ದರು. ತಿರುಪ್ಪಾವೈ ವಾರಣಮಾಯಿರಂ ನಿತ್ಯ ಪಠಣವಾಗುತ್ತಿತ್ತು. ಇದರ ಜತೆಗೆ, ದೇವತಾರಾಧನ ಸಂದರ್ಭದಲ್ಲಿ ಹಾಡುವ "ಜಿತಂತೇ ಪುಂಡರೀಕಾಕ್ಷ" ಸ್ತೋತ್ರ, ಮುಕುಂದಮಾಲಾ, ವಿಷ್ಣು ಸಹಸ್ರನಾಮ, ಪಂಚಾಯುಧ ಸ್ತೋತ್ರ, ಇತ್ಯಾದಿ ಸ್ತೋತ್ರಗಳು ಯದುಗಿರಿ ಅಮ್ಮನವರಿಗೆ ಬಾಯಿಪಾಠ ಆಗಿತ್ತು. ಸದಾ ಅವಿರತವಾಗಿ ಹಾಡಿಕೊಳ್ಳುತ್ತಿದ್ದರು. ಹರಟೆಗಳ ಗಳಪುವಿಕೆಯಲ್ಲಿ ಕಾಲವ್ಯಯ ಮಾಡುತ್ತಿರಲಿಲ್ಲ-ವೆಂದು ತಿಳಿದು ಬರುತ್ತದೆ.

ಮದುವೆಯಾಗಿತ್ತೆಂದೂ ಇಬ್ಬರು ಹೆಣ್ಣು ಮಕ್ಕಳು ಮಾತ್ರ ಇದ್ದರೆಂದೂ ಬಹಳ ಬೇಗ ಪತಿವಿಯೋಗವಾಯಿತೆಂದೂ ತಿಳಿದುಬಂದರೂ ವಿವರಗಳು ಲಭ್ಯವಿಲ್ಲ. ಗಂಡುಮಗನಿಂದಲೇ ಪರಲೋಕ ಪ್ರಾಪ್ತಿಎಂಬುವ ನಂಬಿಕೆ ಇದ್ದ ಕಾಲವದು. ಅಮ್ಮನವರು ತಮ್ಮ ಪಾರಮಾರ್ಥಿಕ ಸ್ವಭಾವ ಇನ್ನೂ ಹೆಚ್ಚು ಗಳಿಸಿ, ಅದನ್ನೇ ದಿನಚರಿಯಾಗಿಸಿಕೊಂಡಂತೆ ಕಾಣುತ್ತದೆ. ಹೆಣ್ಣುಮಕ್ಕಳಿಬ್ಬರ ಮದುವೆಯಾಗಿ, ಮೊಮ್ಮಕ್ಕಳೂ ಆಗಿ ಅವುಗಳ ಲಾಲನೆ, ಪಾಲನೆ ಮನೆ,ದೇವಸ್ಥಾನ, ಸುತ್ತಮುತ್ತ ಪರಿಸರ ಎಲ್ಲವು ಸೇರಿ ಅಮ್ಮನವರಿಗೆ ಹಾಡು ರಚಿಸುವ ಪ್ರವೃತ್ತಿ ಬೆಳೆಯಿತು. ತುಳಸಿತೋಟದ ಪ್ರವಚನ-ಹರಿಕೀರ್ತನ, ಎಲ್ಲವೂ ಇದಕ್ಕೆ ಪ್ರೇರಣೆ ಆದವು. ಅಮ್ಮನವರ ಕವಿತಾಕೌಶಲವೂ ಕೊನರಿ, ಭಾಗವತ ಕಥೆ ದ್ವಾದಶಸ್ಕಂಧಗಳ ಪರ್ಯಂತ ಸಂಗ್ರಹಿಸುವಷ್ಟು ಸಾಂದ್ರತೆ ಪಡೆದದ್ದು ಕನ್ನಡ ಭಕ್ತಿಸಾಹಿತ್ಯಕ್ಕೊದಗಿದ ಸಂಪದ ಎನ್ನಬಹುದು. ಯದುಗಿರಿಅಮ್ಮನ ಹಾಡಿಲ್ಲದೆ ಯಾವ ಶುಭಕಾರ್ಯವೂ ನಡೆಯದು ಎಂಬುವಷ್ಟರ ಮಟ್ಟಿಗೆ ಆಗ್ಗೆ ಆಕೆ ಪ್ರಸಿದ್ಧರಾಗಿದರೆಂಬುದು ರಘುಸುತರ ಅನುಭವದ ಮಾತು.

ಇದೆಲ್ಲದರ ಫಲ, ಅಮ್ಮನವರ ಕೀರ್ತನ ಸಂಚಯ, ಅಲ್ಲಿ ಕಾಣಬರುವ ಕೀರ್ತನ ಕುಸುಮಗಳು ಪರಿಪರಿ. ಅಲ್ಲಿಯ ವರ್ಣನೆ, ದಿವ್ಯಕ್ಷೇತ್ರಗಳ ದರ್ಶನಗೈದು ಆನಂದಿಸಿ ಹಾಡಿದ್ದು, ಕ್ಷೇತ್ರದ ಉಪಾಸ್ಯಮೂರ್ತಿ ಕುರಿತ ಹಾಡು, ಶ್ರೀರಾಮಧ್ಯಾನ, ಶ್ರೀಪಾರ್ಥಸಾರಥಿ ಮಂಗಳಂ, ಶ್ರೀರಂಗ ಮಹಾತ್ಮ್ಯಂ, ಬಿಡಿ ಕೀರ್ತನೆಗಳು - ಹೀಗೆ

ಎಲ್ಲ ಸೇರಿದಂತೆ ಸುಮಾರು ೭೪ ಕೀರ್ತನೆ ಇವೆ ಇಳವಯಸ್ಸಿನಲ್ಲಿ ಅಮ್ಮನವರು ಹಾಡಿದ್ದನ್ನು. ಅವರ ಮೊಮ್ಮಕ್ಕಳು ನೆನಪಿನಿಂದ ಬರೆದುಕೊಂಡದ್ದರಿಂದ ಯದುಗಿರಿಅಮ್ಮ ಕವಯಿತ್ರಿಯಾಗಿ ನಮಗೆ ಲಭಿಸುವಂತಾಯಿತು. ಇದೆಲ್ಲವನ್ನು ಮೊದಲು ಗುರುತಿಸಿ, ಬೆಳಕಿಗೆ ತಂದವರು ತೂಪ್ಪುಲ್ ವೆಂಕಟಾಚಾರ್ಯ-ರೆಂಬುವವರು( ೧೯೦೪ ). ಎಲ್ಲ ಹಾಡು ೧೮೪೦-೫೨ರ ನಡುವಣ ಅವಧಿಯ ರಚನೆಗಳು. ಹರಿದಾಸರ ಕೀರ್ತನೆಗಳಿಗೆ ಅಮ್ಮನವರ ಹಾಡುಗಳು ಯಾವ ರೀತಿಯಲ್ಲೂ ಕೊರೆಯಾಗವು ಎನಿಸುತ್ತವೆ. ಬದುಕೆಲ್ಲ ಭಾಗವತ ಆಗಿ ಸವೆಸಿದ ಯದುಗಿರಿ ಅಮ್ಮನವರು ೧೯೦೮ರಲ್ಲಿ ಶ್ರೀಹರಿಪದವೈದಿದರು. ಇನ್ನೂ ಅವರು ರಚಿಸಿದ್ದ ಕೀರ್ತನೆಗಳು ಎಷ್ಟು ಇದ್ದವೋ ತಿಳಿಯದು. ಈ ದಿಸೆಯಲ್ಲಿ ಸಂಶೋಧನೆ ಇನ್ನೂ ಅಗತ್ಯವಿದೆ.

## (ಇ) ಕೃತಿ ವಿಚಾರ

### (೧) ಕೀರ್ತನೆಗಳು

ಯದುಗಿರಿ ಅಮ್ಮ ರಾಮಾನುಜ ಮತಾನುಯಾಯಿ ಆಗಿದ್ದವರು. ಅದೇ ಪ್ರಪತ್ತಿಭಾವ, ವಿಶಿಷ್ಟಾದ್ವೈತ ತತ್ವದ ತಿರುಳು, ಎಲ್ಲ ಕೀರ್ತನೆಗಳಲ್ಲೂ ಹರಳುಗಟ್ಟಿವೆ. ಅಲ್ಲಲ್ಲಿ ವಿಶಿಷ್ಟವೆನಿಸುವಂತೆ ಶ್ರೀವೈಷ್ಣವ ಪರಿಭಾಷೆಯೂ ಇದೆ. ಉದಾ: ಕೊಠಾರೋತ್ಸವ, ನೀರಾಟ್ಟಲ್, ಆಚಾರ್ಯ-ಆಳ್ವಾರ್ ಸ್ತುತಿ, ಶ್ರೀಹರಿಸ್ತುತಿ, ಲಕ್ಷ್ಮೀಸ್ತುತಿ ಮುಂತಾದವುಗಳಲ್ಲಿ ಅದನ್ನು ಕಾಣಬಹುದು.

ಕಂಡು ನಾ ಧನ್ಯನಾದೆನೋ ಪುಂಡರೀಕಾಕ್ಷ ಶ್ರೀ
ಪುರುಷೋತ್ತಮ ವಿಷ್ಣುಪಾದವ ಪ

ಮಗಧನಾದೇಶದಲ್ಲಿ ಚಂಪಕಾರಣ್ಯದಲ್ಲಿ
ಮಧುವನದ ಮಧ್ಯದಿ ನಿಂದ ಮದನನಯ್ಯನ ಪಾದವನ್ನು ೧

ಎಂಬುದು ಶ್ರೀ ವಿಷ್ಣು ಹಾಗೂ ಆತನ ಪಾದಸ್ತುತಿ. ಶ್ರೀವೈಷ್ಣವ ಸಂಪ್ರದಾಯ-ಸ್ಥರಿಗೆ ವಿಷ್ಣುಸಾಯುಜ್ಯವೇ ಪರಮವಾದದ್ದು.

ವಜ್ರಾಂಕುಶ ಧ್ವಜಪದ್ಮರೇಖೆಗಳುಳ್ಳ
ಮುದ್ದುವೇಂಕಟನ ಪಾದ ಮುಕ್ತಿಯನ್ನು ಕೊಡುವ ಪಾದ

ಎಂಬುವ ಸಾಲಿನಲ್ಲಿ ಬಂದಿರುವ " ಮುದ್ದುವೆಂಕಟ " ಹಾಗೂ "ವೆಂಕಟಕೃಷ್ಣ" ಇವೆಲ್ಲ ಅಮ್ಮನವರ ಅಂಕಿತ. ಈ ಅಂಕಿತವನ್ನು ಹೇಗೆ ಸ್ವೀಕರಿಸಿದರೆಂಬುದಾಗಲಿ, ಗುರುಗಳಾಗಲಿ ತಿಳಿದುಬಂದಿಲ್ಲ.

ಇದು ಗಯಾ ಕ್ಷೇತ್ರದ ವಿಷ್ಣುಪಾದ ಸ್ತುತಿಯೂ ಆಗಿದೆ "ಫಲ್ಗುನೀ ತೀರದಿನಿಂದ ಪಾದ" ಎಂಬ ಸಾಲನ್ನು ಗಮನಿಸುವಾಗ. "ಗದಾಧರ" ಗಯಾಕ್ಷೇತ್ರದ ವಿಷ್ಣುವಿನ ಒಂದು ಅರ್ಚನಾರೂಪದ ಸುಂದರ ವರ್ಣನೆಯಿದೆ. ಪುರಂದರದಾಸರ "ಕಂಡು ಧನ್ಯನಾದೆ ಶ್ರೀ ಉಡುಪಿಕೃಷ್ಣನ ಕಣ್ಣಾರೆ ನಾ" ಎಂಬುವ ಸಾಲುಗಳೂ ಇಲ್ಲಿ ನೆನಪಾಗುತ್ತವೆ.

ಕಣ್ಣಾರೆ ನೋಡೆನ್ನ ಕರುಣಾಕಟಾಕ್ಷದೀ
ಇಂದಿರೇರಮಣ ಅರವಿಂದ ನೇತ್ರದಲೀ ಪ

ಎಂಬುವ ಶ್ರೀಹರಿಸ್ತುತಿ, ಆತನ ದಿವ್ಯ ಮನೋಹರ ಕಣ್ಣುಗಳ ಸ್ತುತಿಯಾಗುತ್ತದೆ.

ಪಾದವನು ನಂಬಿದೆನೊ ಪರಮಪುರುಷಾ ಪಾವನ ಮಾಡೆನ್ನಾ

ಎಂಬುವಲ್ಲಿ ಶ್ರೀಕೃಷ್ಣನ ವಿವಿಧ ಲೀಲಾವಿನೋದ, ಅಸುರ ಸಂಹಾರ, ರಾಮನ ಪಾದವ ಶ್ರೀರಾಮಚಂದ್ರಮೂರ್ತಿಯು ತೋರಿದ ವಿವಿಧ ಲೀಲೆ ಎಲ್ಲವೂ ಸರಳವಾಗಿ ಮೂಡಿಬಂದು, ಭಕ್ತನ ಮನಸ್ಸನ್ನು ಆಕರ್ಷಿಸುತ್ತವೆ. "ಭಾಷ್ಯಕಾರರ ಸ್ವಪ್ನದಲೊಲಿದು ಬಂದ ಪಾದ" ಎಂಬುವ ಸಾಲನ್ನು ಓದಿಕೊಂಡರೆ, ಕೀರ್ತನೆಯ ಆಂತರ್ಯ ಇನ್ನು ಮನಮುಟ್ಟುತ್ತದೆ.

ಹೀಗೆಯೇ ಶ್ರೀಹರಿಯ ಸರ್ವಶಕ್ತ, ಸರ್ವಾಂತರ್ಯಾಮಿ, ಸ್ವರೂಪಗಳೂ (Omni potent,Omnipresent, Omniscient ) ಮೂಡಿ ಬಂದಿರುವ ಕೀರ್ತನೆ – " ಯೆಲ್ಲಿದ್ದರೂಕಾಯ್ವ ಯದುಕುಲ ತಿಲಕ್ಕಾ". ಇಲ್ಲಿ ಮಹಾಭಾರತದ ಪ್ರಸಂಗ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ.

ದೈತೇಯ ಸಂಹರಣ ಗೋವರ್ಧನೋದ್ಧರಣ
ಪೀತಾಂಬರಾವರಣ ಕೌಸ್ತುಭಾಭರಣಾ

ಎಂಬುವಲ್ಲಿ ಪ್ರಾಸವಲ್ಲದೆ, ದೈತೇಯ – 'ದೈತ್ಯ' ಎಂಬುವುದನ್ನು ಬಿಡಿಸಿಕೊಂಡ ರೂಪ ಎಂದಾಗ ಅಮ್ಮನವರ ಭಾಷಾಶಕ್ತಿಯೂ ಅರಿವಾಗದಿರದು.

ಅಭಯವನಿತ್ತು ಕಾಯೊ ಎಂಬ ಕೀರ್ತನೆಯಲ್ಲಿ

ಭಾಷ್ಯಕಾರರಿಗೆರಗಿ ಶ್ರೀವೇದಾಂತ ಗುರುಗಳಿಗೆ ವಂದಿಸೀ
ಪತಿಯ ಪಾದಾರವಿಂದಕೆ ನಮಸ್ಕರಿಸಿ ಲಕ್ಷ್ಮೀಪತಿ
ನಿಮ್ಮ ಕರಗಳ ಸ್ತುತಿಸಿ ಬೇಡುವೆ ನಾನು...

ಎಂಬುವ ಸಾಲಲ್ಲಿ ಶ್ರೀರಾಮಾನುಜರಿಗೆ ಲೇಖಕಿ ಹೃತ್ಪೂರ್ವಕ ಪ್ರಣಾಮ ಅರ್ಪಿಸುತ್ತಾರೆ. ಇದು ದಶಾವತಾರ ಸ್ತುತಿಯನ್ನು ಕಂಡರಿಸಿರುವ ಕೀರ್ತನೆಯೂ ಹೌದು.

'ಆಂಡಾಳ್ ನೀರಾಟವು ಶ್ರೀವಿಲ್ಲಿಪುತ್ತೂರಿನ ಆಂಡಾಳದೇವೀಯ
ನೀರಾಟ್ಟಂ(=ಮೀಯುವಿಕೆ)ಯನ್ನು ವರ್ಣಿಸುವ ಕೀರ್ತನೆ.

'ರಾಗಟೆ ಹೆರಳು ಭಂಗಾರಗೊಂಡ್ಯನಿಟ್ಟ' ... ಎಂದು ಸಾಗುವ ಸಾಲುಗಳಲ್ಲಿ ಮೂಡಿಬಂದಿರುವ ಅಲಂಕಾರ ಪರಿಕರ, ಅಂದಿದ್ದ ವಿವಿಧ ಒಡವೆ, ನಗನಾಣ್ಯ ಕುರಿತು ತಿಳಿಸಿವೆ. ಈ ಆಂಡಾಳ್ ಕುರಿತ ಕೀರ್ತನೆ ಜಾನಪದಧಾಟಿಯಲ್ಲಿ ಇದೆ.

'ಆತ್ಮನಿವೇದನೆ'ಯ ವಿಭಾಗಕ್ಕೆ ಸೇರುವ ಕೀರ್ತನೆ " ಅಗಲಿಸದಿರು ಎನ್ನನೂ ನಿನ್ನ ಬಿಟ್ಟಗಲಿಸದಿರು ಎನ್ನನು," "ಯಾಕೆ ನಿರ್ದಯ ಮಾಡಿದೆ ರಂಗಯ್ಯ" ಎಂಬಂತಹ ಹಲವು ಪರಿಣಾಮಕಾರಿ ಕೀರ್ತನೆಗಳಿವೆ. ಇವುಗಳಲ್ಲಿ ಉತ್ಕಟವಾದ ಭಕ್ತಿಯನ್ನು ಸಮರ್ಪಣಭಾವವನ್ನು ಕಾಣಬಹುದು.

ಅಮ್ಮನವರ ಕೃತಿಗಳಲ್ಲಿ ಅನೇಕ ಕಡೆ ಸಾಮಾಜಿಕ ಚಿಂತನೆಯೂ ಇದೆ. "ಅಪಾರವಾದ ಸಂಸಾರ ಸಾಗರದ ಪಾರುಗಾಣುವದೆಂದಿಗೋ", "ಆಶೆಯ ಬಿಡು ಮನವೆ " ಎಂಬುವ ಕೀರ್ತನೆಗಳಲ್ಲಿ ಈಬಗೆಯ ಚಿಂತನೆಯನ್ನು ನಡೆಸುತ್ತಾರೆ.

ಕ್ಷೇತ್ರದರ್ಶನ ಕೃತಿಗಳೂ ಕೆಲವಿದ್ದು – ಅಲ್ಲಲ್ಲಿಯ ದೇವತಾಮೂರ್ತಿ ಕುರಿತು ಕೀರ್ತನೆಗಳನ್ನು ಯದುಗಿರಿ ಅಮ್ಮನವರು ಮಾಡಿದ್ದಾರೆ. ಕಂಚಿ ವರದರಾಜನನ್ನು ಕುರಿತ " ಕರಿಗಿರಿವಾಸ ವರದರಾಜ " ಅಂತಹ ಒಂದು ಕೀರ್ತನೆ. " ದೃಷ್ಟಿ ಇದ್ಯಾತಕೊ ಉಡಪಿ ಕೃಷ್ಣನ ನೋಡದ" ಮುಳಬಾಗಿಲಿನ ಶ್ರೀಪಾದರಾಜರ ಪ್ರಸಿದ್ಧ ಕೀರ್ತನೆಯಾದ "ಕಂಗಳಿದ್ಯಾತಕೋ ಕಾವೇರಿರಂಗನ್ನ ನೋಡದ" ಕೀರ್ತನೆಯ ಸಾಲುಗಳನ್ನು ನೆನಪಿಸುತ್ತದೆ. ಕೀರ್ತನೆಯಲ್ಲಿ ಬರುವ "ಕಡೆಗೋಲು ಧರಿಸಿ ನಿಂತ ಶ್ರೀ ಉಡುಪಿಕೃಷ್ಣನ ಪವಳದಂತೆ ಅಧರಕಾಂತೀ । ಹಾರ ಪದಕ ಸರಗಳಿಟ್ಟ ವಾರಿಜನಾಭನ ನೋಡದ " ಎಂಬ ಸಾಲು ಮನಸ್ಸಿಗೆ ಮುದ ನೀಡುತ್ತದೆ. ಕೊನೆಯಲ್ಲಿ ಅಮ್ಮನವರ ಚಿಂತನೆ " ಸಂಸಾರದಗ್ನಿಯಲ್ಲಿ ಬೆಂದುನೊಂದು ಬಂದ ಭಕ್ತರ ಚರಣವೆಂಬೊ । ಶರಧಿಯಲ್ಲಿ ಛಂದವಿರುವ ಹರಿಯ ನೋಡದ ... ಕಂಗಳಿದ್ಯಾತಕೆ " ಎಂಬುವಲ್ಲಿ... ಸಂಸಾರ ಎಂಬವ ಕಾಳ್ಗಿಚ್ಚಿನಂಥ ಬೆಂಕಿಯ ಕಾವಿಗೆ ಬೆಂದು ನೊಂದ ಭಕ್ತರನ್ನು ತನ್ನ ಚರಣವೆಂಬುವ ಕಡಲಲ್ಲಿ ಇರಿಸಿ ಕಾಯುತ್ತಾನೆ ಶ್ರೀಹರಿ ಎಂಬುವ ಅರ್ಥವೂ, ಹೊಸ ತರಹದ್ದೆನಿಸುತ್ತದೆ. ನದಿಗಳನ್ನು ಕುರಿತು ಅಮ್ಮ ಹಾಡಿದ್ದಾರೆ. ಗಂಗಾನದಿಯನ್ನು ಕುರಿತು ರಚಿಸಿರುವ ಅಮ್ಮನವರ " ಮಂಗಳಂ ಜಯತು ಭಾಗೀರಥಿಗೆ ದೇವಗಂಗೆಯೊಲಿದು ಬಂದೆ" ಎಂಬುದು ಪಾರಂಪರಿಕ ಕಥೆಯ ಸನ್ನಿವೇಶವನ್ನು ಸೂಚಿಸುತ್ತವೆ.

ದಕ್ಷಿಣ ಬದರಿ, ವೇದಾದ್ರಿ ಎಂದೆಲ್ಲ ಕರೆಸಿಕೊಳ್ಳುವ ಮೇಲುಕೋಟೆಯ ಯದುಶೈಲತಿರುನಾರಾಯಣನ ರೂಪಶ್ರೀ – 'ಯತಿರಾಜನಿಗೆ ಒಲಿದ ಸ್ವಾಮಿ' ಯಲ್ಲಿದ್ದರೆ ಶ್ರೀರಂಗದ 'ರಂಗನಾಥ ಕಣ್ಣಾಳಿದಿರು ನಿಂತಿದಂತಿದೇ, ಎಂದಿರುವುದು ಪುರಂದರರ' ಕೃಷ್ಣಮೂರ್ತಿ ಕಣ್ಣಮುಂದೇ ನಿಂತಿದಂತಿದೆ" ಎಂಬುವ ಸಾಲುಗಳನ್ನು ನೆನಪಿಸಿದರೂ, ಅಮ್ಮನವರ ಕಲ್ಪನಾ ಚಾತುರ್ಯ " ಹೊದ್ದಿದ್ದ ಭಕ್ತರ ಪಾಪವನೆಲ್ಲಾ ಒದ್ದು ಮುಕ್ತಿಯನೀವ ಮುದ್ದು ಶ್ರೀರಂಗ " ಎಂಬುವ ಪ್ರಪತ್ತಿಭಾವದಲ್ಲಿ ಸಾರ್ಥಕ್ಯ ಪಡೆಯುತ್ತದೆ ಹೀಗೆಯೆ. ತಿರುಪತಿ, ಶೃಂಗೇರಿಯ ಶ್ರೀಶಾರದಾದೇವಿ ಕುರಿತ

ಕೀರ್ತನೆಗಳೂ ಸರಳ ಕನ್ನಡ ನುಡಿಗಟ್ಟಿನವಾಗಿವೆ.ಮದರಾಸಿನ ತಿರುವಲ್ಲಿಕೇಣಿಯ ಶ್ರೀ ಪಾರ್ಥಸಾರಥಿಯನ್ನು ಸ್ತುತಿಸುವ 'ಶ್ರೀ ಪಾರ್ಥಸಾರಥಿ ಮಂಗಳಂ' ೩೨ ನುಡಿಗಳ ನಿಡಿದಾದ ರಚನೆ.

೨. ವಿಶೇಷ ಸಂದರ್ಭದ ಹಾಡುಗಳು

(i) " **ಶ್ರೀರಂಗ ಮಹಾತ್ಮಮ್** " – ಶ್ರೀರಂಗ ಕ್ಷೇತ್ರದ ಅಧಿದೈವವಾದ ಶ್ರೀ ಶ್ರೀರಂಗನಾಥ ಸ್ವಾಮಿಯ ಉತ್ಸವ ಕೈಂಕರ್ಯಾದಿಗಳನ್ನು ದಾಖಲಿಸುವ ಕೀರ್ತನಗುಚ್ಛ. ಪವಿತ್ರೋತ್ಸವ ( ಶ್ರಾವಣ ಶುಕ್ಲ ಏಕಾದಶಿ) ದ ಆರಂಭವನ್ನು ಹೀಗೆ ದಾಖಲಿಸಿದ್ದಾರೆ.

"ಭಕ್ತವತ್ಸಲ ಶ್ರೀರಂಗನಾಥನಿಗೆ ಪವಿತ್ರೋತ್ಸವವನ್ನು
ನಡೆಸಬೇಕೆನುತ ವಿಪ್ರರೆಲ್ಲರು ಕೂಡಿ ವಿಷ್ವಕ್ಸೇನರು ಪೊರಟು
ಲಕ್ಷ್ಮೀದೇವಿಯರ ಮನೆಯಲಿ ನಿಂದು ಭೂದೇವಿಯರನು ಪೂಜೆ
ಮಾಡಿ ಹರುಷದಲಿ ಮೃತ್ಸಂಗ್ರಹಣವನು ಮಾಡಿ ಮೊಳೆಯಿಟ್ಟು
ಭಕ್ತವತ್ಸಲನ ಪ್ರಥಮೋತ್ಸವಕ್ಕೆ ಪ್ರಾರಂಭವ ಮಾಡಿದರು...
ಶ್ರೇಯೋನಿಧಿಗಳಿಗೆರಗಿ ಶ್ರೀವೇದಾಂತಗುರುಗಳಿಗೆ ವಂದಿಸಿ
ಶ್ರೀಭಾಷ್ಯಕಾರ ಶಠಗೋಪರಿಗೆ ವಂದಿಸಿ
ಶ್ರೀರಂಗೋತ್ಸವವ ಸಂಕ್ಷೇಪದಿಂ ಪೇಳುವೆ."

ಶ್ರೀರಂಗನಾಯಕಿದೇವಿಯರ ತಿರುಮಜ್ಜನ ವಿವರ, ಪಾರ್ವಟೆ ಉತ್ಸವ (ವಿಜಯದಶಮಿ), ಸ್ವಾಮಿಯ ಊಂಜಲ್/ಉಯ್ಯಾಲೆ (ತುಲಾ/ಕಾರ್ತಿಕ ಮಾಸದುತ್ಸವ), ಕೌಶಿಕೋತ್ಸವ (ಕಾರ್ತಿಕ ಶುದ್ಧ ಏಕಾದಶಿ) ಕೃತ್ತಿಕೋತ್ಸವ (ಪೌರ್ಣಮಿ–ದೀಪೋತ್ಸವ), ಧನುರ್ಮಾಸದ ಉತ್ಸವ (ಮಾರ್ಹಳಿ), ಹೀಗೆ ಪ್ರತಿ ತಿಂಗಳಲ್ಲಿ ನಡೆಯುವ ಉತ್ಸವಗಳನ್ನು ಕಣ್ಣಾರೆ ಕಂಡು ಕಂಡರಿಸಿರುವ ಅಪರೂಪದ ರಚನೆಗಳಾಗಿವೆ.

"ಶ್ರೀನಿವಾಸರಂಗನ ನೈವೇದ್ಯವ ರಾಮಾನುಜರ ಮತದಿ ನೇಮದಿಂದಲೆ ವಿನಿಯೋಗವ ಮಾಡಲು ಪಾವನವಾದೆವೆಂದೆನುತ ಪೋದರು..."

ಎಂಬಲ್ಲಿರುವ ಶ್ರೀರಾಮಾನುಜನಿಷ್ಠೆ ಗಮನಾರ್ಹ. ಕೊಟ್ಟಿಗೋತ್ಸವ ಶ್ರೀವೈಷ್ಣವ ಸಂಪ್ರದಾಯದ ದೇವಾಲಯಗಳಲ್ಲಿ ಮಾತ್ರ ನಡೆವ ವಿಶೇಷೋತ್ಸವ. (ಇಲ್ಲಿ ಆಳ್ವಾರರಿಗಗ್ರಸ್ಥಾನ – ಆಸನ– ಮರ್ಯಾದೆ.) ಕೊಠಾರೋತ್ಸವ, ಕೊಟ್ಟಿಗೋತ್ಸವ, ಕೊಟ್ಟಿಯುತ್ಸವ , ಗೋಷ್ಟಿಯುತ್ಸವ ಎಂದೆಲ್ಲ ಇದನ್ನು ಕರೆಯುತ್ತಾರೆ. ಕೊಠಾರ ಎಂದರೆ ಕೊಟ್ಟಿಯಾರ=ಕೊಟ್ಟ(ಕ) [<ಗೋಷ್ಠಿ (ಸಂ)] + ಅರ (=ಧರ್ಮ, ಸದಾಚಾರ ) ಆಗಿದೆ. ( ಈ ಉತ್ಸವದಲ್ಲಿ ದಿವ್ಯಪ್ರಬಂಧ ಗೋಷ್ಠಿ ನಡೆಯುತ್ತದೆ ) ಅಂದರೆ ಶ್ರೀವೈಷ್ಣವಧರ್ಮವಾದ ಪ್ರಬಂಧ – ದ್ರಾವಿಡ ವೇದ–ಗೋಷ್ಠಿಯ ಉತ್ಸವ. ರಾತ್ರಿ ಹನ್ನೆರಡರ ವೇಳೆಯಲ್ಲಿ ಶ್ರೀವೈಷ್ಣವಾಲಯಗಳಲ್ಲಿ ಪುಳಿಯೋಗರೆ ನೈವೇದ್ಯ – ಅದೇ ಕೊಠಾರೋತ್ಸವದ ಸ್ಪೆಷಲ್ – ವಿಶಿಷ್ಟತೆ ಇದು. ಎಲ್ಲ ಶ್ರೀವೈಷ್ಣವ ಆಲಯಗಳಲ್ಲಿಯೂ ಜರುಗುವ ಸಾಂಪ್ರದಾಯಿಕ ಉತ್ಸವ. ಇಂತಹ ವಿಶೇಷ ಉತ್ಸವಗಳ ವಿವರವಾದ ಮಾಹಿತಿ ಈ ಕೃತಿಗಳ ವೈಶಿಷ್ಟ್ಯ.

(ii) " ಶ್ರೀರಾಮಧ್ಯಾನ" – ಇಡೀ ಶ್ರೀಮದ್ರಾಮಾಯಣದ ಕೀರ್ತನರೂಪ. (೧೦೮ ನುಡಿಗಳು ) ಇದಕ್ಕೆ ಮಂಗಳ ನುಡಿ – " ಶ್ರೀಮದ್ರಾಮಾಯಣದ ಮಂಗಳಂ" ಇದು ೫೫ ನುಡಿಗಳ ನೀಳ್ಗವನ. ತುಳಸಿ ತೋಟದ ಶ್ರೀರಾಮ ದೇವಾಲಯದಲ್ಲಿ ನಡೆಯುತ್ತಿದ್ದ ರಾಮಾಯಣ ಪ್ರವಚನದ ಪ್ರಭಾವದಿಂದ ಈ ಕೃತಿಗಳು ರಚನೆಯಾಗಿವೆಯೆಂದು ಹೇಳಲಾಗಿದೆ. ಸರಳವಾದ ನುಡಿಗಳಲ್ಲಿ ಸುಲಭವಾಗಿ ಓದಿಸಿಕೊಂಡು ಹೋಗುವುದು ಇದರ ವಿಶೇಷ.

(iii) 'ಶ್ರೀಭಾಗವತ ಸಂಗ್ರಹ'ವು – ಇಡೀ ೧೨ ಸ್ಕಂಧಗಳನ್ನು ೧೧೬೩ ನುಡಿಗಳಲ್ಲಿ ಹಾಡಿರುವ ಈ ರಚನೆ ಅಪರೂಪವಾದದ್ದು. ಈ ನುಡಿಗಳ ವಿಶೇಷವೆಂದರೆ, ಪ್ರತಿಯೊಂದು ನುಡಿ ಒಂದು ಸಾಲಿನ ತರಹ ಬರುತ್ತದೆ.

ಹೀಗೆ, ಯದುಗಿರಿಯಮ್ಮನವರ ಕೃತಿಸಂಪುಟ ಒಟ್ಟು ೫೨ ಕೀರ್ತನೆಗಳ ೪ ದೀರ್ಘಕೃತಿಗಳನ್ನೊಳಗೊಂಡ ಅಪರೂಪದ ಕೊಡುಗೆಯಾಗಿದೆ. ಇಲ್ಲಿ ಪ್ರಧಾನವಾಗಿ

ಪ್ರಪತ್ತಿಭಾವ ಎಲ್ಲ ಕೀರ್ತನೆಗಳ ಸಾರ. ಆದರೂ ಕವಿತಾಕೌಶಲ, ಶ್ರೀಹರಿಸ್ತುತಿ, ಶ್ರೀ ಲಕ್ಷ್ಮಿಸ್ತುತಿ, ಆಳ್ವಾರ್-ಆಚಾರ್ಯ ಸ್ತುತಿ, ಸಮಾಜ ದರ್ಶನ, ಹೀಗೆ ಎಲ್ಲ ನಿಟ್ಟಿನಿಂದಲೂ ಪರಿಶೀಲಿಸುವಾಗ ಯುದುಗಿರಿಯಮ್ಮನವರು ಶ್ರೀವೈಷ್ಣವ ಕೀರ್ತನಕಾರ್ತಿಯಾಗಿ, ಎತ್ತರಕ್ಕೇರಿದವರೆನಿಸುತ್ತಾರೆ. ಅವರ ಕೃತಿಗಳಲ್ಲಿ ಸಾಂಪ್ರದಾಯಿಕತೆ – ಸ್ವಧರ್ಮ, ಸದಾಚಾರ ಸಂಹಿತೆ–ಆಚಾರ್ಯ ಗೌರವ– ಶುದ್ಧ ಸಾಹಿತ್ಯ ನಿರ್ಮಿತಿ– ಕವಿತ್ವ– ವರ್ಣನೆ – ಎಲ್ಲವೂ ಇದ್ದು, ಅಧ್ಯಯನ ಯೋಗ್ಯವೆನ್ನಿಸುತ್ತದೆ.

### (೩) ಸಂಪಾದನೆಯ ವಿವರ

ಯುದುಗಿರಿಯಮ್ಮನವರ ಕೃತಿಗಳಿಗೆ ದೊರೆತಿರುವ ಆಧಾರವೆಂದರೆ, ಏಕೈಕ ಪ್ರತಿಯಾದ ಅವರ ಕೃತಿ "ಭಾಗವತ ಸಂಗ್ರಹವು" ಎಂಬ ಪೇಟೆಮುದ್ರಣದ ಪುಸ್ತಕ. ಅಲ್ಲಿ ಇರುವ ಕೀರ್ತನೆಗಳಲ್ಲಿ ಕಾಣಬರುವ ಅಂಶಗಳು, ಹೊಸಗನ್ನಡ ಭಾಷೆಯಾದರೂ ಪೌರಾಣಿಕ ಶೈಲಿಯಿದೆ, ಶ್ರೀವೈಷ್ಣವ ಪಾರಿಭಾಷಿಕ ಶಬ್ದಗಳು– ಗಮನಸೆಳೆಯುತ್ತವೆ. ಇವುಗಳನ್ನೆಲ್ಲ ಪರಿಗಣಿಸಿ ಕೂಡಿದಮಟ್ಟಿಗೂ ಉತ್ತಮ ಪಾಠವನ್ನು ನೀಡಿದ್ದೇವೆ. ಮೂಲಕ್ಕೆ ಚ್ಯುತಿ ಬರದಂತೆ ಭಾಷೆಯನ್ನು ಇಂದಿನ ಬರಹ ಕನ್ನಡಕ್ಕೆ ಸ್ವಲ್ಪಮಟ್ಟಿಗೆ ಪರಿವರ್ತಿಸಿದ್ದೇವೆ. ಉದಾ: ಸ್ವರಸ್ಥಾನದಲ್ಲಿದ್ದ ಯ, ವ ಗಳನ್ನುತೆಗೆದು ಆಯಾ ಸ್ವರಗಳನ್ನು ಬಳಸಿರುವುದು. ಈ ಎಲ್ಲ ಕೀರ್ತನೆಗಳಲ್ಲೂ ಸಾಮಾನ್ಯವಾಗಿ ಆದಿಪ್ರಾಸವಿದ್ದರೂ ಬಹಳ ಕಡೆ ಈ ಪ್ರಾಸನಿಯಮವನ್ನು ಅನುಸರಿಸಿಲ್ಲದಿರುವುದು ಮುದ್ರಿತ ಪುಸ್ತಕದಲ್ಲಿ ಕಂಡುಬಂದಿದೆ. ಸಾಧ್ಯವಾದ ಕಡೆಗಳಲ್ಲಿ ಪ್ರಾಸಪದಗಳನ್ನು ಅಳವಡಿಸಿದೆ. ಉಳಿದಂತೆ ಹಾಗೇ ಉಳಿಸಿಕೊಳ್ಳಲಾಗಿದೆ. ಪಾದಗಳ ಜೋಡಣೆಯಲ್ಲೂ ಹಲವು ಕಡೆ ಗೊಂದಲವಿದ್ದು ಸಾಧ್ಯವಾದ ಮಟ್ಟಿಗೆ ಸರಿಪಡಿಸಲಾಗಿದೆ. ಆದರೂ ಅದು ಸಮರ್ಪಕತೆಯನ್ನು ಪಡೆದಂತೆ ತೋರುವುದಿಲ್ಲ. ಪಾಠ ಕ್ಲಿಷ್ಟತೆಯಿರುವ ಕೆಲವು ಕಡೆ ಊಹಾಪಾಠಗಳನ್ನು ನೀಡಿದ್ದು ಅದನ್ನು[ ] ಚೌಕಕಂಸದಲ್ಲಿ ತೋರಿಸಿದೆ. ಮೂಲಪಾಠವಿರುವ ಕಡೆ ಅಡಿಟಿಪ್ಪಣಿಯಲ್ಲಿ ಕಾಣಿಸಿದೆ. ತೂಪ್ಪಲ್ ವೆಂಕಟಾಚಾರ್ಯರಂತಹ ಪರಿಣಿತರಿಂದ ಇದರ ಪೇಟೆ ಮುದ್ರಣ ಪರಿಷ್ಕಾರಗೊಂಡಿರುವುದರಿಂದ ಇದಕ್ಕಿಂತ ಉತ್ತಮ ಪಾಠವನ್ನಾಗಲಿ

ಹಸ್ತಪ್ರತಿಯನ್ನಾಗಲಿ ನಿರೀಕ್ಷಿಸುವಂತಿಲ್ಲ. ಆದರೂ ಮುದ್ರಣಹಂತದಲ್ಲೇ ಈ ದೋಷಗಳು ನುಸುಳಿರುವಂತೆ ತೋರುತ್ತವೆ.

(– ಡಾ। ನೀ.ಕೃ. ರಾಮಶೇಷನ್, ಪ್ರೊ। ನಾ. ಗೀತಾಚಾರ್ಯ)

## ೨. ನಾಡಿಗರ ಶಾಂತಿಬಾಯಿಯವರು

ಇವರು ಶಿವಮೊಗ್ಗ ಜಿಲ್ಲೆಯ ಸಾಗರದ ಕೊಪ್ಪ ವೆಂಕಟೇಶಯ್ಯನವರ ಪುತ್ರಿ, (ಜನನ ೧೮೬೦ – ಮರಣ ೧೯೦೧) ತಂದೆಯರು ವಕೀಲವೃತ್ತಿ. ತಂದೆಯೇ ಗುರುಗಳು. ಇವರಿಗೆ ಸಂಗೀತ ಮತ್ತು ಇತರ ಕಲೆಗಳಲ್ಲೂ ಆಸಕ್ತಿ ಇತ್ತು. ಭಟಕಳದ ಸುಪ್ರಸಿದ್ಧ ಕವಿಗಳೂ ಸತ್ಪುರುಷರೂ ಆಗಿದ್ದ ಅಪ್ಪಯ್ಯ "ನಾಡಘರ" ಮನೆತನದ ಶ್ರೀಯುತ ಕೃಷ್ಣರಾವ್ ಅವರೊಡನೆ ವಿವಾಹವಾಗಿತ್ತು. ಅನೇಕ ಬಗೆಯ ಸಾಂಸಾರಿಕ ವಿಪತ್ತುಗಳನ್ನನ್ನುಭವಿಸಿದ ಶಾಂತೀಬಾಯಿಯ ಮನಸ್ಸು ಆಧ್ಯಾತ್ಮದ ಕಡೆ ತಿರುಗಿತು. ವಿಠಲ ಹಾಗೂ ದತ್ತಾತ್ರೇಯ ಉಪಾಸಕರಾಗಿ ಹಲವಾರು ಕನ್ನಡ ಮತ್ತು ಮರಾಠಿ ಭಕ್ತಿಕೃತಿಗಳನ್ನು ರಚಿಸಿದ್ದರು. ಭಟಕಳದಲ್ಲಿನ ನಾಡಘರ ದೇವಸ್ಥಾನದ ಜೀರ್ಣೋದ್ಧಾರ ಮಾಡಿಸಿ ಉತ್ಸವದ ಪರಂಪರೆ ಹಾಕಿಕೊಟ್ಟರು. ಇವರು ಕೆಲವು ಅಭಂಗಗಳು, ಪುಣ್ಯಚರಿತ್ರೆ ಇವೆಯೆಂದು ತಿಳಿದು ಬಂದಿದೆ.

ಶಾಂತಿಬಾಯಿಯವರು ಕೀರ್ತನೆಗಳಲ್ಲಿ ಉಪಯೋಗಿಸಿರುವ ಪದಗಳು ಬಹಳಷ್ಟು ಹಳಗನ್ನಡ. ದೇವರಲ್ಲಿ ಮೊರೆಹೊಕ್ಕುವಂಥ ಪದಗಳೆ ಬಹಳಷ್ಟು ಕಂಡು ಬರುತ್ತವೆ. ಗೋಪಿ ಮತ್ತು ಕೃಷ್ಣನ ಸಂವಾದ ಚೆನ್ನಾಗಿ ಮೂಡಿ ಬಂದಿದೆ. ಆತ್ಮನಿವೇದನೆ ಪದದಲ್ಲಿ ದೇವರಲ್ಲಿ ಮೊರೆಹೊಕ್ಕಿ ಕಾಪಾಡಬೇಕೆಂದು ಕೇಳುವಾಗ ಗಜರಾಜ ಪುಂಡಲೀಕ ಇನ್ನೂ ಅನೇಕರನ್ನು ಸ್ತುತಿಸುವ ಸಾದೃಶ್ಯಗಳನ್ನು ಚೆನ್ನಾಗಿ ತಂದಿದ್ದಾರೆ.

ಮಂಗಳದ ಪದ ಮತ್ತು ರಾಮದೇವರ ಪದ ಇಲ್ಲಿ ಚೆನ್ನಾಗಿ ಮೂಡಿಬಂದಿದೆ. ಕೀರ್ತನೆಗಳು ಅಷ್ಟಾಗಿ ಲಂಬವಾಗಿಲ್ಲದಿದ್ದರೂ ಓದುಗರಿಗೆ

ಸುಲಭವಾಗಿ ಅರ್ಥವಾಗುವುದು ಕಷ್ಟ, ಯಾವುದೇ ಪದವಾಗಲಿ ಭಕ್ತಿಗೆ ಹೆಚ್ಚು ಪ್ರಾಧಾನ್ಯ ಕೊಡಬೇಕಾದ್ದು ಮುಖ್ಯ.

ಈ ಕೃತಿಯನ್ನು ಒದಗಿಸಿಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಡಾ॥ ಟಿ. ಎನ್. ನಾಗರತ್ನ ಮತ್ತು ಸಲಹೆ ಸೂಚನೆಗಳನ್ನು ಕೊಟ್ಟ ಆಚಾರ್ಯ ಪಾಠಶಾಲ ಕಾಲೇಜಿನ ಡಾ॥ ಬಿ. ಎನ್. ಸುಮಿತ್ರಾರವರಿಗೂ ಬರೆಯುವ ಅವಕಾಶ ಕಲ್ಪಿಸಿಕೊಟ್ಟ ಶ್ರೀಯುತ ಹಾವನೂರುರವರಿಗೆ ನನ್ನ ಕೃತಜ್ಞತೆಗಳು. ಆಧಾರಿತ ಗ್ರಂಥಗಳನ್ನು ಒದಗಿಸಿ ಕೊಟ್ಟ ಗ್ರಂಥಕರ್ತರಿಗೂ ನನ್ನ ವಂದನೆಗಳು.

(– ಎಚ್.ಎಸ್.ಪದ್ಮಾಮೂರ್ತಿ)

## ೩. ಓರಬಾಯಿ ಲಕ್ಷ್ಮೀದೇವಮ್ಮನವರು

### ಜೀವನ ವಿಚಾರ

ಓರಬಾಯಿ ಲಕ್ಷ್ಮೀದೇವಮ್ಮನವರು ಸೊಂಡೂರಿನ ದಿವಾನರಾಗಿದ್ದ ಲಕ್ಷ್ಮಣರಾಯರ ಮತ್ತು ಗೋದಾವರೀಬಾಯಿಯವರ ಏಕಮಾತ್ರ ಪುತ್ರಿಯಾಗಿ ಕ್ರಿ. ಶ. ೧೮೬೫ನೇ ಇಸವಿಯಲ್ಲಿ ಜನಿಸಿದರು.

ಮಗು ಬಹಳ ಮುದ್ದಾಗಿತ್ತು. ತನ್ನ ಶಿಶುಸಹಜವಾದ ಆಟಪಾಟಗಳಿಂದ ತಂದೆ–ತಾಯಿ, ಬಂಧು–ಬಳಗಗಳನ್ನು ಸಂತಸಗೊಳಿಸುತ್ತಿತ್ತು. ಈ ಮಗುವಿನ ಐದನೇವರ್ಷದಲ್ಲಿ ತಂದೆ–ತಾಯಿಗಳು ಹನ್ನೊಂದು ವರ್ಷದ ಸೋದರಮಾವನಾದ ಓರಬಾಯಿ ಮಧ್ವರಾಯನೊಂದಿಗೆ ಈಕೆಯ ವಿವಾಹವನ್ನು ಮಾಡಿದರು.

ಕನ್ಯೆಗೆ ತಾಯಿಯು ತಮ್ಮ ಪರಂಪರೆಯ ಪೂಜಾದಿ ಕ್ರಮಗಳನ್ನೆಲ್ಲಾ ಒಂದೊಂದಾಗಿ ಕಲಿಸುತ್ತಾ ಬಂದರು. ಹತ್ತೊಂಭತ್ತನೇ ಶತಮಾನದಲ್ಲಿ ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸುತ್ತಿರಲಿಲ್ಲ. ಆದ್ದರಿಂದ ಲಕ್ಷ್ಮೀದೇವಮ್ಮನವರಿಗೆ ಮನೆಯಲ್ಲಿ ತಂದೆಯೇ ಕನ್ನಡ ಮತ್ತು ಸಂಸ್ಕೃತಗಳನ್ನು

ಹೇಳಿಕೊಡುತ್ತಿದ್ದರು. ತಾಯಿಯು ಸಾಂಪ್ರದಾಯಕವಾದ ಹಾಡು-ಹಸೆಗಳನ್ನೂ ಆಚಾರ-ವಿಚಾರ, ನೇಮ-ನಿಷ್ಠೆಗಳನ್ನೂ ಕಲಿಸುತ್ತಿದ್ದರು. ಈಕೆ ಬಾಲಕಿಯಾಗಿದ್ದಾಗ ಹರಪನಹಳ್ಳಿಯಲ್ಲಿ ಭೀಮವ್ವನವರಿದ್ದರು. ಆಕೆ ಒಬ್ಬ ಅನುಭಾವೀ ಕವಯಿತ್ರಿಯಾಗಿ ಭಗವಂತನ ವಿಶೇಷ ಕೃಪೆಯಿಂದ ಅನೇಕ ಹಾಡುಗಳನ್ನೂ ಕಥನ ಕವನಗಳನ್ನೂ ರಚಿಸುತ್ತಿದ್ದರು. ಲಕ್ಷ್ಮೀದೇವಮ್ಮನವರು ಈ ಹಾಡುಗಳನ್ನು ಕಲಿಯುತ್ತಿದ್ದರು.

ಹೀಗೆ ಈಕೆ ಸೊಂಡೂರಿನಲ್ಲಿ ತೌರುಮನೆಯಲ್ಲಿ ಬೆಳೆಯುತ್ತಿರುವಾಗ ಮಧ್ವರಾಯರು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಗುತ್ತಿಯಲ್ಲಿ ವಕೀಲೀ ವೃತ್ತಿಯನ್ನು ಆರಂಭಿಸಿದರು. ಪ್ರಾಪ್ತ ವಯಸ್ಕರಾಗಿದ್ದ ಲಕ್ಷ್ಮೀದೇವಮ್ಮನವರು, ಪತಿಗೃಹಕ್ಕೆ ಬಂದರು. ಮಧ್ವರಾಯರು ಗುತ್ತಿಯಲ್ಲಿ ಗಣ್ಯವಕೀಲರೆಂದು ಪರಿಗಣಿತರಾಗಿದ್ದರು. ಸ್ವಲ್ಪಕಾಲದ ನಂತರ ಇವರೀರ್ವರಿಗೆ ಗಂಡುಮಗುವೊಂದು ಜನಿಸಿ ಒಂದುವರ್ಷ ಬೆಳೆದು ತೀರಿಹೋಯಿತು. ದಂಪತಿಗಳಿಗೆ ಇದರಿಂದ ಬಹಳ ದುಃಖವಾಯಿತು.

ಇವರು ಇನ್ನೂ ಹರೆಯದವರಾಗಿದ್ದರು. ಮಕ್ಕಳನ್ನು ಪಡೆಯಬಹುದಾಗಿತ್ತು. ಆದರೆ ಅದರ ಹಿಂದಿನ ತಲೆಮಾರಿನಲ್ಲಿ ಒಬ್ಬೊಬ್ಬ ಮಗನೇ ಇದ್ದುದನ್ನು ಕಂಡ ಇವರಿಗೆ ಏನನ್ನಿಸಿತೋ ಏನೋ ದತ್ತಕಕ್ಕೆ ಮಗನನ್ನು ತೆಗೆದುಕೊಳ್ಳಲು ನಿರ್ಣಯಿಸಿದರು. ಮಧ್ವರಾಯರ ತಂಗಿ ಭಾಗಮ್ಮ ಮತ್ತು ಆಕೆಯ ಪತಿ ರಾಘವೇಂದ್ರರಾಯರಿಗೆ ಇಬ್ಬರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು ಇದ್ದು ಕೊನೆಯವನಾದ ಕೃಷ್ಣಮೂರ್ತಿಯನ್ನೇ ಇವರು ದತ್ತುಮಗನಾಗಿ ಸ್ವೀಕರಿಸಿದರು.

ಗುತ್ತಿಯಲ್ಲಿ ನೆಲೆಸಿದ್ದ ಲಕ್ಷ್ಮೀದೇವಮ್ಮನವರನ್ನು ಎಲ್ಲರೂ ಗುತ್ತೆವ್ವನೆಂದೇ ಕರೆಯುತ್ತಿದ್ದರು. ಕೆಲವು ಕಾಲದ ನಂತರ ಮಧ್ವರಾಯರು ತಮ್ಮ ವಾಸ್ತವ್ಯವನ್ನು ಆದವಾನಿಗೆ ಬದಲಾಯಿಸಿದರು.

ಸಾಂಸ್ಕೃತಿಕವಾಗಿ ಆದವಾನಿಗೆ ಯಾದಗಿರಿ ಎಂಬ ಹೆಸರಿದೆ. ಇಲ್ಲಿನ ದೇವತೆ ವ್ಯಾಸರಾಜರಿಂದ ಪ್ರತಿಷ್ಠಿತನಾದ ಆಂಜನೇಯಸ್ವಾಮಿ, ಇವನಿಗೆ ಮಂಗರಾಯ ನೆಂಬ ಹೆಸರೂ ಇದೆ. ಮಂಗರಾಯನ ಜಾತ್ರೆ ಬಹಳ ವಿಶಿಷ್ಟವಾಗಿ ನಡೆಯುತ್ತದೆ. ಇದಲ್ಲದೆ ಊರ ಮಧ್ಯದಲ್ಲಿ ಮಂಗಳಾಪುರ ಹನುಮಂತದೇವರ ಮಂದಿರವಿದೆ.

ಹೀಗೆ ಪ್ರಸಿದ್ಧಿಪಡೆದ ಆದವಾನಿಯಲ್ಲಿ ಮಧ್ವರಾಯರು ನೆಲೆಸಿದರು. ಅವರು ರಸಿಕರೂ ಸಂಘಜೀವಿಗಳು ಆಗಿದ್ದುದರಿಂದ ಹೋಳಿ ಹುಣ್ಣಿಮೆಯಂದು ಚಪ್ಪರ ಹಾಕಿಸಿ ಸಂಗೀತ, ಹರಿಕಥೆ, ತಾಫೆಗಳನ್ನೇರ್ಪಡಿಸುತ್ತಿದ್ದರು. ಆದವಾನಿಗೆ ಬರುವ ನಾಟಕ ಕಂಪೆನಿಗಳಿಗೆ ಪ್ರೋತ್ಸಾಹಕೊಡುತ್ತಾ ನೆರವಾಗುತ್ತಿದ್ದರು. ಪ್ರಸಿದ್ಧ ಪುರಾಣಿಕರೂ, ಸಂಗೀತಗಾರರೂ ಆಗಿದ್ದ ತುಳಸೀರಾಮಾಚಾರ್ಯರೆಂಬುವರು ಈ ನಾಟಕಗಳಲ್ಲಿ ಸ್ತ್ರೀಪಾತ್ರ ನಿರ್ವಹಿಸುತ್ತಿದ್ದರು. ರಾಯರ ಧರ್ಮಪತ್ನಿಯಾದ ಲಕ್ಷ್ಮೀದೇವಮ್ಮನವರು ರಾಯರ ಪ್ರತೀ ಕಾರ್ಯಕ್ರಮದಲ್ಲಿ ರಾಯರಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು.

ಲಕ್ಷ್ಮೀದೇವಮ್ಮನವರು ನೋಡಲು ತುಂಬಾ ಸುಂದರಿಯಾಗಿದ್ದರು. ಕೇದಿಗೆಯ ಮೈಬಣ್ಣ, ವಿಶಾಲವಾದ ದಯಾಪೂರಿತ ನೇತ್ರಗಳು, ಭಕ್ತಿಯನ್ನೇ ಮೈಗೂಡಿಸಿಕೊಂಡ ಮಟ್ಟಸವಾದ ದೇಹ. ಮಾಧ್ವಸಂಪ್ರದಾಯದಂತೆ ಕಚ್ಚೆ ಸೀರೆಯನ್ನುಟ್ಟು ಹಣೆಗೆ ಉದ್ದವಾದ ಕುಂಕುಮ ತಿಲುಕವನ್ನಿಟ್ಟು, ನಿಲುವಾಭರಣ ಗಳನ್ನು ಧರಿಸುತ್ತಿದ್ದ ಲಕ್ಷ್ಮೀದೇವಮ್ಮನವರು ಸಾಕ್ಷಾತ್ ಲಕ್ಷ್ಮೀಯಂತೆಯೇ ಕಾಣುತ್ತಿದ್ದರು. ಅವರ ಆಶ್ರಯದಲ್ಲಿ ಅನೇಕ ಕುಟುಂಬಗಳು ಬಾಳಿ ಬದುಕುತ್ತಿದ್ದುವು.

ಲಲಿತ ಕಲೆಗಳಲ್ಲಿ ಅಮ್ಮನವರದು ಎತ್ತಿದ ಕೈ. ಅಲಂಕರಣ ಸಾಮಗ್ರಿಗಳನ್ನು ತಯಾರಿಸುವುದು, ಜೇಡಿಮಣ್ಣಿನಲ್ಲಿ ಬೊಂಬೆಗಳನ್ನು ಮಾಡುವುದು, ಬಳಪದ ಕಲ್ಲಿನಲ್ಲಿ ದೇವತಾ ವಿಗ್ರಹಗಳನ್ನು ತಯಾರಿಸುವುದು, ಹಸನಾದಮಣ್ಣಿನ ಮುದ್ದೆಯಲ್ಲಿ ಪಾರಿವಾಳಗಳನ್ನು ಮಾಡುವುದು, ಚಿತ್ರವಿಚಿತ್ರವಾದ ರಂಗೋಲಿಗಳನ್ನು ಬಿಡಿಸುವುದು ಮುಂತಾದ ಹವ್ಯಾಸಗಳೊಂದಿಗೆ ಪಾಕಶಾಸ್ತ್ರದಲ್ಲೂ ಆಕೆ ತುಂಬಾ ನಿಪುಣೆ-ಯಾಗಿದ್ದರು.

ಗೃಹವೈದ್ಯವು ಇವರಿಗೆ ತವರಿನಿಂದ ಬಂದ ಬಳುವಳಿಯಾಗಿತ್ತು. ಸನ್ನಿಪಾತಜ್ವರ, ಮಕ್ಕಳಿಗೆ ಬರುವ ವಾಯು, ಅಪಸ್ಮಾರ ಮುಂತಾದ ಖಾಯಿಲೆಗಳಿಗೆ ಇವರ ಮಾತ್ರೆಗಳು ಸಂಜೀವಿನಿಯಾಗಿರುತ್ತಿದ್ದವು. ಮನೆಯಲ್ಲಿ ಗುಳಿಗೆಗಳನ್ನು ತಯಾರಿಸಿ ಕೊಂಡು ಕೇಳಿದವರಿಗೆ ಉಚಿತವಾಗಿ ನೀಡುತ್ತಿದ್ದರು.

ಲಕ್ಷ್ಮೀದೇವಮ್ಮನವರಿಗೆ ಪೂಜೆ-ಪುನಸ್ಕಾರಗಳಲ್ಲಿ ತುಂಬಾ ಶ್ರದ್ಧೆಯಿತ್ತು ಅವರು ಮೂಢನಂಬಿಕೆಗಳಿಗೆ ಶರಣಾಗುತ್ತಿರಲಿಲ್ಲ ಇವರ ಮನೆತನದಲ್ಲಿ ವರಮಹಾಲಕ್ಷ್ಮಿ

ವ್ರತವನ್ನು ಮಾಡುವಾಗ ಕಲಶ ಸ್ಥಾಪನೆಯನ್ನು ಮಾಡುತ್ತಿರಲಿಲ್ಲ. ಬೇರೆಯವರ ಮನೆಗೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಿದ್ದರು. ವ್ರತವನ್ನು ಹಿಡಿದಿರಲಿಲ್ಲ. ಉದ್ಯಾಪನೆಯನ್ನು ಮಾಡಲಿಲ್ಲ. ಕಳಸ ಸ್ಥಾಪನೆ ಮಾಡಿದರೆ ಏನಾಗಿಬಿಡುವುದೋ ಎಂಬ ಭಯ. ಅಮ್ಮನವರು ಯೋಚಿಸಿದರು. ಜಗದೇಕಮಾತೆಯಾದ ಮಹಾಲಕ್ಷ್ಮಿಯನ್ನು ಪೂಜಿಸಿದರೆ ಕೆಡುಕಾಗುವುದೆ? ಏನಾಗಿಬಿಡುವುದೋ ನೋಡಿಯೇಬಿಡೋಣವೆಂದು ಕಲಶಸ್ಥಾಪನೆ ಮಾಡಿಯೇ ಬಿಟ್ಟರು. ಪೂಜೆಯು ವಿಜೃಂಭಣೆಯಿಂದ ನಡೆಯಿತು ಎಲ್ಲ ಮುಗಿದಮೇಲೆ ಸ್ವಲ್ಪಹೊತ್ತು ಸುಧಾರಿಸಿ ಕೊಳ್ಳಲು ಮಗ್ನಲಾದರು. ಏನೋ ಶಬ್ದವಾದಂತಾಯಿತು. ನೋಡುತ್ತಾರೆ! ಸರ್ವಾಲಂಕಾರಭೂಷಿತೆಯಾದ ಸ್ತ್ರೀಯೊಬ್ಬಳು ದೇವರಮನೆಯಿಂದ ಹೊರಗೆ ಹೋಗುತ್ತಿರುವಂತಾಯಿತು. ತಟ್ಟನೆ ಎದ್ದರು, ಬಾಗಿಲಿಗೆ ಕೈಯನ್ನು ಅಡ್ಡವಿಟ್ಟು ಆಕೆಯನ್ನು ತಡೆದರು. 'ಯಾಕಮ್ಮ, ನೀನು ಹೊರಟುಹೋಗುತ್ತೀಯಾ'? ತಾಯಿ ಹೇಳಿದಳು– 'ಪೂಜೆ ಸಾಂಗವಾಗಿ ನಡೆಯಿತಲ್ಲಾ? ಇನ್ನೇನು ನಾನು ಬರುತ್ತೇನೆ'. ಲಕ್ಷ್ಮೀದೇವಮ್ಮನವರೆಂದರು–'ಸಾಧ್ಯವಿಲ್ಲ ತಾಯಿ' ನೀನು ನಮ್ಮಲ್ಲಿಯೇ ನೆಲೆಸಿರಬೇಕು. ನಮ್ಮನ್ನೆಲ್ಲಾ ಅನುಗ್ರಹ ಮಾಡುತ್ತಿರಬೇಕು. ನಿನ್ನ ಕೃಪೆ ಯಾವಾಗಲೂ ನಮ್ಮ ಮನೆತನದ ಮೇಲಿರಬೇಕು. ಇದಕ್ಕೆಂದಲ್ಲವೆ ನಾನು ನಿನ್ನನ್ನು ಪೂಜಿಸಿದ್ದು, ದಯಾಮಾಡಿ ಇಲ್ಲಿಯೇ ಇದ್ದು ನಮ್ಮನ್ನೆಲ್ಲಾ ಸಲಹುತ್ತಿರು, ಎಂದು ಬೇಡಿಕೊಂಡರು. 'ಹಾಗೆಯೇ ಆಗಲಿ' ಎಂದ ಆಕೆಯು ಪುನಃ ಒಳಕ್ಕೆ ಹೋದಂತಾಯಿತಂತೆ.

ಅನಂತಪದ್ಮನಾಭವ್ರತದ ವಿಚಾರದಲ್ಲೂ ಹೀಗೇ ಆಯಿತು. ಈಕೆಗೆ ಒಮ್ಮೆ ಒಂದು ಹೊಸ ಅನಂತನ ದಾರ ಮತ್ತು ಮಂತ್ರಾಕ್ಷತೆಯು ದೊರೆಯಿತಂತೆ. ಆಗ ತಮ್ಮ ದತ್ತಕಮಗನ ಕೈಯಿಂದ ವ್ರತ ಮಾಡಿಸಬೇಕೆಂದುಕೊಂಡರಂತೆ. ಕಾರ್ಯಬಾಹುಳ್ಯದಿಂದ ಆತನಿಗೆ ಸಾಧ್ಯವಾಗಲಿಲ್ಲ. ಆದರೆ ಆತನ ಅಣ್ಣ ರಾಮಚಂದ್ರ–ರಾಯರು ಅನೂಚಾನವಾಗಿ ಆ ವ್ರತವನ್ನು ನಡೆಸಿಕೊಂಡು ಬಂದರು.

ಅವ್ವನವರು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದರು. ತಿರುಪತಿ, ಮಂಗಳಗಿರಿ, ಸಿಂಹಾಚಲ, ಆ ಕ್ಷೇತ್ರ ದೇವತೆಗಳ ಮೇಲೆ ಪದಗಳನ್ನು ರಚಿಸಿರುವರು ಲಕ್ಷ್ಮೀದೇವಮ್ಮನವರ ಮನೆ ಅನ್ನದಾನ ವಿದ್ಯಾದಾನಗಳ ಕೇಂದ್ರವಾಗಿತ್ತು. ಅನೇಕ

ಜನರು ಇವರನ್ನು ಆಶ್ರಯಿಸಿ ಪ್ರಯೋಜನವನ್ನು ಪಡೆಯುತ್ತಿದ್ದರು. ಹರಿಗುರುಗಳ ಸೇವೆಯೆಂದರೆ ಲಕ್ಷ್ಮೀದೇವಮ್ಮನವರಿಗೆ ಚತುರ್ಭುಜ ವಾಗುತ್ತಿತ್ತು.

ಸ್ವತಃ ತಂದೆಯವರೇ ಇವರಿಗೆ ಕನ್ನಡ-ಸಂಸ್ಕೃತಗಳ ಕ್ರಮಬದ್ಧವಾದ ಅಭ್ಯಾಸವನ್ನು ಮಾಡಿಸಿದ್ದರು. ಮಣಿಮಂಜರಿ, ಮಧ್ವವಿಜಯ ಮುಂತಾದ ಗ್ರಂಥಗಳ ಪಾಠವಾಗಿತ್ತು, ಗುರೂಪದೇಶವಾಗಿತ್ತು. ಆಗಿನ ಉತ್ತರಾದಿಮಠದ ಸ್ವಾಮಿಗಳಾಗಿದ್ದ ಶ್ರೀ ಶ್ರೀ ಸತ್ಯಧ್ಯಾನ ಸ್ವಾಮಿಗಳು ಅವ್ವನವರ ನಿಷ್ಠೆ ಮತ್ತು ಸದ್ಗುಣಗಳಿಂದ ಸಂತೋಷಪಟ್ಟವರಾಗಿ ಆಕೆಯ ಮೇಲೆ ವಿಶೇಷವಾದ ಅನುಗ್ರಹ ಮಾಡಿದ್ದರು. ಮಂತ್ರಾಲಯದ ರಾಯರಿಗಂತೂ ಅವ್ವನವರು ಅಂತರಂಗ ಭಕ್ತರಾಗಿದ್ದರು. ಆಗಾಗ ಮಂತ್ರಾಲಯಕ್ಕೆ ಹೋಗಿ ಸೇವೆ ಮಾಡುತ್ತಿದ್ದರು. ಇಂತಹ ಸಮಯದಲ್ಲಿ ರಾಯರು ಆಗಾಗ ಸ್ವಪ್ನರೂಪದಲ್ಲಿ ಬಂದು ದರ್ಶನ ಕೊಡುತ್ತಿದ್ದರು. ಆಗಿನ ಕಾಲದಲ್ಲಿ ರಾಘವೇಂದ್ರ ಮಠದ ಸುಶೀಲೇಂದ್ರ ಹಾಗೂ ಸುಯಮೀಂದ್ರ ಶ್ರೀಗಳವರೂ ಅವ್ವನವರ ನಿಷ್ಠೆ, ದಯೆ, ವಾತ್ಸಲ್ಯ ಹಾಗೂ ಭಕ್ತಿಗಳನ್ನು ಕಂಡು ಅವರ ಮೇಲೆ ವಿಶೇಷವಾಗಿ ಅನುಗ್ರಹ ಮಾಡುತ್ತಿದ್ದರು. ಮೇಲಿಂದ ಮೇಲೆ ಶ್ರೀಗಳ ದರ್ಶನ, ಸೇವಾ, ಪ್ರಕಾಂಡ ಪಂಡಿತರಿಂದ ತಮ್ಮ ಮನೆಯಲ್ಲೇ ನಡೆಯುತ್ತಿದ್ದ ವಿದ್ವದ್ಗೋಷ್ಠಿ, ಸ್ವಯಂ ಪಠಣ ಮಾಡಿದ್ದ ಶಾಸ್ತ್ರ ಗ್ರಂಥಗಳು, ಇವುಗಳೆಲ್ಲಾ ಸಾಹಿತ್ಯ ಕೃಷಿಗಳಾಗಿ ಈಕೆಯ ಹೃದಯವನ್ನು ಹದ ಮಾಡಿದ್ದುವು, ಇದಕ್ಕೆ ಪೂರಕವಾಗಿ ಆಗಿನ ಸೋದೆಮಠದ ಸ್ವಾಮಿಗಳ ಅನುಗ್ರಹವೂ ಆಕೆಗೆ ದೊರಕಿತ್ತು. ಹೇಗೆಂದರೆ ಒಂದುಸಲ ಈಕೆ ಆರಾಧನೆಗಾಗಿ ಸೋದೆಗೆ ಹೋಗಿದ್ದರು. ಆಗ ರಾಶಿರಾಶಿಯಾಗಿ ಬಂದು ಬೀಳುತ್ತಿದ್ದ ತರಕಾರಿಗಳನ್ನೆಲ್ಲಾ ವಿಂಗಡಿಸಿ ಸುವಾಸಿನಿಯರು ಈಳಿಗೆಮಣೆಗಳನ್ನಿಟ್ಟುಕೊಂಡು 'ನಾಮುಂದು ತಾಮುಂದು' ಎಂದು ಹೆಚ್ಚುತ್ತಿದ್ದರು. ಅಮ್ಮನವರು ಕುಳಿತ ಕಡೆಯಿಂದಲೇ ತರಕಾರಿಗಳ ಮೇಲೆ ಪದ ರಚಿಸಿದರು. ಶ್ರೀಗಳವರಿಗೆ ಪರಮಾನಂದವಾಯಿತು. ಅವರು ಅಂದಿನ ಸಾಯಂಕಾಲದ ಸಭೆಯಲ್ಲಿ ಲಕ್ಷ್ಮೀದೇವಮ್ಮನವರು ರಚಿಸಿದ ಹಾಡನ್ನು ಮತ್ತೆ ಹಾಡಿಸಿ ಮಂತ್ರಾಕ್ಷತೆಯನ್ನು ಅನುಗ್ರಹಿಸಿದರು.

'ಮುನ್ನಮಾಡಿದ ಕರ್ಮ ಬೆನ್ನಬಿಡದು' ಎಂಬಂತೆ ಇಂತಹ ಭಗವದ್ಭಕ್ತೆಗೂ ದುರ್ವಿಧಿ ಪ್ರಾಪ್ತವಾಯಿತು. ಅವರ ಐವತ್ತೆರಡನೇ ವಯಸ್ಸಿನಲ್ಲಿ ಅವರ ಪತಿ

ತೀರಿಕೊಂಡರು. ಮೊದಲೇ ಭಗವತ್ ಸೇವಾಸಕ್ತರೂ, ವಿರಕ್ತರೂ ಆಗಿದ್ದ ಅವರ ಮನಸ್ಸು ಇನ್ನೂ ವಿರಕ್ತವಾಯಿತು, ನಂತರ ಅವರು ಬಳ್ಳಾರಿಗೆ ಬಂದು ನೆಲೆಸಿದರು.

ಲಕ್ಷ್ಮೀದೇವಮ್ಮನವರ ದೇಹ-ಮನಸ್ಸುಗಳೆರಡೂ ಸದಾ ಸ್ವಾಮಿಯ ಸೇವಾ, ಚಿಂತನ, ಮಥನಗಳಲ್ಲಿ ತೊಡಗಿದ್ದುವು. ಹೀಗಿರುವಾಗ ಒಮ್ಮೆ ಇವರಿಗೆ ತಮ್ಮ ಮನೆದೇವರಾದ ಲಕ್ಷ್ಮೀನರಸಿಂಹನ ದೇವಾಲಯವನ್ನು ಬಳ್ಳಾರಿಯಲ್ಲಿ ನಿರ್ಮಿಸುವ ಮನಸ್ಸಾಯಿತು. ದೇವಾಲಯ ನಿರ್ಮಾಣವೆಂದರೆ ಸಾಮಾನ್ಯವಲ್ಲ. ಅವ್ವನವರು ಇದಕ್ಕಾಗಿ ಕಸಾಪುರದ ಪ್ರಾಣದೇವರಲ್ಲೂ, ಮಂತ್ರಾಲಯದಲ್ಲೂ ಸೇವೆ ನಡೆಸಿದರು.

ಆಗ ಮಂತ್ರಾಲಯದಲ್ಲಿ ವಿಪರೀತ ಕಾಲರಾ ಇತ್ತು. ಜನಗಳೆಲ್ಲಾ ಊರುಬಿಟ್ಟು ಹೋಗುತ್ತಿದ್ದರು. ಲಕ್ಷ್ಮೀದೇವಮ್ಮನವರು ಮಾತ್ರ ಸೇವೆ ಮಾಡುತ್ತಾ ನಿಂತರು. ಒಂದು ದಿನ ಬೆಳಗಿನರುಷಾವದಲ್ಲಿ ರಾಯರು ಗವಾಕ್ಷಿಯಿಂದ ಅವರ ಕಣ್ಣಿಗೆ ಕಾಣಿಸಿದಂತಾಯ್ತು "ನಾವಿದ್ದೇವೆ ಧೈರ್ಯವಾಗಿ ಕೆಲಸ ನಡೆಸು" ಎಂದಂತಾಯಿತು. ಆದರೂ ಅವ್ವನವರಿಗೆ ಏನೋ ಅಸಮಾಧಾನ, ಮಂತ್ರಾಕ್ಷತೆ ದೊರೆಯಲಿಲ್ಲವೆಂದು ನಿರಾಶರಾಗಿ ಎತ್ತಿನಗಾಡಿಯಲ್ಲಿ ಊರಿಗೆ ಹಿಂದಿರುಗುತ್ತಿರುವಾಗ ಸ್ವಲ್ಪ ದೂರ ಸರಿದ ನಂತರ ಎಂಟುವರ್ಷದ ವಟುವೊಬ್ಬನು ಇವರನ್ನು ಕೂಗುತ್ತಾ ಓಡೋಡಿ ಬಂದನಂತೆ, ಇವರು ಗಾಡಿಯನ್ನು ನಿಲ್ಲಿಸಿ ಏದುಸಿರು ಬಿಡುತ್ತಾ ಬರುತ್ತಿದ್ದ ಬಾಲಕನನ್ನು ಹತ್ತಿರಕರೆದು ವಿಚಾರಿಸಲು ಅವನು ಒಂದುಪತ್ರವನ್ನು ತಂದು ಇವರ ಕೈಗೆ ಕೊಟ್ಟನಂತೆ ಕವರಿನ ಮೇಲೆ ಇವರ ಹೆಸರೇ ಇತ್ತು. ಒಡೆದು ನೋಡಿದರೆ ಅದರ ತುಂಬಾ ಫಲಮಂತ್ರಾಕ್ಷತೆಗಳಿದ್ದುವು, ಆಶ್ಚರ್ಯಚಕಿತರಾಗಿ ಎದುರಿಗೆ ನೋಡಿದರೆ ಬಾಲಕನಿರಲಿಲ್ಲ. ಇವರು ಮಾಡುವ ಕೆಲಸಕ್ಕೆ ರಾಯರ ಸಮ್ಮತಿ ದೊರಕಿತೆಂದು ಸಂತೋಷಭರಿತರಾಗಿ ಊರಿಗೆ ಹಿಂದಿರುಗಿದರು.

ದೇವಾಲಯದ ಕೆಲಸ ಆರಂಭವಾಯಿತು, ಬಳ್ಳಾರಿಯ ಅಕ್ಕಸಾಲಿಗರ ಬೀದಿಯಲ್ಲಿ ಮಂದಿರವನ್ನು ನಿರ್ಮಿಸಲು ತೀರ್ಮಾನವಾಯಿತು ದಿವ್ಯಮಂಗಳ-ಕರವಾದ ಶ್ರೀಲಕ್ಷ್ಮೀನರಸಿಂಹ ವಿಗ್ರಹವು ಸಿದ್ಧವಾಯಿತು. ಶಾಸ್ತ್ರೋಕ್ತ ರೀತಿಯಲ್ಲಿ ಧಾನ್ಯಾವಾಸ, ಜಲಾವಾಸಗಳಾದುವು ಶ್ರೋತ್ರಿಯ ಬ್ರಾಹ್ಮಣರು ತಂತ್ರಸಾರ ಇತ್ಯಾದಿಗಳನ್ನು ಪಾರಾಯಣ ಮಾಡತೊಡಗಿದರು. ಹೀಗಿರುವಾಗ ಆಶ್ಚರ್ಯಕರ

ಘಟನೆಯೊಂದು ನಡೆಯಿತು. ಅವ್ವನವರ ಮನೆಯ ದೇವರು 'ನೀರಾ ನರಸಿಂಹ'– ಗಂಗಾವತಿಯವರ ಮನೆದೇವರು ಅಹೋಬಲ ನರಸಿಂಹ, ಅವ್ವನವರು ಅನೇಕ ಕ್ಷೇತ್ರಗಳಿಗೆ ಹೋಗಿದ್ದರೂ ಅಹೋಬಲಕ್ಕೆ ಹೋಗಿರಲಿಲ್ಲ. ಹಿಂದೆ ಎರಡುಬಾರಿ ಅಲ್ಲಿಗೆ ಹೋಗಬೇಕೆಂದು ಪ್ರಯತ್ನಪಟ್ಟಾಗ ಅಲ್ಲಿಗೆ ಹೋಗಬೇಡವೆಂದು ಸ್ವಪ್ನವಾಗಿತ್ತಂತೆ.

ವಿಗ್ರಹ ಪ್ರತಿಷ್ಠಾಪನೆಗೆ ಒಂದೆರಡು ದಿನಗಳಿರುವಾಗ ಒಂದು ಬೆಳಗಿನ ಝಾವದಲ್ಲಿ ಖಾಲಿಯಾಗಿದ್ದ ಗರ್ಭಗುಡಿಯಲ್ಲಿ ಅಗ್ನಿಯ ಉಗ್ರಜ್ವಾಲೆಗಳು ಕಂಡು ಬಂದವಂತೆ. ಅವ್ವನವರು ಭಯಭ್ರಾಂತರಾಗಿ ತಿಳಿದವರನ್ನು ವಿಚಾರಿಸಲು ಅವರು 'ಅದು ಅಗ್ನಿದೇವನ ದಿವ್ಯದರ್ಶನ' ಅವನು ಕಾಣಿಸಿಕೊಂಡಿದ್ದರಿಂದ ಈ ಗರ್ಭಗುಡಿ ಶುದ್ಧವಾಗಿದ್ದು ಇದರಲ್ಲಿ ಪರಮಾತ್ಮನ ಸಾನ್ನಿಧ್ಯವಿರುತ್ತದೆ' ಎಂದರಂತೆ. ಆದರೆ ಅವ್ವನವರಿಗೆ ಸಮಾಧಾನವಾಗಲಿಲ್ಲ. ಮರುದಿನವೂ ಹೀಗೆಯೇ ಆಯಿತು. ಅವ್ವನವರಿಗೆ ಇದು ಸ್ವಾಮಿಯ ಉಗ್ರರೂಪವೆಂದು ಭಾಸವಾಯಿತು ಆಗ ಅವರು ಭಗವಂತನನ್ನು ಪ್ರಾರ್ಥಿಸತೊಡಗಿದರು 'ನನ್ನ ವಂಶದವರು ನಿನ್ನನ್ನು ಸೇವಿಸುತ್ತಾ ನಿನ್ನ ಅನುಗ್ರಹವನ್ನು ಪಡೆಯಲೆಂದಲ್ಲವೆ ನಿನ್ನನ್ನು ಪ್ರತಿಷ್ಠಾಪನೆಗೊಳಿಸುವುದು! ನೀನು ಈ ರೀತಿ ಉಗ್ರನಾಗಿದ್ದಲ್ಲಿ ಅರ್ಚಕರು ನಿನ್ನನ್ನು ಮುಟ್ಟಿ ಹೇಗೆ ಪೂಜಿಸಬಲ್ಲರು? ಎಂದು ಬೇಡಲು ಸೌಮ್ಯನಾಗಿ "ನೀನು ಉಗ್ರನರಸಿಂಹನ ರೂಪವನ್ನು ನೋಡಬೇಕೆಂದು ಆಶಿಸಿದ್ದರಿಂದ ನಿನಗೆ ಈ ರೀತಿ ದರ್ಶನವನ್ನು ಕೊಟ್ಟಿದ್ದೇನೆ. ಇನ್ನು ಮುಂದೆ ನನ್ನ ಸೌಮ್ಯರೂಪದಿಂದಲೇ ಇರುತ್ತೇನೆ" ಎಂದು ಅಂದಹಾಗಾಯ್ತು, ಬೆಳಿಗ್ಗೆ ನೋಡಲು ಜ್ವಾಲೆಯಿರಲಿಲ್ಲ.

ಸನ್ ಸಾವಿರದ ಒಂಭೈನೂರು ಐದರಲ್ಲಿ (೧೯೦೫) ಶ್ರೀ ಲಕ್ಷ್ಮೀನರಸಿಂಹ ದೇವರ ಪ್ರತಿಷ್ಠೆಯಾಯಿತು. ಪ್ರಾಣದೇವರ ಪ್ರತಿಷ್ಠೆಯೂ, ರಾಘವೇಂದ್ರಸ್ವಾಮಿಗಳ ಮೃತ್ತಿಕಾ ಬೃಂದಾವನದ ಪ್ರತಿಷ್ಠಾಪನೆಯೂ ಆಯಿತು. ಅವ್ವನವರು ಸತ್ಯಧ್ಯಾನ ಸ್ವಾಮಿಗಳನ್ನು ಬಹುವಾಗಿ ಸೇವಿಸಿದ್ದುದರಿಂದ ಅವರ ಮೃತ್ತಿಕಾ ಬೃಂದಾವನವನ್ನು ಸ್ಥಾಪಿಸಬೇಕೆಂದೂ ಇಚ್ಛಿಸಿದರು. ಅವ್ವನವರು ಮಿತಪರಿವಾರದೊಡನೆ ಸತ್ಯಧ್ಯಾನ ಸ್ವಾಮಿಗಳ ಮಹಾಸಮಾರಾಧನೆಗೆ ಪಂಢರಾಪುರಕ್ಕೆ ಹೋದರು. ಅಂದು ಸಂಜೆ

ಆಗಿನ ಸ್ವಾಮಿಗಳಾಗಿದ್ದ ಶ್ರೀ ಶ್ರೀ ಸತ್ಯಪ್ರಜ್ಞ ಸ್ವಾಮಿಗಳನ್ನು ಕಂಡು ತಾವು ನಿರ್ಮಿಸಿರುವ ಲಕ್ಷ್ಮೀನರಸಿಂಹ ಆಲಯದಲ್ಲಿ ಸತ್ಯಧ್ಯಾನ ಸ್ವಾಮಿಗಳ ಮೃತ್ತಿಕಾ ಬೃಂದಾವನವನ್ನು ಸ್ಥಾಪಿಸಲು ಬಯಸಿರುವುದರಿಂದ ಮೃತ್ತಿಕೆಯನ್ನು ದಯಪಾಲಿಸಬೇಕೆಂದು ಕೇಳಿಕೊಂಡರು. ಸ್ವಾಮಿಗಳು ಸಂತೋಷಪಟ್ಟು ಇನ್ನು ಕೆಲವೇ ದಿನಗಳಲ್ಲಿ ತಾವು ಆತಕೂರಿನಲ್ಲಿ ಶ್ರೀಗಳವರ ಮೊದಲನೇ ಮೃತ್ತಿಕಾ ಬೃಂದಾವನವನ್ನು ಸ್ಥಾಪಿಸಲಿರುವುದಾಗಿಯೂ ಆ ನಂತರ ಲಕ್ಷ್ಮೀದೇವಮ್ಮನವರು ಸ್ಥಾಪಿಸಬಹುದೆಂದು ಹೇಳಿ ಮೃತ್ತಿಕೆಯನ್ನು ದಯಪಾಲಿಸಿದರು. ಅವ್ವನವರು ಶ್ರೀಗಳವರ ಆಜ್ಞೆಯಂತೆ ಆತಕೂರಿನಲ್ಲಿ ಸತ್ಯಧ್ಯಾನ ಸ್ವಾಮಿಗಳ ಮೊದಲನೆಯ ಮೃತ್ತಿಕಾ ಬೃಂದಾವನವು ಸ್ಥಾಪನೆಯಾದ ನಂತರ ತಾವು ಬಳ್ಳಾರಿಯಲ್ಲಿ ಲಕ್ಷ್ಮೀನೃಸಿಂಹನ ದೇವಾಲಯದಲ್ಲಿ ಸ್ಥಾಪಿಸಿದರು. ಹೀಗಾಗಿ ಒಂದೇ ಮಂದಿರದಲ್ಲಿ ಹರಿ, ವಾಯು, ಗುರುಗಳು ನೆಲೆಸಿ ಅದೊಂದು ಪುಣ್ಯಕ್ಷೇತ್ರವಾಗಿದೆ. ಒಂದೇ ಗುಡಿಯಲ್ಲಿ ಈ ರೀತಿ ಗುರು ಸಾರ್ವಭೌಮರ ಹಾಗೂ ಉತ್ತರಾದಿಮಠ ಪರಂಪರೆಯ ಯತಿಗಳ ಬೃಂದಾವನವಿರುವುದು ತೀರಾ ಅಪರೂಪ. ಇದಲ್ಲವೆ ಅವ್ವನವರು ಸಾಧಿಸಿದ ಭಾವೈಕ್ಯತೆ.

ಅನುಭಾವಿಗಳ ದೇಹಮಂದಿರವು ಭಕ್ತಿಯಿಂದ ತುಂಬಿ ಚಿದ್ರೂಪವನ್ನು ತಾಳಿರುತ್ತದೆ. ಅವರ ಒಂದೊಂದು ನುಡಿಯೂ ಮಂತ್ರಸಮವಾಗಿರುತ್ತದೆ. ಕೃತಿಯಂತೂ ಮಾನವಸೇವೆಗೆ ಮೀಸಲು. ಅವರು ನಡೆದಾಡಿದರೆ ಜ್ಯೋತಿ ನಡೆದಾಡಿದಂತೆ ಭಾಸವಾಗುತ್ತದೆ. ಇಂತಹ ಒಂದು ಅನುಭವ ಅವರ ಮನೆಯ ಅಂಗಳದಲ್ಲಿ ಅಲ್ಲಿಯೆ ಕುಳಿತು ಭತ್ತ ಕುಟ್ಟುತ್ತಿದ್ದ ಹೆಂಗಳೆಯರಿಗಾಯಿತು. ಅವ್ವನವರು ಅಲ್ಲಿಯೆ ಕುಳಿತು ಬತ್ತಿ ಹೊಸೆಯುತ್ತಿದ್ದರು, ಏನೋ ಕೆಲಸ ನಿಮಿತ್ತ ಎದ್ದುಹೋದಾಗ ಭತ್ತ ಕುಟ್ಟುತ್ತಿದ್ದವರ ಕಣ್ಣಿಗೆ ಎರಡು ಜ್ಯೋತಿಗಳು ನಡೆದಾಡಿದಂತೆ ಕಂಡವಂತೆ. ಇದನ್ನು ಅವರು ಇತರರಿಗೆ ತಿಳಿಸಿದರಂತೆ.

ಆದವಾನಿಯಲ್ಲಿ ಒಮ್ಮೆ ಒಂದು ವರ್ಷ ಪರಿಯಂತ ಜನರು ಆದಿವ್ಯಾಧಿಗಳಿಗೆ ಈಡಾಗಿದ್ದಾಗ ಮಂಗರಾಯನಿಗೆ ವಿಶೇಷ ಉತ್ಸವವನ್ನು ನಡೆಸುವುದರ ಬಗ್ಗೆ ತಾನಾಜಿ ಶ್ರೀನಿವಾಸರಾಯರು ಮತ್ತು ಇತರ ಗಣ್ಯರು ಅವ್ವನವರ ಸಲಹೆ ಕೇಳಿದರಂತೆ.

ಅವ್ವನವರು ಮಂಗರಾಯನಿಗೆ ಜಪ–ಪಾರಾಯಣಗಳ ಜೊತೆಗೆ ಲಕ್ಷಕರಿಗಡಬನ್ನು ಏರಿಸಲು, ಅನ್ನ ಸಂತರ್ಪಣೆ ನಡೆಸಲು ಹೇಳಿದರಂತೆ. ಎಲ್ಲರು ಸಹಕರಿಸಿ ಒಂದು ತಿಂಗಳು ವೈಭವದಿಂದ ಉತ್ಸವವನ್ನಾಚರಿಸಲು ಮಂಗರಾಯನು ಸುಪ್ರೀತನಾದನಂತೆ. ಆದಿವ್ಯಾಧಿಗಳು ದೂರಾದವಂತೆ.

ಮಾನವಸೇವೆಯೇ ಮಾಧವನ ಸೇವೆಯೆಂಬುದನ್ನು ಅವ್ವನವರು ಚೆನ್ನಾಗಿ ಮನನ ಮಾಡಿದ್ದರು. ಅಂತೆಯೇ ಅವರ ಗೃಹವೈದ್ಯಗಳು ಎಲ್ಲರಿಗೂ ಉಪಯೋಗವಾಗುತ್ತಿದ್ದುವು, ಇದಕ್ಕಾಗಿ ಆಕೆ ಯಾವ ಪ್ರತಿಫಲವನ್ನೂ ಅಪೇಕ್ಷಿಸಲಿಲ್ಲ.

**ಕೀರ್ತನೆಗಳು**

ಈ ಮೊದಲೇ ತಿಳಿಸಿದ್ದಂತೆ ಅವ್ವನವರ ಹೃದಯ ಭಾವುಕವಾಗಿತ್ತು. ಶಾಸ್ತ್ರಗಳ ಶ್ರವಣ, ಪಠನ, ಮನನಗಳಿಂದ ಹರಿತಗೊಂಡಿತ್ತು. ಉಪವಾಸ ಹರಿಗುರುಗಳ ಮತ್ತು ಜನತಾ ಸೇವೆಯಿಂದ ಶರೀರ ಸಂಸ್ಕಾರಗೊಂಡಿತ್ತು. ಹರಿಗುರುಗಳ ವಿಶೇಷ ಅನುಗ್ರಹವಿತ್ತು. ಕುಟುಂಬದವರ ಸಹಕಾರವಿತ್ತು. ಇವೆಲ್ಲಾ ಒಟ್ಟುಗೂಡಿ ದೇವಾಲಯದ ನಿರ್ಮಾಣದ ನಂತರ ಆಕೆಯಲ್ಲಿ ಸುಪ್ತವಾಗಿದ್ದ ಕಾವ್ಯತುಂಗಭದ್ರ ಉಕ್ಕಿ ಹರಿಯತೊಡಗಿದಳು. ಒಮ್ಮೆ ಕಿರಿದಾದ ತೊರೆಯಂತೆ, ಒಮ್ಮೆ ಭೋರ್ಗರೆವ ಶರಾವತಿಯಂತೆ, ಒಮೊಮ್ಮೆ ಸಾಗರದ ವಿಶಾಲತೆಯಿಂದ, ಅಗಾಧತೆಯಿಂದ ಗಂಭೀರದಿಂದ ಆಕೆಯ ಸಾಹಿತ್ಯ ಓತಪ್ರೋತವಾಗಿ ಹರಿಯ ತೊಡಗಿತು. ನಿಂತರೆ, ಕೂತರೆ, ನೋಡಿದ್ದು, ಕೇಳಿದ್ದು ಎಲ್ಲವೂ ಕಾವ್ಯವಾಗತೊಡಗಿತು. ಶುಕ್ರವಾರದ ಹಾಡು, ಶನಿವಾರದ ಹಾಡು, ಮಂಗಳಗೌರೀ ಹಾಡು, ಶ್ರೀ ಕೃಷ್ಣದಾನವ್ರತ, ಚೇಳಿನ–ಹಾಡು ಇತ್ಯಾದಿಗಳನ್ನು ರಚಿಸಿದ್ದಾರೆ, ಇವರಿಗಿಂತ ಮುಂಚೆ ಇದ್ದ ಭೀಮವ್ವನವರೂ ಸಹ ಈ ಹಾಡುಗಳನ್ನು ರಚಿಸಿದ್ದಾರೆ. ಅಂದರೆ ಲಕ್ಷ್ಮಿದೇವಮ್ಮನವರದು ಅದರ ಕಾರ್ಬನ್ ಕಾಪಿ, ಕಾಪಿಯಲ್ಲಿ ವಿಷಯ ಒಂದೇ ಆದರೂ ನಿರೂಪಣೆ ಮತ್ತು ಶೈಲಿಗಳಲ್ಲಿ ಭಿನ್ನತೆಯಿದೆ, ಬಳ್ಳಾರಿಯ ಕನ್ನಡದ ಗಡಸುತನದ ಸೊಗಡಿದೆ. ಅನೇಕ ತೆಲುಗು ಶಬ್ದಗಳು ಕನ್ನಡ ಶಬ್ದಗಳೊಂದಿಗೆ ಬೆರೆತು ಕನ್ನಡ ಶಬ್ದಗಳೇ ಆಗಿವೆ, ಭಾಷೆ ಹೃದಯಂಗಮ, ಶುದ್ಧ ಪ್ರಾದೇಶಿಕ, ನಿರೂಪಣೆ ನೇರ. ಹೃದಯವನ್ನು ಕಟ್ಟಬಲ್ಲ ಹೃದ್ಗುಹಾವಾಸಿಯನ್ನು ಎಬ್ಬಿಸಬಲ್ಲ ಸಾತ್ವಿಕಶಕ್ತಿ ಶಬ್ದಗಳಾಗಿವೆ.

ಅಪ್ಪಾಸವರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಆಗಿನವರು ಈಗಿನವರಂತೆ ಬರೆದಿಡುವ ಅಭ್ಯಾಸ ಮಾಡಿಕೊಂಡಿರಲಿಲ್ಲ. ರಚನೆಗಳು ಬಾಯಿಂದ ಹರಿದು ಬರುತ್ತಿದ್ದುವು. ಅನೇಕ ದೇವರನಾಮಗಳು, ರಾಯರಮೇಲಿನ ಹಾಡುಗಳು, ಗೊಲ್ಲತಿ ಹಾಡು, ರಾಮದೇವರ ಕಥೆ, ವರಮಹಾಲಕ್ಷ್ಮಿ ಹಾಡು, ಶನಿಮಹಾತ್ಮೆ, ಜಲಕ್ರೀಡೆ ಹಾಡು, ಸಕ್ಕೂಬಾಯಿ ಚರಿತ್ರೆ, ವಾಮನನ ಹುಟ್ಟು, ತಿರುಪತಿಯಲ್ಲಿ ಶ್ರೀನಿವಾಸ ಕಲ್ಯಾಣ, ಭದ್ರಾಚಲದಲ್ಲಿ ರಾಮದಾಸರ ಕಥೆ, ಉಡುಪಿಯಲ್ಲಿ ಸುಧಾಮಚರಿತ್ರೆ, ಗೋಪೀಗೀತ, ರಾಸಕ್ರೀಡೆ, ಗೋಕರ್ಣದಲ್ಲಿ ಮಹಾಬಲೇಶ್ವರ ಸ್ತೋತ್ರ, ಸೋದೆಯಲ್ಲಿ ಶ್ರೀ ವಾದಿರಾಜರು ಮತ್ತು ತ್ರಿವಿಕ್ರಮದೇವರ ಸ್ತೋತ್ರಗಳನ್ನು ರಚಿಸಿದ್ದಾರೆ. ಇವರ ಅನೇಕ ಕೃತಿಗಳು ಉಪಲಬ್ಧವಾಗಿಲ್ಲ.

ಇವರ ಒಂದೊಂದು ಪದರಚನೆಯ ಹಿಂದೆ ಒಂದೊಂದು ವಿಶಿಷ್ಟ ಘಟನೆಯಿದೆ, ಆಗಾಗ ಆಕೆಗೆ ಪೂರ್ವಭಾವಿಯಾಗಿ ದೃಶ್ಯಗಳು ಕಂಡದ್ದುಂಟು. ದೈವೀಪ್ರೇರಣೆಯಾದದ್ದುಂಟು. ಹೀಗೆ ಸುಲಲಿತವಾಗಿ ಅವರ ಬಾಯಿಂದ ಕಾವ್ಯಧಾರೆ ಹೊರಹೊಮ್ಮಿದೆ. ಇವರ ಅಂಕಿತ ನರಸಿಂಹವಿಠಲ.

ಇಂಥ ಅನೇಕ ಕೃತಿಗಳನ್ನು ಆದವಾನಿಯ ರಾವಜೀ ಶ್ರೀನಿವಾಸರಾಯರು ಪ್ರಕಟಿಸಿದ್ದಾರೆ. ಈ ಪ್ರಕಟಣೆಗಳೆಲ್ಲಾ ಆದವಾನಿಯ ಪ್ರಾದೇಶಿಕ ಭಾಷೆಯಾದ ತೆಲುಗು ಲಿಪಿಯಲ್ಲಿವೆ, ಉಡುಪಿಯ ಪಾವಂಜೆ ಗುರುರಾಯರು ಕೂಡಾ ಕೆಲವು ಕೃತಿಗಳನ್ನು ಪ್ರಕಟಿಸಿದ್ದಾರೆ.

ಸುಮಾರು ಐವತ್ತು ವರ್ಷಗಳ ಹಿಂದೆ ನಾಡಹಬ್ಬದ ಉಪನ್ಯಾಸಕ್ಕಾಗಿ ನಾಡಿನ ಸುಪ್ರಸಿದ್ಧ ಸಾಹಿತಿಗಳಾಗಿದ್ದ ಅ.ನ. ಕೃಷ್ಣರಾಯರು ಬಳ್ಳಾರಿಗೆ ಹೋಗಿದ್ದಾಗ ಗಂಗಾವತಿ ನರಸಿಂಹರಾಯರ ಅತಿಥಿಗಳಾಗಿದ್ದರಂತೆ. ನರಸಿಂಗರಾಯರು ಅಪ್ಪನ ಅತಿ ಸಮೀಪದ ಬಳಗದವರು. ಆಗ ಅಪ್ಪನವರೂ ಅವರ ಮನೆಯಲ್ಲಿದ್ದರಂತೆ ನರಸಿಂಹರಾಯರು ಕೃಷ್ಣರಾಯರಿಗೆ ಅಪ್ಪನವರ ಪರಿಚಯವನ್ನು ಮಾಡಿಕೊಟ್ಟರು, ಕೃಷ್ಣರಾಯರು ಊಟವಾದ ಮೇಲೆ ಅಪ್ಪನವರ ಕೆಲವು ಹಾಡುಗಳನ್ನು ಕೇಳಿ ಸಂತೋಷಭರಿತರಾಗಿ ಇಂತಹ ಅಮೂಲ್ಯವಾದ ಕೃತಿಗಳನ್ನು ಸಂಗ್ರಹಿಸಿಡಬೇಕಾದ್ದು ನಿಮ್ಮ ಕರ್ತವ್ಯ ಎಂದು ಹೇಳಿದರಂತೆ ಅಮ್ಮನವರ ಪಾದಗಳನ್ನು ಮುಟ್ಟಿ ಸಂಜೆಯ

ಉಪನ್ಯಾಸಕ್ಕೆ ಬರಬೇಕೆಂದು ಆಹ್ವಾನಿಸಿದರಂತೆ. ಹಾಗೆಯೇ ಸಂಜೆಯು ಉಪನ್ಯಾಸದಲ್ಲಿ ಅವ್ವನವರ ಹೆಸರನ್ನೂ, ಕೃತಿಗಳನ್ನೂ ತಿಳಿಸಿಯೇ ಬಿಟ್ಟರಂತೆ.

ಈ ರೀತಿಯಾಗಿ ಬಹುಮುಖ ಸೇವೆಯನ್ನು ಸಲ್ಲಿಸುತ್ತಿದ್ದ ಗುತ್ತೆವ್ವ ಎಲೆಮರೆಯ ಕಾಯಂತೆ ತಮ್ಮ ಜೀವನವನ್ನು ನಡೆಸುತ್ತಾ ಎಂಭತ್ತೈದು ಸಂವತ್ಸರಗಳನ್ನು ಕಳೆದರು. ಆಯುಸ್ಸಿನ ಕೊನೆಯ ದಿನಗಳಲ್ಲಿ ಇವರಿಗೆ ದೃಷ್ಟಿಮಾಂದ್ಯ ದೋಷವುಂಟಾಗಿತ್ತಂತೆ. ಆದರೂ ತಮ್ಮ ಯಾವುದೇ ಕಾರ್ಯಗಳನ್ನು ಲೋಪಗೊಳಿಸಲಿಲ್ಲ. ಸನ್ ಸಾವಿರದ ಒಂಭೈನೂರ ಐವತ್ತನೇ ಇಸವಿ (೧೯೫೦) ಜನವರಿ ಮೊದಲ ವಾರದಲ್ಲಿ ಈಕೆಯು ತನ್ನ ಇಹಲೀಲೆಯನ್ನು ಸಮಾಪ್ತಿಗೊಳಿಸಿ ಹರಿಪದವನ್ನೈದಿದರು.

ಭಾರತದಲ್ಲಿ ಧರ್ಮಚ್ಯುತಿಗೊಳ್ಳುವ ಕಾಲ ಬಂದಾಗ ಮತ್ತೆ ನಾಡಿನ ಸಂಸ್ಕೃತಿಯ ಪುನರುಜ್ಜೀವನಕ್ಕಾಗಿ ಭಗವಂತನ ಸೇವಕರಾದ ಆದರ್ಶ ಜೀವಿಗಳು ಜನಿಸಿ ಮುಂದಿನ ಪೀಳಿಗೆಗೆ ಮಾರ್ಗದರ್ಶಕರಾಗಿ ಭಾರತದ ಉಜ್ವಲ ರತ್ನಗಳನ್ನು ಬೆಳಗಿಸುತ್ತಾರಂತೆ. ಗುತ್ತೆವ್ವನವರೂ ಅಂತಹ ಒಂದು ರತ್ನವಾಗಿದ್ದರು.

ಶ್ರೀಮತಿ ಲಕ್ಷ್ಮೀದೇವಮ್ಮನವರು ಹುಟ್ಟಿದುದು ಅಚ್ಚ ಕನ್ನಡ ಪ್ರದೇಶವಾದ ಸೊಂಡೂರಿನಲ್ಲಾದರೂ, ಬಾಲ್ಯದ ನಂತರದ ಅವರ ಜೀವನವೆಲ್ಲಾ ಕಳೆದದ್ದು, ಗುತ್ತಿ, ಆದವಾನಿ, ಬಳ್ಳಾರಿಗಳಲ್ಲಿ. ಬಳ್ಳಾರಿ ಕನ್ನಡ ಮಾತನಾಡುವ ನೆಲ. ಆದರೆ ಸೇರಿದ್ದುದು ಆಂಧ್ರ ಪ್ರದೇಶಕ್ಕೆ. ಹೀಗಾಗಿ ಆಡುಭಾಷೆ ಕನ್ನಡವಾದರೂ ಅಲ್ಲಿನ ಜನರು ಬರೆಯಲಿಕ್ಕೆ ಬಳಸುವ ಲಿಪಿ ತೆಲುಗು. ಹೀಗಾಗಿ ನಾವು ಅವ್ವನವರ ಕೃತಿಗಳಲ್ಲಿ ಬಳ್ಳಾರಿಯಲ್ಲಿ ದೇಶೀಯ ಕನ್ನಡವನ್ನೂ, ಪ್ರಾಂತದ ತೆಲುಗನ್ನೂ ಕಾಣುತ್ತೇವೆ ಹೊರತೂ ಬೇರೆಯೆನಿಸುವುದಿಲ್ಲ. ಅದರಿಂದ ಭಾಷೆಗೂ ತೊಡಕಾಗಿಲ್ಲ.

ಅವರು ಅನೇಕ ಸಂಸ್ಕೃತ ಹಾಗೂ ಕನ್ನಡ ಗ್ರಂಥಗಳನ್ನು ಅಭ್ಯಸಿಸಿದ್ದುದಲ್ಲದೆ ಅವರ ಮನೆಗೆ ಬರುತ್ತಿದ್ದ ಅನೇಕ ಘನ ವಿದ್ವಾಂಸರ ಪುರಾಣ – ಉಪನ್ಯಾಸ, ಕಾವ್ಯವಾಚನ ಇತ್ಯಾದಿಗಳಿಂದ ಅವ್ವನವರಿಗೆ ಭಾರತ–ಭಾಗವತ–ರಾಮಾಯಣ ಹಾಗೂ ಶಾಸ್ತ್ರ ಗ್ರಂಥಗಳ ಪರಿಚಯ ಚೆನ್ನಾಗಿ ಆಗಿದೆ. ಸ್ವತಃ ಕವಿ ಹೃದಯದವರೂ, ಧರ್ಮಾನುಷ್ಠಾನ ಶೀಲರೂ ಆಗಿದ್ದ ಈ ಸಾಧ್ವೀಮಣಿಯ ಅಂತರಾಳದಿಂದ ಸಾಹಿತ್ಯ

ಗಂಗೆ ತಾನಾಗೇ ಚಿಮ್ಮಿ ಹರಿದಿದ್ದಾಳೆ. ಒಬ್ಬ ಅನುಭಾವಿಗೆ ಬೇಕಾದ ಯೋಗ್ಯ ಪರಿಸರ, ಮಾರ್ಗದರ್ಶನ ಉತ್ತೇಜನಗಳು ದೊರಕಿ ಆಕೆಯ ಭಾವನೆಗಳು ಕಾವ್ಯವಾಗಿ, ಕಥನಕಾವ್ಯವಾಗಿ ಬಿಡಿ ನುಡಿಯಾಗಿ ಅಪ್ಪಟ ಆಡುಮಾತಿನಲ್ಲಿ ತುಂಬಿ ಬಂದಿವೆ.

ಅವರ ಒಂದೊಂದು ಕೃತಿಯೂ ಆದಿಪ್ರಾಸ, ಅಂತ್ಯಪ್ರಾಸ, ಯತಿ, ಗಣ. ಮಾತ್ರೆ, ಸಾಂಗತ್ಯ, ರಗಳೆ ಇವುಗಳಿಂದ ಕೂಡಿದೆ. ಅವುಗಳಲ್ಲಿಯ ಪ್ರಕೃತಿ ವರ್ಣನೆ ಶೃಂಗಾರ, ವಿಪ್ರಲಂಬ ಶೃಂಗಾರ, ವೀರ, ಶೋಕ, ಕರುಣ ಇತ್ಯಾದಿ ರಸಗಳು ಚೇತೋಹಾರಿಯಾಗಿವೆ. ಉಪಮ, ಶ್ಲೇಷಾಲಂಕಾರಗಳು ಅವ್ವನವರಲ್ಲಿ ಹೇರಳವಾಗಿ ಕಂಡು ಬರುತ್ತವೆ. ಅವ್ವನವರಂತೂ ಒಂದೆಡೆ ಕುಳಿತು ಬರೆದವರಲ್ಲ. ಅವರು ಹೇಳಿದ್ದನ್ನು ಕೇಳಿ ಕಲಿತವರೆ ಹೆಚ್ಚು. ಕೃತಿಗಳು ಬಾಯಿಂದ ಬಾಯಿಗೆ ಹರಿದಾಡಿವೆ. ತಮ್ಮ ಕೃತಿಗಳನ್ನು ಲಿಪಿಬದ್ಧಗೊಳಿಸಬೇಕೆಂಬುದನ್ನು ಅವ್ವನವರು ಅರಿತಿರಲಿಲ್ಲ. ನುಡಿಮಾತೆ ನುಡಿಸಿದ್ದನ್ನು ನುಡಿದಿದ್ದಾರೆ. ಇದರಿಂದಲೇ ತಿಳಿಯುತ್ತದೆ ಅನುಭಾವಿಗಳ ಕೃತಿಗಳು ಕಾವ್ಯ ಮೀಮಾಂಸೆಯ ಯಾವುದೇ ನಿಕಷದ ಮೇಲಾದರೂ ಹೊಳೆಯುತ್ತವೆ ಎಂದು. ಅವರಿವರು ಬರೆದಿಟ್ಟುಕೊಂಡಿದ್ದ ಹಲವಾರು ರಚನೆಗಳನ್ನು ಪಾವಂಜೆ ಗುರುರಾಯರೂ, ರಾವ್‌ಜೀ ಶ್ರೀನಿವಾಸರಾಯರೂ ಪ್ರಕಟಿಸಿದ್ದಾರೆ. ಹೆಚ್ಚಿನವು ಮೌಖಿಕವಾಗೇ ಉಳಿದಿವೆ.

**ಒಂದೆರಡು ಉದಾಹರಣೆಗಳನ್ನು ನೋಡೋಣ :**

ಉಪ್ಪರಿಗ್ಹೋಯಿತು ತಿಪ್ಪಿ ಕುಣಿಯಾಯಿತು,
ಕಪ್ಪ ಕಾಸುಗಳೆಲ್ಲ ಕಳೆದ್ಹೋಯಿತು
ಕಪ್ಪಾಯಿತು ದೇಹ ಕಂದಿ ಕುಂದ್ಹೋಯಿತು
ಒಪ್ಪಿತು ಗಾಜಿನ ಬಳೆಯು ಕೈಯ

ರಾಮನ ಕಾಣದೆ ಪ್ರಾಣ ಆಹುತಿಗಳು
ನೇಮದಿ ತಕ್ಕೊಳ ಬ್ಯಾಡವೆಂದ,
ಸೀಮಿಯ ಬಿಟ್ಟು ಹೊರಗೆ ಹೊರಡು ಎಂದು
ಭೀಮ ಘರ್ಜನೆಯಿಂದ ನುಡಿದನಾಗ

ಶ್ರೀ ರಾಮದೇವರ ಕಥೆಯಿಂದ ತೆಗೆದುಕೊಂಡ ಈ ಸಾಲುಗಳಲ್ಲಿ ಕಾಣುವ ಆದಿಪ್ರಾಸ ಕೃತಿಯ ಎಂಭತ್ತೆರಡು ನುಡಿಗಳಲ್ಲೂ ಕಂಡು ಬರುತ್ತದೆ.

ಅಂತ್ಯಪ್ರಾಸ, ಶಬ್ದಾಲಂಕಾರಗಳಲ್ಲಿ ಮೆರೆಯುವ ರಗಳೆಯನ್ನೂ ಅದರಲ್ಲಿ ಅಡಕವಾಗಿರುವ ಶೃಂಗಾರವನ್ನೂ 'ಗೊಲ್ಲತಿ ಹಾಡಿ'ನಲ್ಲಿ ನೋಡಬಹುದು.

ಗೋಕುಲದಲ್ಲಿದ್ದ ಗೊಲ್ಲತಿ ಹುಡುಗಿಯೊಬ್ಬಳು ಶ್ರೀಕೃಷ್ಣನ್ನು ನೋಡಿರುವುದೇ ಇಲ್ಲ. ಕಾರಣ, ಅವಳ ಅತ್ತೆ ಅವಳನ್ನು ಮೊಸರು ಮಾರಲು ಹೊರಗೆ ಕಳಿಸಿರುವುದಿಲ್ಲ. ಶ್ರೀಕೃಷ್ಣನ ಭಯ ಅವಳಿಗೆ, ಶ್ರೀಕೃಷ್ಣ ತನ್ನ ಸೊಸೆಯನ್ನು ಬುಟ್ಟಿಯಲ್ಲಿ ಹಾಕಿಕೊಳ್ಳುತ್ತಾನೆಂದು. ಸೊಸೆಯಾದರೋ ತನ್ನ ಓರಗೆಯವರಿಂದ ಶ್ರೀಕೃಷ್ಣನ ರೂಪ–ಸೌಂದರ್ಯಗಳನ್ನೂ, ಲೀಲೆಗಳನ್ನೂ ಕೇಳಿರುತ್ತಾಳೆ. ತಾನೇನೂ ಅವನಿಗೆ ಮರುಳಾಗುವಷ್ಟು ಹೇಡಿಯಲ್ಲ. ಇದೊಂದು ದಿನ ಹೋಗಿ ನೋಡೇ ಬಿಡುತ್ತೇನೆ ಎಂದು ಅತ್ತೆಯನ್ನು ರಮಿಸಿ ಹೊರಡುತ್ತಾಳೆ.

ಶೃಂಗಾರವಾದಳು ನಾರಿ, ಗೊಲ್ಲತಿ ಸುಂದಾರಿ
ಶೃಂಗಾರವಾದಳು ಮಂಗಳ ಮುಖಿಯೆ ಅಂಗನೆ ತಾನೆ ಜಡೆಗಳ ಬಿಗಿಯೆ,
ಛಂದದಿ ಜಡೆ ಭಂಗಾರಗಳ್ಹೆಣೆಯೆ, ಮುಂಗುರುಗಳಲಿ
ಚಂದ್ರ ಸೂರ್ಯರು ಹೊಳಿಯೆ
ಅಂಗನೆ ರಂಗನ ಮುಂಗೈ ಗಿಣಿಯೆ ೧

ವಾಲಿಬುಗುಡಿ ವಾರಿಜಾಕ್ಷೆಯು ಇಟ್ಟು, ತೋರ
ಮುತ್ತಿನ ಮೂಗುತಿಯಿಟ್ಟು
ಚಾರುಕಂಚುಕ ಬಿಗಿಬಿಗಿ ತೊಟ್ಟು ಹಾರ
ಪದಕವು ಕೊರಳೊಳಗಿಟ್ಟು
ಬಾರಿಬಾರಿಗೆ ಪೊಗಳುವುದೆಷ್ಟು ೨

ವಜ್ರದ ಹಸ್ತ ಕಡಗವನಿಟ್ಟು ಭರ್ಜರಿ ಪೀತಾಂಬರವುಟ್ಟು,
ಗೆಜ್ಜೆ ಅಂದಿಗೆ ಪಾದದೊಳಿಟ್ಟು ಹೆಜ್ಜೆ ಹೆಜ್ಜೆಗೆ ಆ ಶಬ್ದಗಳೆಷ್ಟು

ಸಜ್ಜನ ಪ್ರಿಯ ನಮ್ಮ ನರಸಿಂಹ ವಿಠಲನ
ಕೂಡುವೆ ತ್ವರಿತದಿ ಎಂಬುವ ಗುಟ್ಟು

*ಜಲಕ್ರೀಡೆಗೆ ಬಂದ ಗೋಪಕನ್ನಿಕೆಯರು ಸುತ್ತಲಿನ ವನಗಳಲ್ಲಿ ಆಟವಾಡುತ್ತಾರೆ. ಆ ವನದ ವರ್ಣನೆ :*

"ನೋಡಿದ್ಯಾ ಸಖೀ, ಕೂಡಿ ಆಡುವಾ ವನಗಳಾ"
ಭೃಂಗ ಗಿಳಿ ಸಾರಂಗ, ಮಾತಂಗ, ನೋಡಿದೇ ವಿಹಂಗ
ಕೂರಂಗ ಶಿಂಗಗಳ ನೋಡಿದ್ಯಾ
ಶಿಸ್ತಿಲಿ ಆಡುವಾ ಕಸ್ತೂರಿ ಮೃಗಗಳು
ಜತ್ತಿಲಿ ಸ್ವರವೆತ್ತಿ ಕೂಗುವೋ ಗಿಳಿಗಳು
ಥಳಥಳಿಸುವಾ ಮಯೂರಿ ಪಿಕಗಳು
ಜಳಪಿಸಿ ಹಾಡುವಾ ಕೋಕಿಲ ಸ್ವರಗಳು
ಕೇತಕೀ ಕ್ಯಾದಿಗೀ ಕಮಲ ಕುಸುಮ ನೋಡಿದ್ಯಾ
ನೂತನವಾಗಿದ್ದ ಪಾರಿಜಾತವ ನೋಡಿದ್ಯಾ
ಮರುಗ ಜಾಜೀ ಮಲ್ಲಿಗಿ ಇರುವಂತಿಗಿ ದವನಾ
ಸುರಗಿ ಸಂಪಗಿಯಿಂದ ತೋರ್ವದೀವನಾ
ಭ್ರಮರಗೀತಗಳಿಂದ ಮನವು ಭ್ರಾಂತಿಗೊಳ್ವುದು
ಅಮರ ವಂದಿತನಿಂದ ಕೂಡಿ ಆಡ್ವ ಸ್ಥಳವಿದು
ಪರಮ ಪುರುಷ ನರಸಿಂಹ ವಿಠಲರಾಯನ
ಪಾದ ಧೂಳಿಗಳಿಂದ ಶೋಭಿತವಾಗಿದೀವನ

**ಯುಮುನಾ ನದಿಯ ವರ್ಣನೆ ಈ ರೀತಿ ಬರುತ್ತದೆ**

"ಹರಿವೋ ಜಲಗಳ ನೋಡೇ ವರಮೋಹನಾಂಗಿನಿ
ನವರತ್ನ ಖಚಿತ ಸೋಪಾನಗಳಿಂದ ಮುಚ್ಚಿ ಮೊಸಳೆ
ಕೂರ್ಮಗಳು ಸ್ವಚ್ಛಜಲ ಕುಕ್ಕುಟವು ಸ್ವೇಚ್ಛ ಆಡುವುದು

ಪಚ್ಚ ನೀಲಗಳ ಅಚ್ಚ ಯಮುನಿಯ ನೀರಾ
ಅಚ್ಯುತಾನಂದ ಹರಿ ಮೆಚ್ಚುವಾ ಸ್ಥಳವೂ
ಜಲಜಂತುಗಳಿಂದ ಜಳಜಳಿಸುವ ಜಲವೂ
ನಳಿನಾಕ್ಷಿ ನೋಡೆ ಈ ಮಳಲ ಶೃಂಗಾರವೂ
ತೆತ್ತಿಸ ಕೋಟಿ ದೇವತ್ಯಾರೆಲ್ಲ ಅತ್ಯಂತ ಹರುಷದಿ ಆಡುವ ಸ್ಥಳವೂ ॥

## ದ್ರೌಪದಿ ವಸ್ತ್ರಾಪಹರಣದಲ್ಲಿ ಭೀಮನ ಕೋಪ

"ಯಾಕೆ ಸಂತಾಪ ಪಡುವೆ ಸಖೀ, ನೀನ್ಯಾಕೆ ಸಂತಾಪ ಪಡುವೆ
ಯಾಕೆ ಸಂತಾಪ ಬಿಡು । ಕಾಕು ಮನುಜನ
ನೂಕಿ ಯಮನ ಪುರಕ್ಹಾಕುವೆ ಈ ಖಳನ
ಒಡಲ ಬಗೆದು ಇವನ ಕುಡಿವೆ ರಕ್ತವನ್ನ
ಮಡದಿ ಮಣಿಯೆ ನಿನ್ನ ಮುಡಿಯ ತೋಯಿಸುವೆ ನಾ॥
ಮುಟ್ಟಿಗಿ ಮಾಡಿ ಇವನ ಕುಟ್ಟಿ ಯಮನಪುರ
ಕಟ್ಟುವೆ ಅಣ್ಣನ ಕಟ್ಟಿಗೆ ಇರುವೆನಾ
ಶೀಘ್ರದಿ ಧರ್ಮಜ ನಾಗ್ನೆ ಬಂದಾದರೀಗ
ಅಗ್ನಿ ಯೊಳಗೆ ಇವನ ಭಗ್ನಾ ಮಾಡುವೆ
ನರಸಿಂಹ ವಿಠಲನ್ನಾ ಸ್ಮರಿಸುತಲೀ ಖಳನ
ಒರಸಿ ಬಿಡುವೆ ಯನ್ನರಸಿ ಕೇಳೆಲೆ ನೀ "

## ರುಕ್ಮಿಣಿಯ ವಿರಹ (ಚೇಳಿನ ಹಾಡು)

"ಪ್ರಾಣ ಸಖೀ ವೇಣುನಾಥನಾ । ಕಾಣಿಸೆ ಈಗ ।
ಕಾಣದೆ ಪ್ರಾಣವು ನಿಲ್ಲದು । ಜಾಣೆ ಹೋಗೆನೀ ॥
ಕೃಷ್ಣ ನಿಮ್ಮ ಪಟ್ಟದರಿಸಿ । ಕಷ್ಟವ ಕರೆತಾರ ನೀ ॥
ಯಾಕೆ ಮುನಿದೆ ಶ್ರೀಪತಿಯೋಳು । ಕಾಳು ಅದೆನೆ
ಲೋಕನಾಥ ಬಾರದೆ ದೇವಾ । ಸಾಕು ಮಾಡುವೆ ನೇನೇ ॥
ಯೆಂತು ಆದರೂ ಮಾಡಿ ಲಕ್ಷ್ಮೀಕಾಂತನಿಗೆ ಸಂತೋಷವಾದಂತೆ
ಪೇಳಿ ಕರೆತಾರೆ ನೀ ॥"

## ಸಖೂಬಾಯಿಯ ಧನ್ಯತೆ

"ಕಂಡೆ ಕಂಡೆ ಪಂಡರೀಶನಾ । ಶ್ರೀ ಪಾಂಡುರಂಗನಾ ।
ಪುಂಡರೀಕ ವರದ ಶ್ರೀ ಪಾಂಡುರಂಗನಾ ॥
ಭೀಮ ತೀರದ ಸ್ವಾಮಿ ನಿಂತಿಹ ನೇಮದಿಂದ
ಪ್ರೇಮ ತೋರು ಕಾಮಿತವರದ ನಿಸ್ಸೀಮ
ಇಟ್ಟಿಕಲ್ಲನು ಕೊಟ್ಟ ಭಕುತರ ಶ್ರೇಷ್ಠ ಪದವಿಯೊಳ
ಗಿಟ್ಟ ಆ ಮಹಿಮನ ದಿಟ್ಟ ಶ್ರೀ ನರಸಿಂಹ ವಿಠಲನ್ನಾ ॥"

## ಗೊಲ್ಲತಿ ಹಾಡಿನಲ್ಲಿರುವ ಪ್ರಾಸದ ವೈಭವ

"ಪಾಲಿಸಿಅಪ್ಪಣಿ । ಶೀಲದಿ ಮನ್ನಣೆ । ಬ್ಯಾಗಾದಿ ನಿಮ್ಮಾಣಿ ।
ಬರುವೆ ನಾ ಜಾಣೆ ॥
ಪೋಗಾದೆಯಿರೆ । ಬ್ಯಾಗಾದಿ ನೀರೆ ।
ಬಾಗಿ ಮನೆಯೊಳಿರೆ । ಸಾಗಿ ಪೋಗಾದಿರೆ ।
ಸುಂದರಿ ನೀ ತಿಳಿ । ಹಿಂದೆ ಚಂದ್ರಾವಳೀ ।
ಬಂದದ್ದು ನೀ ಕೇಳಿ । ಮುಂದ್ಹೋಗದಿರೆ ನೀ ತಿಳಿ ॥

## ಉಪಮಾಲಂಕಾರ

"ಚಂಚಲಾಕ್ಷಿಯ ಮುಖವು ಮಿಂಚಿನಂತ್ಹೊಳೆಯುತಲಿ ।
ಪಂಚ ಬಾಣನ ಸರಳ್ಗೆ ಮಿಂಚ್ಹಾರಿ ತೋರುತಲಿ
ಮ್ಯಾಲೆ ತಾರಕಿಗಳೊಳು ಬಾಲಚಂದ್ರಮನಂತೆ ।
ಬಾಲೇರ ಒಳಗೆಲ್ಲ ಮೇಲಾದ ಸಖಿ ತಾನು ॥

## ತರಕಾರಿ ಹಾಡಿನಲ್ಲಿ ಶ್ಲೇಷಾಲಂಕಾರ

ನಿನ್ನ ದಾಸರ ಬಿಟ್ಟು ನಾ ಬಾಳೆ ಕಾಯೋ ಪ್ರ
ಸನ್ನ ಮೂರುತಿ ಹರಿ ನೀ ನೆಂಬೆ ಕಾಯೋ ।

ಮಾರ ಜನಕನೆ ಅಳಿದ ಮಾವನ ಕಾಯೋ
ಸಾರೆ ಕರೆದರೆ ನೀ ಯಾಕೆ ಬಾರೆ ಕಾಯೋ ।
ಮಾರ ಜನಕ ನರಸಿಂಹ ವಿಠಲ ನೀ ।
ಮಾಡಿದೆಲ್ಲವು ಎನಗೆ ಸಮತೆ ಕಾಯೋ ॥

**ಸಾಂಗತ್ಯ (ಶ್ರೀಕೃಷ್ಣ ಬಾಲಲೀಲೆ)**

"ಅಂಬೆಗಾಲಿಕ್ಕುತ । ಅಂಗಳದೊಳಾಡುತ
ಚಂದ್ರನ್ನ ನೋಡಿ ನಲಿಯುತ
ನಲಿಯುತ್ತಲಾ ಗೋಪ ಮಂಗಳ ಮುಖವು ತೋರುತ್ತ ॥
ಮಣ್ಣು ಮೆಲ್ಲುವರೇನೋ।ಸಣ್ಣ ಕೃಷ್ಣನಾದೆ ನೀನು।
ಚಿನ್ನನೆ ಬಾಯಿ ತೆಗೆಯೆಂದ್ಲು ।

ತೆಗೆದು ನೋಡಿದಳು ಬಾಲನ ಬಾಯಿ ಮಹಿಮೆಗಳು ॥
ಹಿರಿಯ ವದನದೊಳು । ಹದಿನಾಲ್ಕು ಲೋಕವ ನೋಡಿ
ಭಯದಿಂದ ಗೋಪಿ ನುಡಿದಾಳು ॥
ನುಡಿದು ತಾ ನೋಡಿದಳು ಬಾಲನ ಬಾಯಿ ಮಹಿಮೆಗಳು ॥

ಅವ್ವನವರ ಎಲ್ಲ ಕೃತಿಗಳು ನಮಗೆ ಉಪಲಬ್ಧವಾಗಿಲ್ಲ. ಉಪಲಬ್ಧವಾಗಿರುವಷ್ಟರಲ್ಲಿ ಕಂಡುಬರುವ ಸಾಹಿತ್ಯಸೊಗಸು ಸುಂದರ. ಎಂದ ಮಾತ್ರಕ್ಕೆ ಲಕ್ಷ್ಮೀದೇವಮ್ಮನವರ ರಚನೆಗಳೆಲ್ಲಾ ಸಾಹಿತ್ಯಿಕ ದೃಷ್ಟಿಯಿಂದ ದೋಷ ಮುಕ್ತವಾಗಿವೆ ಎಂದಲ್ಲ. ಒಟ್ಟಂದದಲ್ಲಿ ನೋಡಿದಾಗ ಸರಳವಾದ ಆಡುಭಾಷೆಯಲ್ಲಿರುವ ಈಕೆಯ ಕೃತಿಗಳು ನೇರವಾಗಿ ಹೃದಯವನ್ನು ತಟ್ಟುತ್ತವೆ. ಭಾಷೆಯಲ್ಲಿ ಸರಳತೆಯಿದೆ, ಬೆಡಗಿದೆ, ಸರಾಗವಾಗಿ ಓದಿಸಿಕೊಳ್ಳುತ್ತದೆ. ನೇರ ನಿರೂಪಣೆಯಿಂದ ಸುಲಭ ಗ್ರಾಹ್ಯವಾಗಿದೆ. ಭಾವುಕತೆಯಿಂದ ಕೂಡಿರುವ ಶೈಲಿಯಲ್ಲಿ ಭಕ್ತಿಯ ಉದ್ದೀಪನವಿದೆ, ಅರ್ಹತೆಯಿದೆ, ಸಮರ್ಪಣ ಭಾವವಿದೆ. ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮನವ್ವನವರ ಸಾಲಿನಲ್ಲಿ ನಿಲ್ಲುತ್ತಾಳೆ ಈಕೆ. ಪಂಡಿತ ಪಂಢರಿನಾಥಾಚಾರ್ಯ ಗಲಗಲಿಯವರು ಹೇಳಿದಂತೆ–"ಲಕ್ಷ್ಮೀಬಾಯಿಯ ಪದ್ಯಗಳಲ್ಲಿ ಪ್ರಾಸದ ಚೌಕಟ್ಟಿನಲ್ಲಿ ಉಂಗುರದಲ್ಲಿ

ಹರಳನಿಟ್ಟಂತೆ ಅಚ್ಚುಕಟ್ಟಾಗಿ ಜೋಡಿಸಿ ಕೂಡಿಸಿದ ಮಾರ್ಮಿಕವಾದ ಮಾತು ತನ್ನ ಅಚ್ಚುಕಟ್ಟುತನದಿಂದ, ಮುಕ್ತಕದ ಮಾತಿನಂತೆ, ಸುಂದರವಾದ ನಾಣ್ನುಡಿಯಂತೆ ಹೃದಯ ಸ್ಪರ್ಶಿಯಾಗಿ ಭಾವ ತೀವ್ರತೆಯನ್ನು ವ್ಯಕ್ತಗೊಳಿಸುತ್ತದೆ. ಆಕೆಯ ಕೃತಿಗಳಲ್ಲಿ ಅವಳ ಕನ್ನಡ ಸಾಹಿತ್ಯದ ಆಳವಾದ ಅಭ್ಯಾಸ, ಪ್ರಮೇಯ ಪರಿಜ್ಞಾನ, ಕಲ್ಪನಾ ಕೌಶಲ ಮೂರೂ ಮುಪ್ಪುರಿಗೊಂಡು ರಸಾಲತೆಯನ್ನು ಒದಗಿಸುತ್ತವೆ. ಸಂಸ್ಕೃತದ ಶ್ಲೇಷಾಲಂಕಾರಕ್ಕೆ ಕನ್ನಡ ಕವಚ ತೊಡಿಸಿ ಅದ ಕನ್ನಡ ಸಾಹಿತ್ಯದ ಎರೆ ನೆಲದಲ್ಲಿಯೇ ಹುಟ್ಟಿದ ಅಲಂಕಾರವೋ ಏನೋ ಎನ್ನುವಂತೆ ಮಾಡಿದ್ದಾಳೆ. ಅಚ್ಚ ಕನ್ನಡದ ಅಲಂಕಾರದ ಪಡಿಯಚ್ಚಿನಲ್ಲಿಯೆ ಶ್ಲೇಷೆ, ಉತ್ಪ್ರೇಕ್ಷೆ, ಉಪಮೆ ಮುಂತಾದ ರಸಾಲಂಕಾರಗಳನ್ನು ವಿನೂತನವಾಗಿ ವಿರಚಿಸಿ ಬರೆದಿದ್ದಾಳೆ. ಲಕ್ಷ್ಮೀದೇವಿಯ ಕಾವ್ಯದಲ್ಲಿ ಸಾಹಿತ್ಯಶ್ರೀ ಭಕ್ತಿದೇವಿಯ ಕಿಂಕರಿಯಾಗಿ ಭಾವಬನಶಂಕರಿಯಾಗಿ ಮೈದೋರಿದಾಳೆ".

### ಕಥನ ಕವನಗಳ ಸಾರಾಂಶ

**೧. ದ್ರೌಪದಿ ವಸ್ತ್ರಾಪಹರಣ:** ಧರ್ಮರಾಯನು ರಾಜಸೂಯ ಯಾಗವನ್ನು ಮಾಡಿದಾಗ ಕೌರವರು ಬಂದಿರುತ್ತಾರೆ. ಆಗ ಮಯನಿಂದ ನಿರ್ಮಿತವಾದ ಸಭಾಭವನದಲ್ಲಿ ಅನೇಕ ವಿಧವಾದ ಕೌತುಕಗಳಿರುವುದನ್ನು ಕಾಣದೆ ಕೃತಕವಾಗಿ ನಿರ್ಮಾಣಗೊಂಡ ಸರೋವರದಲ್ಲಿ ನೀರು ತುಂಬಿ ತುಳುಕುತ್ತಿರುವುದೆಂಬ ಭ್ರಮೆಯಿಂದ ದುರ್ಯೋಧನನು ತನ್ನ ಪೀತಾಂಬರದ ನಿರಿಗೆಗಳನ್ನು ಮೇಲೆತ್ತಿ ಹಿಡಿದು ನಡೆಯುತ್ತಾನೆ. ಆಗ ದ್ರೌಪದಿಯು ತನ್ನ ಸಖಿಯರೊಡಗೂಡಿ ನಗುತ್ತಾಳೆ ದುರ್ಯೋಧನನು ಮತ್ತೆ ಮುಂದೆ ಹೋದಾಗ ಅಲ್ಲೊಂದು ಸ್ವಚ್ಛ ಜಲದಿಂದ ತುಂಬಿದ ಪುಷ್ಕರಿಣಿ ಕಂಡುಬರುತ್ತದೆ. ಆಗ ದುರ್ಯೋಧನನು ಇದು ಕೂಡಾ ಹಿಂದಿನ ಸರೋವರದಂತೆಯೇ ಭ್ರಮೆಗೊಳಿಸುವ ಸರೊವರವೆಂದು ತಳಿದು ಅದರಲ್ಲಿಳಿದು ಮುಂದೆ ಅಡಿಯಿಟ್ಟಾಗ ಅದರಲ್ಲಿ ನಿಜವಾಗಿಯೂ ನೀರಿದ್ದು ಅವನು ಜಾರಿ ಬಿದ್ದು ಹೋಗುತ್ತಾನೆ, ಈ ಬಾರಿ ದ್ರೌಪದಿಯು ಇನ್ನೂ ಜೋರಾಗಿ ನಕ್ಕು "ಭಾವನವರೇ ನೀವು ಕುರುಡರೇನು? ಅದು ನೀರೆಂದು ತಿಳಿಯಲಿಲ್ಲವೆ " ಎಂದು ಮೂದಲಿಸುತ್ತಾಳೆ ಎಲ್ಲರೂ ಘೊಳ್ಳನೆ ನಗುತ್ತಾರೆ. ದುರ್ಯೋಧನನಿಗೆ ಭಾರೀ ಅವಮಾನವಾಗುತ್ತದೆ.

ಅವನು ಈ ವಿಚಾರದಲ್ಲಿ ಬಹಳ ಖಿನ್ನನಾಗಿರುವುದನ್ನು ಕಂಡ ಕರ್ಣ-ಶಕುನಿಗಳು ಅವನನ್ನು ಹುರಿದುಂಬಿಸಿ ಧರ್ಮರಾಯನನ್ನು ಜೂಜಿಗೆ ಕರೆಯುವಂತೆ ಹೇಳುತ್ತಾರೆ. ಇದಕ್ಕೆ ಧೃತರಾಷ್ಟ್ರನು ಒಪ್ಪುವುದಿಲ್ಲ. ಆದರೆ ದುರ್ಯೋಧನನು, ತಂದೆಯ ಮಾತನ್ನು ಕೇಳದೆ ಧರ್ಮರಾಯನನ್ನು ದ್ಯೂತಕ್ಕೆ ಆಹ್ವಾನಿಸುತ್ತಾನೆ. ಧರ್ಮರಾಯನು ಒಪ್ಪಿಕೊಂಡು ಬರುತ್ತಾನೆ.

ಶಕುನಿಯ ಕುಟಿಲತೆಯಿಂದ ಧರ್ಮರಾಯನು ದ್ಯೂತದಲ್ಲಿ ಎಲ್ಲವನ್ನು ಸೋಲುತ್ತಾನೆ. ಕೊನೆಗೆ ತನ್ನ ತಮ್ಮಂದಿರನ್ನು ಪಣಕ್ಕೆ ಒಡ್ಡಿ ಅವರನ್ನೂ ಸೋತುಹೋಗಲು ದ್ರೌಪದಿಯನ್ನು ಪಣವಾಗಿಡುತ್ತಾನೆ. ಅವಳನ್ನೂ ಸೋಲುತ್ತಾನೆ. ಇದೇ ಸಮಯವನ್ನು ಕಾಯುತ್ತಿದ್ದ ದುರ್ಯೋಧನನು ತನ್ನ ತಮ್ಮನಾದ ದುಶ್ಯಾಸನನನ್ನು ಕರೆದು "ದ್ರೌಪದಿಯ ಮುಡಿಹಿಡಿದು ಅವಳನ್ನು ಎಳೆದುಕೊಂಡು ಬಾ" ಎನ್ನಲು ದುಶ್ಯಾಸನನು ತುಂಬಿದ ಸಭೆಗೆ ಅವಳನ್ನು ಎಳೆದು ಕೊಂಡು ಬರುತ್ತಾನೆ. ಅಣ್ಣನ ಅಪ್ಪಣೆಯಂತೆ ಅವಳ ವಸ್ತ್ರವನ್ನೆಳೆದ.

ದ್ರೌಪದಿಯ ರಕ್ಷಣೆಗೆ ಯಾರೂ ಬರುವುದಿಲ್ಲ. ಆಗ ಅವಳು ಭಗವಂತನನ್ನು ಪ್ರಾರ್ಥಿಸುತ್ತಾಳೆ. ಕರುಣಾನಿಧಿಯಾದ ಸ್ವಾಮಿಯು ಅವಳಿಗೆ ಅಕ್ಷಯಾಂಬರವನ್ನು ಪ್ರದಾನ ಮಾಡುತ್ತಾನೆ.

ಎಲ್ಲರೂ ಆಶ್ಚರ್ಯಚಕಿತರಾಗಿ ದ್ರೌಪದಿಯ ಮಹಿಮೆಯನ್ನು ಕೊಂಡಾಡು-ತ್ತಾರೆ. ದ್ರೌಪದಿಯು ಈ ಬಾರಿ ದುರ್ಯೋಧನನನ್ನೇ ದ್ಯೂತಕ್ಕೆ ಕರೆದು ಅವನನ್ನು ಎಲ್ಲ ವಿಧದಿಂದಲೂ ಸೋಲಿಸುತ್ತಾಳೆ. ಧೃತರಾಷ್ಟ್ರನು ಈಗ ನೀನು ಈ ರಾಜ್ಯದ ಒಡತಿ ಇದನ್ನು ನಿನ್ನ ವಶಕ್ಕೆ ಒಪ್ಪಿಸುತ್ತೇನೆ. ನೀನೇ ಇದನ್ನು ಆಳು ಎನ್ನುತ್ತಾನೆ. ಆದರೆ ಪಾಂಡವರು ದ್ರೌಪದಿಯೊಡಗೂಡಿ, ಹಸ್ತಿನಾವತಿಗೆ ಮರಳುತ್ತಾರೆ.

ಈ ಹಾಡಿನಲ್ಲಿ ಲಕ್ಷ್ಮೀದೇವಮ್ಮನವರು ಮಾಡಿಕೊಂಡಿರುವ ಒಂದು ಬದಲಾವಣೆಯನ್ನು ಕಾಣಬಹುದು. ಅದೇನೆಂದರೆ ಎರಡನೇ ಬಾರಿ ದ್ರೌಪದಿಯೇ ಜೂಜಿಗೆ ಕುಳಿತು ತನ್ನ ಸಕಲ ಸಂಪತ್ತನ್ನೂ ಜಯಿಸುವುದು, ಇದನ್ನು ಅವರ ಯಾವ ಆಕರದಿಂದ ತೆಗೆದುಕೊಂಡಿದ್ದಾರೋ ತಿಳಿಯದು.

ಇದರಲ್ಲಿ ಇವರು ಕರುಣ ಹಾಗೂ ವೀರರಸಗಳನ್ನು ತುಂಬಾ ಚೆನ್ನಾಗಿ ತಂದಿದ್ದಾರೆ.

**೨. ಸಕ್ಕೂಬಾಯಿ ಕಥೆ:** ಮಹಾರಾಷ್ಟ್ರದ ಸಂತಮಹಿಳೆಯರಲ್ಲಿ ಸಕ್ಕೂಬಾಯಿ ಕರ್ಮ, ಭಕ್ತಿ, ವೈರಾಗ್ಯಗಳಲ್ಲಿ ಎದ್ದು ಕಾಣುತ್ತಾಳೆ. ವಿವಾಹಿತಳಾಗಿ ಗಂಡನ ಮನೆಯಲ್ಲಿ ಬಹು ಭಕ್ತಿಯಿಂದ ಕರ್ತವ್ಯ ನಿರತಳಾಗಿರುತ್ತಾಳೆ, ಆದರೆ ಅವಳ ಮನಸ್ಸೆಲ್ಲಾ ಪಾಂಡುರಂಗನಲ್ಲೇ ಲೀನವಾಗಿರುತ್ತದೆ. ಪಂಢರಿಗೆ ಹೋಗಬೇಕು, ಪಾಂಡುರಂಗನನ್ನು ಕಾಣಬೇಕು ಎಂಬುದೇ ಆಕೆಯ ಹಂಬಲ. ಗಂಡ ಒಳ್ಳೆಯವನಾಗಿರುತ್ತಾನೆ. ಆದರೆ ದುರುಳಳಾದ ತಾಯಿಯ ಮುಂದೆ ಅವನ ಆಟವೇನೂ ಸಾಗುವುದಿಲ್ಲ. ಅತ್ತೆಯು ಸಕ್ಕೂಬಾಯಿಗೆ ಕೊಡಬಾರದ ಕಾಟವನ್ನೆಲ್ಲಾ ಕೊಟ್ಟು ಕೊನೆಗೆ ಅವಳನ್ನು ಒಂದು ಕಂಭಕ್ಕೆ ಬಿಗಿಯುತ್ತಾಳೆ. ಸಕ್ಕೂಬಾಯಿಯ ಆರ್ತತೆಗೆ ಮನಸೋತ ಪಾಂಡುರಂಗನು ತಾನೇ ಅವಳ ಪತಿವೇಷವನ್ನು ಧರಿಸಿ ಬಂದು ಆಕೆಯ ಬಂಧನವನ್ನು ಬಿಡಿಸಿ ಆಕೆಯನ್ನು ಪಂಢರಾಪುರಕ್ಕೆ ಕಳಿಸಿ ಮತ್ತೆ ತಾನು ಸಕ್ಕೂಬಾಯಿಯ ವೇಷದಿಂದ ಅತ್ತೆ ಮನೆಯಲ್ಲಿ ಸೇವೆ ಮಾಡಿಕೊಂಡು ಇರುತ್ತಾನೆ.

ಇತ್ತ ಸಕ್ಕೂಬಾಯಿ ಪಂಢರಾಪುರಕ್ಕೆ ಬಂದು ಚಂದ್ರ ಭಾಗಾನದಿಯಲ್ಲಿ ಮಿಂದು ಪಾಂಡುರಂಗ ದರ್ಶನ ಮಾಡಿ, ಸಂತೋಷಗೊಂಡು ಮೈಮರೆದು ಕಾಲವಾಗುತ್ತಾಳೆ. ಆಗ ಜೊತೆಯಲ್ಲಿದ್ದವರು ಆ ದೇಹವನ್ನು ತೆಗೆದು ಕೊಂಡು ಚಿತೆಯಲ್ಲಿಡುತ್ತಾರೆ.

ಇದನ್ನು ಕಂಡ ರುಕ್ಮಿಣಿಯು ಇನ್ನೂ ಸಕ್ಕೂಬಾಯಿ ಉರಿದುಹೋದರೆ ತನ್ನ ಗಂಡ ತನ್ನಲ್ಲಿಗೆ ಬರಲಾರನೆಂದು ತಾನು ಸ್ಮಶಾನಕ್ಕೆ ಬಂದು ಗಂಗೋದಕದಿಂದ ಚಿತೆಯನ್ನಾರಿಸಿದಾಗ ಸಕ್ಕೂಬಾಯಿ ನಿದ್ರೆಯಿಂದೆದ್ದವಳಂತೆ ಎದ್ದು ಕೂಡುತ್ತಾಳೆ. ನಂತರ ತನ್ನ ಚಿಕ್ಕಮ್ಮನ ಜೊತೆಯಲ್ಲಿ ಊರಿಗೆ ಬರುತ್ತಾಳೆ.

ಇಲ್ಲಿ ಮಾಯದ ಸಕ್ಕೂಬಾಯಿ ತನ್ನ ಗಂಡ ನೊಡನೆ ಮಂಚದಲ್ಲಿ ಕುಳಿತು ಕೊಂಡಿರುವುದನ್ನು ಕಂಡು ಅತ್ತೆಯು ಬಂದು ಬಯ್ಯುತ್ತಾಳೆ. ಆಗ ಮಾಯದ ಸಕ್ಕೂ ಹೆದರಿದವಳಂತೆ ನಟಿಸಿ ಅತ್ತಿತ್ತ ಓಡಾಡುತ್ತಾ ಥಟ್ಟನೇ ಮಾಯವಾಗುತ್ತಾಳೆ.

ಅಷ್ಟು ಹೊತ್ತಿಗೆ ನಿಜವಾದ ಸಕ್ಕೂಬಾಯಿ ಬರುತ್ತಾಳೆ. ಅತ್ತೆ ಅವಳು ಇಲ್ಲಿಯೇ ಇದ್ದಾಳೆಂದಾಗ ಜನರು ಇಲ್ಲ ನೋಡಿ ಈಗ ತಾನೇ ಪಂಢರಪುರದಿಂದ ಬಂದಿದ್ದಾಳೆ ಎನ್ನುತ್ತಾರೆ. ಏನೂ ತೋಚದೆ ಗಂಡ ತಾನು ಹಾಕಿದ್ದ ಒಡವೆಗಳು ಯಾವುವೂ ನಿನ್ನ ಬಳಿ ಕಾಣೆ. ಎಲ್ಲಿ ಹೋಯಿತು ಎಂದು ಬಡಿಯುತ್ತಾನೆ. ಅತ್ತೆಯೂ ಸಹಾ ಹೊಡೆಯಲಾರಂಭಿಸುತ್ತಾಳೆ. ಆಗ ಸಕ್ಕು ನಾನು ಯಾವ ದಾಗೀನಗಳನ್ನೂ ಕಾಣೆ ಎಂದು ಪಾಂಡುರಂಗನ ಮೊರೆ ಹೋಗುತ್ತಾಳೆ. ಪಾಂಡುರಂಗನು ಅವಳಿಗೆ ತನ್ನ ನಿಜರೂಪದ ದರ್ಶನ ಮಾಡಿಸುತ್ತಾನೆ. ಅತ್ತೆ, ಮಾವ, ಗಂಡನ ಸಹಿತ ನೆರೆದವರಿಗೆಲ್ಲಾ ಪಾಂಡುರಂಗನ ದರ್ಶನವಾಗಿ ಎಲ್ಲರೂ ಸಕ್ಕೂಬಾಯಿಯನ್ನು ಕೊಂಡಾಡುತ್ತಾರೆ.

ಸಕ್ಕೂಬಾಯಿಯ ನಿಷ್ಠೆ ಮತ್ತು ಪರಾಭಕ್ತಿ, ಅತ್ತೆ, ಗಂಡ, ನಾದಿನಿಯರ ಕಾಟ, ಪಂಢರಿಯ ಹಾಗೂ ಪಾಂಡುರಂಗನ ವರ್ಣನೆ ಭಕ್ತರಿಗಾಗಿ ತಾನು ಎಷ್ಟು ಕಷ್ಟವನ್ನಾದರೂ ಅನುಭವಿಸುವನಂತೆ ತೋರುವ ಪರಮಾತ್ಮನ ಕಾರುಣ್ಯ ಇವುಗಳನ್ನೂ ಲಕ್ಷ್ಮೀದೇವಮ್ಮನವರು ಈ ಕಥನ ಕವನದಲ್ಲಿ ಬಳ್ಳಾರಿಯ ಗಡಸುಭಾಷೆಯಲ್ಲಿ ತುಂಬಾ ಚಿತ್ರವತ್ತಾಗಿ ವರ್ಣಿಸಿದ್ದಾರೆ.

**೨. ರಾಮದೇವರ ಹಾಡು:** ಒಂದಾನೊಂದು ಪಟ್ಟಣದಲ್ಲಿ ಕೇಶವಭಟ್ಟನೆಂಬ ಬಹಳ ಬಡವನಾದ ಬ್ರಾಹ್ಮಣನಿದ್ದನು. ಅವನು ಬಹಳ ಸತ್ಯವಂತನಾಗಿದ್ದನು. ಅವನಿಗೆ ಭಗವಂತನಲ್ಲಿ ಬಹಳ ಭಕ್ತಿ. ಬಡತನವನ್ನು ಸಹಿಸಿ ಸಹಿಸಿ ಸಾಕಾಗಿ ಒಮ್ಮೆ ಒಂದು ಕಾಡಿಗೆ ಬಂದನು. ಅಲ್ಲಿದ್ದ ಋಷಿಗಳನ್ನು ಕಂಡು ತನ್ನ ಚಿಂತೆಯನ್ನು ಅವರಿಗೆ ಹೇಳುತ್ತಾನೆ. ಆಗ ಅವರು ಇದಕ್ಕೇಕೆ ಇಷ್ಟು ಚಿಂತೆಮಾಡುತ್ತಿ. ಶ್ರೀರಾಮನ ಕಥೆಯನ್ನು ಹೇಳುತ್ತೇವೆ ಕೇಳಿ ಅದರಂತೆ ಪೂಜೆಮಾಡಿದರೆ ನಿನಗೆ ಸಕಲ ಸೌಭಾಗ್ಯಗಳು ಪ್ರಾಪ್ತವಾಗುತ್ತವೆ ಎಂದು ಅವನಿಗೆ ಇಡೀ ರಾಮಾಯಣದ ಕಥೆಯನ್ನು ಹೇಳಿ ಅವನಿಗೆ ಪೂಜಾವಿಧಾನವನ್ನು ಹೇಳುತ್ತಾರೆ. ಸೇರುವರಿಹಿಟ್ಟು, ಸೇರುವರಿಬೆಲ್ಲ, ಸೇರುವರಿ ತುಪ್ಪ ಹಾಕಿ ಉಂಡೆಗಳನ್ನು ಮಾಡಿ ಶ್ರೀರಾಮನ ಪೂಜೆಯನ್ನು ಭಕ್ತಿಯಿಂದ ಮಾಡಿ. ಉಂಡೆಗಳನ್ನು ನೈವೇದ್ಯ ಮಾಡಿ ಶ್ರೀರಾಮಾ ನಿಮಗೊಂದನೆ ಮಾಳ್ಪೆ, ರಾಜ್ಯ, ಭೂವಿ, ಧನ ಧಾನ್ಯ ಕೊಡು, ಮಹಾವೈರಾಗ್ಯ, ಭಕ್ತಿ, ಸಂತಾನ, ನೇಮದಿ ಕೊಡು ಎಂದು ಪ್ರಾರ್ಥಿಸಿಕೋ ಎನ್ನುತ್ತಾರೆ, ಕೇಶವ ಭಟ್ಟನು ಹಾಗೆಯೇ ಮಾಡಿ ಬಹಳ ಶ್ರೀಮಂತನಾಗುತ್ತಾನೆ.

ಒಮ್ಮೆ ಆತನು ಕಾಶೀಯಾತ್ರೆ ಮಾಡಬೇಕೆಂದು ಅಪೇಕ್ಷಿಸಿ ತನ್ನ ಮಗನಾದ ನಾರಾಯಣ ಭಟ್ಟನನ್ನು ಕರೆದು ತಪ್ಪದೆ ಶ್ರೀರಾಮದೇವರ ಪೂಜೆ ಮಾಡಬೇಕೆಂದು ಹೇಳಿ ಯಾತ್ರೆಗೆ ಹೊರಡುತ್ತಾನೆ. ನಾರಾಯಣ ಭಟ್ಟನು ಅದರಂತೆ ಪೂಜೆಮಾಡಲು ಸಿದ್ಧನಾಗಿದ್ದು ತಾಯಿಯನ್ನು ಕರೆಯಲು ಆಕೆ ಬಾರದೆ ಉದಾಸೀನ ಮಾಡುತ್ತಾಳೆ ಹೀಗೆ ಎರಡು ಮೂರು ವಾರ ಕಳೆಯಲು ಅವರಿಗೆ ಮಹಾ ದಾರಿದ್ರ್ಯವೊದಗುತ್ತದೆ.

ಇತ್ತ ಮಂದಾಕಿನಿಯಲ್ಲಿ ಮಿಂದು, ಯಾತ್ರೆ ಮುಗಿಸಿಕೊಂಡು ಬಂದ ಕೇಶವಭಟ್ಟನು ತನ್ನ ಮನೆಗೆ ಬಂದ ದುರ್ಗತಿಯನ್ನು ಕಂಡು ನಾರಾಯಣ ಭಟ್ಟನನ್ನು ಚೆನ್ನಾಗಿ ಬೈದು ಶ್ರೀರಾಮನನ್ನು ಕಾಣದೆ ಪ್ರಾಣಾಹುತಿಗಳನ್ನು ತೆಗೆದುಕೊಳ್ಳ ಬೇಡವೆಂದು ಹೇಳಿ ಮನೆಬಿಟ್ಟು ಹೊರ ಹಾಕುತ್ತಾನೆ.

ನಾರಾಯಣಭಟ್ಟನು ಹೊರಗೆ ಹೋಗಬೇಕೆಂದಿದ್ದಾಗ ಆತನ ಹೆಂಡತಿಯು ತನ್ನ ಮಗಳನ್ನು ತಂದು ಗಂಡನ ಜೊತೆಯಲ್ಲಿ ಕಳಿಸಿಬಿಡುತ್ತಾಳೆ. ಆಗ ಅಲ್ಲಿಗೆ ಬಂದ ಋಷಿಗಳನ್ನು ನೋಡಿ, "ನನ್ನ ಮಗಳನ್ನು ಮದುವೆ ಮಾಡಿಕೊಳ್ಳಿ, ಎನ್ನಲು ಆತನು ನನಗೇ ಉಣ್ಣಲು ಗತಿಯಿಲ್ಲ, ಇನ್ನು ಇವಳನ್ನು ವಿವಾಹವಾಗಿ ಏನು ಮಾಡಲಿ ಎಂದಾಗ ಆತನನ್ನು ಹೇಗಾದರೂ ಒಪ್ಪಿಸಿ ವಿವಾಹ ಮಾಡಿಕೊಟ್ಟು ಅವರಿಗೆ ಶ್ರೀರಾಮನ ಕಥೆಯನ್ನು ಹೇಳಿ ಪೂಜಾವಿಧಾನವನ್ನು ಹೇಳಿಕೊಟ್ಟು ತಪ್ಪದೆ ಮಾಡಿಕೊಂಡಿರಬೇಕೆಂದು ಹೇಳಿ ಮುಂದೆ ಹೊರಡುತ್ತಾನೆ.

ಮುಂದೆ ಬಂದಾಗ ಅಲ್ಲಿ ಕೆಲವರು ಕುಂಟರು ಕುರುಡರು ಕುಳಿತಿರುತ್ತಾರೆ. ಕನಿಕರದಿಂದ ಅವರಿಗೂ ಶ್ರೀರಾಮ ಕಥೆಯನ್ನು, ಪೂಜಾವಿಧಾನವನ್ನು ತಿಳಿಸಿ ಹೊರಡುತ್ತಾನೆ.

ಹಾಗೆಯೇ ಬರುತ್ತಿರುವಾಗ ಒಂದು ಮನೆಯಲ್ಲಿ ಮುತ್ತೈದೆಯೊಬ್ಬರು ಭಗವಂತನನ್ನು ಪೂಜಿಸುತ್ತಿರುತ್ತಾಳೆ. ಆಕೆಯು ನಾರಾಯಣ ಭಟ್ಟನನ್ನು ನೋಡಿ ಕೈ ಮುಗಿದು– "ನಾವು ತುಂಬಾ ಬಡವರು. ನನಗೊಬ್ಬ ಮಗನಿದ್ದಾನೆ. ನನ್ನ ಯಜಮಾನರು ಕಾಶಿಗೆ ಹೋಗಿದ್ದಾರೆ. ನಮಗೆ ಉಡಲು ತೊಡಲು ಏನೇನೂ ಇಲ್ಲ" ಎಂದು ಹೇಳಲು ಆಕೆಯನ್ನು ಸಮಾಧಾನ ಪಡಿಸಿ ಅವಳಿಗೂ ಶ್ರೀರಾಮನ

ಚರಿತ್ರೆಯನ್ನೂ ಪೂಜಾ ವಿಧಾನವನ್ನೂ ತಿಳಿಸಿ ಈ ವ್ರತವನ್ನು ನೇಮದಿಂದ ಮಾಡಿದರೆ ನಿಮ್ಮ ಮಗನಿಗೆ ದೊರೆತನ ಸಿಗುತ್ತದೆಂದು ಹೇಳಿ ಹೊರಡುತ್ತಾನೆ.

ಆಗ ಈ ಮುತ್ತೈದೆಯು ಅವನು ಹೇಳಿದ ರೀತಿಯಲ್ಲೆ, ಶ್ರೀರಾಮನ ಪೂಜೆಯನ್ನು ಮಾಡುತ್ತಿರಲು ಒಮ್ಮೆ ಆಲೂರಿನ ರಾಜನು ಸ್ವರ್ಗಸ್ಥನಾಗಲು ಅವನಿಗೆ ಔರಸ ಪುತ್ರರಿಲ್ಲದ ಕಾರಣ ಪಟ್ಟದಾನೆ ಸೊಂಡಿಲಿನಲ್ಲಿ ಮಾಲೆಯನ್ನು ಪನ್ನೀರು ಗಿಂಡಿಯನ್ನೂ ಕೊಟ್ಟು ಈ ಆನೆಯು ಯಾರ ಕೊರಳಿಗೆ ಈ ಮಾಲೆಯನ್ನು ಹಾಕಿ ಅವನಿಗೆ ಪನ್ನೀರೆರೆಯುವುದೋ, ಅವರಿಗೇ ರಾಜ್ಯವನ್ನು ಕೊಡಬೇಕೆಂದು ಸದಸ್ಯ ತೀರ್ಮಾನಿಸಿ ಹಾಗೆಯೇ ಮಾಡಲು ಅದು ರಾಜಾಧಿರಾಜರೆಲ್ಲರನ್ನು ಬಿಟ್ಟು ಈ ಬಡ ಹುಡುಗನ ಕೊರಳಿಗೆ ಮಾಲೆ ಹಾಕುವುದು ಆಗ ಅವನನ್ನು ಕರೆದು ಕೊಂಡು ಹೋಗಿ ಅವನಿಗೆ ರಾಜ್ಯಾಭಿಷೇಕವನ್ನು ಮಾಡುವರು.

ಇತ್ತ ಅವನ ತಂದೆ ಗಂಗಾಸ್ನಾನವನ್ನು ಮುಗಿಸಿಕೊಂಡು ಬಂದು ತನ್ನ ಮಗನಿಗೆ ಲಭ್ಯವಾದ ರಾಜ ಪದವಿಯನ್ನು ನೋಡುತ್ತಿರಲು ರಾಜ ಭಟರು ಆತನ ತಂದೆ ತಾಯಿಗಳನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಅರಮನೆಗೆ ಕರೆತರುತ್ತಾರೆ.

ನಾರಾಯಣಭಟ್ಟನು ಹೀಗೆ ಊರೂರು ಸುತ್ತಿ ಬಹಳ ಆಯಾಸಗೊಂಡು ಒಂದು ಅಶ್ವತ್ಥ ಕಟ್ಟೆಯ ಮೇಲೆ ಮಲಗಿರಲು ಅವನಿಗೆ ಎಲ್ಲಕಡೆ ಪಟ್ಟಾಭಿರಾಮನ ದರ್ಶನವಾಗುತ್ತದೆ. ಇದರಿಂದ ಅವನು ಸಂತೋಷ ಹಾಗೂ ದಿಗ್ಭ್ರಮೆಗಳಿಂದ ಮೈ ಮರೆಯುತ್ತಾನೆ. ಆಗ ಶ್ರೀ ರಾಮನು ವೃದ್ಧ ಬ್ರಾಹ್ಮಣ ವೇಷದಿಂದ ಬಂದು ಅವನನ್ನು ಉಪಚರಿಸಿ ಎಬ್ಬಿಸಿ ಕುಶಲ ಸಮಾಚಾರ ಕೇಳುತ್ತಾನೆ.

ನಾರಾಯಣಭಟ್ಟನಿಗೆ ಪಟ್ಟಾಭಿರಾಮನ ಸಾಕ್ಷಾತ್ ದರ್ಶನವಾಗುತ್ತದೆ. ರತ್ನ ಸಿಂಹಾಸನದ ಮೇಲೆ ಸೀತೆಯೊಡನೆ ಶ್ರೀರಾಮನು ಕುಳಿತಿರುತ್ತಾನೆ. ಭರತ ಶತ್ರಘ್ನರು ಮುತ್ತಿನ ಚಾಮರವನ್ನು ಎತ್ತಿ ಬೀಸುತ್ತಿರುತ್ತಾರೆ. ಲಕ್ಷ್ಮಣ ಶ್ವೇತ ಛತ್ರಿಯನ್ನು ಹಿಡಿದಿರುತ್ತಾರೆ. ಹನುಮಂತನೂ, ವಾಲಿಯ ಮಗನೂ ಸುಗ್ರೀವನೂ ಕೈಮುಗಿದು ನಿಂತಿರುತ್ತಾರೆ.

ನಾರಾಯಣಭಟ್ಟನು ಸಂತೋಷಭರಿತನಾಗಿ ನನ್ನ ತಂದೆಗೂ ಈ ರೂಪವನ್ನು ತೋರಿಸು ಎಂದು ಶ್ರೀರಾಮನನ್ನು ಪ್ರಾರ್ಥಿಸುತ್ತಾನೆ. ಶ್ರೀರಾಮನು ನೀನು ಕೇಳಿದ್ದನ್ನು

ಕೊಡುತ್ತಾನೆ ಮನೆಗೆ ಹೋಗು ಎಂದು ಹೇಳಿ ತನ್ನ ಮುದ್ರಿಕೆಯನ್ನು ಕೊಟ್ಟು, ನೀನು ಚಿಂತಿಸಬೇಡ ನಾನು ಸೀತೆಯೊಡನೆ ಸದಾ ನಿಮ್ಮ ಮನೆಯಲ್ಲಿ ನೆಲೆಸಿರುತ್ತೇನೆ ಎಂದು ಕಳುಹಿಸಿಕೊಡುತ್ತಾನೆ.

ನಾರಾಯಣಭಟ್ಟನು ಮೊದಲು ಆ ಬಡ ಮುತ್ತೈದೆಯ ಮನೆಗೆ ಬಂದಾಗ, ಅವಳ ಮಗನು ರಾಜನಾಗಿ ಬಹು ವೈಭವದಿಂದಿರುವುದನ್ನು ಕಾಣುತ್ತಾನೆ. ಅವರೆಲ್ಲರೂ, ನಾರಾಯಣಭಟ್ಟನನ್ನು ಬಹಳ ಗೌರವದಿಂದ ಕಂಡು ಭಕ್ಷ್ಯ ಭೋಜ್ಯಗಳ ಅಡುಗೆ ಮಾಡಿ ಆದರಿಸಿ ಸತ್ಕರಿಸುತ್ತಾರೆ.

ಅಲ್ಲಿಂದ ಕುರುಡ ಕುಂಟರಲ್ಲಿಗೆ ಬರಲು ಅವರುಗಳು ಕೂಡಾ ಶ್ರೀರಾಮನ ಕೃಪೆಯಿಂದ ಕಣ್ಣುಗಳನ್ನು ಕಾಲುಗಳನ್ನು ಪಡೆದು ಸುಖವಾಗಿರುತ್ತಾರೆ. ಅವರು ನಾರಾಯಣಭಟ್ಟನನ್ನು ಸತ್ಕರಿಸಿ ಶ್ರೀರಾಮರ ಪೂಜೆಯನ್ನು, ಮಂಡಿಗೆ ಭಕ್ಷ್ಯ ಮಾಡಿಸಿ ನಾರಾಯಣಭಟ್ಟನಿಗೆ ಊಟಮಾಡಿಸಿ ಶ್ರೀರಾಮರ ಪ್ರಸಾದ ಕೊಡುತ್ತಾರೆ.

ಅಲ್ಲಿಂದ ಮುಂದೆ ತನ್ನ ಮಗಳನ್ನು ನೋಡಲು ಬಂದಾಗ ಅಲ್ಲೂ ಕೂಡಾ ಆಕೆ ತಂದೆ ಹೇಳಿದಂತೆ ಶ್ರೀರಾಮರ ಪೂಜೆ ಮಾಡಿ ಸಕಲೈಶ್ವರ್ಯ ಸಂಪನ್ನರಾಗಿರುತ್ತಾರೆ.

ಮತ್ತೆ ಎಲ್ಲರೂ ಕೂಡಿ ನಾರಾಯಣಭಟ್ಟನ ಊರಿಗೆ ಬರುತ್ತಾರೆ. ಇಲ್ಲೂ ಸಹಾ ಶ್ರೀರಾಮನ ಕರುಣೆಯಿಂದ ಅಷ್ಟೈಶ್ವರ್ಯ ತುಂಬಿರುತ್ತದೆ. ನಾರಾಯಣಭಟ್ಟನು ಬಂದದ್ದನ್ನು ಕೇಳಿ ಕೇಶವಭಟ್ಟ ತನ್ನ ಜನರೊಂದಿಗೆ ಬಂದು ಮಗನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಮನೆಗೆ ಹೋಗಿ ಮಹಾ ವೈಭವದಿಂದ ಶ್ರೀರಾಮರ ಪೂಜೆ ನಡೆಸುತ್ತಾರೆ. ಶ್ರೀರಾಮನು ತಾನಾಡಿದ ಮಾತಿನಂತೆ ತನ್ನ ದಿವ್ಯ ಸ್ವರೂಪದ ದರ್ಶನ ಮಾಡಿಸುತ್ತಾನೆ. ನಾರಾಯಣಭಟ್ಟನ ದೆಸೆಯಿಂದ ಕೇಶವಭಟ್ಟನಿಗೆ ಶ್ರೀರಾಮದರ್ಶನವಾಗಿ ಆತನು ತಾನು ಧನ್ಯನಾದೆನೆಂದು ಕೊಳ್ಳುತ್ತಾನೆ.

ಹೀಗೆ ಈ ಶ್ರೀರಾಮ ಪೂಜೆಯನ್ನು ಮಾಡಿ, ಪ್ರಸಾದ ಸ್ವೀಕರಿಸಿ, ಶ್ರೀ ರಾಮರ ಕಥೆಯನ್ನು ಕೇಳಿದರೆ ಸಕಲ ಇಷ್ಟಾರ್ಥ ಕೈಗೂಡುತ್ತದೆ ಎಂಬ ಫಲಶ್ರುತಿಯೊಂದಿಗೆ ರಾಮದೇವರ ಹಾಡು ಮುಗಿಯುತ್ತದೆ.

ಇಲ್ಲಿ ಲಕ್ಷ್ಮೀದೇವಮ್ಮನವರು ಸತತವಾದ ನಿಷ್ಠೆ ಮತ್ತು ಅತಿಶಯವಾದ ಭಕ್ತಿಯಿಂದ ಭಗವಂತನ ಕರುಣೆಗೆ ಪಾತ್ರರಾಗುತ್ತಾರೆ ಎಂಬುದನ್ನು ಸಾರಿ ಹೇಳಿದ್ದಾರೆ.

೪. **ಸೌಗಂಧಿಕಾ ಪುಷ್ಪ** : ಒಂದಿ ದಿನ ದ್ರೌಪದಿಯು ಆರಾಮವಾಗಿ ಅಂಗಳದಲ್ಲಿ ನಿಂತಿರುವಾಗ ಮನೋಹಕವಾದ ಪುಷ್ಪವೊಂದು ಗಾಳಿಯಲ್ಲಿ ಬೀಸಿಕೊಂಡು ಬಂದು ಅವಳ ಬಳಿ ಬೀಳುತ್ತದೆ. ಹದಿನಾರು ದಳದ ಬಂಗಾರದ ಬಣ್ಣದ ಆ ಸೌಗಂಧಿಕಾ ಪುಷ್ಪದ ಸುವಾಸನೆ ಎಲ್ಲೆಡೆ ಹರಡುತ್ತದೆ ದ್ರೌಪದಿ ಆ ಹೂವನ್ನು ತನ್ನ ಕೈಲಿ ಹಿಡಿದು ನೋಡಿ, ತಾನು ಇನ್ನೂ ಅಂತಹ ಅನೇಕ ಪುಷ್ಪಗಳನ್ನು ಪಡೆಯಬೇಕೆಂದು ಬಯಸಿ ಈ ಪುಷ್ಪವನ್ನು ತಂದುಕೊಡಲು ಭೀಮ ಸೇನನಿಂದ ಮಾತ್ರ ಸಾಧ್ಯ ಎಂದುಕೊಂಡು ಅವನ ಬಳಿ ಹೋಗಿ ಕೇಳಿಕೊಳ್ಳುತ್ತಾಳೆ. ಭೀಮಸೇನನು ಒಡನೆಯೇ ಕುಬೇರನ ಅಲಕಾಪುರಿಗೆ ಪ್ರಯಾಣ ಬೆಳೆಸುತ್ತಾನೆ. ದಾರಿಯಲ್ಲಿ ಆಂಜನೇಯನ ದರ್ಶನವಾಗುತ್ತದೆ. ಇದ್ಯಾವುದೋ ಕೋತಿ ದಾರಿಗೆ ಅಡ್ಡವಾಗಿ ಕೂತಿದೆಯೆಂದು ತಿಳಿದು ದಾರಿಬಿಡುವಂತೆ ಕೇಳುತ್ತಾನೆ. ಹನುಮಂತನು ನಾನು ಬಹಳ ಮುದುಕನಾಗಿರುವುದರಿಂದ ನನ್ನ ಬಾಲವನ್ನು ಕದಲಿಸಲಿಕ್ಕೆ ಆಗುತ್ತಿಲ್ಲ, ದಯವಿಟ್ಟು ಬಾಲವನ್ನು ಆಚೆ ಬದಿಗೆ ಸರಿಸು ಎನ್ನುತ್ತಾನೆ. ಇದು ಯಾವ ಮಹಾ ಕೆಲಸ ಎಂದು ಭೀಮನು ಬಾಲವನ್ನು ಎತ್ತಲು ಹೋಗುತ್ತಾನೆ. ಅವನಿಂದ ಆಗುವುದಿಲ್ಲ ಎಷ್ಟೇ ಪ್ರಯತ್ನ ಪಟ್ಟಾಗ್ಯೂ ಆಗುವುದಿಲ್ಲ. ಆಗ ಹನುಮಂತನು ತನ್ನ ವಿಚಾರವನ್ನು ಭೀಮನಿಗೆ ತಿಳಿಸಿ "ನೀನಾರೆಂಬುದನ್ನು ಬಲ್ಲೆ ಹೋಗು ನಿನ್ನ ಕೆಲಸವಾಗುತ್ತದೆ ಎಂದು ಹರಸುತ್ತಾನೆ. ಹನುಮ–ಭೀಮರು ಪರಸ್ಪರ ಆಲಿಂಗನೆ ಮಾಡಿಕೊಂಡು ತಾವಿಬ್ಬರೂ ಸಹೋದರರೆಂದು ಸಂತೋಷಪಡುತ್ತಾರೆ.

ಭೀಮನು ಅಲಕಾಪುರಿಗೆ ಅಲ್ಲಿನ ಸೈನಿಕರನ್ನೆಲ್ಲಾ ಸಂಹಾರ ಮಾಡುತ್ತಾನೆ. ಆಗ ಸ್ವತಃ ಕುಬೇರನೇ ಬಂದು ಭೀಮನನ್ನು ಸ್ವಾಗತಿಸಿ ತನ್ನರಮನೆಗೆ ಕರೆದು ಕೊಂಡು ಹೋಗಿ ಬಂದ ಕಾರಣವನ್ನು ಕೇಳುತ್ತಾನೆ, ಆಗ ಭೀಮನು ತಾನು ಸೌಗಂಧಿಕಾ ಪುಷ್ಪ ಪಡೆಯಲಿಕ್ಕಾಗಿ ಬಂದೆನೆನ್ನುತ್ತಾನೆ. ಕುಬೇರನು ಅದಕ್ಕೆ ಇಷ್ಟೇಕೆ ಕಷ್ಟಪಟ್ಟಿರಿ. ನನಗೊಂದು ಮಾತು ಹೇಳಿ ಕಳಿಸಿದ್ದರೆ ನಾನೇ ಕೊಡುತ್ತಿದ್ದೆನಲ್ಲಾ. ಒಂದು ಹರಿವಾಣದ ತುಂಬಾ ಹೂವುಗಳನ್ನು ತಂದು ಭೀಮನಿಗೆ ಕೊಟ್ಟು ಅವನನ್ನು ಸತ್ಕರಿಸುತ್ತಾನೆ.

ಭೀಮನು ಆ ಹೂವುಗಳನ್ನು ತಂದು ದ್ರೌಪದಿಗೆ ಕೊಡುತ್ತಾನೆ. ಇವನ ಸಾಹಸಕ್ಕೆ ಧರ್ಮರಾಯನು ಮೆಚ್ಚುತ್ತಾನೆ ಎಲ್ಲರೂ ಭೀಮನನ್ನು ಕೊಂಡಾಡುತ್ತಾರೆ.

ಲಕ್ಷ್ಮೀದೇವಮ್ಮನವರು ಈ ಕಥಾನಕದಲ್ಲಿ ಹನುಮ-ಭೀಮರ ಸಂಭಾಷಣೆ, ತನ್ನ ಸಾಹಸದಿಂದ ಕುಬೇರನನ್ನು ಒಲಿಸಿದ ರೀತಿ ಇತ್ಯಾದಿಗಳನ್ನು ತುಂಬಾ ಚೆನ್ನಾಗಿ ತಂದಿದ್ದಾರೆ.

**೫. ಸತ್ಯನಾರಾಯಣ ಕಥಾ** : ನಾರದ ಮುನಿಗಳು ಒಂದು ಸಲ ಹರಿಯನ್ನು ಕುರಿತು ಮರ್ತ್ಯ ಲೋಕದ ಜನರು ಏನೂ ಸಾರ್ಥಕವಿಲ್ಲದೆ ವ್ಯರ್ಥವಾಗಿ ಕಷ್ಟ ಪಡುತ್ತಿದ್ದಾರೆ. ಅವರ ಒಳ್ಳೆಯದಕ್ಕೆ ಏನಾದರೂ ಉಪಾಯವನ್ನು ಸೂಚಿಸಿ ಎನ್ನಲು ಶ್ರೀಹರಿಯು ಅವರಿಗೆ ಸತ್ಯನಾರಾಯಣನ ವ್ರತವನ್ನೂ ಕಥೆಯನ್ನೂ ಹೇಳಿ ಈ ಹಿಂದೆ ಯಾರ್‍ಯಾರು ಇದನ್ನು ಮಾಡಿ ಸುಖ ಸೌಭಾಗ್ಯಗಳನ್ನು ಪಡೆದರು ಎಂಬುದನ್ನು ತಿಳಿಸುತ್ತಾನೆ.

ಕಾಶಿಯಲ್ಲಿ ಒಬ್ಬ ಬಡ ಬ್ರಾಹ್ಮಣನು ತನ್ನ ಬಹುದೊಡ್ಡ ಕುಟುಂಬವನ್ನು ಪೋಷಿಸಲಾರದೆ ವ್ಯಥೆ ಪಡುತ್ತಿದ್ದನು. ಆಗ ಅವನಲ್ಲಿಗೆ ಸತ್ಯನಾರಾಯಣನು ಒಬ್ಬ ವೃದ್ಧ ಬ್ರಾಹ್ಮಣನ ವೇಷದಿಂದ ಬಂದನು. ಬ್ರಾಹ್ಮಣನು ಅವನನ್ನು ಆದರಿಸಿ ತನ್ನ ಕಷ್ಟವನ್ನು ಹೇಳಿಕೊಳ್ಳಲು ಆ ವೃದ್ಧ ವಿಪ್ರನು ಅವನಿಗೆ ಸತ್ಯನಾರಾಯಣ ವ್ರತವನ್ನು ಉಪದೇಶಿಸಿ ಇದನ್ನು ಭಕ್ತಿಯಿಂದ ಮಾಡಿದರೆ ನಿನಗೆ ಸಕಲ ಸೌಭಾಗ್ಯಗಳು ದೊರಕುತ್ತವೆ ಎಂದು ಹೇಳಿದನು.

ಬ್ರಾಹ್ಮಣನು ಅದರಂತೆ ಮಾಡುತ್ತಿರಲು ಅವನ ಮನೆಯ ಜಗುಲಿಯ ಮೇಲೆ ಒಬ್ಬ ಕಟ್ಟಿಗೆ ಮಾರುವವನು ಕುಳಿತು ಈ ಪೂಜೆಯನ್ನು ನೋಡಿ ತಾನೂ ಪ್ರಸಾದವನ್ನು ಪಡೆದುಕೊಂಡು ತಾನೂ ಈ ವ್ರತವನ್ನು ಮಾಡುವುದಾಗಿ ಸಂಕಲ್ಪಿಸಿ ಮರುದಿನ ಕಟ್ಟಿಗೆ ಮಾರಲು ಹೋದಾಗ ಅವನಿಗೆ ಬೇಕಾದಷ್ಟು ದ್ರವ್ಯ ದೊರೆಯಿತು. ಅದರಿಂದ ಬೇಕಾದ ಸಾಮಾನುಗಳನ್ನೆಲ್ಲಾ ಕೊಂಡು ಪೂಜೆಯನ್ನು ಮಾಡಿ ಗೋಧಿಚೂರ್ಣ, ಬೆಲ್ಲ, ತುಪ್ಪ, ಬಾಳೆಹಣ್ಣುಗಳಿಂದ ಪ್ರಸಾದವನ್ನು ಸಿದ್ಧಪಡಿಸಿ ಸ್ವಾಮಿಗೆ ಅರ್ಪಿಸಿ ಮನೆಯವರಿಗೆಲ್ಲಾ ಕೊಟ್ಟು ತಾನೂ ಸ್ವೀಕರಿಸಿದನು. ಹೀಗೆಯೇ

ಮಾಡುತ್ತಿರಲು ಅವನಿಗೆ ಬೇಕಾದಷ್ಟು ಐಶ್ವರ್ಯ ದೊರೆತು ಅವನು ಶ್ರೇಷ್ಠ ಪದವಿಯನ್ನು ಪಡೆದನು.

ಉಲ್ಕಮುಖನೆಂಬ ರಾಜನು ತನ್ನ ಪತ್ನಿಯಾದ ಸರೋಜಿನಿ ಎಂಬುವಳ ಜೊತೆಯಲ್ಲಿ ಸತ್ಯನಾರಾಯಣನ ಪೂಜೆ ಮಾಡುತ್ತಿರುವಾಗ ವರ್ತಕನಾದ ಸಾಧು ಎಂಬುವನು ಅಲ್ಲಿಗೆ ಬಂದು ವ್ರತದ ವಿಚಾರವನ್ನು ತಿಳಿದುಕೊಂಡು ತಾನೂ ಈ ವ್ರತವನ್ನು ಮಾಡುತ್ತೇನೆಂದು ಸಂಕಲ್ಪಿಸಿ ಕೊಂಡು ಪ್ರಸಾದವನ್ನು ತೆಗೆದು ಕೊಂಡುಬಂದು ತನ್ನ ಹೆಂಡತಿಗೆ ಕೊಟ್ಟನು. ಆಕೆಯು ಗರ್ಭವತಿಯಾಗಿ ಬಹು ಸುಂದರವಾದ ಹೆಣ್ಣು ಶಿಶುವನ್ನು ಪಡೆದಳು. ಆ ಮಗುವಿಗೆ ಕಳಾವತಿ ಎಂದು ನಾಮಕರಣ ಮಾಡಿದರು. ಹೆಂಡತಿಯು ವರ್ತಕನಿಗೆ ವ್ರತವನ್ನು ಜ್ಞಾಪಿಸಲು ಅವನು ಮಗಳ ಮದುವೆಯಲ್ಲಿ ಮಾಡೋಣವೆಂದನು.

ಮಗಳು ದೊಡ್ಡವಳಾದಾಗ ಅವಳಿಗೆ ತಕ್ಕ ವರನನ್ನು ಹುಡುಕಲು ಭೃತ್ಯರನ್ನು ಕಳಿಸಿದನು. ಸುಕಾಂಚನ ನಗರದಿಂದ ಸುಂದರನೂ, ಯೋಗ್ಯನೂ ಆದ ವರನನ್ನು ತರಲು ಬಂಧು ಬಳಗದೊಂದಿಗೆ ಸಂಭ್ರಮದಿಂದ ಮದುವೆಯನ್ನು ಮಾಡಿ ವ್ರತವನ್ನು ಮರೆತನು.

ಮಾವ–ಅಳಿಯರಿಬ್ಬರೂ ಒಂದು ಹಡಗಿನ ತುಂಬಾ ರತ್ನ ಪಡಿಗಳನ್ನೂ, ಬೆಳ್ಳಿ–ಬಂಗಾರಗಳನ್ನು ತುಂಬಿಕೊಂಡು ಸಿಂಧುನದಿಯ ತೀರದಲ್ಲಿರುವ ರತ್ನಸಾರ ಪುರಕ್ಕೆ ಬಂದು ಒಂದು ಛತ್ರದಲ್ಲಿ ಮಲಗಿದ್ದರು. ಶ್ರೀಹರಿಯು ಇವರಿಗೆ ಬುದ್ಧಿ ಕಲಿಸ ಬೇಕೆಂದು ರಾಜನ ಮನೆಯಲ್ಲಿ ಕಳ್ಳತನ ಮಾಡಿಸಿ ಆ ಒಡವೆ–ವಸ್ತುಗಳನ್ನು ತಂದು ಇವರ ಬಳಿ ಹಾಕಿಸಿದನು. ರಾಜನ ಭೃತ್ಯರು ಕಳ್ಳರನ್ನು ಹುಡುಕಿಕೊಂಡು ಬರುತ್ತಾ, ಇವರ ಬಳಿ ಇದ್ದ ವಸ್ತುಗಳನ್ನು ನೋಡಿ ಇವರನ್ನು ಒದ್ದು ಎಳೆದು ಕೊಂಡುಹೋಗಿ ಸೆರೆಯಲ್ಲಿಟ್ಟರು.

ಇತ್ತ ಕಳಾವತಿ–ಲೀಲಾವತಿಗೂ ದಾರಿದ್ರ್ಯ ದುಃಖ ಪ್ರಾಪ್ತವಾಯಿತು. ಒಂದು ದಿನ ಕಳಾವತಿಯು ನೆರೆಯ ಮನೆಗೆ ಹೋದಾಗ ಅಲ್ಲಿ ಸಂಭ್ರಮದಿಂದ ನಡೆಯುತ್ತಿದ್ದ ಸತ್ಯನಾರಾಯಣ ಪೂಜೆಯನ್ನು ನೋಡಿ ಪ್ರಸಾದವನ್ನು ತೆಗೆದುಕೊಂಡು ಮನೆಗೆ

ಬಂದಳು. ಲೀಲಾವತಿಯು ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ ಎಂದು ಮಗಳನ್ನು ಗದ್ದರಿಸಲು ಅವಳು ವ್ರತದ ವಿಚಾರವನ್ನು ಹೇಳಿದಳು. ಅಂತೆಯೇ ಅವರೂ ಸಹಾ ಪೂಜೆಯನ್ನು ಮಾಡಿ ಪ್ರಸಾದವನ್ನು ತೆಗೆದುಕೊಂಡರು.

ಚಂದರಕೇತುರಾಜನ ಸ್ವಪ್ನದಲ್ಲಿ ಸತ್ಯದೇವನು ಬಂದು ಮಾವ-ಅಳಿಯ ಇಬ್ಬರನ್ನೂ ಸೆರೆಯಿಂದ ಬಿಡು ಎಂದು ಹೇಳಲು ರಾಜನು ಅವರನ್ನು ಬಂಧನದಿಂದ ಬಿಡಿಸಿ ಒಂದಕ್ಕೆರಡು ದ್ರವ್ಯಕೊಟ್ಟು ಕಳಿಸಿದನು.

ಮಾವ-ಅಳಿಯಂದಿರು ಹಡಗಿನಲ್ಲಿ ಬೆಳ್ಳಿ ಬಂಗಾರಗಳನ್ನು ತುಂಬಿಕೊಂಡು ಬರುತ್ತಿರುವಾಗ ಸತ್ಯ ದೇವನು ಸನ್ಯಾಸಿ ವೇಷದಿಂದ ಬಂದು ಈ ಹಡಗಿನಲ್ಲೇನಿದೆ ಎಂದಾಗ ವರ್ತಕನು ಸೊಕ್ಕಿನಿಂದ ಬರೀ ಗಿಡಲತೆಗಳಿವೆ ಎಂದನು. ಸನ್ಯಾಸಿಯು ಹಾಗೇ ಆಗಲಿ ಎಂದು ಹೊರಟು ಹೋದನು. ವರ್ತಕನು ನೋಡಿದಾಗ ಬೆಳ್ಳಿ ಬಂಗಾರವೆಲ್ಲಾ ತರು-ಲತೆಗಳೇ ಆಗಿದ್ದುವು. ಆಗ ತಲೆಯನ್ನು ಘಟ್ಟಿಸಿಕೊಂಡು ಅಳುತ್ತಾ ಸನ್ಯಾಸಿಯಾಗಿ ಬಂದಿದ್ದವನು ಪರಮಾತ್ಮನೇ ಎಂದು ತಿಳಿದು ಅವನನ್ನು ಹುಡುಕಿ ಅವನ ಪಾದಗಳನ್ನು ಹಿಡಿದು ತಪ್ಪನ್ನು ಮನ್ನಿಸೆಂದಾಗ ಪರಮಾತ್ಮನು ಸರಿ' ಮೊದಲಿನಂತಾಗಲಿ'ಎಂದನು. ಅಂತೆಯೇ ಹಡಗಿನಲ್ಲಿ ಬೆಳ್ಳಿ-ಬಂಗಾರಗಳು ತುಂಬಿದುವು. ನಂತರ ಅವರು ತಮ್ಮೂರಿಗೆ ಬಂದರು.

ಭೃತ್ಯರು ಬಂದು ಈ ಸಮಾಚಾರವನ್ನು ಹೇಳಲು ಕಳಾವತಿಯು ಗಂಡನನ್ನು ನೋಡುವ ಆತುರದಿಂದ ಪೂಜೆಮಾಡುತ್ತಿದ್ದವಳು ಪ್ರಸಾದವನ್ನು ತೆಗೆದು ಕೊಳ್ಳದೆ ಬಂದಳು. ಆಗ ಆ ಹಡಗು ಮುಳುಗಿ ನೀರು ಪಾಲಾಯಿತು "ನೀನು ಪ್ರಸಾದವನ್ನು ಬಿಟ್ಟು ಬಂದುದರಿಂದ ಹೀಗಾಯಿತು." ಎಂದು ಅಶರೀರವಾಣಿಯಾಗಲು ಹೋಗಿ ಪ್ರಸಾದವನ್ನು ತೆಗೆದು ಕೊಂಡು ಬರಲು ಅವಳ ಪತಿಯು ಎದುರಿಗೆ ಬಂದು ನಿಂತನು.

ಆಗ ಎಲ್ಲರೂ ಮನೆಗೆ ಬಂದು ಸಂಭ್ರಮದಿಂದ ಸತ್ಯನಾರಾಯಣನನ್ನು ಪೂಜಿಸಿ ಸಮಸ್ತ ಸುಖಗಳನ್ನು ಅನುಭವಿಸುತ್ತಾ ಕೊನೆಗೆ ಸತ್ಯದೇವನ ಪುರವನ್ನು ಸೇರಿದರು.

ತುಂಗಧ್ವಜನೆಂಬ ರಾಜನು ಬೇಟೆಗೆ ಹೋಗಿರುವಾಗ ಅಲ್ಲೊಂದೆಡೆ ತುಂಬಾ ಜನರು ಸೇರಿರುವುದನ್ನು ನೋಡಿ ಅಲ್ಲಿ ಹೋಗುತ್ತಾನೆ. ಅವರೆಲ್ಲಾ ಗೋಪಾಲರು ಸೇರಿ ಸತ್ಯನಾರಾಯಣನ ಪೂಜೆ ಮಾಡುತ್ತಿರುತ್ತಾರೆ, ತಮ್ಮ ರಾಜ ಬಂದನೆಂಬ ಸಂತೋಷದಿಂದ ಅವನಿಗೆ ಪ್ರಸಾದವನ್ನು ಕೊಡುತ್ತಾರೆ. ಆದರೆ ರಾಜನು ಇಂತಹ ಗತಿಹೀನರು ಕೊಟ್ಟ ಪ್ರಸಾದ ನನಗ್ಯಾಕೆ ಎಂದು ಅದನ್ನು ಬಿಟ್ಟು ಬರುತ್ತಾನೆ. ಪ್ರಸಾದವನ್ನು ಸ್ವೀಕರಿಸದಿದ್ದುದರಿಂದ ಅವನ ನೂರು ಮಕ್ಕಳು ಮಾಯವಾಗುತ್ತಾರೆ. ಇದೇಕೆ ಹೀಗಾಯಿತು ಎಂದು ಯೋಚಿಸಲು ಇದು ಪ್ರಸಾದದ ಅಸ್ವೀಕಾರದ ಫಲ ಎಂದು ತಿಳಿದು ಮತ್ತೆ ಗೋಪಾಲಕರಲ್ಲಿಗೆ ಬಂದು ತಪ್ಪಾಯಿತೆಂದು ಹೇಳಿ ಪ್ರಸಾದವನ್ನು ತೆಗೆದುಕೊಂಡಾಗ ಅವನ ಮಕ್ಕಳೆಲ್ಲರೂ ಬದುಕುತ್ತಾರೆ. ನಂತರ ರಾಜನು ಸತ್ಯನಾಥನ ಪೂಜೆಯನ್ನು ಭಕ್ತಿಯಿಂದ ಮಾಡುತ್ತಾ ಸಾಯುಜ್ಯ ಪದವಿಯನ್ನು ಪಡೆಯುತ್ತಾನೆ.

೬. **ಮಂಗಳಗೌರಿ ಕಥೆ** : ಯಾವ ವ್ರತ, ನೋಂಪಿಗಳನ್ನು ಮಾಡದೆ ಇದ್ದರೂ ಕೇವಲ ಮಂಗಳ ಗೌರಿಯನ್ನೇ ಭಕ್ತಿಯಿಂದ ನೆನೆಯುತ್ತಿದ್ದ ರಾಜಕುಮಾರಿಯು, ಮೋಸದಿಂದ ಕುಷ್ಠರೋಗದವನೊಡನೆ ವಿವಾಹವಾಗಬೇಕಿದ್ದ ಸಂದರ್ಭವನ್ನು ತಪ್ಪಿಸಿಕೊಂಡು ರಾಜಕುಮಾರನ ಕೈಹಿಡಿದ ಕಥೆಯಿದು.

ಯಾರು ಎಷ್ಟೇ ಕಷ್ಟಗಳನ್ನು ಕೊಟ್ಟರೂ, ವಂಚನೆ ಮಾಡಿದರೂ ದೈವಬಲವಿದ್ದರೆ ಏನೂ ಸಾಗುವುದಿಲ್ಲ. ದೇವರ ಅಪಾರ ಕರುಣೆ ಪಡೆದರೆ ಎಂತಹ ವಿಘ್ನಗಳನ್ನೂ ನಿವಾರಿಸಬಹುದು. ಎಂಬುದನ್ನು ಲಕ್ಷ್ಮೀದೇವಮ್ಮನವರು ಈ ಹಾಡಿನಲ್ಲಿ ತೋರಿಸಿದ್ದಾರೆ.

೭. **ಗೊಲ್ಲತಿ ಹಾಡು:** ಗೋಕುಲದಲ್ಲಿ ಗೊಲ್ಲತಿಯರೆಲ್ಲ ಶ್ರೀ ಕೃಷ್ಣನ ಜೊತೆಗೂಡಿ ಆಡುತ್ತಾ, ಪಾಡುತ್ತಾ ಆನಂದದಿಂದಿರುತ್ತಾರೆ. ಆದರೆ ಒಬ್ಬ ಅತ್ತೆ ಮಾತ್ರ ಹೊಸದಾಗಿ ಮದುವೆಯಾಗಿ ಬಂದ ತನ್ನ ಸೊಸೆಯನ್ನು ಹೊರಗೆ ಹೋಗಲು ಬಿಡುವುದಿಲ್ಲ, ಏಕೆಂದರೆ ಮಾಯಾವಿಯಾದ ಕೃಷ್ಣನು ಹೆಣ್ಣುಗಳನ್ನು ಕೆಡಿಸಿ ಅವರ ಶೀಲವನ್ನು ಹಾಳುಮಾಡುತ್ತಿದ್ದಾನೆ ಎಂಬ ಭಾವನೆ ಅವಳಿಗೆ. ನವವಧುವಿನ

ಗೆಳತಿಯರೆಲ್ಲಾ ಅವಳಿಗೆ ಶ್ರೀಕೃಷ್ಣನನ್ನು ಕುರಿತು ಅವನ ರೂಪ, ಗುಣ, ಚಾಣ್ಮೆಗಳನ್ನು ವಿವರಿಸಿರುತ್ತಾರೆ. ಈ ಗೊಲ್ಲತಿಗೆ ಹೇಗಾದರೂ ಮಾಡಿ ತಾನೂ ಕೃಷ್ಣನನ್ನು ಕಾಣಬೇಕೆಂಬಾಸೆ.

ಒಂದು ದಿನ ತಾನು ಹಾಲು ಮಾರಿಕೊಂಡು ಬರಲು ಅಪ್ಪಣೆ ಕೊಡಿ ಎನ್ನುತ್ತಾಳೆ. ಆದರೆ ಅತ್ತೆ ಒಪ್ಪುವುದಿಲ್ಲ. ನಿನ್ನನ್ನು ನೋಡಿದರೆ ಆ ಕೃಷ್ಣನು ಹಾಳುಮಾಡದೆ ಬಿಡುವವನಲ್ಲ. ಆಗ ನಿನ್ನ ಗಂಡ ನಿನ್ನನ್ನು ದೂರ ಮಾಡಿಬಿಡುತ್ತಾನೆ ಎನ್ನುತ್ತಾಳೆ. ಗೊಲ್ಲತಿಯು ಏನೇ ಆದರೂ ನಾನು ಕೃಷ್ಣನ ಬಲೆಗೆ ಬೀಳುವವಳಲ್ಲ, ನನ್ನನ್ನು ನಂಬಿ ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾಳೆ. ಕೊನೆಗೆ ಅತ್ತೆ ಜಾಗ್ರತೆಯಿಂದಿರು ಎಂದು ಹೇಳಿ ಕಳಿಸುತ್ತಾಳೆ.

ಗೊಲ್ಲತಿಯು ಬರುತ್ತಿರಲು ಶ್ರೀಕೃಷ್ಣನು ಅವಳ ಗಂಡನಂತೆ ವೇಷವನ್ನು ಧರಿಸಿ, ಎಂದೂ ಇಲ್ಲದೆ ನೀನು ಒಬ್ಬಳೇ ಇಲ್ಲಿಗೆ ಯಾಕೆ ಬಂದೆ? ಆ ಕೃಷ್ಣ ನಿನ್ನ ನೋಡಿದರೆ ಬಿಡುವುದಿಲ್ಲ ಎಂದು ಹೇಳಿ ಅವಳನ್ನು ಬಹಳವಾಗಿ ರಮಿಸಿ, ಆ ವನವನ್ನೆಲ್ಲಾ ಸುತ್ತಾಡಿಸಿ ಅವಳನ್ನು ಕೂಡುತ್ತಾನೆ. ನಂತರ ಆಕೆಗೆ ಪೀತಾಂಬರ ಧಾರಿಯಾದ, ಶಂಖ ಚಕ್ರಗಳನ್ನು ಧರಿಸಿದ ತನ್ನ ನಿಜರೂಪವನ್ನು ತೋರುತ್ತಾನೆ. ಗೊಲ್ಲತಿಯು ಬಹಳ ಸಂಭ್ರಮ ಪಡುತ್ತಾಳೆ. ಕೃಷ್ಣನು ಇನ್ನು ಹೋಗು ಹೊತ್ತಾಯಿತು, ಉಳಿದ ಗೋಪಿಯರು ಬಂದು ಬಿಡುತ್ತಾರೆ ಎನ್ನುತ್ತಾನೆ. ನಾನು ನಿನ್ನನ್ನು ಬಿಟ್ಟು ಹೇಗೆ ಹೋಗಲಿ ಸ್ವಾಮಿ, ಎಂದು ನುಡಿಯುತ್ತಿರುವಾಗಲೇ ಉಳಿದ ಗೋಪಿಯರು ಬಂದು ಇನ್ನೂ ಹಾಲನ್ನು ಮಾರಲೇ ಇಲ್ಲವೇ ಎಂದಾಗ ಕೃಷ್ಣನ ಮಾಯೆಯಿಂದ ಬುಟ್ಟಿಯು ಬರಿದಾಗಿ ಅಧಿಕ ರೊಕ್ಕ ಸಿಕ್ಕಿರುತ್ತದೆ. ಅದನ್ನು ತೆಗೆದು ಕೊಂಡು ಮನೆಗೆ ಹೋಗುತ್ತಾಳೆ.

ಅಲ್ಲಿ ಅತ್ತೆಯ ಎದುರಿಗೆ ಹೋಗದೆ ತಂದ ರೊಕ್ಕವನ್ನೆಲ್ಲಾ ಅತ್ತೆಯ ಬಳಿ ಸುರಿದು ಕಂಭದ ಮರೆಗೆ ನಿಲ್ಲುತ್ತಾಳೆ ಚಾಣಾಕ್ಷಳಾದ ಅತ್ತೆ ಅವಳನ್ನು ಹಿಡಿದೆಳೆದು ನೋಡಿ ನೀನು ಖಂಡಿತಾ ಕೃಷ್ಣನಿಗೆ ಬಲಿಯಾಗಿದ್ದೀಯಲ್ಲವೆ? ನಿನ್ನ ಜಾರಿದ ಸೆರಗು, ಚೆದುರಿದ ಕುಂಕುಮ, ಸೋತ ಶರೀರವೇ ಇದನ್ನು ಹೇಳುತ್ತದೆ ಎನ್ನುತ್ತಾಳೆ ಆಗ ಗೊಲ್ಲತಿಯು ಹೌದು, ಶ್ರೀ ಕೃಷ್ಣನು ನನ್ನ ಗಂಡನ ವೇಷದಿಂದ ಬಂದು ನನ್ನನ್ನು

ಮರಳು ಮಾಡಿಬಿಟ್ಟ. ನಾನವನನ್ನು ಒಪ್ಪಿಕೊಂಡು ನನ್ನನು ಅವನಿಗೆ ಒಪ್ಪಿಸಿಕೊಂಡೆ. ನಂತರ ಕೃಷ್ಣನು ತಾನು ಬರಿಯ ಗೊಲ್ಲನಲ್ಲ, ಭಗವಂತನೆಂಬುದನ್ನು ದರ್ಶನ ಮಾಡಿಸಿದ. ಇನ್ನು ಮುಂದೆ ಅವನೇ ನನ್ನ ಸ್ವಾಮಿ. ನಾನು ಅವನನ್ನು ಬಿಟ್ಟಿರಲಾರೆ ಎನ್ನುತ್ತಾಳೆ. ಆಗ ಅತ್ತೆಗೂ ಪರಮಾತ್ಮನ ದರ್ಶನವಾಗುತ್ತದೆ.

ಈ ಗೊಲ್ಲತಿಯ ಹಾಡಿನಲ್ಲಿ ಲಕ್ಷ್ಮೀದೇವಮ್ಮನವರು ಗೊಲ್ಲತಿಯ ಶೃಂಗಾರ, ಒಡವೆ ವಸ್ತುಗಳು ಶ್ರೀ ಕೃಷ್ಣ ಗೊಲ್ಲನ ವೇಷ, ಅವನು ಮರುಳುಮಾಡಿ ಗೊಲ್ಲತಿಯೊಡನೆ ರಮಿಸುವ ರೀತಿ. ಪ್ರಕೃತಿ ವರ್ಣನೆ "ತನ್ನ ಮನವನಿತ್ತರೆ ತನ್ನನ್ನೇ ಕೊಡುವ" ಎಂಬ ದಾಸರ ವಾಣಿಯಂತೆ ತನ್ನನು ಒಪ್ಪಿಸಿಕೊಂಡ ಗೊಲ್ಲತಿಗೆ ತನ್ನ ನಿಜರೂಪವನ್ನು ತೋರಿದ ಕರುಣೆ ಮುಂತಾದುವನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ, ಹಾಡಿನಲ್ಲಿ ಪ್ರಾಸಗಳು ಧಿಂಧಿಂ ದಿಮಿಕೆಂದು ಕುಣಿದುಕೊಂಡು ಬಂದಿವೆ ಉಡುಗೆ ತೊಡುಗೆಗಳಂತೂ ಕಣ್ಣನ್ನು ಕುಕ್ಕುತ್ತವೆ, ರಸಮಯವಾದ ಸನ್ನಿವೇಶಗಳನ್ನು ಲಕ್ಷ್ಮೀದೇವಮ್ಮನವರು ಬಹಳ ಭಾವುಕತೆಯಿಂದ ವರ್ಣಿಸಿದ್ದಾರೆ.

೮. **ಶ್ರೀಕೃಷ್ಣ ಬಾಲಲೀಲೆ:** ಶ್ರೀಮದ್ಭಾಗವತದಲ್ಲಿ ದಶಮಸ್ಕಂಧ ತುಂಬಾ ಮಹತ್ವವಾದ ಭಾಗ. ವಸುದೇವ-ದೇವಕಿಯರ ಮಗನಾಗಿ ಹುಟ್ಟಿದರೂ ಶ್ರೀಕೃಷ್ಣ ಬೆಳೆದದ್ದು ನಂದಗೋಕುಲದ ನಂದ ಗೋಪ ಯಶೋದೆಯರ ಮನೆಯಲ್ಲಿ. ಅಲ್ಲಿ ಶ್ರೀ ಕೃಷ್ಣನು ಮಗುವಾಗಿದ್ದಾಗಿನಿಂದ ಹಿಡಿದು ಬಾಲಕನಾಗಿ ಮಥುರೆಗೆ ಹೋಗಿ ಕಂಸನ ವಧೆ ಮಾಡುವವರೆಗೆ, ಅವನು ಕೊಂದ ದೈತ್ಯರೆಷ್ಟು ಮಂದಿ? ಪೂತನಿ, ಬಕ, ಶಕಟ, ಘೂಳಿ ಹೀಗೆ ಒಬ್ಬರೇ ಇಬ್ಬರೇ? ಗೋಪಿಯರ ಮನೆಗಳಲ್ಲಿ ಗೋಪಿಯರು ತೆಗೆದಿಟ್ಟ ಹಾಲು, ಮೊಸರು, ಬೆಣ್ಣೆಗಳನ್ನು ತಾನೂ ತಿಂದೂ ತನ್ನ ಸ್ನೇಹಿತರಿಗೂ ಕೊಡುವುದು. ಗೊಲ್ಲಬಾಲರೊಡನೆ ತಾನೂ ಗೊಲ್ಲನಾಗಿ ಹಸುಗಳನ್ನು ಮೇಯಿಸಲು ಹೋಗುವುದು, ಕಾಳ್ಗಿಚ್ಚನ್ನು ನುಂಗುವುದು, ಗೋಪಿಯರೊಡನೆ ರಾಸಕ್ರೀಡೆ, ಮನಮೋಹಿಸುವ ಕೊಳಲುವಾದನ, ತಾಯಿಗೆ ಬಾಯಲ್ಲಿ ಜಗತ್ತನ್ನೇ ತೋರುವುದು, ಕಾಳೀಯಮರ್ದನ, ಗೋವರ್ಧನ ಗಿರಿಯನ್ನೆತ್ತಿ ಗೋಪಾಲಕರ ರಕ್ಷಣೆ ಮಾಡುವುದು, ಹೀಗೆ ಒಂದಲ್ಲ ಎರಡಲ್ಲ ಹತ್ತಾರು ರೀತಿಯಲ್ಲಿ ತನ್ನ ಭಕ್ತರನ್ನು ಸಂರಕ್ಷಿಸುತ್ತಾ, ದುಷ್ಟರನ್ನು ಶಿಕ್ಷಿಸುತ್ತಾ ಗೋಪ-ಗೋಪಿಯರ ಕಣ್ಮಣಿಯಾಗಿ

ಬೆಳೆಯುತ್ತಾನೆ. ಗೋಪಿಯರ ಚಾಡಿಮಾತಿಗೆ ಬೇಸತ್ತು ಯಶೋದೆಯು ಅವನನ್ನು ಒರಳಿಗೆ ಕಟ್ಟಿ ಹಾಕಲು, ಆ ಒರಳನ್ನು ಎಳೆದು ಕೊಂಡು ಜೊತೆಯಾಗಿ ನಿಂತ ಅರ್ಜುನ ವೃಕ್ಷಗಳ ಮೇಲೆ ಅದನ್ನು ನುಗ್ಗಿಸಿದಾಗ ಆ ವೃಕ್ಷಗಳು ಮುರಿದುಬಿದ್ದು ಅದರಿಂದ ಶಾಪಗ್ರಸ್ತನಾದ ನಳಕೂಬರ – ಮಣಿಗ್ರೀವರು ಹೊರಬಂದು ಸ್ವಾಮಿಗೆ ನಮಸ್ಕರಿಸಿ ಹೊರಟು ಹೋಗುತ್ತಾರೆ.

ಹೀಗೆ ಅವನು ಎಲ್ಲ ಗೋಪ, ಗೋಪಿಯರಿಗೆ ಮುದವನ್ನೀಯುತ್ತಾ, ತಾನು ಪುಟ್ಟಬಾಲಕನಲ್ಲ. ಭೂಭಾರವನ್ನು ಹರಿಸಲು, ಭೂದೇವಿಯರ ಪ್ರಾರ್ಥನೆಗೆ ಓಗೊಟ್ಟು ಬಂದ ಪರಮಾತ್ಮನೇ ಎಂದು ಅವರಿಗೆ ಒಂದು ಕ್ಷಣ ತೋರಿಸಿ ಮತ್ತೆ ತನ್ನ ಮಾಯೆಯಿಂದ ತಾನೂ ಒಬ್ಬ ಗೊಲ್ಲಬಾಲಕನೆಂಬ ಭ್ರಮೆಯನ್ನುಂಟು ಮಾಡುತ್ತಾನೆ.

ಆಗ ಅಕ್ರೂರನು ಕಂಸನ ಅಪ್ಪಣೆಯಂತೆ ಗೋಕುಲಕ್ಕೆ ಬಂದು ಶ್ರೀಕೃಷ್ಣ ಬಲರಾಮರನ್ನು ರಥದಲ್ಲಿ ಕುಳ್ಳಿರಿಸಿ ಕೊಂಡು ಹೋಗುವಾಗ ಮಧ್ಯದಾರಿಯಲ್ಲಿ ಅವನಿಗೆ ಶ್ರೀ ಕೃಷ್ಣನ ವಿರಾಟ ರೂಪದ ದರ್ಶನವಾಗುತ್ತದೆ. ನಂತರ ಮಧುರೆಗೆ ಹೋಗಿ ಮಾವ ಕಂಸನನ್ನು ಕೊಂದು ತಾಯಿ–ತಂದೆಯರ ಸೆರೆಯನ್ನು ಬಿಡಿಸುತ್ತಾನೆ.

ಇಷ್ಟು ಕಥೆಯನ್ನು ಲಕ್ಷ್ಮೀದೇವಮ್ಮನವರು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**೯. ಜಲಕ್ರೀಡೆ ಹಾಡು** : ಇದು ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಬರುವ ಒಂದು ರಸಮಯ ಸನ್ನಿವೇಶ.

ಒಮ್ಮೆ ಗೋಕುಲದಲ್ಲಿ ನೂರೊಂದುಸಾವಿರ ಬಾಲೆಯರು ಶ್ರೀಕೃಷ್ಣನನ್ನು ಒಲಿಸುವ ಸಲುವಾಗಿ ಯಮುನಾನದಿಗೆ ಹೋಗಿ ಸ್ನಾನ ಮಾಡಲು ಇಚ್ಛಿಸುತ್ತಾರೆ. ಬಾಲೆಯರಾದ್ದರಿಂದ, ಕುತೂಹಲದಿಂದ ದಾರಿಯಲ್ಲಿ ಸಿಗುವ ಗಿಡ–ಮರ–ಹೂಗಳು–ಪಶುಪಕ್ಷಿಗಳು, ಸರೋವರ ಅದರಲ್ಲಿರುವ ಜಲಚರ ಇವುಗಳನ್ನೆಲ್ಲಾ ವರ್ಣಿಸುತ್ತಾ ಯಮುನೆಗೆ ಬಂದು ದಡದಲ್ಲಿ ತಮ್ಮ ಬಟ್ಟೆಗಳನ್ನೆಲ್ಲಾ ಬಿಚ್ಚಿಟ್ಟು ನಗ್ನರಾಗಿ ನೀರಾಟವಾಡತೊಡಗುತ್ತಾರೆ, ಶ್ರೀಕೃಷ್ಣನು ಅಲ್ಲಿಯೇ ಮರದ ಮೇಲೆ ಕುಳಿತು ಇವರ ಜಲಕ್ರೀಡೆಯನ್ನು ನೋಡುತ್ತಾ ಇವರಿಗೆ ಬುದ್ಧಿ ಕಲಿಸಬೇಕೆಂದು ಇವರು

ಜಲಕ್ರೀಡೆಯಲ್ಲಿ ಮೈ ಮರೆತಿರುವಾಗ ಮೆಲ್ಲನೆ ಬಂದು ಇವರ ಬಟ್ಟೆಗಳನ್ನೆಲ್ಲಾ ಎತ್ತಿಕೊಂಡು ಹೋಗಿ ಪುನಃ ಮರವನ್ನೇರುತ್ತಾನೆ.

ಜಲಕ್ರೀಡೆಯನ್ನು ಮುಗಿಸಿ ಬಂದ ಬಾಲೆಯರು ದಡದಲ್ಲಿ ತಮ್ಮ ವಸ್ತ್ರಗಳಿಲ್ಲದಿರುವುದನ್ನು ಕಂಡು ಬೆದರಿ ತಮ್ಮ ತಮ್ಮ ಸೀರೆಗಳನ್ನು ವರ್ಣಿಸಿಕೊಳ್ಳುತ್ತಾ ಬೆತ್ತಲೆಯಾಗಿ ಮನೆಗೆ ಹೇಗೆ ಹೋಗುವುದೆಂಧು ಯೋಚಿಸುತ್ತಾ, ಅತ್ತೆಯೇನೆನ್ನುತ್ತಾಳೋ ಎಂಬ ಭಯದಿಂದ ತತ್ತರಿಸಿ ನಡುಗುತ್ತಾರೆ. ಅವರಿಗೆ ಇದು ಶ್ರೀಕೃಷ್ಣನ ಕೆಲಸವೇ ಎಂದು ತಿಳಿದು ಬಗೆ ಬಗೆಯಿಂದ ಅವನನ್ನು ಸ್ತುತಿಸುತ್ತಾರೆ. ಅವನು "ನೀನು ಹೀಗೆ ಬೆತ್ತಲೆಯಾಗಿ ಸ್ನಾನಮಾಡಿದ್ದೇ ತಪ್ಪು, ಸ್ನಾನ ಮಾಡುವಾಗ ಮೈ ಮೇಲೆ ಬಟ್ಟೆಯಿರಬೇಕು. ಮನುಷ್ಯರಿಲ್ಲದಿದ್ದರೂ ಇತರ ಜಲಾಭಿಮಾನಿ ಹಾಗೂ ಇತರ ದೇವತೆಗಳಿರುತ್ತಾರೆ. ಅವರಿಗೆಲ್ಲಾ ಅಪಚಾರ ಮಾಡಿದಂತಾಗುತ್ತದೆ, ನೀವು ನಿಮ್ಮ ಕೈಗಳನ್ನೆತ್ತಿ ಬೇಡಿರಿ ಕೊಡುತ್ತೇನೆ ಎನ್ನುತ್ತಾನೆ.

ನಾಚಿಕೊಂಡ ಬಾಲೆಯರು ಕೆಲವರು ನೀರಿನಲ್ಲಿ ಕುಳಿತು, ಕೆಲವರು ನಿಂತು, ಕೆಲವರು ಹಿಂದು ಮುಂದಾಗಿನಿಂತು ಒಂದು ಕೈಯನ್ನು ಮೇಲೆತ್ತಿ ಬೇಡುತ್ತಾರೆ. ಆಗ ಕೃಷ್ಣನು "ಹೀಗೆ ಬೇಡಿದರೆ ನಾನು ಕೊಡುವುದಿಲ್ಲ, ಎಲ್ಲರೂ ಸರಿಯಾಗಿ ನಿಂತು ಎರಡೂ ಕೈಗಳನ್ನು ನೆತ್ತಿಯ ಮೇಲೆ ಜೋಡಿಸಿ ನಿಂತರೆ ಮಾತ್ರ ಸೀರೆ ದೊರಕುತ್ತದೆ ಎನ್ನುತ್ತಾನೆ. ಆಗ ಬೇರೆ ಉಪಾಯ ಕಾಣದ ಸ್ತ್ರೀಯರು ಅನನ್ಯ ಭಕ್ತಿಯಿಂದ ತಮ್ಮ ಎರಡೂ ಕೈಗಳನ್ನೆತ್ತಿ ಬೇಡಿಕೊಳ್ಳುತ್ತಾರೆ.

ಕರುಣಾಳುವಾದ ಕೃಷ್ಣನು ಅವರನ್ನು ಮನ್ನಿಸಿ ಮರದಿಂದಿಳಿದು ಅವರ ಸೀರೆಗಳನ್ನು ಕರುಣಿಸಿದ್ದೇ ಅಲ್ಲದೆ ಅವರ ಜೊತೆಗೆ ಒಬ್ಬೊಬ್ಬ ಬಾಲೆಗೆ ಒಬ್ಬೊಬ್ಬ ಕೃಷ್ಣನಾಗಿ ರಾಸಕ್ರೀಡೆಯಿಂದ ಅವರನ್ನು ರಮಿಸುತ್ತಾನೆ.

ಆಕಾಶದಲ್ಲಿ ನೆರೆದ ಸುರರು ಈ ಗೋಪಿಯರು ಇನ್ನೆಷ್ಟು ಪುಣ್ಯವಂತರೋ? ಸಾಕ್ಷತ ಶ್ರೀ ಹರಿಯ ಅಂಗಸಂಗವನ್ನು ಪಡೆದರು ಎಂದು ಕೊಂಡಾಡುತ್ತಾರೆ.

ಬಾಲೆಯರು ಶ್ರೀ ರಂಗನನ್ನು ಆಲಂಗಿಸಿ ಕೊಂಡು ಅವನಿಂದ ಬೀಳ್ಕೊಂಡು ತಂತಮ್ಮ ಮನೆಗಳಿಗೆ ಬಂದು ಶ್ರೀಹರಿಯ ಚರಿತೆಯನ್ನು ಕೊಂಡಾಡುತ್ತಾ ಆನಂದದಿಂದಿರುತ್ತಾರೆ.

ಲಕ್ಷ್ಮೀದೇವಮ್ಮನವರಿಗೆ ಪ್ರಕೃತಿವರ್ಣನೆಯೆಂದರೆ ಪರಮಾನಂದ. ಬಳ್ಳಾರಿಯ ತಮ್ಮ ಗಡಸು ಭಾಷೆಯಲ್ಲಿ ಅವರು ಪ್ರಕೃತಿಯನ್ನು ವರ್ಣಿಸುವುದೇ ಒಂದು ಚೆಂದ, ಜೊತೆಗೆ ಆ ಕಾಲದ ಒಡವೆ ವಸ್ತಗಳು, ಅಲಂಕಾರಗಳು, ಭಕ್ಷ್ಯ ಭೋಜ್ಯಗಳ ನೂರೆಂಟು ಬಗೆಗಳನ್ನು ಬಾಯಿಲ್ಲಿ ನೀರೂರುವಂತೆ ವರ್ಣಿಸುತ್ತಾರೆ.

ಕೃಷ್ಣಚರಿತದ ಎಲ್ಲಾ ಕಥಾನಕದಲ್ಲೂ ಪರಮಾತ್ಮನು ಪರಾಭಕ್ತಿಗೆ ಹೇಗೆ ಒಲಿದು ಭಕ್ತರನ್ನು ಉದ್ಧರಿಸುತ್ತಾನೆ, ಆನಂದಗೊಳಿಸುತ್ತಾನೆ ಎಂಬುದನ್ನು ಚೆನ್ನಾಗಿ ಚಿತ್ರಿಸುತ್ತಾರೆ, ನವವಿಧ ಭಕ್ತಿಗಳನ್ನು ಬಣ್ಣಿಸಿದರೂ ಕೂಡಾ ಅವರ ಆಧ್ಯತೆ ಅನನ್ಯ ಶರಣಾಗತಿ ಎಂಬುದನ್ನು ಕಾಣಬಹುದು, "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ" ಎಂಬ ಶ್ರೀ ಕೃಷ್ಣನ ಮಾತನ್ನು ತಮ್ಮ ಕೃತಿಗಳಲ್ಲಿ ಅಳವಡಿಸುತ್ತಾರೆ. ಹಾಗಾದರೆ ತಾನೇ, ಭಕ್ತಿಯು ಆ ಪರಾಕಾಷ್ಠತೆಗೆ ಹೋಗಿ ತನ್ನ ಸರ್ವಸ್ವವನ್ನೂ ಭಗವಂತನಿಗೆ ಅರ್ಪಿಸಿದರೇನೇ ಕರುಣಾಮಯಿಯಾದ ಆತ ಒಲಿಯುವುದು ಎಂಬುದನ್ನು ಸಾರಿಸಾರಿ ಹೇಳುತ್ತಾರೆ.

೧೦. **ಚೇಳಿನ ಹಾಡು:** ಶ್ರೀ ಕೃಷ್ಣನಿಗೆ ವಿವಾಹವಾದ ನಂತರ ನಡೆದ ಒಂದು ಘಟನೆ.

ಭೀಷ್ಮಕ ರಾಜನ ಮಗಳಾದ ರುಕ್ಮಿಣಿಗೆ ಶಿಶುಪಾಲನೊಡನೆ ವಿವಾಹ ಮಾಡಬೇಕೆಂಬ ಬಯಕೆ, ರುಕ್ಮಿಣಿಯ ಅಣ್ಣನದು. ಆದರೆ ರುಕ್ಮಿಣಿ ಕೃಷ್ಣನನ್ನು ಮನಸಾ ವರಿಸಿರುತ್ತಾಳೆ. ಈ ವಿಚಾರ ರುಕ್ಮಿಗೆ ತಿಳಿದಿದ್ದರೂ ಕೂಡಾ ತನ್ನ ತಂಗಿ ತಮಗೆ ಸರಿ ಸಮಾನರಾದ ರಾಜ ಕುಮಾರರನ್ನು ವರಿಸಬೇಕೇ ವಿನಹಾ ಆ ಗೊಲ್ಲನನ್ನು ವರಿಸಬಾರದು ಎಂಬುದು ರುಕ್ಮಿಯ ಅಪೇಕ್ಷೆ.

ಅದರಂತೆ ಶಿಶುಪಾಲನೊಡನೆ ರುಕ್ಮಿಣಿಯ ವಿವಾಹದ ಸಿದ್ಧತೆಗಳು ನಡೆದಿರುತ್ತವೆ. ರುಕ್ಮಿಣಿ ತಮ್ಮ ಕುಲ ಪುರೋಹಿತರೊಡನೆ ಶ್ರೀಕೃಷ್ಣನಿಗೆ ಪತ್ರ ಬರೆದು- ತಾನು ಮದುವೆಯ ದಿನ ಅಂಬಿಕೆಯ ಪೂಜೆಗಾಗಿ ಊರ ಹೊರಗಿನ ಮಂದಿರಕ್ಕೆ ಹೋಗುವುದಾಗಿಯೂ, ಶ್ರೀಕೃಷ್ಣನು ಹೇಗಾದರೂ ಮಾಡಿ ಬಂದು ತನ್ನನ್ನು ಕರೆದೊಯ್ಯ ಬೇಕೆಂತಲೂ ತಿಳಿಸಿ ಪತ್ರವನ್ನು ದ್ವಾರಕೆಗೆ ಕಳಿಸಿರುತ್ತಾಳೆ. ಅದರಿಂದ

ಕೃಷ್ಣನು ಬಂದು ಅವಳನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟು ಬಿಡುತ್ತಾನೆ. ಮಿಂಚಿನ ವೇಗದಲ್ಲಿ ನಡೆದ ಈ ಘಟನೆಯನ್ನು ಅರಿತ ರುಕ್ಮಿಯು ಕೃಷ್ಣನನ್ನು ಅಟ್ಟಿಸಿಕೊಂಡು ಹೋಗಿ ಸೋತು ಹಿಂದಿರುದಗುತ್ತಾನೆ.

ಕೃಷ್ಣ ರುಕ್ಮಿಣಿಯನ್ನು ದ್ವಾರಾವತಿಗೆ ಕರೆದು ಕೊಂಡು ಬಂದು ಅರಮನೆ ಯಲ್ಲಿರಿಸಿ ಅವಳ ಅಂದ ಚೆಂದಗಳಿಗೆ ಸೋತು ಅವಳನ್ನು ಶೃಂಗರಿಸಿ ತನ್ನ ಬಳಿ ಕರೆತನ್ನಿರೆಂದು ಸಖಿಯರಿಗೆ ಹೇಳುತ್ತಾನೆ. ಅದರಂತೆ ಸಖಿಯರು ಅವಳನ್ನು ಚೆನ್ನಾಗಿ ಸಿಂಗರಿಸಿ ಅವನ ಬಳಿ ಕರೆತಂದು ಬಿಡುತ್ತಾರೆ.

ನವ ವಧುವಾದ ರುಕ್ಮಿಣಿಗೆ ಕೃಷ್ಣನನ್ನು ಕಂಡರೆ ನಾಚಿಕೆ, ಸಂಕೋಚ, ಭಯ. ಅವನೇ ಅವಳ ಬಳಿ ಬಂದು ಅವಳನ್ನು ಅಪ್ಪಿಕೊಂಡು ಬಿಡುತ್ತಾನೆ. ಆಗ ಅವಳು ಹೆದರಿಕೆಯಿಂದ ಜಿಲ್ಲನೆ ಬೆವೆತು ನೀರಾಗಿ ಸೊರಗಿ ಹೋಗುತ್ತಾಳೆ. ಶ್ರೀ ಕೃಷ್ಣನಿಗೆ ಅಗಾಧ ಕೋಪ ಬರುತ್ತದೆ. ವಿಪ್ರನಕೈಲಿ ಪತ್ರಕೊಟ್ಟು ನನ್ನನ್ನು ಬರಮಾಡಿ ನನ್ನ ಜೊತೆಯಲ್ಲಿ ಎಷ್ಟು ಧೈರ್ಯವಾಗಿ ಬಂದೆ! ಈಗ ನಿನಗೆ ನನ್ನನ್ನು ನೋಡಿ ಭಯವೆ! ಸರಿ ನಾನಿನ್ನು ಹೊರಟೆ ಎಂದು ಸಿಟ್ಟಿನಿಂದ ಶಯನಗೃಹದ ಅಲಂಕಾರವನ್ನು ತೂರಾಡಿ, ಧ್ವಂಸ ಮಾಡಿ ಹೊರಟು ಹೋಗುತ್ತಾನೆ.

ಆಗ ರುಕ್ಮಿಣಿ ಭಯಪಟ್ಟು ಅವನು ಹೊರಟು ಹೋದನಲ್ಲಾ ಎಂದು ಅಲ್ಲಿನ ಹವಳದ ಕಂಭಕ್ಕೆ ಒರಗಿ ಕೊಂಡು ನಿಲ್ಲುತ್ತಾಳೆ. ಆಗ ಕೃಷ್ಣನು ಒಂದು ಚೇಳನ್ನು ಸೃಷ್ಟಿಸಿ ಅವಳ ಕೈಗೆ ಚುಚ್ಚಿಸುತ್ತಾನೆ. ರುಕ್ಮಿಣಿಯು ಕಿಟಾರನೆ ಕಿರುಚಿಕೊಳ್ಳುತ್ತಾಳೆ ಸಖಿಯರು ಬಂದು ಅವಳನ್ನು ಉಪಚರಿಸುತ್ತಾರೆ. ಆದರೆ ನೋವು ಛಳುಕು ಹೆಚ್ಚುತ್ತಾ ಬರುತ್ತದೆ. ಜೊತೆಗೆ ಕೃಷ್ಣನನ್ನು ತಾನು ಸಹಕರಿಸದೆ ಅವನು ಕೋಪಿಸಿಕೊಂಡು ಹೋದ ಪರಿತಾಪ.

ಆ ಹೊತ್ತಿಗೆ ನಾರದ ಮುನಿಯು ಬಂದು ನಡೆದ ಸಂಗತಿಯನ್ನು ವಿಚಾರಿಸಿ ರುಕ್ಮಿಣಿಯನ್ನು ಕುರಿತು ನೀನೀ ರೀತಿ ಮಾಡಿದ್ದು ತಪ್ಪು. ಕೃಷ್ಣನು ಕರೆದರೆ ಹೋಗದೆ ತಪ್ಪು ಮಾಡಿದೆ. ಇರಲಿ ನಾನೀಗಲೇ ಹೋಗಿ ಕೃಷ್ಣನನ್ನು ಕರೆತರುತ್ತೇನೆ ಎಂದು ಹೇಳಿ ಅಲ್ಲಿ ಹೋಗಿ ರುಕ್ಮಿಣಿಯ ಸ್ಥಿತಿಯನ್ನು ವಿವರಿಸಿ ಕೃಷ್ಣನನ್ನು ತರಾಟೆಗೆ

ತೆಗೆದುಕೊಳ್ಳುತ್ತಾನೆ. ಕೃಷ್ಣಾ ನಿನಗೇಕೆ ಇಂಥಾ ಕೆಟ್ಟ ಬುದ್ಧಿ ಬಂದಿತು ಅನ್ಯಾಯವಾಗಿ ಆ ಕೂಸು ರುಕ್ಮಿಣಿಯನ್ನು ಹೀಗೆ ಘಾಸಿಮಾಡುತ್ತೀಯೇ? ತಾಯಿ ತಂದೆಗಳನ್ನು ಬಿಟ್ಟು ಬಂದಿದ್ದಾಳೆ. ಇನ್ನು ಹತ್ತು ದಿನಗಳೂ ಆಗಿಲ್ಲ, ನಿನಗೆ ಕರುಣವೇ ಇಲ್ಲವೆ? ಎಂದಾಗ ಕೃಷ್ಣನು ಸಂತಾಪದಿಂದ ಕಣ್ಣುಗಳನ್ನು ಒತ್ತುತ್ತಾನೆ. ಆಗ ನಾರದನು "ಹದಿನಾರು ಸಾವಿರ ಹೆಂಡಿರಿರುವಾಗ ರುಕ್ಮಿಣಿಗೋಸ್ಕರ ಹೀಗೇಕೆ ಅಳುತ್ತೀಯೇ" ಎಂದಾಗ ಸ್ವಾಮಿಯು ಅವಳು ಎಲ್ಲ ಸ್ತ್ರೀಯರೊಳಗೆ ಶ್ರೇಷ್ಠಳಿದ್ದಾಳೆ. ನಾನು ಅವಳ ವಿರಹವನ್ನು ತಡಿಯಲಾರೆ. ಅವಳನ್ನು ತಂದು ತೋರಿಸು ಎನ್ನುತ್ತಾನೆ.

ಆಗ ನಾರದನು ರುಕ್ಮಿಣಿಯ ಮನಗೆ ಬಂದು ಅಮ್ಮಾ ಕೃಷ್ಣ ಪಟ್ಟದ ಮಂಚದ ಮೇಲೆ ಸತಿಯರೊಡನೆ ಚಕ್ಕಂದವಾಡುತ್ತಾ ಕುಳಿತಿದ್ದ. ಎಷ್ಟು ರೀತಿಯಲ್ಲಿ ಹೇಳಿದರೂ ನನ್ನ ಕಡೆನೋಡಲೇ ಇಲ್ಲ ಎನ್ನುತ್ತಾನೆ, ರುಕ್ಮಿಣಿ ಅವನ ನಂಬದೆ ನೀನು ಜಗಳಗಂಟ ಹೋಗು ಎನ್ನುತ್ತಾಳೆ.

ಆಗ ರುಕ್ಮಿಣಿಯ ಸಖಿಯರು ತಾವೇ ಹೋಗಿ ಕೃಷ್ಣನಿಗೆ ರುಕ್ಮಿಣಿಯ ಸಮಾಚಾರವನ್ನು ತಿಳಿಸಿ ಒಡನೇ ಬರಲು ಕೇಳಿಕೊಳ್ಳುತ್ತಾರೆ. ಆಗ ಕೃಷ್ಣನು [illegible]ನು ಮಾತನಾಡದೆ ಶಾಲು ಮುಸುಕಿಟ್ಟು ಮಲಗುತ್ತಾನೆ. ರುಕ್ಮಿಣಿಯು ಪರಿಪರಿಯಿಂದ ಅವನನ್ನು ಸಮಾಧಾನ ಪಡಿಸುತ್ತಾಳೆ. ಗಂಡ, ಹೆಂಡಿರು ಒಂದಾಗುತ್ತಾರೆ.

ಲಕ್ಷ್ಮೀದೇವಮ್ಮನವರು ಈ ಕಥಾನಕದಲ್ಲಿ ರಸಮಯವಾದ ಸನ್ನಿವೇಶಗಳನ್ನು ಹೆಣೆದಿದ್ದಾರೆ. ಕೃಷ್ಣ–ರುಕ್ಮಿಣಿಯರ ಅಲಂಕಾರ ವರ್ಣನೆ, ಶಯನಗೃಹದ ಅಲಂಕಾರ, ಕೃಷ್ಣನ ಕೋಪ, ರುಕ್ಮಿಣಿಯರ ಪ್ರಲಾಪ ನಾರದನ ಕಲಹ ಸ್ವಭಾವ ಮುಂತಾದುವುಗಳು ಅಚ್ಚು ಕಟ್ಟಾಗಿಮೂಡಿಬಂದಿವೆ.

೧೧. **ಸ್ವರ್ಣಗೌರಿ ಕಥೆ:** ಈ ಕಥೆಯನ್ನು ಶಿವನು ತನ್ನ ಮಗನಾದ ಸ್ಕಂದನಿಗೆ ತಿಳಿಸುತ್ತಾನೆ.

ಸರಸ್ವತೀ ನದೀತೀರದಲ್ಲಿ ವಿಮಲಾಖ್ಯವೆಂಬ ಪಟ್ಟಣವಿತ್ತು. ಅಲ್ಲೊಬ್ಬ ದೊರೆಯಿದ್ದ, ಅವನಿಗೆ ಇಬ್ಬರು ಪೆಂಡತಿಯರು. ದೊರೆಯು ಚಿಕ್ಕವಳನ್ನು ಬಿಟ್ಟು ದೊಡ್ಡವಳ ಬಳಿಯೆ ಇರುತ್ತಿದ್ದ.

ಒಂದು ಸಲ ಆ ಚಂದ್ರಪ್ರಭ ರಾಜನು ಬೇಟೆಗೆ ಬಂದಾಗ ಅಲ್ಲಿ ಅನೇಕ ಮಂದಿ ಕುಳಿತು ಸ್ವರ್ಣಗೌರಿವ್ರತವನ್ನು ಮಾಡುತ್ತಿರುವುದನ್ನು ಕಂಡು ಇದು ಯಾವ ವ್ರತವೆಂಬುದಾಗಿ ಕೇಳಿ ತಾನೂ ನೇಮದಿಂದ ಮಾಡುತ್ತೇನೆಂದು ಹೇಳಿ ಅವರು ಕೊಟ್ಟ ದಾರವನ್ನು ತೆಗೆದುಕೊಂಡು ತನ್ನ ಕೈಗೆ ಕಟ್ಟಿಕೊಂಡು ಮನೆಗೆ ಬಂದನು.

ಹಿರಿಯ ಹೆಂಡತಿಯು ಅವನ ಕೈಲಿದ್ದ ದಾರವನ್ನು ಕಂಡು ಸಿಟ್ಟಾಗಿ ನಿಮಗೆ ಇದನ್ನು ಕಟ್ಟಿದವರಾರೆಂದು ಕೇಳಿ ಅದನ್ನು ಹರಿದು ಗಿಡದ ಮೇಲೆ ಬಿಸಾಡಿದಳು. ದಾರದ ಪ್ರಭಾವದಿಂದ ಒಣಗಿದ ಗಿಡ ಚಿಗುರೊಡೆಯಿತು. ಚಿಕ್ಕ ಹೆಂಡತಿಯು ಆ ದಾರವನ್ನು ತೆಗೆದು ಕೊಂಡು ಭಕ್ತಿಯಿಂದ ಸ್ವರ್ಣಗೌರಿಯನ್ನು ಪೂಜಿಸಿದಳು. ರಾಜನಿಗೆ ಹಿರಿಯ ಹೆಂಡತಿಯ ಮೇಲೆ ಬಹಳ ಸಿಟ್ಟು ಬಂದು ಹೆಂಡತಿಯನ್ನು ಚೆನ್ನಾಗಿ ಬೈದು ಅವಳನ್ನು ತ್ಯಜಿಸಿ ಚಿಕ್ಕ ಹೆಂಡತಿಯ ಜೊತೆಯಲ್ಲಿದ್ದನು.

ಇತ್ತ ಪಟ್ಟದರಸಿಗೆ ಬುದ್ಧಿ ಭ್ರಮಣವಾಗಿ ಅವಳು ಕಾಡುಮೇಡುಗಳನ್ನು ಅಲೆಯುತ್ತಾ, ಕ್ರೂರ ಮೃಗಗಳಿಂದ ತಪ್ಪಿಸಿ ಕೊಳ್ಳುತ್ತಾ, ಹಸಿವು ತೃಷೆಯಿಂದ ಬಳಲುತ್ತಾ ಅಲ್ಲೊಬ್ಬ ನಾಗಕನ್ನಿಕೆಯನ್ನು ಕಂಡು ಅವಳಿಂದ ತಾನು ಪತಿಯು ಕೊಟ್ಟ ದಾರಕ್ಕೆ ಅವಮಾನ ಮಾಡಿದುದರಿಂದ ಈ ಗತಿಯಾಯಿತೆಂದು ತಿಳಿದು ಗೌರಿಯನ್ನು ಕುರಿತು, ತಪಸ್ಸು ಮಾಡ ತೊಡಗಿದಳು. ಸ್ವರ್ಣಗೌರಿಯು ಅವಳ ಮೇಲೆ ಕೃಪೆಮಾಡಿ ಅವಳಿಗೆ ದರ್ಶನ ಕೊಟ್ಟು ಅಷ್ಟ ಸೌಭಾಗ್ಯಗಳನ್ನು ಕೊಟ್ಟು ಅಂತರ್ಧಾನಳಾದಳು–ನಂತರ ರಾಣಿಯು ಪತಿಯ ಬಳಿ ಬಂದು ಅಕ್ಕ ತಂಗಿಯರು ಕೂಡಿ ಶ್ರೇಷ್ಠವಾದ ಈ ವ್ರತ ಮಾಡಿ ದಾರ ಕಟ್ಟಿ ಕೊಂಡು ಅಕ್ಷಯ ಫಲವನ್ನು ಪಡೆದರು.

ಹೀಗೆ ಈ ಸ್ವರ್ಣಗೌರಿಯನ್ನು ಯಾರು ಪೂಜಿಸುತ್ತಾರೋ ಅವರ ಮನೆಯಲ್ಲಿ ಆಕೆ ಸ್ಥಿರವಾಗಿ ನಿಂತು ಸೌಭಾಗ್ಯಗಳನ್ನು ಕರುಣಿಸುತ್ತಾಳೆ.

(ಡಾ॥ ರುಕ್ಮಿಣಿ ಗಿರಿಮಾಜಿ)

# ೪. ಸರಸಬಾಯಿಯವರು

## ಜೀವನ ವಿಚಾರ

ಗೌಡಗೆರೆ ತಾಲೂಕಿನ ಬಾಪು ಹನುಮಂತರಾಯರ ಪತ್ನಿ ಶ್ರೀಮತಿ ಕಾವೇರಿ ಬಾಯಿಯವರ ಗರ್ಭಾಂಬುಧಿಯಲ್ಲಿ ೧೮೮೨ರಲ್ಲಿ ಜನನ. ಇವರ ಕೂಡ ಹುಟ್ಟಿದವರು ಆರು ಜನ ಅಕ್ಕತಂಗಿಯರು, ಮೂರು ಜನ ಅಣ್ಣತಮ್ಮಂದಿರು.

ಚಿತ್ರದುರ್ಗದಲ್ಲಿ ವಾಸವಾಗಿದ್ದ ಸುಪ್ರಸಿದ್ಧ ಕ್ರಿಮಿನಲ್ ನ್ಯಾಯಾಧೀಶರಾಗಿದ್ದ ಎಂ. ಬಿ. ಕೃಷ್ಣರಾಯರ ಜೊತೆ ವಿವಾಹವಾಗಿತ್ತು. ಸರಸಾಬಾಯಿಯವರು ಅವರಿಗೆ ಮೂರನೇ ಪತ್ನಿ. ಇವರಿಗೆ ಎಂಟು ಜನ ಮಕ್ಕಳು. ಅವರಲ್ಲಿ ಐದುಮಂದಿ ಗಂಡು ಮಕ್ಕಳು. ೧೯೩೪ರಲ್ಲಿ ಪತಿ ನಿಧನರಾದರು. ಪತಿ ವಿಯೋಗದಿಂದ ದುಃಖಿತಪ್ತರಾಗಿ ಹೆಚ್ಚು ಆಧ್ಯಾತ್ಮದ ಕಡೆ ಮನಸ್ಸು ತಿರುಗಿತು. ದೇವರಾಯನ-ದುರ್ಗದಲ್ಲಿ ವಾಸವಾಗಿದ್ದ ತಂದೆ ಮುದ್ದು ಮೋಹನದಾಸರಿಂದ ಅಂಕಿತವನ್ನು ಪಡೆದರು. ಅನೇಕ ಕೀರ್ತನೆಗಳನ್ನು ರಚಿಸಿದರು. ತುಂಬು ಆದರ್ಶ ಜೀವನ ನಡೆಸಿದರು. ಇವರು ನೂರು ವರುಷದ ಮೇಲೆ ಬದುಕಿದ್ದರು. ಐದು ತಲೆಮಾರು ಕಂಡವರು. ಮೊಮ್ಮಕ್ಕಳು, ಮರಿಮಕ್ಕಳೂ ಉಂಟು. ಸುಮಾರು ನಲವತ್ತು ಬಾರಿ ಭಾಗವತ ಓದಿದ್ದರು. ಮಂಗಳ ಮಾಡಿದ್ದರು. ೧೯೮೪ರಲ್ಲಿ ನಿಧನರಾದರು. ಇವರು ಗುರುಗಳಿಂದಲೇ ಅಂಕಿತವನ್ನು ಪಡೆದಿದ್ದ, ಮೈಸೂರಿನ ಗುರುಗೋವಿಂದ ದಾಸರ ಗೃಹದಲ್ಲಿ ಪಾಂಡುರಂಗನ ದೇವಸ್ಥಾನ ಸನ್ನಿಧಿಯಲ್ಲಿ. ಒಮ್ಮೆ ಸಾಗರ ಕಟ್ಟೆ ಸ್ವಾಮಿಗಳು ದೇವರ ಪೂಜೆ ಮಾಡುತ್ತಿದ್ದಾಗ ಇವರಿಗೆ ಸ್ವಾಮಿಯ ದರ್ಶನವಾಗಿ ಅಲ್ಲೆ 'ಹರಿಕುಣಿದಾನಮ್ಮ ಹರಿ ಕುಣಿದಾ' ಎಂಬ ಕೀರ್ತನೆ ರಚನೆಯಾಗಿದ್ದು. (ಇವರ ಯಜಮಾನ ರಾಧಾಕೃಷ್ಣರಾಯರೂ ಕೀರ್ತನೆಗಳನ್ನು ಬರೆದಿದ್ದು ಅವರ ಅಂಕಿತ 'ಶೇಷಾದ್ರಿ ವಿಠಲ'). ಇವರ ಕೀರ್ತನೆಗಳು ಲಭ್ಯವಿದ್ದಷ್ಟು ಕೊಡಲಾಗಿದೆ. ಕೀರ್ತನೆಗಳನ್ನು ಒದಗಿಸಿಕೊಟ್ಟ ಅವರ ಮಕ್ಕಳು ಮತ್ತು ಸೊಸೆಯಂದಿರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

### ಕೀರ್ತನೆಗಳು

ಇವರ ಕೀರ್ತನೆಗಳು ಬಹಳ ಸರಳವಾದ ಶೈಲಿಯಲ್ಲಿದೆ. ಅಂಕಿತ "ರಮಾವಲ್ಲಭ ವಿಠಲ". ಇವರು ಇನ್ನು ಅನೇಕ ಕೀರ್ತನೆಗಳನ್ನು ರಚಿಸಿರಬಹುದೆಂದು ತಿಳಿದು ಬಂದಿದೆ. ಆದರೆ ನಮಗೆ ಲಭ್ಯವಿದ್ದಷ್ಟು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ. ಓದು ಬರಹಕ್ಕೆ ಅಷ್ಟಾಗಿ ಪ್ರೋತ್ಸಾಹವಿಲ್ಲದಿದ್ದ ಕಾಲದಲ್ಲಿ ಮನೆಗೆಲಸದಲ್ಲಿ, ಸಂಸಾರದಲ್ಲಿ ತೊಳಲಾಟದಲ್ಲಿದ್ದರೂ ಗುರುಮುಖೇನ ಅಂಕಿತವಾದ ಮೇಲೆ ಮನಸ್ಸು ಪರಿಪಕ್ವವಾದಂತಾಗಿ ಭಗವಂತನ ಕಡೆ ಹೆಚ್ಚು ಒಲವು ಮೂಡಿದ ಕಾರಣ ದೇವರ ನಾಮಗಳನ್ನು, ಭಕ್ತಿಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟು ರಚಿಸಿದ್ದಾರೆ. ಅಂಥ ಗಹನವಾದ ವಿಷಯ ಕಂಡು ಬಂದಿಲ್ಲ.

ಗಣಪತಿಯ ಮೇಲಿನ ಹಾಗೂ ಹರಿಪರವಾದ ಮತ್ತು ಲಕ್ಷ್ಮೀ ಪರವಾಗಿರುವ ಎಲ್ಲಾ ದೇವರ ನಾಮಗಳು ಅತಿ ಸರಳ. ಇವರ ಸಂಪರ್ಕ ನಮಗೂ ಇದ್ದುದರಿಂದ ಇವರ ಬರೆಹಕ್ಕಿಂತ ಆಧ್ಯಾತ್ಮ ಚಿಂತನೆಗೇ ಹೆಚ್ಚು ಒತ್ತು ಕೊಡುತ್ತಿದ್ದುದರಿಂದ ಕೃತಿ ರಚನೆ ಕಮ್ಮಿ, ಭಕ್ತಿಗೇ ಪ್ರಾಧಾನ್ಯತೆ. ಶ್ರೀ ಉರುಗಾದ್ರಿವಾಸ ವಿಠಲ ಹಾಗೂ ಅನೇಕ ಮುಖ್ಯ ದಾಸಕೂಟಸ್ಥರ ಸಂಪರ್ಕ ಇವರಿಗೆ ಇತ್ತು. ಚಿತ್ರದುರ್ಗದಲ್ಲೇ ಬಹಳ ಕಾಲ ಇದ್ದುದರಿಂದ ಹರಿನಾಮ ಸಂಕೀರ್ತನೆ ಹಾಗೂ ಭಜನೆ ನಡೆಸುತ್ತಿದ್ದರು.

(– ಎಚ್.ಎಸ್. ಪದ್ಮಾಮೂರ್ತಿ)

## ೫. ನಂಜನಗೂಡು ತಿರುಮಲಾಂಬಾ ಅವರು

### ಜೀವನ ವಿಚಾರ

ನಂಜನಗೂಡು ನಿವಾಸಿಗಳಾಗಿದ್ದ ಶ್ರೀಮತಿ ತಿರುಮಲಾಂಬ ಅವರು ಕನ್ನಡ ಲೇಖಕಿ, ಪತ್ರಕರ್ತೆ, ಸಂಪಾದಕಿ, ಪ್ರಕಾಶಕಿ, ಸಮಾಜಸೇವಕಿಯಾಗಿ (೧೮೮೭–೧೯೮೨) ಬದುಕಿ ಬಾಳಿದವರು. ಇವರ ತಂದೆ ಶ್ರೀವೈಷ್ಣವ ಮತಸ್ಥರಾದ ವೆಂಕಟಕೃಷ್ಣ ಅಯ್ಯಂಗಾರ್. ತಾಯಿ ಅಲಮೇಲಮ್ಮನವರು. ಇವರಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗಿದ್ದು ಇವರ ಹದಿನಾಲ್ಕನೆಯ ವಯಸ್ಸಿನಲ್ಲಿ ಇವರ ಪತಿಯು

ದೈವಾಧೀನರಾದರು. ಈಕೆ ಕೇವಲ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಪಡೆದಿದ್ದರು. ತಂದೆಯವರು ಈಕೆಗೆ ಒಳ್ಳೆಯ ಶಿಕ್ಷಣವನ್ನು ಕೊಟ್ಟು ಗ್ರಂಥಾವಲೋಕನದಲ್ಲಿ ಆಸಕ್ತಿಯನ್ನು ಹುಟ್ಟಿಸಿ, ಈಕೆಯು ಒಳ್ಳೆಯ ಲೇಖಕಿಯಾಗುವಂತೆ ತರಬೇತಿಯನ್ನು ಕೊಟ್ಟರು. ಇವರು ಸುಮಾರು ಹತ್ತು ಕೃತಿಗಳನ್ನು ರಚಿಸಿದ್ದಾರೆ. ಅವರಲ್ಲಿ ನಾಲ್ಕು ಕಾದಂಬರಿಗಳು, ಎರಡು ನಾಟಕಗಳು, ಒಂದು ಪ್ರಬಂಧ ಮತ್ತು ಮೂರು ಕಾವ್ಯ ಕೃತಿಗಳು

ಈಕೆ ಶೇಷಗಿರೀಶ, ಶೇಷಶೈಲಾವಾಸ, ಶೇಷಗಿರಿವರ, ಶೇಷಾದ್ರಿನಾಥ, ಶೇಷಶೈಲಧಾಮ, ಶೇಷಾಚಲನಿಲಯ, ಶೇಷಶಯನ ಅಂಕಿತದಿಂದ ರಚಿಸಿರುವ 'ಭಕ್ತಿಗೀತಾವಳಿ' ಎಂಬ ಕಾವ್ಯ, ಒಂದು ನೊಂದಿರುವ ಹೆಣ್ಣು ತನ್ನ ಸುಧೀರ್ಘ ಜೀವನವನ್ನೆಲ್ಲಾ ಪರಮಾತ್ಮನ ದಿವ್ಯ ರಸಾನುಭವಕ್ಕಾಗಿಯೇ ಮೀಸಲಿರಿಸಿರುವ ಸುಂದರವಾದ ಕೀರ್ತನೆಗಳನ್ನು ಒಳಗೊಂಡಿದೆ. ಇದರಲ್ಲಿ ಈಕೆ ಪರಮಾತ್ಮನ ಅನೇಕ ಗುಣಗಳನ್ನು ಸುಂದರವಾಗಿ ವರ್ಣಿಸಿದ್ದು ಪ್ರತಿಯೊಂದರಲ್ಲೂ ತನ್ನನ್ನು ಸಲಹುವಂತೆ ಕೇಳಿಕೊಂಡಿದ್ದಾಳೆ.

ಇವುಗಳಲ್ಲಿ ಭಗವಂತನ ವರ್ಣನೆ ಇರುವಂತೆ ನಿಂದಾಸ್ತುತಿಗಳೂ ಇವೆ. 'ಕೈಯ ತೋರೋ ರಂಗ ಕೈಯ ತೋರೋ' ಎಂಬ ಕೀರ್ತನೆಯಲ್ಲಿ ಕೇವಲ ಪರಮಾತ್ಮನ ಕೈಯನ್ನು ಹೊಗಳುವುದರೊಂದಿಗೆ ಅವನು ಮೋಹಿನಿಯಾಗಿ ಸುರರಿಗೆ ಸುಧೆಯನ್ನು ಕೊಟ್ಟ ಕೈ, ಭಸ್ಮಾಸುರನನ್ನು ಭಸ್ಮೀ ಭೂತನನ್ನಾಗಿ ಮಾಡಿದ ಕೈ, ಧ್ರುವನನ್ನು ಸಂತೈಸಿದ ಕೈ, ಪ್ರಹ್ಲಾದನಿಗಾಗಿ ಕಂಬದಿಂದ ಬಂದು ಹಿರಣ್ಯಕಶಿಪುವಿನ ಕರುಳನ್ನು ಕಿತ್ತೆಸೆದ ಕೈ, ಗಜರಾಜನನ್ನು ನಕ್ರನ ಬಾಯಿಂದ ಚಕ್ರದಿ ಸೀಳಿ ಉದ್ಧರಿಸಿದ ಕೈ, ರುಕ್ಮಿಣಿಯನ್ನು ಪಿಡಿದ ಕೈ, ಅರ್ಜುನನಿಗೆ ಸಾರಥಿಯಾಗಿ ತೇರನ್ನು ನಡೆಸಿದ ಕೈ, ಮತ್ತು ಇಂದಿಗೂ ವರಶೇಷಗಿರಿಯಲ್ಲಿ ಸ್ಥಿರವಾಗಿ ತನ್ನ ಶರಣರನ್ನು ಕರೆದು ಆದರಿಸಿ ವರಗಳನ್ನು ಕೊಡುತ್ತಿರುವ ಸುಂದರವಾದ ಕೈಯನ್ನು ತೋರಿಸು ಎನ್ನುವಲ್ಲಿ ಅನೇಕ ಪುರಾಣ ಪ್ರಸಂಗಗಳ ಪ್ರಸ್ತಾಪವಿದ್ದು ಓದುಗರ ಮನಸ್ಸನ್ನು ಸೆರೆಹಿಡಿಯುತ್ತದೆ. ಈ ಕೀರ್ತನೆ ಹೆಳವನಕಟ್ಟೆ ಗಿರಿಯಮ್ಮನ "ಹೊನ್ನು ತಾ ಗುಬ್ಬಿ ಹೊನ್ನುತಾ ನಮ್ಮ ಚಿನುಮಯ ಮೂರುತಿ ರಂಗನ ಕೈಗೆ" ಎನ್ನುವ ಕೀರ್ತನೆಯನ್ನು ನೆನಪಿಗೆ ತರುತ್ತದೆ.

ಇದೇ ರೀತಿ ವಾಗ್ದೇವತಾ ಸ್ತುತಿ, ಮತ್ತು ಮಹಾಲಕ್ಷ್ಮೀ ಸ್ತುತಿಗಳಲ್ಲಿಯೂ ಇವರ ಹೃದಯ ತುಂಬಿದ ಭಕ್ತಿಭಾವ ಮನಮೋಹಕವಾಗಿದೆ.

ತಿರುಮಲಾಂಬರವರು ತಾವು ಕೇವಲ ಪ್ರಾಥಮಿಕ ಶಿಕ್ಷಣವನ್ನು ಪಡೆದಿರುವುದರಿಂದ ವ್ಯಾಕರಣ, ಛಂದಸ್ಸು, ಅಲಂಕಾರ, ಮೊದಲಾದ ಕವಿತಾ ನಿಯಮಗಳನ್ನಾಗಲಿ, ಭಾಷಾಪಾಂಡಿತ್ಯವನ್ನಾಗಲಿ, ಶಬ್ದ ಸಂಪತ್ತಿಯನ್ನಾಗಲಿ ಪಡೆಯದ ಕೇವಲ ಬಾಲಿಶ ವಿದ್ಯಾರ್ಥಿನಿಯೆಂದು ಹೇಳಿಕೊಂಡಿರುವರಾದರೂ ಇವರ ಕೃತಿಗಳನ್ನು ಓದುತ್ತಾ ಹೋದಂತೆ ಅವರ ಸಂಸ್ಕಾರ, ಸಂಸ್ಕೃತಿ, ದೈವನಿಷ್ಠೆ, ಭಗವತ್ಸಮರ್ಪಣಾ ಭಾವ ಎಲ್ಲವೂ ವೇದ್ಯವಾಗುತ್ತವೆ. ಸಂಸ್ಕೃತ ಮತ್ತು ಕನ್ನಡವನ್ನು ಗುರು ಮುಖೇನ ಚೆನ್ನಾಗಿ ಅಭ್ಯಾಸ ಮಾಡಿ, ಅರಗಿಸಿಕೊಂಡು ಬರೆದಿರುವುದರಿಂದ ಸುಂದರವಾದ ಶಬ್ದಗಳು ತಾವಾಗಿಯೇ ಹೊಂದಿಕೊಂಡು ಕೃತಿಗಳನ್ನು ಅಂದವಾಗಿಸಿವೆ.

ಭಾವಗಳಿಗೆ ಅಡ್ಡಿ ಬಾರದಂತೆ ನಿರರ್ಗಳವಾಗಿ ಹರಿಯುವ ಕಾವ್ಯಧಾರೆ ಮನಕ್ಕೆ ಮುದವೀಯುತ್ತದೆ. ಭಗವಂತನನ್ನು ಎಷ್ಟು ರೀತಿಯಿಂದ ಹೊಗಳಿದರೂ ಸಾಲದು. ಆತನ ವಾತ್ಸಲ್ಯ, ಕರುಣೆ, ದಯೆ, ಜಗನ್ಮೋಹಕ ಸುಂದರರೂಪ, ತೊಟ್ಟ ಆಭರಣಗಳ ಚೆಲುವು ಇವೆಲ್ಲವೂ ಕವಿತೆಗಳಲ್ಲಿ ಮೇಳೈಸಿ ಕವಿತೆಯು ಸರ್ವಾಂಗ ಸುಂದರವಾಗಿದೆ.

ತಿರುಮಲಾಂಬರವರು ಆಗಿನ ಕಾಲದಲ್ಲಿಯೇ ಪತ್ರಕರ್ತೆ, ಸಂಪಾದಕಿ, ಪ್ರಕಾಶಕಿ ಮತ್ತು ಸಮಾಜಸೇವಕಿಯಾಗಿ 'ಕರ್ನಾಟಕ ನಂದಿನಿ' ಹಾಗೂ 'ಸನ್ಮಾರ್ಗದರ್ಶಿನಿ' ಎಂಬ ಎರಡು ಪತ್ರಿಕೆಗಳನ್ನು ನಡೆಸುತ್ತಿದ್ದರು ಮತ್ತು 'ಸನ್ಮಾರ್ಗ ಗ್ರಂಥಮಾಲೆ' ಯ ಸ್ಥಾಪಕಿಯರಾಗಿದ್ದರು. ಅಲ್ಲದೆ ಅವರದೇ ಆದ 'ಸತಿ ಹಿತೈಷಿಣಿ' 'ನಂದಿನಿ' ಗ್ರಂಥಮಾಲೆಯಲ್ಲಿ ಎಲ್ಲ ಕೃತಿ ಪ್ರಕಟಗೊಳ್ಳುತ್ತಿದ್ದವು.

ಅವರಿಗೆ ೧೯೧೬ರಿಂದ ಅನೇಕ ದಶಕಗಳವರೆಗೆ ಮೈಸೂರು, ಬೊಂಬಾಯಿ, ಮದರಾಸು ಸರ್ಕಾರದ ವಿದ್ಯಾ ಇಲಾಖೆಯಿಂದ ಅನೇಕ ನಗದು ಮತ್ತು ಇತರ ಬಹುಮಾನಗಳು ಬಂದವು. ೧೯೮೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ, ೧೯೮೧ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ದೊರೆತವು.

ಶ್ರೀಮತಿ ತಿರುಮಲಾಂಬರವರು ೯೫ ವರ್ಷಗಳ ಸುದೀರ್ಘ ಜೀವನವನ್ನು ನಡೆಸಿ ೩.೧.೮.೧೯೮೨ರಲ್ಲಿ ದೈವಾಧೀನರಾದರು. ಈಕೆಯನ್ನು "ಈ ಶತಮಾನದ ಪ್ರಥಮ ಕನ್ನಡ ಲೇಖಕಿ"ಯೆಂದು 'ಕರ್ನಾಟಕ ಮಹಿಳೆಯರು' ಎಂಬ ಲೇಖಕಿಯರ ಪರಿಚಯದ ಪುಸ್ತಕದಲ್ಲಿ ದಾಖಲಿಸಲಾಗಿದೆ.

ಇದೇ ಲೇಖಕಿಯ 'ಭದ್ರಗೀತಾವಲಿ' ಎಂಬ ವಧು-ವರರ ಪರಸ್ಪರ ಉರುಟಣೆಯ ಸೀಸಪದ್ಯಗಳ ನಡುನಡುವೆ ಬರುವ ಸಂಪ್ರದಾಯದ ಕೀರ್ತನೆಗಳನ್ನೂ ಈ ಸಂಪುಟದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಹರಿಯ 'ನಿಂದಾಸ್ತುತಿ' ಭದ್ರಗೀತಾವಲಿಯ ಉದ್ದೇಶ. ಮದುವೆಯ ಸಂದರ್ಭದಲ್ಲಿ ವಧು-ವರರು ಸಾಕ್ಷಾತ್ ಲಕ್ಷ್ಮೀನಾರಾಯಣರ ಸ್ವರೂಪ-ಎಂಬ ನಂಬಿಕೆ ಇರುವುದರಿಂದ ಲಕ್ಷ್ಮೀನಾರಾಯಣರೇ ಪರಸ್ಪರ ಉರುಟಣೆ ಮಾಡಿದಂತಿರುವ ಈ ಹಾಡುಗಳನ್ನು ಮದುವೆಯಲ್ಲಿ ವಧೂ-ವರರೇ ಹಾಡುವುದು ರೂಢಿ. ಅವರು ಹಾಡಲು ಬಾರದವರಾಗಿದ್ದಲ್ಲಿ ಅವರ ಪರವಾಗಿ ಬೇರೆಯವರು ಹಾಡುತ್ತಾರೆ. ಇವರು ಕಲಾಪಗಳನ್ನು ಮಾಡುತ್ತಾರೆ. ಸಾಮಾನ್ಯವಾಗಿ ಉರುಟಣೆ ಮಾಡುವುದಕ್ಕೆ ವಿಭಿನ್ನ ಪಂಗಡಗಳಲ್ಲಿ ವಿಭಿನ್ನ ಕ್ರಮಗಳಿರುತ್ತವೆ. ಆ ದೃಷ್ಟಿಯಿಂದ ಭದ್ರಗೀತಾವಲಿಯಲ್ಲಿ ಬರುವ ಕೀರ್ತನೆಗಳನ್ನು ಅದೇ ಕ್ರಮದಲ್ಲಿ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ತಿರುಮಲಾಂಬರವರು ಮಾಧ್ವಸಂಪ್ರದಾಯಸ್ಥರಲ್ಲವಾದುದರಿಂದ ದೇವತಾ-ಸ್ತುತಿಗಳನ್ನು ಪಟ್ಟಿ ಮಾಡುವಲ್ಲಿ ತಾರತಮ್ಯ ಕ್ರಮವನ್ನನುಸರಿಸಿಲ್ಲ. ಆಯಾ ದೇವತೆಯ ಸ್ತುತಿಗಳನ್ನು ಒಂದೊಂದು ವಿಭಾಗವಾಗಿ ಮಾತ್ರ ಮಾಡಿದೆ.

'ಭಕ್ತಿಗೀತಾವಲಿಯ' ೧೨೮ ಕೀರ್ತನೆಗಳು ಮತ್ತು 'ಭದ್ರಗೀತಾವಲಿ'ಯ ೭೧ ಕೀರ್ತನೆಗಳು ಒಟ್ಟು ಒಂದುನೂರತೊಂಬತ್ತೊಂಬತ್ತು ಕೀರ್ತನೆಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

## ೬. ಬಳ್ಳಾರಿ ರಾಧಾಬಾಯಿಯವರು

### ಜೀವನ ವಿಚಾರ

ಶ್ರೀಮತಿ ರಾಧಾಬಾಯಿಯವರು ಸನ್ ೧೮೮೯ರಲ್ಲಿ ಮದನಪಲ್ಲಿಯಲ್ಲಿ ಜನಿಸಿದರು. ತಂದೆ ಅನಂತರಾಯರು. ತಾಯಿ ಇಂದಿರಾಬಾಯಿ. ಇವರದು ಬಂಖಾಪುರದ ಮನೆತನ. ನವರತ್ನ ರಾಮರಾಯರು ಇವರ ಬಂಧು.

ಶ್ರೀಮತಿ ರಾಧಾಬಾಯಿಯವರಿಗೆ ಅವರ ಹದಿನೈದನೇ ವರ್ಷದಲ್ಲಿ ಶ್ರೀ ಶ್ರೀನಿವಾಸರಾಯರೊಡನೆ ವಿವಾಹವಾಯಿತು. ಶ್ರೀನಿವಾಸರಾಯರು ಹರಪನ ಹಳ್ಳಿ ಕಡೆಯವರು. ಅವರು ಕಡಪಾದಲ್ಲಿ ಓವರ್ಸಿಯರಾಗಿದ್ದರು. ಈ ದಂಪತಿಗಳಿಗೆ ಆರುಜನ ಗಂಡು ಮಕ್ಕಳೂ, ಮೂರು ಜನ ಹೆಣ್ಣು ಮಕ್ಕಳೂ ಇದ್ದರು.

ಶ್ರೀಮತಿ ರಾಧಾಬಾಯಿಯವರು ಸಂಗೀತವನ್ನೂ, ಕನ್ನಡ ಮತ್ತು ಸಂಸ್ಕೃತವನ್ನೂ ಚೆನ್ನಾಗಿ ಮನೆಯಲ್ಲೇ ಅಭ್ಯಾಸ ಮಾಡಿದ್ದರು. ಇವರು ಬಹಳ ಮೇಧಾವಿಗಳಾಗಿದ್ದರು.

ಕೈ ಕೆಲಸಗಳನ್ನು ಮಾಡುವುದರಲ್ಲಿ ಬಹಳ ನಿಪುಣರಾಗಿದ್ದರು. ಮಕ್ಕಳು ಅತ್ತರೆ ಅವರನ್ನು ಸಮಾಧಾನ ಮಾಡಲು ಆಗಿಂದಾಗಲೇ ಅವರು ಕೇಳಿದ ಬೊಂಬೆಗಳನ್ನೂ, ಮೃಗ-ಪಕ್ಷಿಗಳನ್ನೂ, ಮಣ್ಣಿನಲ್ಲಿ ಮಾಡಿಕೊಡುತ್ತಿದ್ದರು. ಮದುವೆಗಾಗಿ ಬೇಕಾಗುವ ಅಲಂಕರಣ ಸಾಮಗ್ರಿಗಳನ್ನು ಹತ್ತಿ, ಕಾಗದ, ಬೆಂಡು ಮುಂತಾದವುಗಳನ್ನು ಬಹಳ ಕಲಾತ್ಮಕವಾಗಿ ಮಾಡುತ್ತಿದ್ದರು. ಹಾಗೆಯೇ ಸಕ್ಕರೆಯನ್ನು ಪಾಕ ಮಾಡಿ ನಾನಾವಿಧ ಅಚ್ಚುಗಳನ್ನು ಹಾಕುವುದಲ್ಲದೆ. ಹಣ್ಣು ಹಂಪಲುಗಳನ್ನೂ, ತಿಂಡಿ ಪದಾರ್ಥಗಳನ್ನು, ಭಕ್ಷ್ಯಗಳನ್ನೂ ಮಾಡುತ್ತಿದ್ದರು. ಅವುಗಳನ್ನು ನೋಡಿದವರು ಅವು ನಿಜವಾದುವು ಗಳೆಂದು ಭ್ರಮಿಸಿ ಹೋಗುತ್ತಿದ್ದರು. ಹಾಗೆ ನೋಡಿದರೆ ಬೆಂಗಳೂರಿನಲ್ಲಿ ಮದುವೆ-ಮುಂಜಿಗಳಲ್ಲಿ ಬೇಕಾಗುವ ಅಲಂಕರಣ ಸಾಮಗ್ರಿಗಳನ್ನು ಮೊಟ್ಟ ಮೊದಲಿಗೆ ಪರಿಚಯಿಸಿದವರೆಂದರೆ ಶ್ರೀಮತಿ ರಾಧಾಬಾಯಿವರೇ. ಇತ್ತೀಚಿನವರೆಗೂ ಇವರ ತಂಗಿ ಶ್ರೀಮತಿ ಕಮಲಮ್ಮನವರು ಚಾಮರಾಜಪೇಟೆಯ ಐದನೇ ಬೀದಿಯಲ್ಲಿ ಮಾಧ್ವಸಂಘದ ಎದುರಿಗೆ ಒಂದು ಮನೆಯಲ್ಲಿ ವಾಸವಾಗಿದ [illegible]ತಹ ಬಹಳ

ಕಲಾತ್ಮಕ ವಸ್ತುಗಳನ್ನು, ಹತ್ತಿ, ಬೆಂಡು, ಕಾಗದ, ಮೇಣದ ಬತ್ತಿ, ಸಕ್ಕರೆ ಮುಂತಾದುವುಗಳನ್ನು ಮದುವೆ ಮನೆಗಳಿಗಾಗಿ ಮಾಡಿಕೊಡುತ್ತಿದ್ದುದನ್ನು ನಾವು ಕಣ್ಣಾರೆ ಕಂಡಿದ್ದೇವೆ. ಅಲ್ಲದೆ ಈಕೆ ಅನೇಕ ಹುಡುಗಿಯರಿಗೂ ತರುಣಿಯರಿಗೂ ಈ ಕಲೆಯನ್ನು ಕಲಿಸಿ ಅದನ್ನೇ ಒಂದು ಉದ್ಯೋಗವಾಗಿ ಪರಿವರ್ತಿಸಿ ಮನೆಯಲ್ಲೇ ಕುಳಿತು ಹಣಸಂಪಾದನೆ ಮಾಡುವುದನ್ನು ಹೇಳಿಕೊಟ್ಟರು. ಈಗ ಅವರೆಲ್ಲಾ ಈ ಉದ್ಯೋಗದಲ್ಲಿ ಬಹಳ ಮುಂದುವರೆದಿದ್ದಾರೆ.

ರಾಧಾಬಾಯಿಯವರ ಹಿರಿಯ ಮಗ ಶ್ರೀ ಎಂ. ಎಸ್. ಅಚ್ಯುತರಾಯರು ಅಗ್ರಿಕಲ್ಚರ್ ಕಛೇರಿಯಲ್ಲಿ ಅಸಿಸ್ಟೆಂಟ್ ಡೈರೆಕ್ಟರಾಗಿದ್ದರು. ಇವರ ಪತ್ನಿ ಶ್ರೀಮತಿ ವನಜಾಬಾಯಿಯವರು. ಇವರೇ ನಮಗೆ ರಾಧಾಬಾಯಿಯವರ ಜೀವನ ಚರಿತ್ರೆಯನ್ನೂ . ಹಾಡುಗಳ ಸಂಗ್ರಹವನ್ನೂ ಕೊಟ್ಟವರು. ರಾಧಾಬಾಯಿಯವರ ಮಕ್ಕಳೆಲ್ಲಾ ಉನ್ನತವಾದ ಹುದ್ದೆಗಳಲ್ಲಿದ್ದರು. ಈಗ ಒಬ್ಬರು ಕೋಲಾರದ ಬಂಗಾರದ ಗಣಿಯಲ್ಲಿ ಕೆಲಸದಲ್ಲಿದ್ದಾರೆ.

ರಾಧಾಬಾಯಿಯವರು ಗೃಹ ವೈದ್ಯವನ್ನು ಬಹಳ ಚೆನ್ನಾಗಿ ಕಲಿತಿದ್ದರು ಮತ್ತು ಸುತ್ತ ಮುತ್ತಲಿನವರಿಗೆಲ್ಲಾ ಬೇಕಾದ ಔಷಧಿಗಳನ್ನು ಮಾಡಿಕೊಡುತ್ತಿದ್ದರು.

ಹೀಗೆ ತಮ್ಮ ಪಾಡಿಗೆ ತಾವಿದ್ದ ರಾಧಬಾಯಿಯವರಿಗೆ ಎಂಭತ್ತನೇ ವಯಸ್ಸಿನಲ್ಲಿ ಕನಸಿನಲ್ಲಿ ದೇವರನಾಮಗಳನ್ನು ಬರೆಯಲು ಪ್ರೇರಣೆಯಾಯಿತು. ಅವತ್ತಿನಿಂದ ಅವರು ದೇವರನಾಮಗಳನ್ನು ತಾವು ಕಾಲವಾಗುವವರೆಗೂ ಸತತವಾಗಿ ರಚಿಸಿದ್ದಾರೆ. ಅವರು ಅನೇಕ ಹಾಡುಗಳನ್ನು ರಚಿಸಿರಬಹುದಾದರೂ ಈಗ ನಮಗೆ ಮುವ್ವತ್ತೈದು ಹಾಡುಗಳು ಮಾತ್ರ ದೊರಕಿವೆ.

ರಾಧಾಬಾಯಿಯವರದು ಬಹಳ ಸಾತ್ವಿಕ ಸ್ವಭಾವ, ಕಾಲಕ್ಕೆ ತಕ್ಕಂತೆ ಮಡಿ, ಆಚಾರ, ನಿಷ್ಠೆ, ವ್ರತೋಪವಾಸಗಳನ್ನು ಮಾಡಿಕೊಂಡು ಸದಾಚಾರ ಸಂಪನ್ನರಾಗಿದ್ದರು.

ಈಕೆ ತನ್ನ ಎಂಭತ್ತೇಳನೇ ವಯಸ್ಸಿನಲ್ಲಿ ಶ್ರೀ ಹರಿಪದವನ್ನು ಸೇರಿದರು.

## ಕೀರ್ತನೆಗಳು

ಶ್ರೀಮತಿ ರಾಧಾಬಾಯಿಯವರು ದೇವರನಾಮಗಳನ್ನು ರಚಿಸಲಿಕ್ಕಾಗಿ ಅವರಿಗೆ ಸೊಗಸಾದ, ಹಸನಾದ, ಪರಿಸರ ದೊರಕಿತ್ತು. ಈ ಹೊತ್ತಿಗಾಗಲೇ ಹೆಳವನಕಟ್ಟೆ ಗಿರಿಯಮ್ಮನವರು ಗೋಪಾಲದಾಸರಿಂದ ಅನುಗ್ರಹಿತರಾಗಿ ಹೆಳವನಕಟ್ಟೆ ರಂಗಯ್ಯನ ಅಂಕಿತದಲ್ಲಿ ದೇವರನಾಮಗಳನ್ನು ಮಾಡಿ ಕೊಟ್ಟಿದ್ದರು. ನಂತರ ಬಂದ ಹರಪನಹಳ್ಳಿ ಭೀಮವ್ವನವರಂತೂ ನೂರಾರು ದೇವರನಾಮಗಳನ್ನು, ಕೆಲವು ಕಥನ ಕವನಗಳನ್ನು ರಚಿಸಿ ಬಹಳ ಪ್ರಸಿದ್ಧರಾಗಿದ್ದರು. ಇದೇ ಸಮಯದಲ್ಲೇ ಓರಬಾಯಿ ಲಕ್ಷ್ಮೀದೇವಮ್ಮ ನವರು ಭೀಮವ್ವನವರ ಜಾಡಿನಲ್ಲೇ ಅನೇಕ ದೇವರನಾಮಗಳನ್ನೂ, ವ್ರತಕಥೆಗಳನ್ನೂ ರಚಿಸುತ್ತಿದ್ದರು.

ಇವರು ಯಾರೂ ಶಾಲೆಗೆ ಹೋದವರಲ್ಲ. ಮನೆಯಲ್ಲೇ ಕಲಿತವರು. ಆದರೆ ಆ ಕಾಲದ ಪರಿಸರ ಜ್ಞಾನ-ಭಕ್ತಿ-ವೈರಾಗ್ಯಗಳಿಂದ ಮುಪ್ಪುರಿಗೊಂಡು ಬಹಳ ಉದ್ಬೋಧಕರವೂ, ಪವಿತ್ರವಾಗಿಯೂ ಇರುತ್ತಿತ್ತು. ಉತ್ತರಾದಿ ಮಠದ ಸತ್ಯಧ್ಯಾನ ಸ್ವಾಮಿಗಳು ಅಭಿನವ ಮಧ್ವರೆಂದೂ ಪ್ರಖ್ಯಾತರಾಗಿ ಆಸೇತು-ಹಿಮಾಚಲ ಪರ್ಯಂತ ದ್ವೈತದುಂದುಭಿಯನ್ನು ಮೊಳಗಿಸುತ್ತಿದ್ದರು. ಅನೇಕ ಪ್ರಕಾಂಡ ಪಂಡಿತರು ದ್ವೈತ ತತ್ವಗಳನ್ನು ಪುರಾಣಗಳ ಮೂಲಕ ಜನಸಾಮಾನ್ಯಕ್ಕೆ ಮುಟ್ಟಿಸುತ್ತಿದ್ದರು. ಅಲ್ಲದೆ ಅನೇಕ ಹರಿದಾಸರುಗಳು ಕರ್ನಾಟಕದಲ್ಲಿ ಭಕ್ತಿ ಗಂಗೆಯನ್ನೇ ಹರಿಸುತ್ತಿದ್ದರು, ಮನೆ-ಮನೆಯೂ ಒಂದು ವಿದ್ಯಾಪೀಠವಾಗಿ ಮನೆಯ ಹೆಣ್ಣು ಮಕ್ಕಳು ಅಡುಗೆ ಮನೆಯಲ್ಲಿ ಕುಳಿತು ಪ್ರಮೇಯ ಸುಧೆಯನ್ನು ಮೊಗೆದು ಮೊಗೆದು ಕುಡಿದು ಆಸ್ವಾದಿಸುತ್ತಿದ್ದರು. ಅವರ ಹೃದಯಗಳಲ್ಲಿ ಭಗವಂತನು ತಾನಾಗೇ ವಿರಾಜಿಸುತ್ತಿದ್ದನು.

ಇಂತಹ ಹದನಾದ ಹೃದಯವುಳ್ಳ ಸಂಸ್ಕಾರವಂತ ಹೆಣ್ಣು ಮಕ್ಕಳು "ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳಾಗಿ" ಭಗವಂತನನ್ನು ನವವಿಧ ಭಕ್ತಿಗಳಿಂದ ಸ್ತುತಿಸತೊಡಗಿದರು. ಶ್ರೀಹರಿ ಸರ್ವೋತ್ತಮ, ವಾಯು ಜೀವೋತ್ತಮ ನಂತರ ತಾರತಮ್ಯಾನುಸಾರವಾದ ಪದಗಳು ಅವರ ಬಾಯಿಂದ ಪುಂಖಾನು ಪುಂಖವಾಗಿ ಹೊರಡ ತೊಡಗಿತು.

(ಹೀಗೆಯೇ ಸರಿ ಸುಮಾರು ಇದೇ ಕಾಲದವರಾಗಿದ್ದ ರಾಧಾಬಾಯಿಯವರೂ ಕೀರ್ತನೆಗಳನ್ನು ರಚಿಸತೊಡಗಿದರು).

ಎಂಭತ್ತು ವರ್ಷಗಳ ಕಾಲ ಸಂಸಾರದ ನೋವು ನಲಿವುಗಳನ್ನುಂಡು ಹಣ್ಣಾಗಿದ್ದ ಅವರ ಮನಸ್ಸು ಭಕ್ತಿ ಭರದಿಂದ ಕುಗ್ಗಿತ್ತು. ಇನ್ನು ಈ ಜೀವನ ಸಾಕೆನಿಸಿತ್ತೆಂದು ಅವರ ಹಾಡುಗಳಿಂದ ಕಂಡು ಬರುತ್ತದೆ.

ಇವರು ಇತರರಂತೆ ಸಾಂಪ್ರದಾಯಕವಾಗಿ ಎಲ್ಲ ದೇವ ದೇವತೆಗಳ ಮೇಲೂ ಹಾಡುಗಳನ್ನು ರಚಿಸಿಲ್ಲ. ಶ್ರೀನಿವಾಸನನ್ನು ಕುರಿತು, ಮಹಾಲಕ್ಷ್ಮಿ, ಹನುಮಂತ, ಮಧ್ವರಾಯರ ಮೇಲೆ ಒಂದೆರಡು ಹಾಡುಗಳನ್ನು ರಚಿಸಿ ಮಿಕ್ಕೆಲ್ಲ ಹಾಡುಗಳನ್ನೂ ಮಂತ್ರಾಲಯದ ಶ್ರೀರಾಘವೇಂದ್ರ ಸ್ವಾಮಿಗಳ ಮೇಲೆ ರಚಿಸಿದ್ದಾರೆ. ತಮ್ಮ ಜೀವಿತವನ್ನೆಲ್ಲಾ ಶ್ರೀರಾಘವೇಂದ್ರರಿಗೇ ಅರ್ಪಿಸಿರುವುದು ಇವರ ಹಾಡುಗಳಲ್ಲಿ ಕಂಡು ಬರುತ್ತದೆ. ಬಹಳ ದೈನ್ಯದಿಂದ, ಆರ್ತತೆಯಿಂದ, ಭಕ್ತಿಯಿಂದ ಇವರು ರಾಯರನ್ನು ಬೇಡುತ್ತಾರೆ. ಇವರ ಒಂದೊಂದು ಹಾಡುಗಳಲ್ಲೂ ಈ ಆರ್ತತೆ ಕಂಡುಬರುತ್ತದೆ.

ಇವರಿಗೆ ಅಂಕಿತ ಕೊಟ್ಟವರಾರೆಂಬುದು ತಿಳಿದು ಬಂದಿಲ್ಲ. ತಿರುಪತಿಯ ವೆಂಕಟೇಶ್ವರನನ್ನು ಸ್ತುತಿಸಿರುವ ಏಳು ಹಾಡುಗಳಲ್ಲಿ, ಭಾಗವತದಲ್ಲಿ ಬರುವ ಬಾಲಲೀಲೆಗೆ ಸಂಬಂಧ ಪಟ್ಟ ಎರಡು ಹಾಡುಗಳಲ್ಲಿ, ಒಂದು ಆರತಿ ಹಾಡು ಮತ್ತು ಒಂದು ಲಾಲಿ ಹಾಡಿನಲ್ಲಿ, ಮಾರುತಿಯನ್ನು ಕುರಿತು ರಚಿಸಿರುವ ಎರಡು ಹಾಡುಗಳಲ್ಲಿ ವೆಂಕಟ ವಿಠಲನೆಂಬ ಅಂಕಿತವಿದ್ದರೆ ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳ ಮೇಲೆ ರಚಿಸಿರುವ ಎಲ್ಲ ಹಾಡುಗಳಲ್ಲಿ ಶ್ರೀರಾಘವೇಂದ್ರ ಎಂಬ ಅಂಕಿತವು ಕಂಡು ಬರುತ್ತದೆ.

ಭಾಷೆ ಬಹಳ ಸುಲಭ ಮತ್ತು ಸರಳವಾದ ಕನ್ನಡ. ಕೆಲವೆಡೆ ಬಳ್ಳಾರಿಯ ಆಡುಮಾತಿದೆ ಉದಾ :– 'ಆನೆಬಂದಿತಮ್ಮಾ' ಎಂಬ ಹಾಡಿನಲ್ಲಿ 'ಅಡಗ್ಯಾನೇ', 'ಕಂದನಾದ್ಯೆಆನೇ' 'ಕಂಡ್ಯಾನೆ' 'ಕುಳಿತಾನೆ' 'ನಡೆದಾನೇ' 'ನಲಿದಾನೇ', 'ಕೈ ಪಿಡಿದಾನೇ' ಇಂತಹ ಪದರೂಪಗಳನ್ನು ಕಾಣಬಹುದು. ಕೆಲವು ಹಾಡುಗಳಲ್ಲಿ ಪ್ರಾಸಗಳು ಸಹಜವಾಗಿ ಬಂದಿವೆ– ಉದಾ :–

ಪಾಲಗಡಲೊಳು, ಆಲದೆಲೆಯ ಮ್ಯಾಲೆ
ಬಾಲಾನು ಮಲಗ್ಯಾನೆ ತೂಗೀರೇ
ಕಾಲ ಬೆರಳು ತನ್ನ ಬಾಯೊಳಗಿಟ್ಟಿಹ
ಬಾಲ ಕೃಷ್ಣಯ್ಯನ ತೂಗೀರೇ.

ಎಲ್ಲ ಹಾಡುಗಳಲ್ಲೂ ಛಂದಸ್ಸಿನ ನಿರ್ಬಂಧ ಕಾಣುವುದಿಲ್ಲ ಈ ಪದಗಳೆಲ್ಲವೂ ಭಕ್ತಿಯಿಂದ ಸ್ಫುರಿಸಿ ಬಂದಿರುವುದರಿಂದ, ಅರ್ಥಗರ್ಭಿತವಾಗಿರುವುದರಿಂದ ಇಲ್ಲಿ ಅರ್ಥ, ಪ್ರಮೇಯ ಮತ್ತು ತಾರತಮ್ಯಗಳಿಗೆ ಒತ್ತು ಕೊಡಲಾಗಿದೆಯೇ ಹೊರತೂ ಛಂದಸ್ಸಿಗಲ್ಲ ಎಂಬುದು ಗಮನಾರ್ಹ.

(– ಡಾ॥ ರುಕ್ಮಿಣಿ ಗಿರಿಮಾಜಿ)

## ೭. ಕಳಸದ ಸುಂದರಮ್ಮನವರು

### ಜೀವನ ವಿಚಾರ

ಕಳಸದ ಸುಂದರಮ್ಮನವರ ವಿಚಾರ ಅಷ್ಟಾಗಿ ದೊರೆತಿಲ್ಲ. ಅವರು ಬರೆದಿರುವ ಕೃತಿಗಳನ್ನು ನೋಡಿದರೆ ಒಳ್ಳೆಯ ಸಂಪ್ರದಾಯ ವಂಶದವರೆಂದು ಹೇಳಬಹುದುರ ಇವರು ಕೆಲವು ಕೃತಿಗಳಲ್ಲಿ ಆತ್ಮನಿವೇದನೆಯನ್ನು ರಮ್ಯವಾಗಿ ವರ್ಣಿಸಿದ್ದಾರೆ. ಕೃಷ್ಣನ ಮೇಲೆ ಅಪಾರ ದೇವರ ಕೃತಿ ರಚಿಸಿದ್ದಾರೆ, ಲಭ್ಯವಾದಷ್ಟು ಕೊಡಲಾಗಿದೆ. ಮಾನವನು ಮುಖ್ಯವಾಗಿ ಧರಿಸಬೇಕಾದ ನಾಮಮುದ್ರೆಗಳ ಮೇಲೆ ಚೆನ್ನಾಗಿ ಕೃತಿ ರಚಿಸಿದ್ದಾರೆ. ಇವರ ಅಂಕಿತ "ಕಾಳಿಮರ್ಧನಕೃಷ್ಣ" ಆದ್ದರಿಂದಲೇ ಏನೋ ಕೃಷ್ಣನ ಕೃತಿ ಚೆನ್ನಾಗಿ ಮೂಡಿ ಬಂದಿದೆ. ಹೆಚ್ಚಿನ ಮಾಹಿತಿ ದೊರೆತಿಲ್ಲ. ಯಾರಿಗಾದರೂ ದೊರೆತರೆ ತಿಳಿಯಪಡಿಸಬೇಕಾಗಿ ವಿನಂತಿ.

ಕೀರ್ತನೆಗಳು ಚೆನ್ನಾಗಿ ಮೂಡಿಬಂದಿವೆ. ಉಡುಪಿಯ ಅಷ್ಟಮಠದ ಯತಿಗಳನ್ನು ಕುರಿತು ಅಪರೂಪವಾದ ಕೃತಿ ರಚಿಸಿದ್ದಾರೆ. ಪದಗಳ ಜೋಡಣೆ ಸುಂದರವಾಗಿದ್ದು ಓದುಗರಿಗೆ ಸರಳವಾಗಿದೆ. ಉದಯರಾಗ ಚೆನ್ನಾಗಿ ರಚಿಸಿದ್ದಾರೆ.

ಕೃಷ್ಣನ ಮೇಲೆ ಮುದ್ದಾಗಿ ಬಾಲಲೀಲೆಗಳನ್ನು ಮಾಡಿದ ವರ್ಣನೆ ಮಾಡಿದ್ದಾರೆ. ಆತ್ಮನಿವೇದನೆಯ ಪದ ಚೆನ್ನಾಗಿ ಮೂಡಿ ಬಂದಿದೆ.

ಲೋಕನೀತಿ ಪದ ಅಪರೂಪವಾಗಿರುವ ವಿಷಯದಿಂದ ಕೂಡಿದೆ. ಮಾನವನಾಗಿ ಹುಟ್ಟಿದ ಮೇಲೆ ನಿತ್ಯ ವಿಧಿಗಳನ್ನು ಅನುಸರಿಸಬೇಕಾದ ಕ್ರಮ ತಿಳಿದು ಬರುತ್ತೆ. ಒಟ್ಟನಲ್ಲಿ ಅಚಲವಾದ ಭಕ್ತಿ ಕಂಡುಬರುತ್ತೆ.

## ೮. ಶ್ರೀಮತಿ ಗುಂಡಮ್ಮನವರು

ಹತ್ತೊಂಬತ್ತನೆ ಶತಮಾನದ ಉತ್ತರಾರ್ಧದಲ್ಲಿ ದೇವರಾಯನ ದುರ್ಗದಲ್ಲಿದ್ದ ಪರಮಪ್ರಿಯ ಸುಬ್ಬರಾಯದಾಸವರ್ಯರಿಂದ "ರುಕ್ಮಿಣೀವಿಠಲ" ಅಂಕಿತ ಪಡೆದು ಹರಿದಾಸರಾದವರು ಶ್ರೀಮತಿ ಗುಂಡಮ್ಮನವರು. (ಅಂದರೆ ತಂದೆ ಮುದ್ದುಮೋಹನವಿಠಲ ದಾಸರು). ಅಂಕಿತವಾದ ನಂತರ ಹಲವಾರು ದೇವರ ನಾಮಗಳನ್ನು ರಚಿಸಿದ್ದರೆಂದು ತಿಳಿದು ಬಂದಿದೆ. ಲಭ್ಯವಾಗಿ ದೊರೆತಿರುವುದು ಕೇವಲ ಏಳು ದೇವರ ನಾಮಗಳು. ಹೆಚ್ಚು ಕಾಲ ಚಿತ್ರದುರ್ಗದಲ್ಲೇ ವಾಸ. ಪೆನೊಗೊಂಡೆ ಪುಟ್ಟಾಚಾರ್ಯರೆಂಬ ಭಾರೀ ಜಮೀನ್ದಾರರೊಡನೆ ವಿವಾಹವಾಗಿತ್ತು. ನಾನು ಕಣ್ಣಾರೆ ಕಂಡಂತೆ ದಂಪತಿಗಳು ಸದಾ ದೇವರ ಕಾರ್ಯದಲ್ಲಿ ನಿರತರಾಗಿರುತ್ತಿದ್ದರು. ಇವರೊಡನೆ ಸದಾ ಸರ್ವವಿಧದಲ್ಲೂ ಬೆರೆಯುತ್ತಿದ್ದ ಮಹಾನುಭಾವರೆಂದರೆ ಚಿತ್ರದುರ್ಗದಲ್ಲಿ ಅಧ್ಯಾಪಕರಾಗಿದ್ದ ಶ್ರೀ ಶ್ರೀನಿವಾಸರಾಯರು. ಪಕ್ಕದ ಮನೆಯಲ್ಲೇ ಇದ್ದು ಇದೇ ದೇವರಾಯನದುರ್ಗದ ಗುರುಗಳಿಂದ ಅಂಕಿತ ಪಡೆದಿದ್ದ ಶ್ರೀ ಉರುಗಾದ್ರಿವಾಸ ವಿಠಲದಾಸರ ದಂಪತಿಗಳು ಒಂದೇ ಮನೆಯವರಂತೆ ಇದ್ದುದು ಪರಮಭಾಗ್ಯ. ಇವರಿಗೆ ನಾಲ್ಕು ಜನ ಗಂಡುಮಕ್ಕಳು, ನಾಲ್ವರು ಹೆಣ್ಣುಮಕ್ಕಳಿದ್ದರು. ಪ್ರತಿ ದಿನ ಹರಿಭಜನ ಜಾಗರ ದೇವರ ಪೂಜೆ ಇತ್ಯಾದಿ ಕಾರ್ಯಕಲಾಪ ಇಟ್ಟುಕೊಂಡಿದ್ದರು. ಪ್ರತಿ ಸಂಜೆ ಉಗರಾದ್ರಿವಾಸವಿಠಲದಾಸರ ಪತ್ನಿ ಶ್ರೀಮತಿ ತುಂಗಾಬಾಯಿಯವರ ಜೊತೆ ಕಲೆತು ಸಂಜೆಯ ವೇಳೆ ದೇವರ ನಾಮಗಳನ್ನು ಹಾಡುವುದು, ಮಕ್ಕಳಿಗೆ ಹೇಳಿಕೊಡುವ ಪದ್ಧತಿ ಇತ್ತು. ದೇವರ ಗೃಹವನ್ನು ಅತಿ ಚೊಕ್ಕಟವಾಗಿಟ್ಟು ಪೂಜೆ ನಡೆಸುತ್ತಿದ್ದುದನ್ನು ಕಣ್ಣಾರೆ ಕಂಡಿದ್ದೇನೆ.

ಇವರೂ ಸಹ ಸರಸಾಬಾಯಿಯವರ ಸಮಕಾಲೀನರು. ಪಕ್ಕದ ಗೃಹದಲ್ಲಿ ಬಹಳಷ್ಟು ಕಾಲ ಆಧ್ಯಾತ್ಮ ಚಿಂತನೆಯಲ್ಲಿ ತೊಡಗುತ್ತಿದ್ದ ವ್ಯಕ್ತಿಗಳು. ಇವರ ಸೊಸೆ ಶಾಂತಾಬಾಯಿ ಸರಸಾಬಾಯಿ ಇಂದಿಗೂ ಹರಿಭಜನೆ, ಅತ್ತೆಯಂತೆ ಹಾಡುವ ಪದ್ಧತಿ ಇಟ್ಟುಕೊಂಡಿದ್ದಾರೆ. ಇದನ್ನು ಒದಗಿಸಿಕೊಟ್ಟಂಥ ಅವರ ಮಕ್ಕಳು ಮತ್ತು ಸೊಸೆಯಂದಿರಿಗೆ ನಮ್ಮ ಕೃತಜ್ಞತೆಗಳು.

ಎಚ್.ಎಸ್.ಪದ್ಮಾಮೂರ್ತಿ

## ೯. ಶ್ರೀಮತಿ ಸರಸ್ವತಿಬಾಯಿ ಅವರು

ಹರಿದಾಸ ಸಾಹಿತ್ಯ ಪ್ರಪಂಚದಲ್ಲಿ ಮಹಿಳಾದಾಸರ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಆದರೂ ಆಗಿ ಹೋದ ಮಹಿಳಾ ದಾಸರ ಕೃತಿಗಳನ್ನು ನೋಡಿದಾಗ ಗುಣ ಮಟ್ಟದ ದೃಷ್ಟಿಯಲ್ಲಿ ಅವರು ಇತರ ದಾಸರಷ್ಟೇ ಸಮೃದ್ಧವಾಗಿ, ಶ್ರೀಮಂತವಾಗಿ ಹಾಡುಗಳನ್ನು ರಚಿಸಿರುವುದು ಕಂಡು ಬರುತ್ತದೆ. ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಮುಂತಾದ ಪ್ರಖ್ಯಾತರಾದ ಮಹಿಳಾ ದಾಸರ ಜೊತೆ ಜೊತೆಗೆ ಇನ್ನೂ ಅನೇಕ ಮಹಿಳೆಯರ ಕೃತಿಗಳು ನೂರಾರು ಸಂಖ್ಯೆಯಲ್ಲಿ ರಚಿತವಾಗಿ ಇಂದಿಗೂ ಬೆಳಕಿಗೆ ಬಾರದೇ ಉಳಿದಿವೆ. ಎಲೆ ಮರೆಯ ಕಾಯಿಯಂತೆ ಬಾಳಿ ಬದುಕಿ, ತಮ್ಮನ್ನು ತಾವೇ ದಾಸಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡ ಇಂತಹ ಸಾಧ್ವಿಯರಲ್ಲಿ ಒಬ್ಬರು 'ಶ್ರೀ ಶ್ರೀನಿವಾಸ' ಎಂಬ ಅಂಕಿತದಿಂದ ನೂರಾರು ಕೃತಿಗಳನ್ನು ರಚಿಸಿರುವ ಸರಸ್ವತಿಬಾಯಿಯವರು.

ಕ್ರಿ.ಶ. ೧೯೦೦ ರ ಆಸುಪಾಸಿನಲ್ಲಿ ಜನಿಸಿದ ಸರಸ್ವತಿಬಾಯಿಯವರ ಮೂಲನಾಮ ತುಳಸೀಬಾಯಿಯೆಂದು. ನೆಲಮಂಗಲದ ಸಂಪ್ರದಾಯಸ್ಥ ಮಾಧ್ವ ದಂಪತಿಗಳಾದ ವಾಸುದೇವಾಚಾರ್ಯ ಮತ್ತು ರುಕ್ಮಿಣಿ ಬಾಯಿ ಇವರ ತಂದೆ-ತಾಯಿಗಳು. ವೇದವ್ಯಾಸಾಚಾರ್ಯರು ಮತ್ತು ಭೀಮಾಚಾರ್ಯರು ಸಹೋದರರು. ಸಾತ್ವಿಕರಾದ, ದೈವೀಕರಾದ ದಂಪತಿಗಳು ಸಹಜವಾಗಿ ಮನೆಯಲ್ಲಿ ಒಂದು ಅನುಕೂಲಕರ ವಾತಾವರಣವನ್ನು ನಿರ್ಮಿಸಿದ್ದರಿಂದಲೂ, ಸಹೋದರರಿಬ್ಬರೂ

ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತರಾಗಿದ್ದುದರಿಂದಲೂ, ಬಾಲಕಿ ಸರಸ್ವತಿ ಬಾಯಿಯವರಿಗೆ ಬಾಲ್ಯದಿಂದಲೇ ಪೂಜೆ, ಪ್ರಾರ್ಥನೆ, ಪುರಾಣ – ಭಾಗವತಗಳ ಅಧ್ಯಯನ, ರಾಮಾಯಣ – ಮಹಾಭಾರತಗಳ ಪಠಣ ಇವುಗಳ ಪರಿಚಯ ವಿವರವಾಗಿಯೇ ಆಗಿತ್ತು. ತಂದೆಯ ಅಕಾಲ ಮರಣದಿಂದ ಸೋದರಮಾವಂದಿ– ರಾದ ರಾಮರಾಯರು – ಸೀತಾಬಾಯಿ ದಂಪತಿಗಳ ಬಳಿ ತಾಯಿ ಆಶ್ರಯ ಪಡೆದರು. ಈ ದಂಪತಿಗಳ ಉಪಕಾರ ಸ್ಮರಣೆಯನ್ನು ಸರಸ್ವತಿ ಬಾಯಿಯವರು 'ಭಕ್ತ್ಯಾಷ್ಟಕ' ಎಂಬ ತಮ್ಮ ಕೃತಿಯಲ್ಲಿ ನೆನೆದಿದ್ದಾರೆ. ನಾಲ್ಕನೇ ತರಗತಿಯವರೆಗೆ ವಿದ್ಯಾಭ್ಯಾಸ ಆಗುವ ವೇಳೆಗೆ, ಇವರ ಎಂಟನೇ ವಯಸ್ಸಿನಲ್ಲಿ ವ್ಯಾಸಾಚಾರ್ಯ– ರೆಂಬುವವರೊಂದಿಗೆ ಇವರ ವಿವಾಹ ಆಯಿತು. ಅವರು ದೇಶಸ್ಥ ಬ್ರಾಹ್ಮಣರಾದುದರಿಂದ ಮನೆ ಮಾತು ಮರಾಠಿ. ಪ್ರಖ್ಯಾತವಾದ ಮುತ್ಯಾ ನರಸಿಂಹಾಚಾರ್ಯರು ಇವರ ಮಾವನವರು. ಅವರು ಸ್ವತಃ ಸಂಸ್ಕೃತ ವಿದ್ವಾಂಸರಾಗಿದ್ದುದಲ್ಲದೇ ಆಗಿನ ಕಾಲದಲ್ಲಿಯೇ ಅಮಲ್ದಾರರಾಗಿದ್ದರು. ಹಾಗಾಗಿ ತವರು ಮನೆಯಲ್ಲಿ ಬೀಜಾಂಕುರವಾದ ಸಾಹಿತ್ಯ, ಪುರಾಣ, ಪುಣ್ಯಕತೆ, ರಾಮಾಯಣ – ಮಹಾಭಾರತಗಳ ಅಧ್ಯಯನಕ್ಕೆ ಮತ್ತಷ್ಟು ಇಂಬು ದೊರೆತು ಅವರ ಆಸಕ್ತಿ ಚಿಗುರೊಡೆದು ಬೆಳೆಯಿತು.

ಸಂಸಾರದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡ ಸರಸ್ವತಿ ಬಾಯಿಯವರು ಕ್ರಮೇಣ ಆರು ಜನ ಮಕ್ಕಳನ್ನು ಪಡೆದರು. ಒಂದು ಬಾರಿ, ಬಹುಶಃ ಅವರ ೨೫ನೇ ವಯಸ್ಸಿನಲ್ಲಿ, ಮಗುವನ್ನು ಕಳೆದುಕೊಂಡ ಬಾಣಂತಿಯ ದುಃಖ ಭಗವಂತನ ಕಡೆಗೆ ಹೊರಳಿತು. ಬೆಳಗಿನ ಝಾವ ಎದ್ದು, ಸ್ನಾನ ಮಾಡಿ, ತುಳಸಿಯೆದುರು ರಂಗೋಲಿಯಿಡುತ್ತಾ ಒಂದು ಬಗೆಯ ಧ್ಯಾನದಲ್ಲಿ ತಲ್ಲೀನರಾಗಿ ತನ್ಮಯತೆಯಿಂದ ಅವರು ಹಾಡುತ್ತಾ ಹೋಗುತ್ತಿದ್ದರು. ಪ್ರೈಮರಿ ಶಾಲೆಯ ಉಪಾಧ್ಯಾಯರಾಗಿದ್ದ ಅವರ ಪತಿ ವ್ಯಾಸಾಚಾರ್ಯರು ಆ ಒಂದು ಕ್ರಿಯಾಶೀಲ ಮನಸ್ಸಿನ ಸ್ಥಿತಿಯನ್ನರಿತು ಅವರು ಹಾಡಿದುದನ್ನೆಲ್ಲಾ ಬರೆದಿಡಲು ಪ್ರಾರಂಭಿಸಿದರು. ಅದನ್ನೇ ಅವರು ತಮ್ಮ ಹಾಡಿನಲ್ಲಿ 'ಬೆಳಗಿಂಝಾವದಿ ಬಾರೋ ಹರಿಯೆ' ಎಂದು ಉಲ್ಲೇಖಿಸಿದ್ದಾರೆ. ಹೀಗೆ ನೂರಾರು ಹಾಡುಗಳು ಅವರಿಂದ ರಚಿಸಲ್ಪಟ್ಟರೂ ಅವರಿಗೆ ಆಗ ಅಂಕಿತ ಪ್ರದಾನವಾಗಿರಲಿಲ್ಲ.

ತಮ್ಮ ಆಧ್ಯಾತ್ಮಿಕತೆ, ಸಹಾಯಶೀಲತೆ, ದೈವೀಕ ಪ್ರವೃತ್ತಿ ಇವುಗಳಿಂದ ತಾವು ವಾಸಿಸುತ್ತಿದ್ದ ಬೆಂಗಳೂರಿನ ಸೀಗೆಬೇಲಿಯು ಪ್ರದೇಶದಲ್ಲೆಲ್ಲಾ ಅವರು ಪ್ರಖ್ಯಾತರಾದರು. ಸುತ್ತಲಿನ ಸ್ತ್ರೀಯರನ್ನೆಲ್ಲಾ ಒಂದುಗೂಡಿಸಿ ರಾಮಾಯಣ, ಮಹಾಭಾರತ, ಭಾಗವತ, ಪುರಾಣ ಹರಿಕತೆಗಳಲ್ಲದೇ ಕರಕುಶಲ ವಸ್ತುವಿನ್ಯಾಸ, ರಂಗೋಲಿ, ಕಸೂತಿ ಇವುಗಳನ್ನು ಅವರಿಗೆ ಕಲಿಸುತ್ತಾ ಸಹಜವಾಗಿಯೇ ಸ್ತ್ರೀಯರಿಗೆಲ್ಲಾ ಪ್ರಿಯರಾಗಿದ್ದರು. ಇದಲ್ಲದೇ ನಾಟಿ ವೈದ್ಯ ಸಹ ಅವರಿಗೆ ಕರಗತವಾಗಿತ್ತು. ಉಳುಕು ಮಂತ್ರ, ದೃಷ್ಟಿ ಮಂತ್ರ ಹೀಗೆ ನೂರಾರು ಕಾರಣಗಳಿಂದ ಅವರು ಬಹುಜನಪ್ರಿಯರಾಗಿದ್ದರು. ಹಿಂದಿ, ಮರಾಠಿ, ತೆಲುಗು, ತಮಿಳು ಭಾಷೆಗಳನ್ನು ಬಲ್ಲ ಬಹುಭಾಷಾವಿದರಾಗಿದ್ದರು. ಅಲ್ಲದೇ ಹಿಂದಿ, ಮರಾಠಿ ಮತ್ತು ವಿಶೇಷವಾಗಿ ತೆಲುಗಿನಲ್ಲಿ ಅನೇಕ ಹಾಡುಗಳನ್ನು ಬರೆದಿದ್ದಾರೆ 'ರಾಮಚರಿತಮು' ಎಂಬ ಇವರ ದೀರ್ಘ ಕೃತಿಯು ತೆಲುಗಿನಲ್ಲಿದೆ.

ಮುಂದೆ ಸುಮಾರು ಅವರ [illegible] ನೆ ವಯಸ್ಸಿನಲ್ಲಿ ಒಮ್ಮೆ ಸಾಗರ ಕಟ್ಟೆ ಮಠದ ಪೀಠಾಧೀಶರಾದ ಶ್ರೀಶ್ರೀ ಪ್ರದ್ಯುಮ್ನ ತೀರ್ಥರು ಸರಸ್ವತಿಬಾಯಿಯವರನ್ನು ಹರಸಿ ಅವರ ಇಷ್ಟದೈವವಾದ ತಿರುಪತಿಯ ವೆಂಕಟೇಶನ ಹೆಸರಿನಲ್ಲಿಯೇ 'ಶ್ರೀಶ್ರೀನಿವಾಸ' ಎಂದು ಅಂಕಿತ ಪ್ರದಾನ ಮಾಡಿ ಆಶೀರ್ವದಿಸಿದರು. ಅಂದಿನಿಂದ ಸರಸ್ವತಿಬಾಯಿಯವರ ಜ್ಞಾನದಾಹ ರಚನಾ ಕೌಶಲಕ್ಕೆ ಹೊಸ ಹೊಳಪು ಬಂದಿತು. 'ಶ್ರೀಶ್ರೀನಿವಾಸ' ಎಂಬ ಅಂಕಿತದೊಂದಿಗೆ ಮುಂದೆ ಅವರು ನೂರಾರು ಹಾಡುಗಳನ್ನು, ಸಂಪ್ರದಾಯ ಹಾಡುಗಳನ್ನು, ಕಥನ ಕವನದ ಮಾದರಿಯ ಕೃತಿಗಳನ್ನು ರಚಿಸಿದರು, ಈ ಸಂಗ್ರಹದಲ್ಲಿ ಮುಖ್ಯವಾಗಿ ಅವರ ಅಂಕಿತವಿರುವ ಕೃತಿಗಳನ್ನು ಮಾತ್ರ ಆಯ್ದು ಕೊಳ್ಳಲಾಗಿದೆ. ಒಟ್ಟು ೧೫೦ ಹಾಡುಗಳು, ೫ ದೀರ್ಘ ಕೃತಿಗಳು ಇವೆ. ಸರಸ್ವತಿ ಬಾಯಿಯವರು ೫-೭-೧೯೮೨ ರಲ್ಲಿ ದೈವಾಧೀನರಾದರೆಂದು ತಿಳಿದುಬರುತ್ತದೆ.

## ಕೃತಿಗಳು

ತಿರುಪತಿಯ ವೆಂಕಟೇಶ ಇವರ ಇಷ್ಟದೈವ. ಇವರ ಹಾಡುಗಳಲ್ಲಿ ಕಾಣುವ ಪ್ರಮುಖ ಭಾವ ಭಕ್ತಿ. ದೇವರನ್ನು ಕುರಿತ ಅಸ್ಖಲಿತ ಪ್ರೀತಿ. 'ಹರಿನಾಮದರ ಗಿಳಿಯು ದೊರಕಿತಿಂದು ವರ ಹಿರಿಯರಾ ಕರುಣದಿಂದೆನಗೆ' ಎಂದು ಹೇಳುತ್ತಾ

ಕೇಶವಾದಿ ೨೪ ನಾಮಗಳ ಕೀರ್ತನೆಯನ್ನು ಮಾಡಿದ್ದಾರೆ. 'ಹರಿ ಸಂಕಲ್ಪದ ಕೃಪೆಯಿಲ್ಲದೇ ಬೇರಿನ್ನಿಲ್ಲವಯ್ಯ ಈ ನರವೆಂಬ ದೇಹಕ್ಕೆ ಧೃಡ ಭಕುತಿ ಬರಲಿಕೆ' ಎಂಬ ಧೃಡವಾದ ನಂಬಿಕೆ ಅವರದು. ಶ್ರೀಹರಿಯನ್ನು ಕುರಿತು 'ಕೊಡು ಕೃಷ್ಣನೇ ಯೆನ್ನ ಸಾಲವ ಬೇಗ, ಕೊಡದಿದ್ದರೆ ಬಿಡೆನೊ' ಎಂದು ಆಗ್ರಹಿಸುವಲ್ಲಿ ಅದರ ಹಿಂದಿರುವ ಭಕ್ತಿಯ ಭಾವದ ಆಕಾಂಕ್ಷೆಯನ್ನು ಗಮನಿಸಬೇಕು. 'ಯಾವಾಗ ಸ್ತುತಿಸಿದರೂ ಮತ್ತಾವಲ್ಲಿ ಕರೆದರೂ ಧಾವತಿಗೊಂಡು ಬಹ ಶ್ರೀ ಶ್ರೀನಿವಾಸ' ಎಂಬ ದೃಢವಾದ ನಂಬಿಕೆ ಅವರದು.

ಬಾಲಕೃಷ್ಣನ ಬಾಲಲೀಲೆಯನ್ನು ವರ್ಣಿಸುವ ಅನೇಕ ಸುಂದರವಾದ ಹಾಡುಗಳು ಇಲ್ಲಿವೆ. 'ಗೋಪಿಕೇಳೆ ನಿನ್ನ ಮಗನಾ ಚರಿಯ ಪೇಳುವೆನು' ಎನ್ನುವ ಹಾಡಿನಲ್ಲಿ 'ಗುಲ್ಲುಮಾಡದೆ ಫುಲ್ಲಲೋಚನೆ ಮೆಲ್ಲಡಿ ಇಡುತ ಬಂದೂ ಗಲ್ಲಕೆ ಮುತ್ತು ಕೊಟ್ಟು ಎಮ್ಮಾ ಗಲ್ಲ ಪಿಡಿಯುವನೆ', 'ಹಿರಿಯ ಕಾಲದ ಸಾಲಿಗ್ರಾಮ ಕರಿಯು ಕಲ್ಲೆಂದು ಶ್ರೀ ಕೃಷ್ಣ ಭರದಿ ಬಾಯೊಳು ನುಂಗಿ ಜಗಕೆ ತಾನ್ಹಿರಿಯನೆಂಬುವನೆ' ಮುಂತಾಗಿ ಬರುವ ಚಿತ್ರಗಳು ಸಹಜವಾಗಿ ಸುಂದರವಾಗಿವೆ.

'ಒಡೆದು ಬಂದೆಯಾ ಗೋಪಿಚಂದನದಿಂದ ಎನ್ನೊಡೆಯ ಮಧ್ವಾರ್ಯ ಹೃದಯವಾಸಾ ಕೃಷ್ಣ' ಎಂಬ ಹಾಡಿನಲ್ಲಿ ಉಡುಪಿ ಕೃಷ್ಣನ ಸುಂದರವಾದ ವರ್ಣನೆ ಇದೆ. ಹಾಗೆಯೇ ಅಳಗಿರಿಯ ರಂಗ, ಮಳೂರಿನ ಅಪ್ರಮೇಯ ಮುಂತಾದ ಬಾಲಕೃಷ್ಣರ ವರ್ಣನೆಗಳು, ಕಣ್ಣಿಗೆ ಕಟ್ಟುವಂತಿವೆ. ಹಾಗೆಯೇ ಮಹಾಲಕ್ಷ್ಮಿಯನ್ನು ಕುರಿತು ಹೇಳುವ

> 'ಪರಿ ಪರಿ ಧ್ಯಾನಿಸಿ ಎನ್ನ ಮನಮಂದಿರವೆಂಬ
> ವರ ಗೃಹದಲಿ ಯನ್ನಯ ಭಕ್ತಿ ಮಂಟಪದಿ
> ಹರದಿ ಲಕುಮಿ ನಿನ್ನ ಪೂಜಿಸುವೆ
> ಭಕ್ತಿಯ ಸುರಗಿ, ವಿರಕ್ತಿಯ ಪಚ್ಚೆತೆನೆ
> ಯುಕ್ತಿಯ ಮರುಗ ಶಕ್ತಿ ಸ್ವರೂಪಳೆ
> ಭಕ್ತ ವತ್ಸಲನಿಗೆ ಇತ್ತಪೆ ನಾನೀಗ

ಸ್ತುತ್ಯ ಶ್ರೀ ಶ್ರೀನಿವಾಸ ದೇವ ಮತ್ತೆ ನೀನೆಂದು' ಎನ್ನುವ ಹಾಡುಗಳು

ಸರಸ್ವತಿಯನ್ನು ಕುರಿತು

ಅಕ್ಷರಕ್ಷರ ರೂಪದ ಶ್ರೀಹರಿಯಾ

ಅಕ್ಷಯ ನಾಮವನು ಸ್ತುತಿಯಮಾಳ್ಪ

ಸುಕ್ಷೇಮ ಪಡೆದಿಹ ಮಾತೆ ಸರಸ್ವತಿ ಪ್ರತಿ

ಅಕ್ಷರವನೂ ಅರಿವ ಭಾಗ್ಯವ ತೋರೆ

ಎಂದು ಬೇಡುವ ಹಾಡು ತಮ್ಮ ಕಲ್ಪಕತೆಯಿಂದ ರಮಣೀಯವಾಗಿವೆ.

ಚಂಚಲ ಚಿತ್ತವನ್ನು ನಿಯಂತ್ರಿಸುತ್ತಾ

'ತಾಳು ತಾಳೆಲೆ ಮನವೆ ನಿನ್ನಾಳುವ ದೊರೆಯಿಹ

ಗಾಳಾಗಿ ನೀ ಬಾಳಲು ಕಾಳು ಮಾಡನು ಹರಿ' ಎನ್ನುತ್ತಾರೆ.

'ಗಾಣಕೆ ಸಿಲ್ಕಿದ ಎಳ್ಳು ಸ್ವಚ್ಛದೆಣ್ಣೆ ಮಾಣದೆ ಬರುವ ತೆರ' ಭಕ್ತಿಯ ರಸ ಚಂಚಲ ಚಿತ್ತವನ್ನು ಭಗವಂತನೆಡೆಗೆ ಕೇಂದ್ರೀಕರಿಸುವುದರಿಂದ ಬರುತ್ತದೆ ಎಂದು ಹೇಳುತ್ತಾರೆ.

ಭಗವಂತ ಭಕ್ತನನ್ನು ಹಲವು ಬಗೆಯಲ್ಲಿ ಪರೀಕ್ಷಿಸಿ 'ಕಟ್ಟ ಕಡೆಗೆ ನಿನ್ನ ಧ್ಯಾನ ಕೊಟ್ಟು ಕಾಯುವ ಘಟ್ಟಿ ಕಂಕಣ ತೊಟ್ಟು' ನಿಂತಿದ್ದಾನಂತೆ. ಆದುದರಿಂದಲೇ 'ಭಕ್ತರಂಹಂಕಾರ ಯುಕ್ತೀಲಿ ಕಳೆವ ಶಕ್ತ ನೀನಲ್ಲವೆ ಮುಕ್ತೀಶ' ಎಂದು ಆತನನ್ನು ಕೊಂಡಾಡುತ್ತಾರೆ

'ಪರರ ಮನೆಗೆ ಪೋಗಿ ಯಾಕೆ ತಿರುಗುತಿ

ಸುರ ತರುವಿರುವುದು ಅರಿಯದೆ ಮನುಜ' ಎಂದು ಪ್ರಶ್ನಿಸುತ್ತಾರೆ.

'ರಂಗವಾಲಿಯನಿಡು ತಂಗಿ ನಿನ್ನಂತರಂಗದಂಗಳ ಸಾರಿಸಿ ರಂಗಗರ್ಪಿತ-ವೆಂದು' ಎಂದು ಹೇಳುವ ಅವರು ಅದು ಎಂತಹ ರಂಗವಲ್ಲಿ ಎನ್ನುವುದನ್ನೂ ವಿವರಿಸಿದ್ದಾರೆ.

'ಅಚ್ಚ ಭಕುತಿಯೆಂಬ ಶ್ವೇತ ಕಲ್ಲನೆ ಕುಟ್ಟಿ

ಅಚ್ಚುತ ನಾಮ ಪವಳ ಬೆರೆಸಿ

ಸ್ವಚ್ಛ ಮುತ್ತುಗಳೆಂಬಂಥ ಶೀಲತೆಯಿಂದ' ರಂಗವಲ್ಲಿಯನಿಡು ಎಂದಿದ್ದಾರೆ. ಹಾಗೆಯೇ ಭಗವಂತನ ನಾಮವೆನ್ನುವುದು ಒಂದು ಪೆಪ್ಪರ್ ಮೆಂಟಿನಂತೆ ಎನ್ನುವ ತೀರ ಇತ್ತೀಚಿನ ಕಲ್ಪನೆಯ ಉಪಮೆ ಕೂಡ ಅವರಲ್ಲಿದೆ.

'ಕಾಸಿಗೆ ಸಿಗದ ಪೆಪ್ಪರಮೆಂಟ್
ಸೂಸಿ ಉಕ್ಕುವೊ ಪೆಪ್ಪರಮೆಂಟ್
ಸಾಸಿವೆಯಷ್ಟೊತ್ತು ನೆನೆದರೆ
ಸಾಕೆಂಬ ಕಲಿಯುಗ ಮಹಿಮೆಯ ಪೆಪ್ಪರಮೆಂಟ್

ಶ್ರೀನಿವಾಸಕಲ್ಯಾಣ', 'ಕೃಷ್ಣಲೀಲೆ', 'ಪ್ರಹ್ಲಾದ ಚರಿತೆ', 'ಪ್ರಮೀಳಕಾಳಗ', 'ಮಕ್ಕಳಿಗೆ ಶ್ರೀ ಕೃಷ್ಣನ ಮೇಲೆ ಭಕ್ತಿ ಹುಟ್ಟುವ ಕಥೆ' ಇವು ಅವರ ದೀರ್ಘ ಕೃತಿಗಳು. ಭವಿಷ್ಯೋತ್ತರ ಪುರಾಣೋಕ್ತವಾದ, ತಮ್ಮ ಇಷ್ಟದೈವ ಶ್ರೀನಿವಾಸ - ಪದ್ಮಾವತಿಯರ ಕಲ್ಯಾಣದ ಕತೆಯನ್ನು ಸುಲಿತವಾದ ಪದ್ಯಗಳ ಮೂಲಕ ಸರಸ ಮನೋಹರ ಶೈಲಿಯಲ್ಲಿ ಹೇಳಿದ್ದಾರೆ. ಸಂಕ್ಷಿಪ್ತತೆಗೇ ಇಲ್ಲಿ ಪ್ರಾಮುಖ್ಯ ಕೊಡಲಾಗಿದೆ. 'ಕೃಷ್ಣಲೀಲೆ' ಕೃಷ್ಣನ ಜನನ - ಬಾಲ್ಯ - ಬಾಲಲೀಲೆಗಳನ್ನು ಲಾವಣಿಮಟ್ಟಿನಲ್ಲಿ ಹೇಳುವ ಕೃತಿ. ದೇವಕಿ - ವಸುದೇವರ ಕಾರಾಗೃಹವಾಸ, ಕೃಷ್ಣನ ಜನನ, ಯಮುನಾನದಿಯ ಕರುಣೆಯಿಂದ ಕೃಷ್ಣನನ್ನು ಹೊತ್ತ ವಸುದೇವ ಯಶೋದೆಗೆ ಕೃಷ್ಣನನ್ನು ಒಪ್ಪಿಸುವುದು, ಗೋಕುಲದಲ್ಲಿ ಕೃಷ್ಣನ ಬಾಲಲೀಲೆಗಳು, ಕಾಳಿಂಗ ಮರ್ದನ, ಶಕಟಾಸುರ ವಧೆ, ಗೋಪಿಕಾಸ್ತ್ರೀಯರೊಡನಾಟ, ಕಂಸವಧೆ ಹೀಗೆ ಕೃಷ್ಣನ ಜೀವನದ ಅತ್ಯಂತ ರೋಚಕವಾದ ಘಟನೆಗಳನ್ನು ಪದ್ಯಗಳ ರೂಪದಲ್ಲಿ ಹೇಳಿದ್ದಾರೆ. ಇವುಗಳೆಲ್ಲವುಗಳಿಗಿಂತ ಭಿನ್ನವಾದ 'ಪ್ರಮೀಳ ಕಾಳಗ' ನಡುಗನ್ನಡದಲ್ಲಿ ಹಾಡು-ವಚನಗಳ ಸಹಿತವಾಗಿ ಸ್ವಾರಸ್ಯವಾಗಿದೆ. 'ಕೀರ್ತನ ರೂಪದಿ' ಕತೆ ಹೇಳುತ್ತೇನೆ ಎಂದು ಕೃತಿಕಾರರು ಇಲ್ಲಿ ಹೇಳಿದ್ದಾರೆ. ಮಕ್ಕಳಿಗೆ ಶ್ರೀ ಕೃಷ್ಣನ ಕತೆ ಹೊಸಗನ್ನಡದಲ್ಲಿ ಆಡು ಮಾತಿನಲ್ಲಿ ಗದ್ಯ - ಪದ್ಯಗಳ ರೂಪದಲ್ಲಿ ಹೇಳಿದ ಕೃಷ್ಣನ ಕತೆ. ಅವರ ಕುಟುಂಬದ ಸದಸ್ಯರು ಹೇಳುವಂತೆ ಅದು ಇಂದಿನ ಮಕ್ಕಳಿಗಾಗಿ ಹೇಳಿದ ಸುಲಭ ಭಾಷೆಯ ಕೃಷ್ಣ ಚರಿತೆ. ತಮ್ಮ ಮಕ್ಕಳು - ಮೊಮ್ಮಕ್ಕಳು ಅಪೇಕ್ಷಿಸಿದಾಗ, ವಿಶೇಷ ಸಂದರ್ಭಗಳಿಗಾಗಿಯೇ ಸರಸ್ವತಿಬಾಯಿ-ಯವರು ಹಾಡುಗಳನ್ನು, ಬರೆದು ಕೊಡುತ್ತಿದ್ದರಂತೆ ಹಾಗೆಯೇ ಮಕ್ಕಳನ್ನು

ಆಕರ್ಷಿಸಲೋಸುಗ ಪ್ರಚಲಿತವಾಗಿರುವ, ಜನಪ್ರಿಯ ಹಾಡುಗಳ ಧಾಟಿಯಲ್ಲಿಯೇ ಹಾಡುಗಳನ್ನು ಬರೆಯುವ ಕಲೆ ಅವರಿಗೆ ಸಿದ್ಧಿಸಿತ್ತು.

ಸಾಂಸಾರಿಕ ಜೀವನದ ನೋವು, ಕಷ್ಟ–ಸುಖಗಳ ನಡುವೆಯೇ ಜೀವಿಸುತ್ತಾ, ಪಾರಮಾರ್ಥದೆಡೆಗೆ ಮನಸ್ಸನ್ನು ಹೊರಳಿಸಿ ಆತ್ಮೋನ್ನತಿಯ ದಾರಿಯನ್ನು ಕಂಡುಕೊಂಡ ಈ ಸಾಧ್ವಿಮಣಿಯ ಸಾಧನೆ ಇಷ್ಟು ವರ್ಷಗಳು ಎಲೆಮರೆಯ ಕಾಯಿಯಂತೆಯೇ ಉಳಿದಿತ್ತು. ಈಗ ಕಾಲ–ಕಾರ್ಯಗಳು ಕೂಡಿ ಬಂದು ಅವರ ಕೃತಿಗಳು ಬೆಳಕಿಗೆ ಬರುವಂತಾಗಿದೆ. ಸರಸ್ವತಿಬಾಯಿಯವರ ಪುತ್ರರಾದ ಶ್ರೀ ಸತ್ಯನಾರಾಯಣರಾವ್ ಮತ್ತು ಅವರ ಕುಟುಂಬ ವರ್ಗದವರು ನಮ್ಮ ಮೇಲೆ ಭರವಸೆಯನ್ನಿಟ್ಟು ಹಸ್ತಪ್ರತಿಗಳನ್ನು ನೋಡಲು ಮತ್ತು ಆಕೆಯ ಲೌಕಿಕ–ಆಧ್ಯಾತ್ಮಿಕ ಜೀವನದ ಬಗ್ಗೆ ಅನೇಕ ಅಮೂಲ್ಯ ವಿಷಯಗಳನ್ನು ತಿಳಿಸಿದ್ದಾರೆ. ಶ್ರೀಮತಿ ಸರಸ್ವತಿಬಾಯಿಯವರ ಮಕ್ಕಳು, ಮೊಮ್ಮಕ್ಕಳ ಸಹಾಯ ಸಹಕಾರಗಳಿಂದಲೇ ಈ ಸಂಗ್ರಹ ಸಿದ್ಧವಾಗಿದೆ. ಅವರಿಗೆ ನಾವು ಋಣಿಗಳಾಗಿದ್ದೇವೆ.

ಹಸ್ತಪ್ರತಿಯನ್ನು ಪರಿಶೀಲಿಸಿ ಸಂಪಾದನೆಯ ಎಲ್ಲ ಹಂತಗಳಲ್ಲಿಯೂ ತಮ್ಮ ಅಮೂಲ್ಯವಾದ ಸಲಹೆ ಸೂಚನೆ ಮಾರ್ಗದರ್ಶನಗಳನ್ನಿತ್ತು ಸಹಕರಿಸಿದ ಕಾರ್ಯ ನಿರ್ವಾಹಕ ಸಂಪಾದಕರಾದ ಶ್ರೀಮತಿ ಡಾ॥. ಟಿ. ಎನ್. ನಾಗರತ್ನ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲಬೇಕು. ಸಮಗ್ರ ದಾಸ ಸಾಹಿತ್ಯ ಮಹಿಳಾ ಸಂಪುಟಕ್ಕೆ ಸರಸ್ವತಿಬಾಯಿಯವರ ಸಂಗ್ರಹವನ್ನು ಸೇರಿಸಿಕೊಳ್ಳಲು ಒಪ್ಪಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳು.

ಮೀನಾರಾವ್

ನಳಿನಿ ವೆಂಕಟೇಶ್

# ಕೀರ್ತನೆಗಳ ಕ್ರಮಸೂಚಿ

## ೨. ಶಾಂತಿಬಾಯಿಯವರ ಕೀರ್ತನೆಗಳು

## ೫. ನಂಜನಗೂಡು ತಿರುಮಲಾಂಬಾ ಅವರ ಕೀರ್ತನೆಗಳು

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೫. | ಶ್ರೀರಮಣೀಮಣಿ ಬಾರೌ ಶ್ರೀಕರಮಣಿಪೀಠಕೆ | ೩೨೪ |
| ೩೬. | ಸಾರಸಾಕ್ಷಿ ಬಾ ಬಾ ಬೇಗ ಸಾರಿ ನೀಂ | ೩೨೪ |
| ೩೭. | ಸಿರಿಯು ಬರುವ ಸೊಬಗ ನೋಡಿರೆ ಭರದಿ ಬನ್ನಿರೆ | ೩೨೫ |
| ೩೮. | ಕ್ಷೀರವಾರಿಧಿಜಾತೆ ಚಾರುಸುಂದರಗಾತ್ರೆ | ೩೨೫ |
| ೩೯. | ಅಪ್ರಮೇಯ ಎನ್ನ ಪಾಲಿಸೈ | ೩೨೬ |
| ೪೦. | ಇನ್ನೇನಿನ್ನೇನಿನ್ನು ಯನಗಿನ್ನೇನಿನ್ನೇನಿನ್ನು | ೩೨೭ |
| ೪೧. | ಇಷ್ಟೇಕೆ ನಿರ್ದಯ ಶ್ರೀಹರಿಯೇ ಸೃಷ್ಟೀಪತಿಯೆ | ೩೨೭ |
| ೪೨. | ಇವನ್ಯಾರೆ ಇವನ್ಯಾರೆ ಧರೆಯೊಳು ಮೆರೆ | ೩೨೯ |
| ೪೩. | ಎಲ್ಲಿಗೆ ಪೋದಪೆ ಮಲ್ಲಿಮರ್ಧನ ಕೃಷ್ಣ | ೩೨೯ |
| ೪೪. | ಏತಕಿನಿತು ಕೋಪವಾಂತು ಭೀತಿಗೊಳಿಸುವೆ | ೩೩೦ |
| ೪೫. | ಏತಕೀಪಂಥ ಜಾನಕೀಕಾಂತ | ೩೩೧ |
| ೪೬. | ಏನಗೈದೊಡೇನು ನಿನ್ನ ಬಿಡೆನು ನಾನೆಲ್ಶೆ | ೩೩೧ |
| ೪೭. | ಏನಿದ್ದರೇನಯ್ಯ ಜ್ಞಾನವಿಲ್ಲದಿರೆ | ೩೩೨ |
| ೪೮. | ಕಂದನ ಕೈಪಿಡಿ ಶೌರೀ ವಂದಿಪೆ ಕಂಸಾರಿ | ೩೩೩ |
| ೪೯. | ಕನಸಿನಲಿ ಕಂಡೆನು ಹರಿಯ ಇಂದು | ೩೩೪ |
| ೫೦. | ಕರುಣಿಸು ಕಾರುಣ್ಯನಿಧಿಯೇ ನಿನ್ನ | ೩೩೫ |
| ೫೧. | ಕಾಯವ ನೆರೆನಂಬಿ ಕೆಡದಿರು ಮಾಯೆಯ ತಿಳಿದೇಳು | ೩೩೬ |
| ೫೨. | ಕೈಯ ತೋರೋ ರಂಗ ಕೈಯ ತೋರೋ | ೩೩೭ |
| ೫೩. | ಜಯ ಜಯ ದ್ವಾರಕಾವಾಸ ಜಯ ಮುನಿಮಾನಸಹಂಸ | ೩೩೮ |
| ೫೪. | ಜಯಜಯ ನಂದಕುಮಾರ ಜಯ ವೃಂದಾವನ ವಿಹಾರ | ೩೩೮ |
| ೫೫. | ಜಯಜಾನಕೀರಮಣ ಜಯಕೌಸ್ತುಭಾಭರಣ | ೩೩೯ |

## ಭದ್ರ ಗೀತಾವಳಿ

## ೬. ರಾಧಾಬಾಯಿಯವರ ಕೀರ್ತನೆಗಳು

## ೭. ಕಳಸದ ಸುಂದರಮ್ಮನವರ ಕೀರ್ತನೆಗಳು

## ದೇವಾನುದೇವತೆಗಳ ಸ್ತುತಿ

### ಲಕ್ಷ್ಮೀದೇವಿಯವರು

**ಸಂಪ್ರದಾಯದ ಕೀರ್ತನೆಗಳು**



**ದೀರ್ಘಕೃತಿಗಳು**

# ಶ್ರೀಹರಿಸ್ತುತಿಗಳು

## ೧

ಕಂಡು ನಾ ಧನ್ಯನಾದೆನೋ ಶ್ರೀ ಪುರುಷೋತ್ತಮ
ಪುಂಡರೀಕಾಕ್ಷ ವಿಷ್ಣುಪಾದವ ಪ

ಮಗಧನಾ ದೇಶದಲ್ಲಿ ಚಂಪಕಾರಣ್ಯದಲ್ಲಿ ಮಧುವನದ
ಮಧ್ಯದಿನಿಂದ ಮದನನಯ್ಯನ ಪಾದವ ೧

ಶ್ರೇಷ್ಠ ಗಯಾಸುರನ ಶಿರವ ಮೆಟ್ಟಿ ಅವನ ದರ್ಪವ
ನಷ್ಟವನ್ನು ಮಾಡಿದ ಸೃಷ್ಟಿಗೀಶ್ವರನ ಪಾದವ ೨

ಪುಂಡರೀಕಾಕ್ಷನಾಗಿ ಗದಾಧರ ಜನಾರ್ದನ ಅವನ
ಮಂಡೆಯನ್ನು ತುಳಿದ ಭೂಮಂಡಲಾಧಿಪನ ಪಾದವ ೩

ಬೇಡಿಕೊಳ್ಳಲು ಅಂದು ಗಯನು ಬಂದು ಅವನ ಶಿರದ ಮೇಲೆ
ಪಿಂಡವಿಟ್ಟವರ ಪಿತೃಗಳಿಗೆ ಆನಂದಲೋಕವೀವ ಪಾದವ ೪

ಅರುಣ ಉದಯದಲ್ಲಿ ಎದ್ದು ಪರಮಭಕ್ತರೆಲ್ಲ ಮಿಂದು
ಹರಿಗೆ ಅಭಿಷೇಕ ಮಾಡಿ ಭರದಿ ಭಜನೆ ಮಾಳ್ಪ ಪಾದವ ೫

ಸಾಸಿರನಾಮದಿಂದ ಉಲ್ಲಾಸದಿ ಪೂಜಿಸಿ ಜನರು
ಲೇಸಾಯಿತೆಂದು ಪೋಪ ಈಶನ ಪಾದವ ೬

ಸಂಧ್ಯಕಾಲದಲ್ಲಿ ಹರಿಗೆ ಗಂಧಮಾಲೆಯನ್ನು ಧರಿಸೀ ಸು
ಗಂಧವಾದ ತುಳಸಿ ಸುತ್ತಲು ಗೋವಿಂದನ ಶ್ರೀಪಾದವ ೭

ಧರಣಿಯನಾಳಿದ ಪಾದ ಫಣಿಯಮೇಲೆ ನಲಿದ ಪಾದ
[ಸಿರಿ] ದ್ಯುಮಣಿಕೋಟಿಕಾಂತಿ ಪಾದ ಫಲ್ಗುನೀತೀರದಿನಿಂದ ಪಾದ ೮

ವಜ್ರಾಂಕುಶಧ್ವಜ ಪದ್ಮರೇಖೆಗಳುಳ್ಳ ಮುದ್ದುವೇಂಕಟನ ಪಾದ
[ಸಜ್ಜನರಿಗೆ ] ಮುಕ್ತಿಯನ್ನು ಕೊಡುವ ಪಾದವ ೯

೨

ಕಣ್ಣಾರೆ ನೋಡೆನ್ನ ಕರುಣಾ ಕಟಾಕ್ಷದೀ ಇಂದಿರಾರ
ಮಣಾ ಅರವಿಂದನೇತ್ರದಲಿ ಪ

ಕೌಸಲ್ಯಾದೇವಿಗೆ ಮೋಹಪಡಿಸಿದ ನೇತ್ರ
ದಶರಥನಿಗೆ ದಿವ್ಯಪ್ರಾಣನೇತ್ರಾ
ಶಶಿಮುಖಿ ಸೀತೆಯ ಬಿಡದೆ ನೋಡುವ ನೇತ್ರಾ
ಶಶಿ ರವಿ ಕಾಂತಿಗೆ ಸಮನಾದ ನೇತ್ರದೀ ೧

ಕೌಸಲ್ಯಾದೇವಿಗೆ ಮೋಹಪಡಿಸಿದ ನೇತ್ರ
ದಶರಥನಿಗೆ ದಿವ್ಯಪ್ರಾಣನೇತ್ರಾ
ಶಶಿಮುಖಿಯರನೆಲ್ಲಾ ಒಲಿಸಿದ ನೇತ್ರ[ವರ
ಸತಿ] ರುಕ್ಮಿಣಿದೇವಿಯ ಪ್ರಾಣನೇತ್ರಗಳಿಂದ ೨

ಪಾರ್ವತೀರಮಣನ ಮೋಹಪಡಿಸಿದ ನೇತ್ರ
ಅಸುರರು ಮೋಹಿಸಿ ಭ್ರಮಿಸಿದ ನೇತ್ರ
[ನಿರುತ ] ಪದ್ಮಿನೀ ರೂಪಿನಲಿ ಮಗ್ನವಾಗಿಹ ನೇತ್ರ
ಶ್ರೀನಿವಾಸನೆ ನಿಮ್ಮ ಕರುಣ ನೇತ್ರಗಳಿಂದಾ ೩

## ೩

ಪಾದವನು ನಂಬಿದೆನೊ ಪರಮಪುರುಷಾ
ಪಾವನನ ಮಾಡೆನ್ನ ಶ್ರೀರಂಗನಾಥ ಪ

ಚೆಲುವ ವಾಮನನಾಗಿ ಬಲಿಯ ಬೇಡಿದ ಪಾದ
ಧರಣಿಯೀರಡಿಯಿಂದಲಳದ ಪಾದ ಬಲಿಯ
ಪಾತಾಳದೊಳಗಿಟ್ಟು ಕಾಯ್ದ ಪಾದ
ಸುಲಭದಲಿ ಇಂದ್ರನಿಗೆ ಪದವಿಯನಿತ್ತ ಪಾದ ೧

ಅಂಡವನು ಭೇದಿಸಿ ಗಂಗೆ ಪಡೆದ ಪಾದ
ಬ್ರಹ್ಮದೇವರು ತೊಳೆದು ಪೂಜಿಸಿದ ಪಾದ
ಇಂದ್ರಾದಿಸುರರೆಲ್ಲ ವಂದಿಸಿದ ಪಾದ
ಇಂದಿರಾ ಹೃದಯಾಕ್ಕಾನಂದ ತೋರಿದ ಪಾದ ೨

ದುರುಳತನವನು ಮಾಡೆ ಯಶೋದೆ ಕಟ್ಟಿದ ಪಾದ
ಅಸುರ ಶಕಟನ ತುಳಿದ ದಿವ್ಯ ಪಾದ
ಒರಳನೆಳೆದು ಮತ್ತಿಮರನ ಒಡೆದ ಶ್ರೀಪಾದ
ಯಮಳರಿಗೆ ಮುಕ್ತಿಯನು ಇತ್ತ ಪಾದ ೩

ಕಾಳಿಮಡುವನು ಕಲಕಿ ಫಣಿಯ ತುಳಿದ ಪಾದ
ಅಂದುಗೆ ಗೆಜ್ಜೆಯಳವಟ್ಟ ಪಾದ
ನಾಗಕನ್ನಿಕೆಯರಿಗೆ ಮಾಂಗಲ್ಯವಿತ್ತ ಪಾದ
ನಾರದಾದಿವಂದ್ಯ ಶ್ರೀಹರಿ ನಿಮ್ಮ ಪಾದ ೪

ದುರುಳ ಕಂಸಾಸುರನ ಎದೆಯ ತುಳಿದ ಪಾದ
ಮುಚುಕುಂದಗೆ ಮುಕ್ತಿಯನಿತ್ತ ಪಾದ

ಭರದಿ ಗೋಮಂತವನುಯೇರಿದ ಶ್ರೀಪಾದ
ಕಿಚ್ಚು ಬಳಸಲು ಪರ್ವತವನೆತ್ತಿದ ಪಾದ ೫

ಶಿಲೆಯಾದ ಆಹಲ್ಯೆಯನು ಕಾಯ್ದ ಪಾದ
ಭರದಿಂದ ಮಿಥಿಲೆಗೆ ನಡೆದ ಪಾದ
ಹರನ ಧನುವನು ಮುರಿದು ಜಾನಕಿಯ ತಂದ ಪಾದ
ಪರಮಪಾವನ ಸೀತಾಪತಿ ನಿಮ್ಮ ಪಾದ ೬

ಮಾತೆ ನುಡಿಯನು ಕೇಳಿ ವನಕೆ ನಡೆದ ಪಾದ
ಭರತನಿಗೆ ಒಲಿದು ಪಾದುಕೆಯಿತ್ತ ಪಾದ
ಸೇತುಬಂಧನ ಮಾಡಿ ಸೀತೆಯನು ತಂದ ಪಾದ
ಭಕ್ತ ವಿಭೀಷಣಗೆ ಅಭಯವನಿತ್ತ ಪಾದ ೭

ಸೀತಾಪ್ರತಿಜ್ಞೆಯನು ಮಾಡಿಸಿದ ಶ್ರೀಪಾದ
ನಂದಿಗ್ರಾಮದಲಿ ಭರತನನು ಕಾಯ್ದ ಪಾದ
ಅನುಜರೊಡಗೊಂಡು ಅಯೋಧ್ಯೆಗೈದಿದ ಪಾದ
ಸೀತೆ ಸಹಿತಲೆ ಪೀಠದಲಿವೊಪ್ಪಿದ ಪಾದ ೮

ರಾಜಸೂಯಾಗದಲಿ ಪೂಜೆಗೊಂಡ ಪಾದ
ಶಿಶುಪಾಲಗೆ ಮುಕ್ತಿಯನಿತ್ತ ಪಾದ
ದಂತವಕ್ರಾದಿಗಳನು ಸೆಳೆದುಕೊಂಡ ಪಾದ
ಅಖಿಲವೇದಗಳೆಲ್ಲ ಅರಸಿ ಬಂದ ಪಾದ ೯

ಕುರುಪಾಂಡವರಿಗೆ ಸಂಧಿಗೈತಂದ ಪಾದ
ವಿದುರನಾ ಮನೆಯಲ್ಲಿ ಭೋಜನಗೈದ ಪಾದ
ಭರದಿ ಧೃತರಾಷ್ಟನರಮನೆಗೆ ನಡೆತಂದ ಪಾದ
ದುರುಳ ದುರ್ಯೋಧನನ ಉರುಳಿಸಿದ ಶ್ರೀಪಾದ ೧೦

ರಣದೊಳಗೆ ಅರ್ಜುನಗೆ ಸಾರಥಿಯಾದ ಪಾದ
ದೊರೆ ಧರ್ಮಾದಿಗಳ [ನು] ಒಲಿದ ಪಾದ
ಸರ್ಪಬಾಣವು ಬರಲು ಧರಣಿವೊತ್ತಿದ ಪಾದ
ಕರುಣದಿಂದರ್ಜುನನ ಶಿರವ ಕಾಯ್ದ ಪಾದ ೧೧

ಬ್ರಹ್ಮದೇವರ ತಪಸಿಗೊಲಿದು ಬಂದ ಪಾದ
ಇಕ್ಷ್ವಾಕು ಶ್ರೀರಾಮರಾರಾಧಿಸಿದ ಪಾದ
ಧರ್ಮವರ್ಮಾದಿ ಚೋಳೇಂದ್ರ ಪೂಜಿತ ಪಾದ
ಉಭಯ ಕಾವೇರಿ ನಿಲಯ ಶ್ರೀರಂಗ ನಿಮ್ಮ ಪಾದ ೧೨

ತೊಂಡಮಾನ್ ಚಕ್ರವರ್ತಿಗೊಲಿದು ಬಂದ ಪಾದ
ಶೇಷಾದ್ರಿಗಿರಿಯಲ್ಲಿ ನೆಲೆಸಿರ್ಪ ಪಾದ
ಆದಿವರಹಾರೊಡನೆ ಸ್ಥಳವ ಬೇಡಿದ ಪಾದ
ಸ್ವಾಮಿ ಪುಷ್ಕರಿಣಿನಿಲಯ ಶ್ರೀನಿವಾಸ ನಿಮ್ಮ ಪಾದ ೧೩

ಅಜನ ಯಜ್ಞಕುಂಡದೊಳಗುದಿಸಿ ಬಂದ ಪಾದ
ಹಸ್ತಿಗಿರಿಯಲ್ಲಿ ನೆಲೆಸಿರ್ಪ ಪಾದ
ವ್ಯಾಧರೂಪಿನಲ್ಲಿ ನಡೆತಂದ ಶ್ರೀಪಾದ
ವರವ ಪಾಲಿಸೆ ವರದಯೆಂಬೋ ಬಿರುದುಳ್ಳ ಪಾದ ೧೪

ಭಾಷ್ಯಕಾರರ ಸ್ವಪ್ನಗೊಲಿದು ಬಂದ ಪಾದ
ಯಾದವಾಗಿರಿಯಲ್ಲಿ ನೆಲೆಸಿರ್ಪ ಪಾದ
ವರಸಂಧಿಗೃಹದಲ್ಲಿ ವಾಸವಾಗಿಹ ಪಾದ
ಭಾಷ್ಯಕಾರರು ಸುತ್ತಿಸೆ ಭರದಿ ಬಂದ ಪಾದ ೧೫

ಕರುಣದಿಂದರ್ಜುನಿಗೆ ಸಾರಥಿಯಾದ ಪಾದ
ಕೈರವಿಣೀ ತೀರದಲಿ ನೆಲೆಸಿರ್ಪ ಪಾದಾ
ರುಕ್ಮಿಣೀ ಬಲಭದ್ರರೊಡನೆ ಒಪ್ಪಿದ ಪಾದ
ಕರುಣ ವೆಂಕಟಕೃಷ್ಣನೆಂಬೊ ಬಿರುದರಳ್ಳ ಪಾದಾ ೧೬

೪

ಎಲ್ಲಿದ್ದರು ಕಾಯ್ವ ಯದುಕುಲತಿಲಕ। ಭಕ್ತ
ರೆಲ್ಲಿದ್ದರು ಕಾಯ್ವ ಯದುಕುಲತಿಲಕ ಪ

ಅಡವಿಯೊಳಿರಲು ಅರಣ್ಯದೊಳಿರಲು
ಮಡುವಿನೊಳಿರಲು ಮರದ ಮೇಲಿರಲು
ಪೊಡವಿಗೀಶ್ವರ ತಾನು ದೃಢಭಕ್ತನಂ
ಬಿಡದೆ ರಕ್ಷಿಸುವ ಯೆಂತೆಂಬೊ ಬಿರುದು ೧

ತಂದೆಯ ಬಾಧೆಗೆ ಕಂದ ನಿಮ್ಮನು ಕರೆಯೆ
ಬಂದು ಕಂಭದಲಿ ನೀ ಕಾಯ್ದೆ ಗೋವಿಂದಾ
ಅಂದು ದ್ರೌಪದಿ ಹಾಯೆಂದು ಒದರಲು ಕೇಳಿ ಆ
ನಂದದಿಂದಕ್ಷಯವನಿತ್ತ ರಂಗನು ನೀನು ೨

ಭರದೆ ಭಗದತ್ತನು ಅಸ್ತ್ರ ಬಿಡಲು
ಕೊರಳ ಚಾಚಿದನಾಗ ಕರುಣಾವಾರಿಧಿಯು
ವರುಣಗದೆಯನಾಗ ಮರುಳತನದಿ ಬಿಡೆ
ಮರಳಿ ಅವನ ಉರುಳಿಸಿತು ಶೃತಾಯುವು ೩

ಸಿಂಧುರಾಜನ ಶಿರವ ಅವನ ತಂದೆ ಕೈಯಲಿ ಹಾಕಿ
ಬಂದ ಭಾರವನೆಲ್ಲಾ ಕಾಯ್ದೆ ಗೋವಿಂದ
ಸರ್ಪಬಾಣವ ಕರ್ಣ ದರ್ಪದಿಂದಲೆ ಬಿಡೆ
ಅಪ್ರಮೇಯನು ಭೂಮಿ ಕ್ಷಿಪ್ರದಿಂ ಒತ್ತಿದಾ ೪

ಅಂದು ಅರ್ಜುನ ತನ್ನ ಕಂದನೊಡನೆ ಕಾದೆ
ಹಿಂದಿನ ವೈರದಿಂ ಶಿರವನ್ನು ಹರಿಯೆ
ಬಂದು ಮುಕುಂದ ಸಂಧಿಸಿ ಶಿರವನ್ನು ಆ
ನಂದದಿಂದಲೆ ಕಾಯ್ದ ಇಂದಿರೆ ರಮಣ ೫

ಉತ್ತರೆ ಗರ್ಭವು ಬತ್ತಿ ಬೀಳಲು ಆಗ
ಉತ್ತಮ ಋಷಿಗಳೆಲ್ಲರ ನೋಡಿ
ನಿತ್ಯಬ್ರಹ್ಮಚಾರಿಗಳು ಪಾದದೀ
ಮೆಟ್ಟಿದರೆ ಬದುಕುವುದೆಂದನು ಕೃಷ್ಣ ೬

ಸನತ್ಕುಮಾರರು ಶೌನಕರು ಮೊದಲಾಗಿ ಪರುಶುರಾಮ
ಹನುಮಾದಿಗಳು ಬ್ರಹ್ಮಚರ್ಯವು
ನಮಗಿಲ್ಲವೆನುತ ಬ್ರಹ್ಮಚರ್ಯಕ್ಕೆ ಆಧಾರ ನೀನೆನ್ನಲು
ವಾಮಪಾದದಿ ತುಳಿದೆಬ್ಬಿಸಿದನು ಶಿಶುವ ೭

ಸರಸಿರುಹನಯನಾ ಫಣಿರಾಜಶಯನ
ಶರಣಾಗತದುರಿತಾಪಹರಣ
ದೈತೇಯಸಂಹರಣ ಗೋವರ್ಧನೋದ್ಧರಣ
ಪೀತಾಂಬರಾಭರಣ ಕೌಸ್ತುಭಾಭರಣ ೮

ಅಶ್ವತ್ಥಾಮನ ಅಸ್ತ್ರ ವಿಶ್ವವನು ಸುಡುತಿರೆ
ವಿಶ್ವನಾಯಕ ಶಮನ ಮಾಡಿ ಕಾಯ್ದು
ಅಸಮಸಾಹಸದಿ ಚಕ್ರವ ಪಿಡಿದು ಗರ್ಭದ
ಶಿಶುವನ್ನು ಕಾಯ್ದ ಕುಶಲಿ ವೆಂಕಟಕೃಷ್ಣ ೯

೫೫

ಅಭಯವನಿತ್ತು ಕಾಯೊ ರಂಗಯ್ಯ ನಿನ್ನಡಿಗೆರಗುವೆನು ನಾನು ಪ

ಭಾಷ್ಯಕಾರರಿಗೆರಗಿ ಶ್ರೀವೇದಾಂತ ಗುರುಗಳಿಗೆ ವಂದಿಸಿ
ಪತಿಯ ಪಾದಾರವಿಂದಕೆ ನಮಸ್ಕರಿಸಿ
ಲಕ್ಷ್ಮೀಪತಿ ನಿಮ್ಮ ಕರಗಳ ಸ್ತುತಿಸಿ ಬೇಡುವೆ ನಾನು ೧

ಮತ್ಸ್ಯಾವತಾರನಾಗಿ ವಾರಿಧಿಯೊಳಗಿರ್ಪ ದೈತ್ಯನ ಕೊಂದು
ಹೆಚ್ಚಿನ ವೇದವ ಅಜನಿಗೆ ತಂದಿತ್ತೆ
ಭಕ್ತವತ್ಸಲ ನಿಮ್ಮ ಕರಕಮಲಗಳಿಂದ ೨

ದೇವದೈತ್ಯರ ಮಧ್ಯದೀ ವಾರಿಧಿಯನ್ನು ವೇಗದಿಂದಲೆ ಮಥಿಸೇ
ಆವಸುರರು ಅಪಹರಿಸಿದ ಅಮೃತವ ಸಾಧುಜನಗಿತ್ತ
ಆ ವಿನೋದದ ಕರಗಳಿಂದ ೩

ಕ್ರೋಢರೂಪವ ಧರಿಸಿ ಹಿರಣ್ಯಾಕ್ಷನ ಕೋರೆಯಿಂದಲೆ ಕೊಂದು
ಧಾರುಣಿಯನು ತಂದು ಆದಿಮಾನವಗಿತ್ತ
ವಾರಿಜಾಕ್ಷನೆ ನಿಮ್ಮ ಧೀರಹಸ್ತಗಳಿಂದ ೪

ತರಳನ ನುಡಿಯ ಕೇಳಿ ಭರದಿ ಕಂಭದಲಿ ಬಂದು
ಕರುಳ ಬಗೆದ ವನಮಾಲೆಯ ಧರಿಸಿದೆ
ಶ್ರೀಪರಮಪಾವನ ನಿಮ್ಮ ಕರುಣಹಸ್ತಗಳಿಂದ ೫

ಪುಟ್ಟ ಬ್ರಾಹ್ಮಣನಾಗಿ ಕಾಶ್ಯಪನುದರದಲಿ ಜನಿಸಿ ಬಂದು
ತಟ್ಟನೆ ಯಜ್ಞಶಾಲೆಗೆ ಬಂದು ದಾನವ
ಪುಟ್ಟ ಕರಗಳಿಂದ ಅರ್ತಿಯಲಿ ಬೇಡಿದ ೬

ಅಂದು ಕ್ಷತ್ರಿಯರ ಕುಲವ ೊಡಲಿ ಪಿಡಿದುದ್ದಂಡ
ದಿಂದಲಿ ಕಡಿದು ತಂದೆಯ ನುಡಿ ಕೇಳಿ ತಾಯಿ ಶಿರವನರಿದೆ
ಇಂದಿರಾಪತಿ ನಿಮ್ಮ ಆನಂದ ಕರದಿಂದ ೭

ದಶರಥನುದರದಲಿ ಜನಿಸಿ ಬಂದು ಅಸುರರ ಸಂಹರಿಸಿ
ಶಶಿಮುಖಿ ಸೀತೆಗೋಸ್ಕರ ಧನುವನು ಮುರಿದ
ಅಸಮಸಾಹಸ ನಿಮ್ಮ ಕುಶಲಹಸ್ತಗಳಿಂದ ೮

[ಆ] ರೋಹಿಣೀ ಗರ್ಭದಲಿ ಜನಿಸಿ ರೇವತಿ ರಮಣನಾಗಿ
ಘೋರ ಪ್ರಳಯಸುರನ ಸಂಹರಿಸಿದೆ
ವಾರಿಜಾಕ್ಷನೆ ನಿಮ್ಮ ಧೀರಹಸ್ತಗಳಿಂದ ೯

ಮಧುರೆಯೊಳಗೆ ಜನಿಸಿ ಗೋಕುಲಕ್ಕೈತಂದು ಲೀಲೆಯ ತೋರಿ
ಮುದದಿಂದ ಪಾಲಬೆಣ್ಣೆ ಕದ್ದು ಗೋಪಿಯರಲ್ಲಿ ಪಿ
ಡಿದೆಳೆದೆ ಉಡುರಾಜನನು ಶ್ರೀಕರದೊಳು ೧೦

ಪತಿವ್ರತೆಯ ವ್ರತವ ಭಂಗವ ಮಾಡಿ ಚಪಳಚಾರನಾಗಿ
ಅತಿಶಯವಾದ ರಾಕ್ಷಸರ ಸಂಹರಿಸಿದೆ
ಪೃಥವಿ ಪಾಲಿಪ ನಿಮ್ಮ ಚತುರಹಸ್ತಗಳಿಂದ ೧೧

ಕಲ್ಕ್ಯಾವತಾರನಾಗಿ ಕುದುರೆ ಏರಿ ಸಂಹರಿಸುತಲೆ ಬಹು
ಬಲನಾದಂಥ ಕಲಿಯ ನಿಗ್ರಹಿಸಿದ ನಿಮ್ಮಕ
ಮಲಕರಗಳಿಂದ ದೇವ ಪರಮಪುರುಷ ೧೨

ಕಂದ ಧ್ರುವ ತಾನಡವಿಯಲಿ ನಿಂದು ತಪ ಮಾಡಲು
ಚಂದದಿ ಮಾಡಲು ಬಂದು ಸೇವೆಯನಿತ್ತು ಮತಿಗಾಗಿ
[ಅಂದು] ಶಂಖವನೊತ್ತಿದ ಕರದೊಳು ೧೩

ಅಂದು ಮಕರಿ ಕಾಲ ಪಿಡಿಯೆ ಗಜೇಂದ್ರ ನಿಮ್ಮ ಸ್ತುತಿಸೆ ಚಕ್ರ
ನಿಂದಲೇ ನಕ್ರನ ಕೊಂದು ಬೇಗದಿ ಕರಿಯ ರಕ್ಷಿಸ
ಬಂದ ಕರುಣಹಸ್ತಗಳಿಂದ ೧೪

ಅಂದು ಸುಧಾಮ ತಾನು ಶ್ರೀಹರಿಯ ಮಂದಿರಕೆ ಬರಲು
ಚಂದದಿಂದಲೆ ಆತಿಥ್ಯ ಮಾಡಿ ಅವ
ತಂದ ಅವಲಕ್ಕಿಯ ಕೊಂಡ ಕರಗಳಿಂದ ೧೫

ದುರುಳ ದುಶ್ಯಾಸನ ಸಭೆಯೊಳು ದ್ರೌಪದಿಯ ಸೀರೆಯೆಳೆಯು
ತಿರುವಾಗ ಹಾ ಕೃಷ್ಣ ದ್ವಾರಕಾವಾಸ ಯೆಂದು
ಮೊರೆಯಿಡೆ ಕೇಳಿ ಅಕ್ಷಯವೆನುತ ನೆಚ್ಚವನೆಚ್ಚ ಕರದೊಳು ೧೬

ವನದಿ ಪಾಂಡವರಿರಲು ದೂರ್ವಾಸರು ಬಂದು
ಗ್ರಾಸವ ಬೇಡಲು ಪರಮಪುರುಷ ನೀನೇ ಗತಿಯೆಂದು ದ್ರೌಪದಿ
ಮೊರೆಯಿಡೆ ಅಕ್ಷಯವ ಮಾಡಿದ ಕರದೊಳು ೧೭

ಮಂದಮತಿಯು ಜ್ಞಾನವೂ ನಿಮ್ಮ ಮಹಿಮೆ ಒಂದು ತಿಳಿಯದು
ಇಂದಿರೆ ರಮಣ ಶ್ರೀರಂಗನ ದಯದಿಂದ
ವಂದಿಸಿ ಬೇಡಿದೆ ಆನಂದಕರಗಳನ್ನು ೧೮

ವೇದಶಾಸ್ತ್ರಗಳನ್ನು ಅರಿಯದ ಪಾಮರಸ್ತ್ರೀಜನ್ಮವು ಕಾಮ
ಕ್ರೋಧವು ಲೋಭ ಮೋಹದಿಂದಲೆ ಬಿಡಿಸಿ ನಿಮ್ಮ
ಪಾದದೊಳಿರಿಸೆನ್ನ ಶ್ರೀನಿವಾಸನೆ ಅಭಯವನಿತ್ತು ಕಾಯೊ ೧೯

## ೬

ಮಂಗಳಂ ಶ್ರೀ ಪಾರ್ಥಸಾರಥಿಗೆ ಮಂಗಳಂ ಸಂಕರ್ಷಣನಿಗೆ
ಮಂಗಳಂ ಪ್ರದ್ಯುಮ್ನ ಅನಿರುದ್ಧ ಸಾತ್ಯಕೀಸಹ ಬಂದು ನಿಂದವಗೆ ಪ

ವಸುಧೆ ಭಾರವನಿಳುಹಲೆಂದು ದೇವಕೀ ವಸುದೇವರುದರದಿ
ಶಿಶುವಾಗಿ ಅಸುರ ಪೂತನಿಯಸುವ ನೀಗಿದ ಕುಸುಮನಾಭಗೆ ೧

ಪೂತನೀ ಮೊದಲಾದ ದುಷ್ಟಘಾತಕರ ಸಂಹರಿಸಿ ಬೇಗ
ವಾತಾಸುರನಕೊಂದು ಬಾಯೊಳುಮಾತೆಗೆ ಬ್ರಹ್ಮಾಂಡತೋರ್ದಗೆ ೨

ಒತ್ತಿ ಕಾಳಿಯ ಶಿರವನಾಗ ಸುತ್ತಿದಾ ಕಿಚ್ಚನ್ನು ನುಂಗಿ
ಎತ್ತಿ ಗೋವರ್ಧನಗಿರಿಯ ಹತ್ತಿ ಗೋಮಂತವನು ಹಾರ್ದಗೆ ೩

ಕೇಶಿಯನು ಸಂಹರಿಸಿ ದುಷ್ಟದ್ವೇಷಿಯಾದ ವೃಷಭನನು ಕೊಂದು
ದಾಸಿ ತಂದ ಗಂಧವನು ಪೂಸಿ ಮೆರೆದ ಕ್ಲೇಶನಾಶಗೆ ೪

ಬಿಲ್ಲು ಮುರಿದು ಬೀದಯಲ್ಲಿ ಎಲ್ಲರಿಗೆ ತಕ್ಕ ರೂಪ ತೋರಿ
ಮಲ್ಲರನು ಮರ್ಧಿಸುತ ಮಾವನ ಸೊಲ್ಲನಡಗಿಸಿದ ಪುಲ್ಲನಾಭಗೆ ೫

ರುಕ್ಮಿಣೀ ಸತ್ಯಭಾಮೆ ಕಾಳಂದಿ ಜಾಂಬವತಿಯು ಮೊದಲಾದ
ಲಕ್ಷ್ಮಣೆ ಸತ್ಯಭದ್ರೆ ಮಿತ್ರವಿಂದೆಯು ತಂದ ಲಕ್ಷ್ಮೀರಮಣಗೆ ೬

ಕೊಂದು ನರಕನ ಹದಿನಾರುಸಾವಿರ ಸ್ತ್ರೀಯರನು ಬೇಗ
ತಂದು ದ್ವಾರಕಿಯಲ್ಲಿ ಸತಿಸಹ ಆನಂದದಿಂದಲಿ ನಿಂದಕೃಷ್ಣಗೆ ೭

ಹೇಮದಾಭರಣವಿಟ್ಟು ರುಕ್ಮಿಣಿ ನೇಮದಿಂದಲೆ ಬೀಸುತಿರಲು
ಪ್ರೇಮಕಲಹದಿ ಬೀಳಲಾಕ್ಷಣ ವಿರಾಮವಿಲ್ಲದೆ ಎತ್ತಿದವಗೆ ೮

ಎತ್ತಿ ಅಂಕದೊಳಿಟ್ಟು ಪ್ರೇಮದಿ ಅರ್ಥಿಯಿಂದಲೆ ಕುರುಳನೇವರಿಸಿ
ತತ್ವವಾಕ್ಯವನ್ನು ಹೇಳಿದ ಮುಕ್ತಿದಾಯಕ ಮುದ್ದು ಕೃಷ್ಣಗೆ ೯

ಬಾಣನ ಬಾಹುಗಳ ಕಡಿದು ತ್ರಾಣನಾದದಿ ವಿಧನನು ಕೊಂದು
ಜಾಣತನದಲಿ ಕಾಶಿಯನುಸುಟ್ಟು ಪೌಂಡ್ರಕನಪ್ರಾಣಾಪಹರಿಸಿದವಗೆ ೧೦

ಮಿಥುಳವಾಸಿಗೆ ಮುಕ್ತಿಯನಿತ್ತು ಸುತನ ತಂದು ವಿಪ್ರನಿಗಿತ್ತು
ಹತವಮಾಡಿ ವೃಕಾಸುರನ ಶ್ರುತಿಗಗೋಚರನಾದ ಸ್ವಾಮಿಗೆ ೧೧

ಆದಿಪರ್ವದಿ ಪಾಂಡವರನು ಬಾಧಿಸುತ್ತಿರೆ ಕೌರವಾದಿಗಳು
ಅರಗಿನಮನೆಯಿಂದ ರಕ್ಷಿಸಿ ದ್ರೌಪದಿ ಸುಭದ್ರೆಯ ಸಾಧಿಸಿತ್ತಗೆ ೧೨

ನೆತ್ತವಾಡಿ ಕೌರವರೊಡನೆ ಅರ್ಥವನು ಸೋಲಲು ಪಾಂಡವರು
ಭಕ್ತವತ್ಸಲನೆನ್ನೆ ದ್ರೌಪದಿಗೆ ವಸ್ತ್ರವಿತ್ತು ಕಾಯ್ದ ಕೃಷ್ಣಗೆ ೧೩

ವನವಾಸದಲ್ಲಿ ಪಾಂಡವರು ಉಲ್ಲಾಸದಿಂದಲೆ ಇರುತಿರಲು
ಪಾಶುಪತ ವನು ಪಾರ್ಥನಿಗೆ ಈಶನಲಿ ಕೊಡಿಸಿದ ಸರ್ವೇಶಗೆ ೧೪

ವೇಷವನ್ನು ಮರೆಸಿಕೊಂಡು ವಿರಾಟನಗರದಿ ವಾಸ ಮಾಡಲು
ಮೋಸದಿಂದಲೇ ಕೀಚಕಾದಿಗಳ ನಾಶಮಾಡಿಸಿದ ವಾಸುದೇವಗೆ ೧೫

ಸಂಧಿ ಮಾಡುವೆನೆಂದು ಹೊರಟು ಬಂದು ವಿದುರನ
ಮನೆಯಲುಂಡು ಅಂದು ದುರ್‍ಯೋಧನ ಕಟ್ಟುವೆನೆನ್ನೆ
ಆನಂದರೂಪವ ತೋರಿದವಗೆ ೧೬

ಗಂಗಾಸುತನು ಮೊದಲು ಯುದ್ಧದಿ ಅಂಗಜನಯ್ಯನ
ಹೊಡೆಯಲು ಅಂಗೀಕರಿಸಿ ಭಕ್ತನ ಬಾಣವ ಸರ್ವಾಂಗದಿಂದಲೇ
ತೋರಿದವಗೆ ೧೭

ಜಾಹ್ನವೀಸುತನ ಯುದ್ಧವನ್ನು ತಾಳಲಾರದೆ ಜನರ್ಧನಗೆ ಪೇಳೆ
ಜಾಣತನದಲಿ ಶಿಖಂಡಿಯನುತೋರಿ ಬಾಣಮಂಚದಿ
ಮಲಗಿಸಿದವಗೆ ೧೮
ಸುಭದ್ರೆ ಪುತ್ರನ ಯುದ್ಧದಲ್ಲಿ ಪದ್ಮವ್ಯೂಹವ ಪೋಗಿಸಲಾಗ
[ಲಗುಬಗೆಯ]ಲ್ಲಿದ ಷಡುರಥರೊಡನೆ ಕಾದಿಸಿ
ಮುದ್ದುಬಾಲಕನ ಕೊಲಿಸಿದವಗೆ ೧೯

ಸಿಂಧುರಾಜನ ಕೊಲ್ಲುವೆನೆಂದು ನರನು ಪ್ರತಿಜ್ಞೆಮಾಡಲು
ತಂದಚಕ್ರವ ರವಿಗೆತೋರಿಸಿ ಸೈಂಧವನ ಕೊಲ್ಲಿಸಿದಸ್ವಾಮಿಗೆ ೨೦

ಆಚಾರ್ಯ[ನ] ಯುದ್ಧವ ತಾಳಲಾರದೆ ಆಪದ್ಧ ಧರ್ಮಜನಲ್ಲಿ
ಪೇಳಿಸಿ ಆಚಾರ್‍ಯ ಶಸ್ತ್ರವಬಿಡಲು ನೋಡಿಬೇಗ
ದೃಪತಿಯತೋರಿದವಗೆ ೨೧

ತೊಟ್ಟ ಬಾಣವ ತೊಡೆನೆಂದೆನುತಲೆ ಬಿಡಲು ಸರ್ಪಾಸ್ತ್ರವನು
ಕರ್ಣನು ಘಟ್ಟಿಯಾಗಿ ರಥವನೊತ್ತಿ ದಿಟ್ಟತನದಲಿ ಶಿರವ ಕಾಯ್ದಗೆ ೨೨

ಮದ್ರರಾಜನ ಕೊಲ್ಲುವೆನೆಂದು ಸಮುದ್ರಶಯನನ ಸಹಾಯದಿಂದ
ಭದ್ರಗಜವನು ಏರೆ ಧರ್ಮಜ ಕಾಲರುದ್ರನಂದದಿ ಕೊಲಿಸಿದವಗೆ ೨೩

ಭೀಮ ದುರ್ಯೋಧನರು ಯುದ್ಧದಿ ಹೇಮದ ಗದೆಯನ್ನು ಪಿಡಿದು
ಪ್ರೇಮದಿಂದಲೆ ಕಾದುತಿರಲು ನಿರ್ನಾಮವನು ಮಾಡಿಸಿದ ಸ್ವಾಮಿಗೆ ೨೪

ಗೃಧ್ರ ಉಲೂಕದ ವೃತ್ತಿಯ ನೋಡಿ ಭದ್ರೆದ್ರೌಪದಿ ಪುತ್ರನನ್ನು
ನಿದ್ರೆಕಾಲದಿ ಕೊರಳಕೊಯ್ಯಲು ಶಿರದಲಿದ್ದ ಮಣಿಯ ತೆಗೆಸಿದವಗೆ ೨೫

ದ್ರೋಣಪುತ್ರನ ಬಾಣದಿಂದಲೆ ತ್ರಾಣಗೆಟ್ಟ ಶಿಶುವ ನೋಡಿ
ಜಾಣತನದಲಿ ಚಕ್ರವಪಿಡಿದು ಪ್ರಾಣವನು ರಕ್ಷಿಸಿದ ಸ್ವಾಮಿಗೆ ೨೬

ಏಳುಹನ್ನೊಂದು ಸೇನೆಗಳನೆಲ್ಲ ಹಾಳುಮಾಡಿ ಹದಿನೆಂಟುದಿವಸದಿ
ಖೂಳಕೌರವರನೆಲ್ಲ ಕೊಂದು ಧರ್ಮನಲಿ ರಾಜ್ಯವಾಳಿಸಿದಗೆ ೨೭

ಸೌಪ್ತಿಕದಲಿ ಪುತ್ರನ ಕೊಲ್ಲಿಸಿ ಸ್ತ್ರೀಪರ್ವದಿ ಭೂಮಿ ಭಾರವಡಗಿಸಿ
ಶಾಂತಿಪರ್ವದಿ ಧರ್ಮರಾಯಗೆ ಪಟ್ಟಾಭಿಷೇಕವ ಮಾಡಿಸಿದಗೆ ೨೮

ಮುಸಲದಲಿ ಯಾದವರನಡುಗಿಸಿ ಅನುಶಾಸನದಿ ಧರ್ಮಪೇಳಿಸಿ
ಅಶ್ವಮೇಧ ಮಹಾಪ್ರಸ್ಥ ಸ್ವರ್ಗಾರೋಹಣವ ಮಾಡಿಸಿದಗೆ ೨೯

ಅಂದುಪಾರ್ಥಗೆ ಸಾರಥ್ಯವಮಾಡಿ ಬಂಧುಗಳ ಸ್ವರ್ಗವಾಸಮಾಡಿಸಿ
ಬಂದು ಬೃಂದಾರಣ್ಯದಲ್ಲಿ ಇಂದಿರೇ ಸಹನಿಂದ ಸ್ವಾಮಿಗೆ ೩೦

ಶ್ರೀರಂಗ ರಾಮ ವರದ ನರಸಿಂಹ ಸಂಕರುಷಣನ ಸಹಿತವಾಗಿ
ಪ್ರದ್ಯುಮ್ನ ಅನಿರುದ್ಧ ಸಾತ್ಯಕಿ ರುಕ್ಮಿಣಿ ಸಹಿತಲೆ ಬಂದು ನಿಂದವಗೆ ೩೧

[ವರ] ಕಲಿಯುಗದೊಳಗುಳ್ಳ ದುಷ್ಟಕರ್ಮಿಗಳನೆಲ್ಲ ಸಲಹುವೆನೆಂದು
ಕೈರವಿಣಿತೀರದಲಿನಿಂದ ಕರುಣಿ ವೆಂಕಟಕೃಷ್ಣನಂಘ್ರಿಗೆ ಮಂಗಳಂ ೩೨

## ಲಕ್ಷ್ಮೀ ಸ್ತುತಿ

೭

ಶ್ರೀವೇದನಾಯಕೀ ಆಶ್ರಿತಜನ ಪಾಲಕೀ
ಶ್ರೀವೇದನಾಯಕೀ ಜಯ ಜಯಾ ಪ

ನೀನೇ ರಂಗನರಾಣೀ ನೀನೇ ಪಂಕಜಪಾಣೀ
ನೀನೇ ಪನ್ನಗವೇಣೀ ನೀನೇ ಮಧುರವಾಣೀ ೧

ನೀನೇ ಕಮಲವಾಸೇ ನೀನೇ ಸಜ್ಜನಪೋಷೇ
ನೀನೇ ಭವಭಯನಾಶೇ ನೀನೇ ಹರಿಸಂತೋಷೆ ೨

ನೀನೇ ಲೋಕಮಾತೆ ನೀನೇ ಜಗತ್ಪ್ರಖ್ಯಾತೇ
ನೀನೇ ಕಾಮಿತದಾತೇ ನೀನೇ ರಂಗಗೆ ಸೋತೆ ೩

## ಆಳ್ವಾರ್–ಆಚಾರ್ಯ ಸ್ತುತಿಗಳು

೮

ನೀರಾಟವ ನೋಡಿದೆ ನೀರಜಾಕ್ಷನ ರಾಣಿ ಗೋದಾದೇವಿಯ ಪ

ಶ್ರೀವಿಲ್ಲಿಪುತ್ತೂರ ಶ್ರೀತುಳಸಿವನದಲ್ಲಿ
ಶ್ರೀವಿಷ್ಣುಚಿತ್ತರಾ ಪುತ್ರಿಯೆಂದೆನಿಸಿ ಸುಪುತ್ರಿಯೆಂದೆನಿಸಿ ಶ್ರೀ
ದೇವಿ ತಾನುದಿಸೆ ಬೇಗ
ತೀವ್ರ ಹರುಷದಿಂ ಬೆಳೆಯುತ್ತಲಿದ್ದಾಳಲು ೧

ಪುತ್ರಿಗೆ ತಕ್ಕಂಥ ವರವಿಲ್ಲವೆನುತಾಲೆ
ಚಿತ್ತದೊಳಗೆ ಯೋಚಿಸಿದ ಆಳ್ವಾರರು ಪೆರಿಯಾಳ್ವರರು
ಭಕ್ತವತ್ಸಲನಾ ವರಿಸಬೇಕೆನುತಾನೆ
ಅರ್ಥಿಯಿಂದಲೆ ನೀರಾಟವನೆನೆದಾಳು ೨

ವೇಷದಿ ಗೋಕುಲದೊಳಗಿದ್ದ
ಶ್ರೀಶವಾಸನೆಗಳ ಭಾವಿಸೀ । ಗೊಲ್ಲ ವಾಸನೆಗಳ ಭಾವಿಸೀ
ವಾಸುದೇವನಾ ವರಿಸಬೇಕೆನುತಾಲೆ ಉ
ಲ್ಲಾಸದಿಂದಲೆ ಹೆಂಗಳ ಕೂಡೆ ಪೊರಟಾಳು ೩

ಮುತ್ತು ಮಾಣಿಕದಾಭರಣವನಿಟ್ಟು
ಸುತ್ತೆಣೆ ಗಂಟನ್ಹಾಕಿ ದೇವಿ ಸುತ್ತೆಣೆ ಗಂಟನ್ಹಾಕಿ
ಉತ್ತಮನಾಗಿದ್ದ ಪುಷ್ಪಗಳನೆ ಮುಡಿದು
ಚಿತ್ತದೊಳೊಲ್ಲಭನಪ್ಪಣೆಗೊಂಡು ಪೊರಟಾಳು ೪

ಮಾರ್ಗಶಿರ ಮಾಸದಿ ಪೊತ್ತೊಂದು ದಿವಸಾದಿ
ಬೇಗ ತಾ ಪೊರಟೂ ಮಹಾಲಕ್ಷ್ಮಿ ತಾ ಪೊರಟ
ಳಾಗ ಬೀದಿಯನು ಸುತ್ತಿ ಮಂಟಪದಲಿ ನಿಂದು
ಮಂಗಳಾರತಿಯನೆತ್ತೀ ಮಾರು ವಸ್ತ್ರವ ತೆಗದಾರು ೫

ದಂತಧಾವನ ಮಾಡಿ ಕಂತುಪಿತನರಸೀಗೆ
ಅಂತರಂಗದ ಭಕ್ತರು ಬೇಗ ಅಂತರಂಗದ ಭಕ್ತರು
ಸಂತೋಷದಿಂದಲೆ ಮುಖವನ್ನು ತೊಳೆದು ಶ್ರೀ
ಕಾಂತಗೆ ವಸ್ತ್ರದಿಂ ಮುಖವನೊರೆಸಿದಾರು ೬

ಭಾಪು ಛತ್ರಿಚಾಮರ ಸೂರೆಪಾನವಾ ಜನ ಬೀಸಿ
ಗೋಪಿ ಮುಕ್ತಿದಾಯಕಿಗಾಗ ಮುಕ್ತಿದಾಯಕಿಗಾಗ
ದರ್ಪಣವನು ತೋರಿ ಕಂದರ್ಪನ ಮಾತೆಗೆ
ಧೂಪ ದೀಪ ಕರ್ಪೂರದಾರತಿಯೆತ್ತಿದರು ೭

ಬೇಗಾದಿಲಕ್ಷ್ಮಿಗೆ ಆಭರಣ ಸಡುಲಿಸಿ
ಆಗ ಮುಡಿಯ ಬಿಚ್ಚಿ ದೇವೀಗೆ ಆಗ ಮುಡಿಯ ಬಿಚ್ಚೀ
ಬೇಗಾದಿಂ ಕಂಮೆಣ್ಣೆ ಕಸ್ತೂರಿತ್ಶೈಲ
ಮೈಗೆ ತಾಳಮೇಳದ ಗತಿಯಿಂದಲೊತ್ತಿದ್ದರೂ ೮

ಶ್ವೇತವರ್ಣದ ದಿವ್ಯ ನಾಗವಲ್ಲಿಗಳಿಂದ
ಖ್ಯಾತಿ ಪಡೆದಿರುವಾ ಕ್ರಮುಕಾ ಬೇಗ ಖ್ಯಾತಿ ಪಡೆದಿರುವಕ್ರಮುಕಾ
ನೂತನವಾದ ಕರ್ಪೂರವರ್ಣಗಳಿಂದ ಜಗ
ನ್ಮಾತೆಗೆ ತಾಂಬೂಲವ ನೀಡಿದರೂ ೯

ಚೆಣ್ಣವಾರಾಂಗನೆಯರೆಲ್ಲ ರಾಗದಿ ಪಾಡೆ
ಸಣ್ಣವಾದ್ಯದೊಳಗೆ ನುಡಿಸೇ ಬೇಗ ವಾದ್ಯದೊಳಗೆ ನುಡಿಸೇ
ಹಣೆಯೊಳಗೆ ಬಾಚಿ ಮಣಿಗಂಟನಿಕ್ಕಿ ಉಳಿದ
ಎಣ್ಣೆ ಬಕ್ತರಿಗೆಲ್ಲ ಯಿತ್ತಾರು ೧೦

ಮಿಂದು ಮಡಿಯನುಟ್ಟು ಚಂದದಿಂದಲೆ ದೇವಿ
ತಂದ ನೈವೇದ್ಯವುಂಡೂ ಬೇಗ ನೈವೇದ್ಯವುಂಡು
ಬಂದ ಭಕ್ತರಿಗೆಲ್ಲ ತೀರ್ಥಪ್ರಸಾದವಿತ್ತು
ಮಂದಗಮನೆ ತನ್ನ ಮಂದಿರಕೆ ನಡೆದಾಳು ೧೧

ಬೈತಲೆಗೆ ರಾಗಟೆ ಹೆರಳಿಗೆ ಭಂಗಾರಗೊಂಡೆಯವ
ನಿತ್ತು ಪಾನುಪಟ್ಟಿಯು ಮುತ್ತಿನಬಟ್ಟೆ ಕಟ್ಟಿ ಬೇಗ ಮುತ್ತಿನಬಟ್ಟೆ ಕಟ್ಟಿ
ಕಸ್ತುರಿ ಬಾವುಲಿ ಕಮಲಸರಗಳೂ
ಮುತ್ತಿನ ಮೂಗುತಿ ಮುಕುರಾವನಿಟ್ಟಳೂ ೧೨

ಹಾರಪದಕ ಹಸ್ತಕಡಗ ಹರಡಿ ವಂಕಿ
ಶೀರೆಕುಪ್ಪಸ ತೊಟ್ಟೂ ಬೇಗ ಶೀರೆಕುಪ್ಪಸ ತೊಟ್ಟು
ತೋರ ಕುಂದಣದೊಡ್ಯಾಣ ಅಂದುಗೆ ಗೆಜ್ಜೆಯ
ಇಂದೀರಾದೇವಿ ತಾನಿಟ್ಟು ಬಂದಳು ಆಗಾ ೧೩

ಭಾಷ್ಯಕಾರರು ಮೊದಲಾದ ಭಕ್ತರುಯೆಲ್ಲ
ಲಕ್ಷ್ಮಿದೇವಿಗೆ ಆಗ ಭಾಗ್ಯಲಕ್ಷ್ಮಿಗೆ ಆಗಾ ಭಾರಿ
ಯಾ ಶೀರೆ ಕುಪ್ಪುಸವನಿತ್ತು
ಪುಷ್ಪ ಮರ್ಯಾದೆಗಳ ಮಾಡೀ ಕರೆತಂದರು ಬೇಗಾ ೧೪

ಮಂದಗಮನೆ ಅಂದು ಗೋವಿಂದನ ಎದುರಲ್ಲಿ ಆ
ನಂದದಿಂದಲೆ ಕುಳಿತೂ ಬೇಗ ಆನಂದದಿಂದಲೆ ಕುಳಿತು
ಚಂದದಿಂ ಮಲ್ಲಿಗೆಮಾಲೆಯ ಕಳುಹಲು
ಮಂದರೋದ್ಧರ ತನ್ನಾ ಮಡಿದೀಗೆ ಕಳುಹಿದ ೧೫

ಕೂಡಾರವಲ್ಲಿಯೆಂತೆಂಬೊ ದಿವಸದಲ್ಲಿ
ಕೂಡಿ ಮನ್ನಾರುರಂಗನಾ ಬೇಗ ಮನ್ನಾರುರಂಗನಾ
ಮಾಡಿದರು ಮೃದುಳ ಕ್ಷೀರಾನ್ನ ಭೋಜನಂಗಳ
ಮಾಡಿದರು ಭೋಗಿಯ ದಿನದಿ ಕಲ್ಯಾಣವ ೧೬

ಮಕರ ಸಂಕ್ರಾಂತೀಲಿ ಮಂದರೋದ್ಧಾರ ಸಹಿತ
ಚೊಕ್ಕ ಪಲ್ಲಕ್ಕಿಯೇರಿ ಬೇಗ ಚೊಕ್ಕ ಪಲ್ಲಕ್ಕಿಯೇರಿ
ಪಕ್ಕ ಮೆರವಣಿಗೆಯಲಿ ಬಂದು ಹರುಷದಿಂದ
ವೆಂಕಟಕೃಷ್ಣನ ಎಡದಲ್ಲಿ ಕುಳಿತಾಳು ೧೭

## ೯

ಪಾಂಡವಪಕ್ಷ ಪಾರ್ಥಸಾರಥಿಗೆ
ಆಂಡಾಳ್ ಮಾಲೆಯ ಧರಿಸಿದಳು ಪ

ಸೃಷ್ಟಿಜಾತೆಯು ಶೃಂಗಾರವಾಗಿ ಬಂದು
ಕೃಷ್ಣಮೂರುತಿಯೆದುರಲ್ಲಿ ನಿಂದು
ಅಷ್ಟವಿಧದ ಪುಷ್ಪಮಾಲೆಗಳನ್ನು ತೆಗೆದು
ತಟ್ಟೆಯೊಳಗೆ ಇಟ್ಟು ಕಳುಹಿದಳು ೧

ಆದಿಮೂರುತಿ ಮಂಟಪದಲ್ಲಿ ಕುಳಿತಿರೆ
ಶ್ರೀದೇವಿ ಭೂದೇವಿ ಸಹಿತವಾಗಿ
ವೇದಮೂರುತಿಯನು ನೋಡಿ ಸಂತೋಷದಿ
ಗೋದಾದೇವಿಯು ಮಾಲೆ ಧರಿಸಿದಳು ೨

ಮರುಗ ಮಲ್ಲಿಗೆ ಜಾಜಿ ಸುರಗಿ ಶಾವಂತಿಗೆ
ಇರುವಂತಿಗೆ ಪಚ್ಚೆ ಮುಡಿದಾಳ
ಪರಿಪರಿ ಪುಷ್ಪದ ಸರಗಳ ಪಿಡಿದು
ಧರಣಿದೇವಿಗೆ ಸ್ವಾಮಿ ಧರಿಸಿದಳು ೩

ತಾಳೆ ಚಂಪಕ ವಕುಳಮಾಲೆ ಮಂದಾರಪುಷ್ಪ
ಮೇಲಾದ ಕಮಲ ಸುಗಂಧರಾಜ
ನೀಲವರ್ಣನ ಮುಖ ನೋಡಿ ಸಂತೋಷದಿ
ನೀಳಾದೇವಿಯು ಮಾಲೆ ಧರಿಸಿದಳು ೪

ಕಮಲವ ಕರದಲ್ಲಿ ಪಿಡಿದಿಹ ಕಾಂತೆಗೆ
ಕಮಲವದನೆಯೆಂದೆನಿಸಿದವಳಿಗೆ
ಕಮಲಾಕ್ಷಿಗೆ ಶ್ರೀವೆಂಕಟಕೃಷ್ಣನು
ಕಮಲನಾಭನು ಮಾಲೆ ಧರಿಸಿದನು ೫

## ೧೦

ಪಾರ್ಥಸಾರಥಿ ನಿಮ್ಮ ಸೇವೆಯ ಮಾಡಿ ಸಾರ್ಥಕವಾದೆನು ಪ

ವಾರ್ಧಿಪುರುಷನೆ ನಿಮ್ಮ ಕೀರ್ತಿಯ ಕೊಂಡಾಡಲೆನಗೆ
ಶಕ್ತಿಯ ವಿಸ್ತರಿಸೆನಗೆ ಯುಕ್ತಿಯ ಅ.ಪ

ಆಚಾರ್ಯರಿಗೆ ಅಭಿವಂದನೆ ಮಾಡಿ ಅಜನರಾಣಿಯ ಭಜಿಸುವೆ
ಆದಿಮೂರುತಿ ಪಾರ್ಥಸಾರಧಿ ಸೇವೆ ಕ್ರಮವನು ಪೇಳುವೆ
ಅನಾದಿಕ್ರಮವನು ಪೇಳುವೆ ೧

ಕೈರವಿಣಿಯಲ್ಲಿ ಸ್ನಾನವಮಾಡಿ ಕೈಮುಗಿದು ಮಾರುತಿಗೆ ನಾ
ಕರುಣಿಆಚಾರ್ಯರಿಗೆ ವಂದಿಸಿ ಕರಿಯಬಳಿಗೆ ನಾ ಬಂದೆನು
ನಾ ಕರಿಯ ಬಳಿಗೆ ಬಂದೆನು ೨

ದವನೋತ್ಸವದ ಮಂಟಪಂಗಳು ಭಾಗವತರ ಭವನವು
ಬಲವಬಳಸಿ ಭಕ್ತವತ್ಸಲನ ಚೆಲುವರಥವನು ನೋಡಿದೆ
ನಾ ಶೇಷರಥವನು ಸೇವಿಸಿ ೩

ಮೂಡಬೀದಿಯ ಸುತ್ತಿಬಂದು ಮಹದಾಹ್ವಯರನು ಸೇವಿಸಿ
ಮಹಾನುಭಾವನ ವಿಮಾನವನು ನೋಡಿ ಮಾನವನ್ನು ಬಿಟ್ಟೆನೊ
ದೇಹಾಭಿಮಾನವನ್ನು ಬಿಟ್ಟೆನೊ ೪

ಕಾರಿಮಾರಿ ಪುತ್ರರಿಗೆ ಬಾರಿಬಾರಿಗೆ ವಂದಿಸಿ
ವಾರಿಜಾಕ್ಷನ ಗೋಪುರವ ನೋಡಿ ಘೋರಪಾಪವ ಕಳೆದೆನೊ
ಯನ್ನ ಘೋರಪಾಪವ ಕಳೆದೆನೊ ೫

ಗರುಡಕಂಭವ ದೀಪಸ್ತಂಭವು ವಾಹನದ ಮಂಟಪಂಗಳು
ವಾರಿಜನಾಭನ ಪಕ್ಷಿವಾಹನನ ನೋಡಿ ವಂದನೆಯ ಮಾಡಿದೆ
ಅಭಿವಂದನೆಯ ನಾ ಮಾಡಿದೆ ೬

ತೋರಣದ ಬಾಗಿಲನು ದಾಟಿ ವಾರುಣದೆದುರಲಿ ವಂದಿಸಿ
ವಾರಿಜಾಕ್ಷಿ ಶ್ರೀವೇದವಲ್ಲಿಯ ಸಾರೂಪ್ಯವನು ನಾ ಬೇಡಿದೆ
ಸಾಯುಜ್ಯವನು ನಾ ಬೇಡಿದೆ ೭

ಭಕ್ತಿಸಾರರ ಚರಣಕೆರಗಿ ಹಸ್ತಗಿರೀಶನ ವಂದಿಸಿ
ಸುತ್ತಿ ಗರುಡಕಂಬವನ್ನು ಮತ್ತೆ ಸಿಂಹನ ಸೇವಿಸಿ
ದಿವ್ಯ ನಾರಸಿಂಹನ ಸೇವೆಸಿ ೮

ವಿಷ್ಣುಚಿತ್ತರ ಪುತ್ರಿಯನ್ನು ಅರ್ಥಿಯಿಂದಲೆ ಸೇವಿಸಿ
ಮುಕ್ತಿದಾಯಕ ರಂಗನ ಪಾದಕೆ ಮುದದಿ ವಂದನೆ ಮಾಡಿದೆ
ನಾ ಮುದದಿ ವಂದನೆ ಮಾಡಿದೆ ೯

ಯಾಮುನಾಚಾರ್ಯರಿಗೆ ವಂದಿಸಿ ಕಾಂಚೀಪೂರ್ಣರಿಗೆರಗುವೆ
ವೇದಾಂತಾಚಾರ್ಯರ ವಂದನೆ ಮಾಡಿ ಅನಾದಿ ಪಾಪವ ಕಳೆದೆನೊ
ನಾ ಅನಾದಿ ಪಾಪವ ಕಳೆದೆನೊ ೧೦

ಭಾಷ್ಯಕಾರರ ಚರಣಕೆರಗಿ ವರಯೋಗಿಗಳಿಗೆ ವಂದಿಸಿ
ಕುಲೇಶ ದಾಶರಥಿಗೆ ವಂದಿಸಿ ದ್ವಾರಪಾಲಕರ ನೋಡಿದೆ
ನಾ ದ್ವಾರಪಾಲಕರ ನೋಡಿದೆ ೧೧

ಗಂಟೆಬಾಗಿಲ ದಾಟಿ ಶ್ರೀವೈಕುಂಠವಾಸನ ಭಕ್ತರು ಹದಿ
ನೆಂಟು ಆಳ್ವಾರುಗಳ ಸೇವಿಸಿ ಕಂಟಕಗಳ ಕಳೆದೆನೊ
ಭವ ಕಂಟಕಗಳ ಕಳೆದೆನೊ ೧೨

ಕೇಶವ ಮಾಧವ ಅನಂತ ಶ್ರೀಪದ್ಮನಾಭನ ಸೇವಿಸಿ ಶ್ರೀರಾಮ
ಲಕ್ಷ್ಮಣ ಭರತ ಶತ್ರುಘ್ನ ಸೀತೆಯನು ನಾ ನೋಡಿದೆ
ಲೋಕಮಾತೆಯನು ನಾ ಬೇಡಿದೆ ೧೩

ಆದಿಶೇಷನ ಮೇಲೆ ಮಲಗಿದ ಅನಾದಿರಂಗನ ಸೇವೆಗೆ ಕುಲ
ಶೇಖರರ ಸ್ಥಾನದಲಿ ನಿಂದು ಯದುಕುಲೇಶನ ನೋಡಿದೆ
ನಾನೆದುಕುಲೇಶನ ನೋಡಿದೆ ೧೪

ಬಲದಿ ರುಕ್ಮಿಣಿ ಬಲರಾಮ ಪ್ರದ್ಯುಮ್ನ ಅನಿರುದ್ಧ ಸಹಿತಲೆ
ಎಡದಿ ಸಾತ್ಯಕಿ ಪಂಚಮೂರ್ತಿಗಳ ನಡುವೆ ಪಾರ್ಥಸಾರಥಿ
ಯೆಡಬಲದಿ ಶ್ರೀದೇವಿ ಭೂದೇವಿ ೧೫

ಆದಿಶೇಷನ ಮೇಲೆ ತನ್ನಯ ಪಾದವನ್ನು ಪ್ರಸರಿಸಿ ವಿ
ನೋದದಿಂದಲೆ ಅಂದುಗೆ ಗೆಜ್ಜೆ ಕುಂದಣದ ಪಾಡಗಗಳು
ಆನಂದದ ಪಾಡಗಗಳು ೧೬

ಕನ್ನಡಿಯಂದದಿ ಕಣಕಾಲುಗಳು ಉನ್ನತವಾದ ಪೀತಾಂಬರವು
ಪನ್ನಗಶಯನನ ವಡ್ಯಾಣದಲಿ ಪರಮಮೂರ್ತಿಯ ಸರಗಳು
ಶ್ರೀಮೂರ್ತಿ ಸರವನು ಸಿಕ್ಕಿಸಿ ೧೭

ದುಷ್ಟನಿಗ್ರಹವನ್ನು ಮಾಡಿ ಶ್ರೇಷ್ಠರನ್ನು ಪರಿಪಾಲಿಪ ಶ್ರೀ
ಕೃಷ್ಣಮೂರುತಿಯ ಎಡದ ಭಾಗದಿ ಶ್ರೇಷ್ಠವಾದ ಖಡ್ಗವು
ಸರ್ವಶ್ರೇಷ್ಠವಾದ ಖಡ್ಗವು ೧೮

ಸಿಂಧುರಾಜನ ಕೊಲ್ಲುವುದಕಾಗಿ ಅಂದು ಚಕ್ರವ ಕಳುಹಿದೆ
ಒಂದು ಕೈಯಲಿ ಪಾದವ ತೋರುತ ಮತ್ತೊಂದು ಕೈಯಲಿ ಶಂಖವು
ಆನಂದದಿಂದಲೆ ಶಂಖವು 	೨೦

ಸೃಷ್ಟಿಯೆಳಗ್ಗದಿನಾಲ್ಕು ಲೋಕವ ಪಕ್ಷಿವಾಹನವಂ
ಬಿಟ್ಟು ವಕ್ಷಸ್ಥಳದಲಿ ಲಕ್ಷ್ಮಿದೇವಿಯ ರತ್ನಾದ್ವಾರದಪದಕವು
ನವರತ್ನದ್ವಾರದ ಪದಕವು 	೨೧

ಕಂಠದೊಳಗಿಟ್ಟ ಕೌಸ್ತುಭಮಣಿ ಎಂಟುಪುಷ್ಪದ ಹಾರವು ವೈ
ಕುಂಠವಾಸನ ಸೇವಿಸಿದರೆ ಕಂಟಕಂಗಳು ಕಳೆವುದು
ಭವಕಂಟಕಗಳು ಕಳೆವುದು 	೨೨

ಕುಂದಕುಸುಮದಂತೆ ದಂತವು ಪವಳದಂತೆ ಅಧರಕಾಂತಿಯು
[ಚೆಂದದಿ] ಪೊಳೆವ ಕರ್ಣಕುಂಡಲ ಚೆಲುವ ನಾಸಿಕದಂದವು
ತಿಲಕುಸುಮನಾಸಿಕದಂದವು 	೨೩

ದೀಪದಂದದಿ ಕರುಣನೇತ್ರವು ಚಾಪದಂದದಿ ಪುಬ್ಬುಗಳಲಿ
ತೋರ್ಪುದಾ ಲೋಕನಾಯಕನ ನಾಮದ ಬೆಳಕು ಅನೇಕವಾಗಿ
ವಿವೇಕವಾಗಿ ತೋರ್ಪುದು 	೨೪

ಮುದದಲಂದುಗೆ ಗೆಜ್ಜೆಯು ಮೂರುಲೋಕವನಾಳ್ವ ಕಿರೀಟದ
ಪದುಮನಾಭನ ಸೇವಿಸಿದವರಿಗೆ ಒದಗಿ ಬರುವುದು ಮುಕ್ತಿಯು
ಎಲ್ಲರಿಗೊದಗಿ ಬರುವುದಿಷ್ಟಾರ್ಥವು 	೨೫

ಪಾದದಿ ಕೇಶದ ಸೇವೆಯನು ಮಾಡಿ ಅನಾದಿಪಾಪವ ಕಳೆದೆನೊ
ವೇದಮೂರುತಿ ವೆಂಕಟಕೃಷ್ಣನೆ ಪಾದವನ್ನು ತೋರಿಸು
ನಿಮ್ಮ ಶ್ರೀ ಪಾದವನ್ನು ತೋರಿಸು 	೨೬

## ಆತ್ಮನಿವೇದನಾ ಸ್ತುತಿಗಳು

### ೧೧

ಅಗಲಿಸದಿರು ಎನ್ನನು ನಿನ್ನ ಬಿಟ್ಟಗಲಿಸದಿರು ಎನ್ನನು ಪ

ಅಗಲಿಸದಿರು ಎನ್ನ ಅಗಣಿತ ಮಹಿಮನೆ
ನಿಗಮಗೋಚರ ನಿನ್ನ ಪಾದವ ಬಿಟ್ಟು ಅ.ಪ

ಶೋಕಮೋಹಂಗಳಲಿ ಎನ್ನ ನೀ ಹಾಕದಿರ್ಕೈ ಇನ್ನು
ವ್ಯಾಕುಲವನು ಬಿಡಿಸಿ ಅನೇಕ ಸೇವೆಗಳಿತ್ತು
ಲೋಕನಾಯಕ ಎನ್ನ ಸಾಕಿಸಲಹಿಕೊ ೧

ನಿತ್ಯ ಸಂಸಾರವನು ರಂಗಯ್ಯ ನಾ ಸತ್ಯವೆಂದು ತಿಳಿದು
ಸತ್ಯಮೂರುತಿ ನಿಮ್ಮ ಪಾದಪದ್ಮದ ಭಕ್ತಿ
ಹತ್ತದೆ ಈ ಮನಸು ವ್ಯರ್ಥವಾಯಿತು ದೇವ ೨

ತಂದೆತಾಯಿಯು ನೀನೆ ರಂಗಯ್ಯ ಬಂಧುಬಳಗವು ನೀನೆ ಆ
ನಂದದಿಂದಲೆ ರಕ್ಷಿಪ ಜಗತ್ಪತಿ ನೀನೇ
ಬಂಧನವನು ಬಿಡಿಸಿ ಮುಕ್ತಾನಂದವ ತೋರಿಸು ೩

ವಾಸವ ಮಾಡಿಸಿಲ್ಲಿ ರಂಗಯ್ಯ ಘಾಸಿಯ ಪಡಿಸದೆ ಅನಾ
ಯಾಸದ ಮರಣವನಿತ್ತು ಎನಗೆ
ವಸುದೇವನೆ ನಿಮ್ಮ ಪಾದವಾಸವ ಮಾಡಿಸು ೪

ಅಂದುಗೆ ಗೆಜ್ಜೆಗಳ ಇಟ್ಟು ನಿಮ್ಮ ಆನಂದ ಪಾದದಲಿ
ನಿಂದೆನ್ನ ಹೃದಯದೆ ವಾಸಮಾಡಿ ಆ
ನಂದದಿಂದಲೆ ರಕ್ಷಿಸು ವೆಂಕಟರಂಗ ೫

## ೧೨

ಕರುಣಿಸಯ್ಯ ಕಸ್ತೂರಿರಂಗ ಕರುಣಿಸಯ್ಯ ಪ

ದುಷ್ಟಸಂಸಾರ ಬಹುಕಷ್ಟವಯ್ಯ ಇದ
ರಟ್ಟೊಳಿಗಳ ತಾಳಲಾರೆನಯ್ಯ
ಆರೆನಿದರ ಕೋಟಲೆಗಳಾರೆನಯ್ಯ
ವಾರಿಜಾಕ್ಷ ನಿಮ್ಮ ಪಾದ ಸೇರಿಸೈಯ್ಯ ೧

ಕಾಮಕ್ರೋಧ ಲೋಭಮೋಹ ಬಿಡಿಸಯ್ಯ
ಮದಮಾತ್ಸರ್ಯವೆಂಬ ಕಾಟ ನೀನೊತ್ತಿಸಯ್ಯ
ಅಂಬುಜನಾಭನೆ ನಿಮ್ಮ ಪಾದ ಹೊಂದಿಸಯ್ಯ
ಸರ್ವಬಂಧು [ನೀ] ಎನ್ನ ಜಿಹ್ವೆಯಲಿ ನೆಲೆಸಯ್ಯ ೨

ಆಶ ಪಾಶಕ್ಲೇಶವೆಲ್ಲ ನಾಶ ಮಾಡಿಸಯ್ಯ
ಶ್ರೀಶ ನಿನ್ನ ದಾಸರಲ್ಲಿ ಸೇರಿಸಯ್ಯ
ವಾಸುಕಿಶಯನ ಭವದಿ ನೊಂದೆನಯ್ಯ ಸ
ರ್ವೇಶಬಂಧು ಎನ್ನನುದ್ಧರಿಸಯ್ಯ ೩

ಪುತ್ರಮಿತ್ರಬಂಧುವರ್ಗದಿ ಬಿದ್ದಿಹೆನಯ್ಯ ಅ
ನಿತ್ಯಮೋಹದಲ್ಲಿ ಮುಳುಗಿ ಪೋದೆನಯ್ಯ
ವ್ಯರ್ಥನಾಗಿ ಕಾಲವನ್ನು ಕಳೆದೆನಯ್ಯ ಎನ್ನ
ಮರಣ ಕಾಲದಿ ನಿಮ್ಮ ಸ್ಮರಣೆ ಕರುಣಿಸಯ್ಯ ೪

ಜನನ ಮರಣವೆಂಬೊ ಜಾಡ್ಯ ಕ್ರೂರವಯ್ಯ
ಇದರ ವಿಧವನರಿತು ವೈದ್ಯ ಮಾಳ್ವರ ಕಾಣೆನಯ್ಯ
ಬ್ರಹ್ಮಾದಿ ದೇವತೆಗಳೂ ಅರಿಯರಯ್ಯ
ಧನ್ವಂತ್ರಿರೂಪ ಶ್ರೀನಿವಾಸ ರಕ್ಷಿಸಯ್ಯ ೫

ದೇಹವೆಲ್ಲ ಗಳಿತವಾಗಿ ಪೋಯಿತಯ್ಯ
ಇಂದ್ರೀಯ ಸ್ವಾಧೀನದಲ್ಲಿ ನಿಲ್ಲದಯ್ಯ
ವಿಷಯದಲ್ಲಿ ಮನಸು ಬಹಳ ಹರಿವುದಯ್ಯ
ಲಕ್ಷ್ಮೀಪತಿಯೆ ನಿಮ್ಮ ಭಕ್ತಿಯಿತ್ತು ಸಲಹಯ್ಯ ೬

ದೀನನಾಗಿ ನಿನ್ನ ಚರಣ ಸೇರಿದೆನಯ್ಯ
ಜ್ಞಾನವೈರಾಗ್ಯವಿತ್ತು ಪಾಲಿಸೆನ್ನಯ್ಯ ಮರಳಿ
ಜನ್ಮ ಬಾರದಂತೆ ಮಾಡಬೇಕಯ್ಯಾ ಗರುಡಗ
ಮನ ವೆಂಕಟರಮಣ ಭವಸಂಕಟ ಬಿಡಿಸಯ್ಯ ೭

## ೧೩

ಯಾಕೆ ನಿರ್ದಯ ಮಾಡಿದೆ ರಂಗಯ್ಯ
ನೀನ್ಯಾಕೆ ನಿರ್ದಯ ಮಾಡಿದೆ ಪ

ಯಾಕೆ ನಿರ್ದಯ ಈ ಲೋಕದೊಳಗೆ ಯಿದ್ದು
ವ್ಯಾಕುಲ ಪಡಲಾರೆ ನಿಮ್ಮ ಲೋಕವ ಸೇರಿಸು ಅ.ಪ

ದುಷ್ಟರ ಮಧ್ಯದಲ್ಲಿ ನಾನಿರಲಾರೆ ಸೃಷ್ಟಿಗೀಶ್ವರನೆ ಕೇಳು
ಮುಟ್ಟಿ ಭಜಿಸಿ ನಿಮ್ಮ ಪಾದಪದ್ಮದ ಭಕ್ತಿಯಿಟ್ಟೇನೆಂದರೆ
ದುಷ್ಟ ಇಂದ್ರಿಯ ಬಿಡದೆನ್ನ ೧

ಪಂಚೇಂದ್ರಿಯಗಳೆನ್ನ ಬಹುಬೇಗ ವಂಚನೆ ಮಾಡುತಿದೆ
ಪಂಚಬಾಣನ ಪಿತ ಪರಮಪುರುಷ ರಂಗ ಅ
ಕಿಂಚನಾದೆ ನಿನ್ನಂಘ್ರಿಯ ಸೇರಿಸು ೨

ಸಂಸಾರವೆಂಬ ಸರ್ಪ ಕಚ್ಚಿ ವಿಷ ಕ್ಷಣದಲ್ಲಿ ತಲೆಗೇರಿತು ಪರಮ
ಹಂಸರ ಸಂಗದೊಳಗೆಯಿರಿಸಿ ಎನಗೆ ಭರದಿಂದೇರಿದ
ವಿಷ ತಿರುಗೆಸೋ ಶ್ರೀಹರಿ ೩

ಸರ್ಪ ತುಂಬಿದ ಕೂಪದಿ ಬಿದ್ದಿಹೆನು ಎನ್ನಪ್ಪ ರಕ್ಷಿಸೊ ಬೇಗದಿ
ಸರ್ಪಶಯನ ಶ್ರೀಅಪ್ರಮೇಯ ರಂಗ ಇನ್ನು
ಕ್ಷಿಪ್ರದಿಂ ಮುಕ್ತಿಯ ಒಲಿದು ಪಾಲಿಸು ರಂಗ ೪

ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಾಸೂಯೆಡಂಭ
ಅಮ್ಬುಜನಾಭನೆ ನಿಮ್ಮ ಪಾದದಧ್ಯಾನ ಒಂದು
ನಿಮಿಷವಾದರು ಮಾಡಲೀಸದು ೫

ಹಿಂದಿನ ಕರ್ಮಂಗಳು ಇಂದಿರೇಶ ನಿಂದಕರ ವಶವಾಯಿತು
ಇಂದು ಧರ್ಮದಲಿರ್ದೆ ಬಂಧುಗಳ ವಶವಾಯ್ತು ಇನ್ನು
ಬಂಧನವೇನಯ್ಯ ಮುಕ್ತ್ಯಾನಂದ ತೋರುವುದಕ್ಕೆ ೬

ಎಂದಿಗಾದರೂ ಮುಕ್ತಿಯ ಕೊಡುವೆಯೆಂದಾನಂದ
ದಿಂದಿರುತಿದ್ದೆನೊ ಇಂದು ಈ ಸಂಸಾರ ಬಂಧನದೊಳಗೆ ನಾ
ಒಂದು ನಿಮಿಷ ಜೀವಿಸಲಾರೆನು ರಂಗ ೭

ಅಂದು ದ್ರೌಪದಿ ಧ್ರುವ ಗಜೇಂದ್ರನ ರಕ್ಷಿಸಲಿಲ್ಲವೆ
ಬಂದು ಅಂಬರೀಷ ಅಜಾಮಿಳರ ಪ್ರಹ್ಲಾದನ ಕಂಬದಿಂದಲೆ
ಬಂದು ಕಾಯ್ದ ಗೋವಿಂದ ೮

ಭಕ್ತವತ್ಸಲನೆಂತೆಂಬೊ ಬಿರುದು ಈಗ ವ್ಯರ್ಥವಾಯಿತೆ ಶ್ರೀರಂಗ
ಉತ್ತಮ ಗುರುಗಳು ಶ್ರೇಯೋನಿಧಿಗಳ ವಾಕ್ಯ
ಸತ್ಯವ ಮಾಡಿ ಮುಕ್ತ್ಯಾನಂದ ಪಾಲಿಸು ೯

ರಂಗನಾಥ ನೀ ಕೈ ಬಿಟ್ಟರೆ ಎನ್ನ ಲೋಕಮಾತೆ ಬಿಡುವಳೆ
ಆಗಾ ಮತಿಯಿಲ್ಲದೆ ಮಾಡಿದ ಶತಾಪರಾಧವ ಹಿತದಿ ಕ್ಷಮಿಸಿ
ಬೇಗ ಮುಕ್ತಿಪಥವ ಪಾಲಿಸುವಳು ೧೦

ಮಾಡಬಾರದ ಮಾಡಿದೆ ಈ ಸಂಸಾರದೆ ನೋಡಬಾರದ
ನೋಡಿದೆ ಆಡಬಾರದ ವಾರ್ತೆಗಳನಾಡಿದೆ ಇನ್ನು
ಗಾಡನೆ ಮುಕ್ತಿಯ ನೀಡೊ ವೆಂಕಟರಮಣ ೧೧

## ೧೪

ಶ್ರೀರಂಗನಾಥ ನಂಬಿದೇ ನಿನ್ನ ನಾನೇ ಅನಾಥ ಪ

ಅನಾಥರಕ್ಷಕ ಎನ್ನಾ ಪ್ರೀತಿಯಿಂದಲೆ ಕಾಯೊ ಲೋ
ಕನಾಥನೆಂದು ಬಂದು ನಂಬಿದೆ ನಿನ್ನ ಅ.ಪ

ನಿಮ್ಮ ರಘುಪತಿ ನಿಮ್ಮ ವಿಭೀಷಣಗೆ ಕೊಡಲು
ತಾಮುನ್ನಾ ಶ್ರೀರಂಗಕ್ಷೇತ್ರದಿ ನೆಲಸಿ ಸಂತೋಷದಿ
ಧರ್ಮವರ್ಮಾದಿ ಚೋಳೇಂದ್ರ ಪೂಜಿತಪಾದ ೧

ಕಂದ ಪ್ರಹ್ಲಾದ ಕರೆಯೆ ಕಂಬದಿಂದಲೆ ಬೇಗ
ಬಂದು ಅವನ ತಂದೆಯನು ಸಂಹರಿಸಿದೆ
ಕಂದನ ಕಾಯ್ದ ಗೋವಿಂದ ರಕ್ಷಿಸೊ ಎನ್ನ ೨

ಅಜಮಿಳ ಕರೆಯೆ ಆಪತ್ತಿಗೆ ಬಂದು ನೀನೊದಗೆ
ನಿಜಸ್ಮರಣೆ ಮಾತ್ರದಲವನ ದುರಿತವೆಲ್ಲವ ಕಳೆದು
ನಿಜ ಪಾದವನಿತ್ತೆ ಕರುಣದಿಂದಲೆ ರಂಗ ೩

ಕಂದ ಧ್ರುವ ತಾನು ಅಡವಿಯಲಿ ನಿಂತು ತಪವನು
ಚಂದದಿ ಮಾಡಲು ಬಂದು ಸೇವೆಯನಿತ್ತೆ ಆ
ನಂದಪದವನಿತ್ತ ಸುಂದರಾಯನೆ ನೀನು ೪

ಅರ್ಕಸುತನಾಗ ನಿಮ್ಮನ್ನು ಸೇರಿ ಸೌಖ್ಯವ ಬೇಗ ಮಾಡೆ
ಸೊಕ್ಕಿದ ವಾಲಿಯನೊಂದು ಬಾಣದಿಂ ಕೊಂದು
ಮರ್ಕಟಗೆ ರಾಜ್ಯವನಿತ್ತ ರಂಗಯ್ಯ ನೀನು ೫

ಮಕರಿ ಕಾಲ್ಪಿಡಿಯೆ ಮತಂಗಜ ನಿಮ್ಮನು ಕರೆಯೆ
ನಕ್ರವ ಕೊಂದು ಚಕ್ರದಿ ಅತಿವೇಗದಿಂ ಕರಿಯ
ರಕ್ಷಿಸೆ ಬಂದೆ ಕರುಣದಿಂದೆ ೬

ಭವಕೆ ನಾ ಬೆದರಿ ಬಂದೆನೊರಂಗ ಕಾಯೋ ನೀ
ಭವದಿ ಈಶಣತ್ರಯವನ್ನು ಬಿಡಿಸಿ ನಿನ್ನಯ ಪಾ
ದವಾಸವ ಮಾಡಿಸೊ ವಾಸುಕಿಶಯನನೆ ೭

ಆರುಜನ ಕಳ್ಳರು ಎನ್ನಲಿ ಸೇರಿ ಬಾಧಿಸುತಿಹರು
ದೂರಮಾಡವರನ್ನು ಸೇರಿಹೃದಯದಲ್ಲಿ
ಶ್ರೀನಿವಾಸನೆ ನಿಮ್ಮ ಪಾದದೊಳಿರಿಸೆನ್ನ ೮

## ೧೫

ಅಸಾರವಾದ ಸಂಸಾರಸಾಗರವ
ಪಾರುಗಾಣವುದೆಂದಿಗೊ ರಂಗಯ್ಯ ಪ

ಘೋರಾಹಂಕಾರವ ಬಿಟ್ಟು ನಿನ್ನಯಪಾದ
ಸೇರುವುದಿನ್ನೆಂದಿಗೊ ಅ.ಪ

ಕಾಮಕ್ರೋದಲೋಭಮೋಹಂಗಳನೆಲ್ಲಾ
ದೂರಮಾಡುವದೆಂದಿಗೆ ರಂಗಯ್ಯ
ಡಂಬಾಸೂಯೆ  ಅವಿದ್ಯಾಸಂಬಂಧವ
ಬಿಟ್ಟುಬಿಡುವುದೆಂದಿಗೆ ೧

ಆಶಾಪಾಶ ಬಹುಕ್ಲೇಶಂಗಳನೆ
ನಾಶ ಮಾಡುವುದೆಂದಿಗೊ ರಂಗಯ್ಯ
ವಾಸುದೇವನೆ ನಿಮ್ಮ ಪಾದಾರವಿಂದದೊಳು
ವಾಸವಾಗುವದೆಂದಿಗೊ ೨

ಸುಖದುಃಖಮಾನಾಪಮಾನಂಗಳ್ನೆಲ್ಲಾ
ನಮವ ಮಾಡುವದೆಂದಿಗೊ ರಂಗಯ್ಯ
ಲಾಭಾಲಾಭವು ಶೀತೋಷ್ಣಂಗಳ
ಸಮವ ಮಾಡುವುದೆಂದಿಗೊ ೩

ಕೆಟ್ಟನುಡಿಯು ನಿಷ್ಟುರವಾಕ್ಯಂಗಳ
ಬಿಟ್ಟುಬಿಡುವದೆಂದಿಗೊ ರಂಗಯ್ಯ
ಕೃಷ್ಣಮೂರುತಿ ನಿಮ್ಮ ಪುಟ್ಟ ಪಾದದೊಳೆನ್ನ
ತಟ್ಟನೆ ಸೇರಿಸಯ್ಯ ೪

ಘೋರಸಂಸಾರಸಾಗರವ ದಾಟುವುದಕ್ಕೆ
ದಾರಿ ತೋರಿಸೋ ಎನಗೆ ರಂಗಯ್ಯ
ಶ್ರೀ ಶ್ರೀನಿವಾಸನೇ ನಿಮ್ಮಪಾದಾರವಿಂದದಾ
ಭಕ್ತಿನಾಮವನು ಕೊಡಿಸಯ್ಯ ೫

## ಸಾಮಾಜಿಕ ಕೀರ್ತನೆಗಳು

### ೧೬

ಆಸೆತ ಬಿಡು ಮನವೆ ನಿನ್ನ ದುರಾಸೆಯ ಬಿಡು ಮನವೆ ಪ

ಆಸೆಯ ಬಿಟ್ಟು ಶ್ರೀವಾಸುದೇವನ ಪಾದ
ಘಾಸಿಯಾಗದೆ ನಂಬು ಲೇಸಾಗುವುದು ನಿನಗೆ ಅ.ಪ

ಕಾಮಕ್ರೋಧಗಳ ಬಿಟ್ಟು ಮೋಹಮದಡಂಭ ಅಸೂಯೆಸುಟ್ಟು
ಎಮ್ಮದು ತಮ್ಮದು ಎಂಬ ಭ್ರಾಂತಿಯ ಬಿಟ್ಟು
[ನಮ್ಮ] ವನಜನಾಭನ ಪಾದದೊಳಗೆ ನೀ ಮನವಿಟ್ಟು ೧

ಪರದ್ರೋಹ ಪರನಿಂದನೆಯನು ಮಾಡಿ ಪಾತಕಿಯಾಗದೆ
ಬರಿದೆ ನವರತ್ನ ರಜತ ಸುವರ್ಣ ಧನಧಾನ್ಯದಾಶೆಯ ಬಿಟ್ಟು
ನಿರಾಶೆಯೊಳಿರು ನೀನು ೨

ಹಾನಿವೃದ್ಧಿ ಯಶೋಲಾಭಗಳೆಲ್ಲ ಸ್ವಾಮಿಯಧೀನವಲ್ಲದೆ
ನೀನು ಯೋಚನೆಯನ್ನು ಮಾಡಿಯೆ ಫನವೇನು
ಶ್ರೀನಿವಾಸನ ಪಾದ ನೇಮದಿಂದಲೆ ನಂಬು ೩

## ೧೭

ಒಡವೆಯ ನೀಡಬಾರದೆ ಬಾಲೆಯರೆಲ್ಲ ಒಡವೇಯ ನೀಡಬಾರದೆ ಪ

ಒಡವೆಯನಿಟ್ಟರೆ ವೇಳ್ಯೆಕ್ಕೊದಗುವುದು
ಒಡಲೀಗೆ ಒದಗಾದು ಕಳ್ಳರು ಕದಿವರು ಅ.ಪ

ಇದು ಬಹಳ ಬೆಲೆಯು ಬಾಳುವ
ಹನ್ನೆರಡು ಹರಳಿನ ವಾಲೆ ಹದಿನೆಂಟುಸಾವಿರಮುತ್ತಿನಸರವಳಿ
ಚಂಪಸರಗಳುಂಟು ಚಂದದವಾಲೆಗೆ ೧

ಆಣಿಮುತ್ತುಗಳಾರಿಸಿ ಅದರಲ್ಲಿ
ಏಳು ಕಳಸ ಬಿಗಿದು ಇಪ್ಪತ್ತುನಾಲ್ಕುಸಾವಿರಮುತ್ತಿನ ಗೊಂಚಲು
ಸುತ್ತಿದೆ ಮುತ್ತಿನ ಬುಗುಡೀಗೆ ೨

ಕತ್ತರಿಬಾವುಲಿಯು ಅದರ ಬೆಲೆ ಹತ್ತು ಲಕ್ಷವು ಬಾಳುವದು ಅದಕೆ
ಸುತ್ತಿದೆ ಆಣಿಮುತ್ತುಗಳ್ಹದಿನೆಂಟು
ಎತ್ತಿ ಕಟ್ಟುವರೇ ಸರ್ಪಣಿಗಳುವುಂಟು ೩

ಮುತ್ತಿನಲಿ ಹದಿನೆಂಟು ಆರಿಸಿ ತೆಗೆದು
ಹಾರತುರಾಯನಿಟ್ಟು ಮೂರು ಮುತ್ತಿನಲಿ ಜುಳುಜುಳಿಗಳ
ಸುತ್ತಿ ಮುಕುರವನಿಟ್ಟಾರೆ ಮುದ್ದಾಗಿತೋರ್ವದು ೪

ಕೊರಳಿನೊಳಗೆ ಒಪ್ಪುವ ಹಾರದ ಬೆಲೆ
ಆರುಸಾವಿರ ಬಾಳುವುದು ಟಂಠಳ್ಳಿಸುವ ಎಂಟುರತ್ನದ ಪದಕವು
ಕಂಠದೊಳಿದ್ದರೆ ವೆಂಕಟನತೋರ್ಪುದು ೫

## ೧೮

ಸುಮ್ಮನಿರಬಾರದೆ ಮನವೆ ನೀನು ಸುಮ್ಮನಿರಬಾರದೆ
ಹಮ್ಮುಅಹಂಕಾರ ಹೆಮ್ಮೆಗಳೆದು ಪನ್ನಗಾದ್ರಿಯ ಧ್ಯಾನಮಾಡುತ್ತ ಪ

ಚಿಂತೆಯನು ತೊರೆದು ಮನವೆ ಲಕ್ಷೀಕಾಂತನೊಳು ಬೆರೆದು
ಅಂತರಂಗದಿ ಕಂತುಜನಕನ ಸಂತತವಿಟ್ಟು ಪಂತವನು ಬಿಟ್ಟು ೧

ಆಸೆಯನು ತೊರೆದು ಮನವೆ ನೀ ಶ್ರೀಶನೋಳು ಬೆರೆದು
ಘಾಸಿಯಾಗದೆ ವಾಸುದೇವನ ದಾಸನಾಗಿ ಉಲ್ಲಾಸದಿಂದಲೆ ೨

ಯಾರು ಬೈದರೇನು ಈ ದೇಹ ಇನ್ಯಾರು ಕೊಯ್ದರೇನು
ಘೋರಮಾಯೆ ದೂರಮಾಡಿ ನೀ ವಾರಿಜಾಕ್ಷನ ಪಾದವನು ಸೇರಿ ೩

ಎಲ್ಲರಲ್ಲಿ ವಾಸುದೇವನಿಲ್ಲದಿಲ್ಲೆನುತ ಹುಲ್ಲು ಹುಳುವಿನೊಳು
ಎಲ್ಲ ಹರಿಯೆಂದು ಪುಲ್ಲನಾಭನ ಸೊಲ್ಲು ಪಾಡುತ್ತ ೪

ಸೃಷ್ಟಿಯೊಳಗಧಿಕ ಮೂಡಲಗಿರಿ ಬೆಟ್ಟದೊಳಗಿರುವ
ದಿಟ್ಟವೆಂಕಟನ
ಮುಟ್ಟಿ ಭಜಿಸಿ ನೀ ಮಾಡಿದಷ್ಟು ಪಾಪವ ನಷ್ಟ ಮಾಡುತ್ತ ೫

## ಕ್ಷೇತ್ರದರ್ಶನ

### ೧೯

### ಅ. ಕಂಚಿ — ?

ಕರಿಗಿರಿವಾಸ ವರದರಾಜ ಕರಿಗಿರಿವಾಸ ಪ

ಕರಿಗಿರಿವಾಸನೆ ದುರಿತ ವಿನಾಶನೆ
ಸುರಮುನಿ ಪೋಷನೆ ಭವರೋಗ ನಾಶನೆ ಅ.ಪ

ಅಜನಯಾಗದಲಿ ಯಜ್ಞಕುಂಡದಲಿ ಉದಿಸಿ ಬಂದೆ
[ಭಜಕ] ಭಕ್ತರಿಗೆ ವರಗಳ ಕೊಡುತ್ತಲೆ ವರದ
ರಾಜನೆಂಬೊ ಬಿರುದು ಪೊತ್ತಿಹ ದೇವ ೧

ಮಾಯೆಯ ಬಿಡಿಸೊ ನಿನ್ನಲಿ ಎನಗೆ ಮೋಹವ ನಿಲಿಸೊ
ಘೋರ ಸಂಸಾರದಾಸೆಯ ಬಿಡಿಸಿ ನಿನ್ನಯ
ಪಾದಧ್ಯಾನವನಿತ್ತು ಕಾಯೊ ವರದರಾಜ ೨

ಚತುರಹಸ್ತದಲೀ ಕೈಪಿಡಿದು ದಿವ್ಯವಾದ ಶಂಖಚಕ್ರಗದೆಯಲಿ
ಮಾಯಪಾಶವನೆಲ್ಲ ಕತ್ತರಿಸಿ
ನಿಮ್ಮ ಪಾದವ ಸೇರಿಸು ಎನ್ನ ಚಿತ್ತಜಜನಕ ೩

ಹಾ ಕೃಷ್ಣ ಎಂದು ದ್ರೌಪದಿ ಕರೆಯೆ ಮನಕೆ ನೀತಂದು
ಆ ಖಳ ವಸ್ತ್ರವ ಸೆಳೆಯಲು ಅಕ್ಷಯ ಮಾಡಿದೆ
ಪಕ್ಷಿವಾಹನ ಪಾಂಡವಪಕ್ಷ ಶ್ರೀಕೃಷ್ಣ ೪

ಜನ್ಮ ಬಹಳದಲಿ ಬಳಲಿ ಬಂದೆ ಈ ಭೂಮಿಯಲಿ
ಇನ್ನು ನಾ ಜನಿಸಲಾರೆನೊ ಹೀನಜನ್ಮದಿ
ಮನ್ನಿಸಿ ರಕ್ಷಿಸೊ ಎನ್ನ ವರದರಾಜ ೫

ಭವಬಿಸಲಿನಲಿ ಬಳಲಿ ಬಂದೆ ತಾಪತ್ರಯದಲ್ಲಿ
ನಿಮ್ಮ ಚರಣ ಪಂಕಜವೆಂಬೊ ಆತಪತ್ರದ ನೆರಳ
ಸೇರಿಸೆನ್ನಯ ತಾಪ ದೂರ ಮಾಡಿಸೊ ದೇವ ೬

ನಾಮಾಡಿದಂಥ ಪಾಪಗಳೆಲ್ಲ ಸಾವಿರ [ಅ]ನಂತ
ಎಣಿಸಿ ನೋಡಲು ಏನೂ ದಾರಿಯ ಕಾಣೆನು
[ಎನ್ನ] ಸರ್ವಾಪರಾಧವ ಕ್ಷಮಿಸಿ ರಕ್ಷಿಸೊ ದೇವ ೭

ವಿಂದ್ಯಾರಣ್ಯದಲಿ ಭಕ್ತರು ಕರೆಯೆ ಬಂದೆ ಬೇಗದಲಿ
ಇಂದಿರೆ ಸಹಿತಾಲೆ ತೀರ್ಥವ ಗ್ರಹಿಸಿ ಭಕ್ತರ ಕರೆ
ತಂದು ಕರಿಗಿರಿಯಲಿನಿಂದ ವರದರಾಜ ಕರಿಗಿರಿವಾಸ ೮

## ೨೦

ಜಯಮಂಗಳಂ ನಿತ್ಯ ಶುಭಮಂಗಳಂ ಪ

ನಿಂದು ತುಂಗಾತೀರದಲಿ ಮಂದರಗಿರಿಯಲ್ಲಿ
ಬಂದು ಜಮದಗ್ನಿಗಳಿಗೊಲಿದು
ಬಂದು ನಿಮ್ಮಯ ಸೇವೆ ಮಾಡಿದ ಭಕ್ತರಿಗೆ ಆ
ನಂದ ಪದವಿಯನೀವ ಇಂದಿರೇಶನಿಗೆ ೧

ಅಂದು ಗೌತಮಸತಿಯ ಇಂದ್ರನು ಮೋಹಿಸಿ
ಬಂಧನಕ್ಕೊಳಗಾಗೆ ಬಂದು ನಿಮ್ಮ
ಪಾದಸೇವೆಯ ಮಾಡೆ ಪಾಪವೆಲ್ಲವ ಕಳೆದು
ಅಮರಪದವೀವ ನಿತ್ಯಪರಮಪುರಷನಿಗೆ ೨

ಇಂದ್ರಗಿರಿ ಮಹೇಂದ್ರತೀರ್ಥವೆಂದೆನುತ ಆ
ನಂದದಿಂದಲೆ ಪ್ರವಾಸ ಮಾಡೀ
ಬಂದು ಸ್ನಾನ ಪಾನ ಸೇವೆ ಮಾಡಿದವರ
ಜಾರದೋಷವ ಕಳೆವ ಶ್ರೀನಿವಾಸನಿಗೆ ೩

## ೨೧

### ಉಡುಪಿ

ದೃಷ್ಟಿ ಇದ್ಯಾತಕೆ ಉಡುಪಿ ಕೃಷ್ಣನ್ನ ನೋಡದ ಪ

ಗೋಪಿಯರ ಪೂಜೆ ಗ್ರಹಿಸಿ ಗೋಪಿಚಂದನ ಸಹಿತವಾಗಿ
ವ್ಯಾಪಾರದ ಹಡಗೀಲಿ ಬಂದ ಶ್ರೀಪತಿಯ ನೋಡದ ೧

ಮಧ್ವರಾಯರಿಗೊಲಿದು ಬಂದು ಸಮುದ್ರತೀರದಲ್ಲಿ ನಿಂದು
ಪದ್ಮನಾಭನಪುರದಿ ನೆಲಸಿದ ಮುದ್ದು ಶ್ರೀಕೃಷ್ಣನ್ನ ನೋಡದ ೨

ಅಷ್ಟಮಠಧ ಯತಿಗಳಲ್ಲಿ ಶ್ರೇಷ್ಠವಾದ ಪೂಜೆಗ್ರಹಿಸಿ ಶಾಪ
ದುಷ್ಟವಾದ ದೇಶವನೆಲ್ಲಾ ಶ್ರೇಷ್ಠ ಮಾಡಿದ ಕೃಷ್ಣನ್ನ ನೊಡದ ೩

ಶುದ್ಧವಾದ ಗೋವುಘೃತವು ಕ್ಷೀರ ಸಕ್ಕರೆ ಮಧುವು ದಧೀ
ನಾರಿಕೇಳ ಫಲಗಳಿಂದ ಮಿಂದ ಶ್ರೀಕೃಷ್ಣನ್ನ ನೋಡದ ೪

ಉದ್ದಂಡವಾದ ಉರಗನಲ್ಲಿ ಭೂಮಂಡಲನಾಳ್ವ ಶಿರವನಿಟ್ಟು
ಕೊಂಡೆ ಮಕರಿಕೆ ಚೆಂಡು ಧರಿಸಿದ ಪುಂಡರೀಕಾಕ್ಷನ್ನ ನೋಡದ ೫

ಪಾನಪಟ್ಟಿ ಮುತ್ತಿನಬಟ್ಟು ಮೂಗುತಿಯನಳವಟ್ಟು ವಜ್ರದ
ಕರ್ಣಕುಂಡಲವನಿಟ್ಟು ಅರ್ಜುನಸಾರಥಿಯ ನೋಡದ ೬

ಪವಳದಂತೆ ಅಧರಕಾಂತೀ ಕೊರಳಿನಲ್ಲಿ ವೈಜಯಂತಿ
[ನವ] ಹಾರಪದಕ ಸರಗಳಿಟ್ಟ ವಾರಿಜನಾಭನ ನೋಡದ ೭

ಕಡೆಗೋಲ ಬಲದ ಕೈಲಿ ಎಡದ ಕೈಯ ತೊಡೆಯೊಳಿಟ್ಟು
ಉಡುದಾರ ಗೆಜ್ಜೆಯನಿಟ್ಟ ಪೊಡವಿಗೀಶ್ವರನ್ನ ನೋಡದ ೮

ಅಂದುಗೆ ಗೆಜ್ಜೆನಿಟ್ಟು ಕುಂದಣದಾವುಗೆಯ ಮೆಟ್ಟಿ ಆ
ನಂದದಿಂದ ಗಂಗೆ ಪಡೆದ ಇಂದಿರೇಶನ ಪಾದವ ನೋಡದ ೯

ಸಂಸಾರದಗ್ನಿಯಲ್ಲಿ ಬೆಂದು ನೊಂದುಬಂದ ಭಕ್ತರ ಚರಣವೆಂ
ಬೊ ಶರಧಿಯಲ್ಲಿ ಭರದಲಿರುವ ಹರಿಯ ನೋಡದ ೧೦

ಕಲ್ಲ ಸತಿಯಮಾಡಿ ಕಾಳಿಶಿರದಮೇಲೆ ನಾಟ್ಯವನಾಡಿ
ದುರುಳ ಶಕಟನನ್ನು ತುಳಿದ ವರದ ವೆಂಕಟಕೃಷ್ಣನ್ನ ನೋಡದ ೧೧

## ೨೨

### ಗಂಗಾನದಿ

ಮಂಗಳಂ ಜಯತು ಭಾಗೀರಥಿಗೆ
ಜಯ ಮಂಗಳಂ ಯಮುನೆ ಸರಸ್ವತಿಗೆ ಪ

ವಾಮನರೂಪಿಲಿ ದಾನವ ಬೇಡಿ
ಪ್ರೇಮದಿಂ ಪಾದವ ಮೇಲಕ್ಕೆ ನೀಡಲು
ನೇಮದಿಂ ತಡೆದು ಬ್ರಹ್ಮಾಂಡದಿಂದ
ಸುಮ್ಮಾನದಿಂ ಪೊರಟು ಬಂದ ದೇವಿಗೆ ೧

ಹರಿಯ ಪಾದದಲಿ ಉದ್ಭವಿಸಿದ ಗಂಗೆಗೆ
ಹರನ ಶಿರದಲ್ಲಿ ವಾಸವಾದವಳಿಗೆ
ಭರದಿ ಭಗೀರಥ ತಪವ ಮಾಡಲು
ಧರಿಣಿಗೆ ಇಳಿದು ಬಂದ ದೇವಿಗೆ ೨

ಭಗೀರಥನ ಪಥವಿಡಿದು ಬೇಡಿ ಬಂದ
ಭಾಗೀರಥಿ ಎಂಬೊ ಪೆಸರು ಪೊತ್ತು ಅವನ
ಭಾಗಿಗಳಿಗೆ ಮೋಕ್ಷವನಿತ್ತು ಹರುಷದಿ
ಯೋಗಿಗಳು ಸ್ತುತಿಪ ಗಂಗಾದೇವಿಗೆ ೩

ಜನ್ಹುಋಷಿಯು ಪವನಮಾಡಿ ಬಿಡುವಾಗ
ಜಾಹ್ನವಿ ಎನಿಸಿದೆ ಜಗದೊಳಗೆ
ಜನರಿಗೆ ಜನನ ಮರಣ ಕೊಡದೆ ಬಿಡಿಸಿ
ಜಾಣತನದಿ ಮುಕ್ತಿ ಕೊಡುವವಳಿಗೆ ೪

[ದೃಡದಿ ] ಬಲಭಾಗದಿ ಭಗೀರಥಿ ಬರುತಿರೆ
ಯೆಡದ ಭಾಗದಲಿಯಮುನೆ ಬರುತಿರಲು
ನಡುವೆ ಸರಸ್ವತಿ ತ್ರಿವೇಣಿಯೆಂದೆನಿಸಿ
ಪೊಡವಿಗಧಿಕವಾಗಿ ಮೆರೆಯುವ ದೇವಿಗೆ ೫

ಬಂದು ಭಾಗೀರಥಿಗೆ ವಂದನೆಗಳ ಮಾಡಿ
ತಂದು ಪುಷ್ಪವ ತುಳಸಿ ಕ್ಷೀರವನು
ಚಂದದಿಂ ಪೂಜೆಮಾಡಿ ವೇಣಿಮಾಧವಗೆ
ಅಂದು ವಂದಿಸಿದವರಿಗೆ ೬

ಸೃಷ್ಟಿಯ ಮೇಲುಳ್ಳ ಜನರೆಲ್ಲರು ಬಂದು
ಮುಟ್ಟಿ ಮುಳುಗಿ ಪೂಜಿಸಿದವರ
ಇಷ್ಟಾರ್ಥಗಳನು ಕೊಡುವೆನೆಂದೆನುತಲೆ
ದಿಟ್ಟ ವೆಂಕಟನ ಪಾದ ತೋರಿಸುವಳು ೭

## ೨೩

ಮಂಗಳಂ ಶ್ರೀಕೃಷ್ಣವೇಣಿಗೆ
ಜಯ ಮಂಗಳಂ ಜಗದುದ್ಧಾರಳಿಗೆ ಪ

ರಂಗನ ಪಾದದಿ ಗಂಗೆ ಉದ್ಭವಿಸಲು
ಅಂಗದಿಂದಾಗಲೆ ತಾನುದಿಸಿ ಬಂದು
ಗಂಗಾಧರನ ದೇಹದಿ ಬಂದು ವೇಣಿಯ
ಸಂಗಮವಾಗಿ ಬಂದ ದೇವಿಗೆ ಅ.ಪ

ಮುನ್ನೂರು ಅರವತ್ತು ನದಿಗಳೆಲ್ಲ ಕೂಡಿ
ಕನ್ಯಾರಾಶಿಗೆ ಗುರು ಬಂದಿರಲು
ಒಂದುಸಂವತ್ಸರ ವಾಸವ ಮಾಡಲು
ಅವರ ಪಾಪವ ಕಳೆದ ಶ್ರೀ ಕೃಷ್ಣವೇಣಿಗೆ ೧

ಇಂದ್ರನ ಪಾಪವ ನದಿಗಳಿಗೆ ಬಿಡಲು
ನಿಂದಿತರಾಗಿ ದುಃಖಿಸುತ ಪೋಗಿ
ಇಂದಿರೆರಮಣನ ಆಜ್ಞೆಯಿಂದಲೆ
ಬಂದ ಕೃಷ್ಣವೇಣಿಗೆ ಗಂಗಾದೇವಿಗೆ ೨

ವೇಣುಶೂರ್ಪಗಳಲ್ಲಿ ನಾನಾ ಫಲಗಳ ಇಟ್ಟು
ನೇಮದಿಂ ಬಾಗಿನಂಗಳ ಕೊಡಲು
ಮಾನಿನಿಯರೆಲ್ಲ ಮೌನದಿಂ ಕೊಡಲು
ಮಾಂಗಲ್ಯವಿತ್ತು ಸಲುಹುವ ದೇವಿಗೆ ೩

ಕೃಷ್ಣತೀರದಲ್ಲಿದ್ದ ವೃಕ್ಷದೇವತೆಗಳು
ಋಷಿಗಳು ಪಾಷಾಣವಾಗಿರಲು
ನಕ್ರ ಮೊದಲಾದ ಜಂತುಗಳೆಲ್ಲ
ಯಕ್ಷರು ವಾಲೂಕ ಹರಿದ ಧೂಲಿಯಾಗಿಹರು ೪

ಇಂದ್ರದಂಡಕ ದಂತ್ರಿಪಾಲ ಸೋಮಕ ಧರ್ಮ
ನಂದನ ನಳ ಹರಿಶ್ಚಂದ್ರರೆಲ್ಲ
ಬಂದು ಸ್ನಾನವ ಮಾಡೆ ಅವರ ಪಾಪಗಳ ಆ
ನಂದದಿಂ ಕಳೆದ ಕೃಷ್ಣವೇಣಿಗೆ ೫

ಮಲಾಪಹಾರಿ ಭೀಮೆ ತುಂಗಭದ್ರೆಯು ಮೊ
ದಲಾದ ಮಹಾನದಿಗಳನು ಕೂಡಿ
[ಒಲವಿ]ಂದ ಸ್ನಾನಪಾನವ ಮಾಡಿದವರಿಗೆ
[ಲೋಲ] ಶ್ರೀನಿವಾಸನ ಪಾದತೋರ್ಪ ಕೃಷ್ಣವೇಣಿಗೆ ೬

## ೨೪

## ಮೇಲುಕೋಟೆ

ಯದುಗಿರಿವಾಸ ನಾರಾಯಣ ಯದುಗಿರಿವಾಸ ಪ

ಯದುಗಿರಿವಾಸನೆ ಬುಧಜನಪೋಷನೆ
ಮದಮುಖಶಿಕ್ಷನೆ ಪದುಮದಳಾಕ್ಷನೆ ಅ.ಪ

ವೇದವ ತಂದು ಅಜನಿಗಿತ್ತು ಭಾರವ ಪೊತ್ತು
ಕೃತಯುಗದೊಳಗೆ ವೇದಾದ್ರಿಯೆಂದೆನಿಸಿದೆ
ಚತುರ್ಮುಖನಲಿ ಪೂಜೆ ಗ್ರಹಿಸಿದ ನಾರಾಯಣ ೧

ನಿಗಮವ ತಂದು ಮನುವಿಗಿತ್ತು ಕಂಬದಿಂ ಬಂದು
ತ್ರೇತಾಯುಗದಲ್ಲಿ ನಾರಾಯಣಗಿರಿಯೆನಿಸಿದೆ
ಸನಕಾದಿಗಳ ಪೂಜೆ ಗ್ರಹಿಸಿದ ನಾರಾಯಣ ೨

ದಾನವ ಬೇಡಿ ಕ್ಷತ್ರಿಯರ ಕುಲವನೀಡಾಡಿ
ದ್ವಾಪರಯುಗದಲ್ಲಿ ಯದುಗಿರಿಯೆನಿಸಿದೆ
ರಾಮ ಕೃಷ್ಣರ ಪೂಜೆ ಗ್ರಹಿಸಿದ ನಾರಾಯಣ ೩

ಜಾನಕಿಯ ತಂದು ಅತಿದುರುಳ ಕಂಸನ ಕೊಂದು
ಕಲಿಯುಗದೊಳಗೆ ಶ್ರೀ ಯತಿಶೈಲವೆನಿಸಿದೆ
ಯತಿರಾಜರಿಗೆ ಒಲಿದ ಪತಿತಪಾವನ ಸ್ವಾಮಿ ೪

ಹಯವನುಹತ್ತಿ ನಾರಯಣ ದುಷ್ಟಕಲಿಯ ನೀನೊತ್ತಿ
ಸಪ್ತದ್ವೀಪವನೆಲ್ಲ ಸುತ್ತಿ ಬಂದೆಯೊ ಎನ್ನಪ್ಪ
ನಿನ್ನೆಣೆಕಾಣೆ ಕಂದರ್ಪನಪಿತ ಚೆಲ್ವಯದುಗಿರಿವಾಸ ೫

## ೨೫

### ಶ್ರೀರಂಗ

ರಂಗನಾಥ ಎನ್ನ ಕಣ್ಣಾಳೆದುರು ನಿಂತಿದಂತಿದೆ ಪ

ವಜ್ರಮಾಣಿಕದ ಕಿರೀಟವನಿಟ್ಟು
ಪ್ರಜ್ವಲಿಸುವ ಹಣೆಯ ಕಸ್ತೂರಿಬಟ್ಟು
ವಜ್ರದ ಕರ್ಣಕುಂಡಲ ಅಳವಟ್ಟು
ಸಾಜದ ಅಧರಚಂದವಿನ್ನೆಷ್ಟು ೧

ಕಬ್ಬುಬಿಲ್ಲನು ಪೋಲ್ವ ಪುಬ್ಬಿನ ಚಂದ
ಅಬ್ಜದಂತೆಸೆವಾ ನಯನದಾನಂದ
ಕುಸುಮವ ಪೋಲುವ ನಾಸಿಕದಂದ
ಕನ್ನಡಿಯಂತೆ ಕದಪು ಹೊಳೆಯುತ್ತ ಬಂದ ೨

ಕಂಠದೊಳಗೆ ಇಟ್ಟ ಕೌಸ್ತುಭಮಣಿಯು
ಎಂಟು ಪದಕಗಳನಳವಡಿಸಿದ ಅಣಿಯು
ಗಂಟೆ ಗೆಜ್ಜೆವುಡಿದಾರದ ಫಣಿಯು
ಸಂಧ್ಯರಾಗವ ಪೋಲ್ವ ಪೀತಾಂಬರದಣಿಯು ೩

ಶಂಖಚಕ್ರವು ಗದೆ ಅಭಯಹಸ್ತಗಳು
ಪಂಕಜಮುಖಿ ಇರುವ ವಕ್ಷಸ್ಥಳವು
ಶಂಕರನಪಿತನ ಪಡೆದ ನಾಭಿದಳವು
ಶಂಕೆ ಇಲ್ಲದ ಕಣಕಾಲಿನ ಹೊಳವು ೪

ಅಂದುಗೆ ಗೆಜ್ಜೆಗಳ ಚಂದದಿಂದಿಟ್ಟು
ಕುಂದಣದ ಪಾಡಗವನಳವಟ್ಟು
ಚಂದದಿಂ ವಜ್ರದಾವುಗೆಯ ಮೆಟ್ಟು ತ
[ಬಂದ] ಗಂಗೆ ಪಡೆದನಖಾಪಂಕ್ತಿಗಳೆಷ್ಟು ೫

ವಜ್ರಾಂಕುಶ ಧ್ವಜರೇಖೆಗಳಿಂದ
ಪದ್ಮಪಾದದ ಕೆಂಪುಗಳು ಬಹುಚಂದ
ಹೊದ್ದಿದ ಭಕ್ತರ ಪಾಪವನೆಲ್ಲ ಒದ್ದು
ಮುಕ್ತಿಯನೀವ ಮುದ್ದು ಶ್ರೀ ವೆಂಕಟಕೃಷ್ಣ ೬

## ೨೬

### ತಿರುಪತಿ

ಶೇಷಾದ್ರಿವಾಸ ಶ್ರೀನಿವಾಸ ಪ

ಶೇಷಾದ್ರಿವಾಸ ವಾಸುಕಿಶಯನನೆ
ಕೇಶಿಸಂಹಾರಕನೆ ಕ್ಲೇಶಭವದೂರನೆ ಅ.ಪ

ನಂಬಿದೆ ನಿನ್ನ ಪಾದವ ಬಂದು ಫಣಿಶಯನನೆ
ಅಂಬುಜನಾಭ ಪಾಪವಿನಾಶನೆ ಕೌಸ್ತು
ಭಾಭರಣನೇ ಕರುಣಾಸಾಗರನೆ ೧

ಪಾಂಡವಪಕ್ಷ ಶ್ರೀನಿವಾಸ ದೈತ್ಯಕುಲಶಿಕ್ಷ
ಯಾದವರಕ್ಷ ಯದುಕುಲಪಕ್ಷನೆ
ಸಜ್ಜನ ರಕ್ಷನೆ ಕರುಣಾಕಟಾಕ್ಷನೆ ೨

ಭವಭಯಭಂಗ ಶ್ರೀನಿವಾಸ ಕರುಣಾಪಾಂಗ
ಗರುಡತುರಂಗನೆ ನೀಲಮೇಘಾಂಗನೆ
ಸುಗ್ರೀವಸಂಗನೆ ವಾಲಿ ವಿಭಂಗನೆ ೩

ಕ್ಷೀರಾಬ್ಧಿಯಿಂದ ನಾರಾಯಣ ಭರದಿ ತಾ ಬಂದ
ಕಮಲದೊಳಗೆ ಬಂದ ರಮಣೀಸಹಿತ ತಾ ನಿಂದ
ಭಕ್ತರ ಪೊರೆಯುತ ನಿಂದ ಗೋವಿಂದ ೪

ಗರುಡವಾಹನನೆ ಶ್ರೀನಿವಾಸ ಪರಮಪಾವನನೆ
ಪಂಕಜನಯನನೆ ಪದ್ಮಿನೀ ಅರಸನೆ
ಶ್ರೀನಿವಾಸನೆ ಎನ್ನ ರಕ್ಷಿಸೊ ನೀನು ೫

## ೨೭

ಶ್ರೀನಿವಾಸ ಮೂರುತಿಗೆ ಜಯತು ಮಂಗಳಂ
ಶೇಷಾಚಲವಾಸನೀಗೆ ಶುಭಮಂಗಳಂ ಪ

ರಂಗಮಾಣಿಕದ ದಿವ್ಯ ಕುಂದಣದ ಕಿರೀಟಕ್ಕೆ
ಸುಗಂಧವಾದ ಕರ್ಪೂರ ಕಸ್ತೂರಿ ತಿಲಕಕೆ
ಕಂದರ್ಪನ ಬಿಲ್ಲಪೋಲ್ವ ಚಂದವಾದ ಪುಬ್ಬುಗಳಿಗೆ
ಮಂದಹಾಸದಿಂದ ನೋಳ್ಪ ಅರವಿಂದನಯನಗಳಿಗೆ ೧

ನಾಸಿಕಕೆ ಕರ್ಣಕುಂಡಲಕೆ ಸುವಾಸನೆವುಳ್ಳ ಅಧರಕ್ಕೆ
ಆಸುಂದರವಾದ ಶ್ರೀವತ್ಸ ಕೌಸ್ತುಭಮಣಿಗೆ
ಶ್ರೀಸತಿವೊಪ್ಪಿರುವ ವಿಸ್ತಾರವಾದ ವಕ್ಷಸ್ಥಳಕೆ ಕೈ
ಲಾಸವಾಸಿ ಪಿತನ ಪಡೆದ ನಾಭಿಯ ಕಮಲಕೆ ೨

ಶಂಖ ಚಕ್ರ ನಾಗ ಬಾಪುರಿ ತೋರ್ಪಹಸ್ತಪಾದಗಳಿಗ
ಲಂಕಾರವಾದ ಪೀತಾಂಬರದ ವಡ್ಯಾಣದಂದಕ್ಕೆ
ಅಂದುಗೆ ಗೆಜ್ಜೆಗಳಿಟ್ಟ ಅಂದವಾದ ಪಾದಗಳಿಗೆ
ಗಂಗೆಯ ಪಡೆದ ನಖ ಅಂಗುಷ್ಟದ ಬೆಳಕಿಗೆ ೩

## ೨೮

### ಶೃಂಗೇರಿ

ಮಂಗಳಂ ಸರಸ್ವತಿದೇವಿಗೆ ಜಯ
ಮಂಗಳಂ ಸರಸಿಜೋದ್ಭವನರಸಿಗೆ ಪ

ಸತ್ಯಲೋಕವ ಬಿಟ್ಟು ಅತ್ಯಂತಹರುಷದಿ
ಭಕ್ತರಿಗೆ ತಾನೊಲಿದು ಬಂದು
ಮತ್ತೆ ಶೃಂಗೇರಿಯ ರತ್ನದ ಪೀಠದಿ
ಪ್ರತ್ಯಕ್ಷಳಾದ ಶಾರದದೇವಿಗೆ ೧

ರತ್ನದಕಿರೀಟ ಮುತ್ತಿನಬಟ್ಟು ಮುಕುರವನಿಟ್ಟು ಮುತ್ತಿನವಾಲೆ
ಮೇಲಾದ ಕೇದಗೆ ರಾಗಟೆಹೆರಳು ಬಂಗಾರಗುಂಡುಗಳಿಟ್ಟ
ಶಾರದದೇವಿಗೆ ೨

ಕೆತ್ತನೆ ಅಡ್ಡಿಕೆ ಮುತ್ತಿನಕಟ್ಟಾಣಿ ಹಸ್ತಕಡಗ ಹರಡಿ ವಂಕಿನಿಟ್ಟು
ಮತ್ತೆ ಕಮಲ ಗಿಣಿ ಪುಸ್ತಕಕಂಠವು ಭಕ್ತರಿಗಭಯವ
ತೋರುವ ದೇವಿಗೆ ೩

ಚಂದದ ಪೀತಾಂಬರ ಕುಂದಣದೊಡ್ಯಾಣ ಅಂದುಗೆ ಗೆಜ್ಜೆ
ಪಾಡಗವನಿಟ್ಟ ಬಂದಭಕ್ತರಿಗೆ ಇಷ್ಟಾರ್ಥವ ಕೊಡುತಿರ್ಪ
ಇಂದಿರೆರಮಣನಸೊಸೆ ಶಾರದೆಗೆ ೪

ಯಾವಾಗಲು ಎನ್ನ ನಾಲಗೆಯಲಿ ನಿಂದು ನಾರಾಯಣನ
ನಾಮವ ನುಡಿಸಿ ಕಾಮಕ್ರೋಧಲೋಭಮೋಹ ಬಿಡಿಸಿ
ಶ್ರೀನಿವಾಸನಪಾದ ತೋರ್ಪ ಶಾರದೆಗೆ ೫

# ವಿಶೇಷ ಸಂದರ್ಭಗಳ ಹಾಡುಗಳು

## ೧. ಶ್ರೀರಂಗ ಮಹಾತ್ಮ್ಯಮ್

(ಶ್ರೀರಂಗದ ವಿವಿಧ ಉತ್ಸವಗಳನ್ನು ಕುರಿತ ಕೀರ್ತನೆಗಳು)

### ೨೯

ಶರಣು ಶರಣು ಶ್ರೀಪರಮಪುರುಷಗೆ ಶರಣು ವರಲಕ್ಷ್ಮೀದೇವಿಗೆ
ಶರಣು ಶಠಕೋಪಾದಿಮುನಿಗಳಿಗೆ ಶರಣು ಅಸ್ಮದ್ಗುರುವಿಗೆ ಪ

ಶರಣು ತುರಂಗಮುಖನಿಗೆ ಶರಣು ಹಂಸಾವತಾರಗೆ
ಶರಣು ಮತ್ಸ್ಯ ಕೂರ್ಮ ವರಾಹಗೆ ಶರಣು ನರಸಿಂಹರೂಪಿಗೆ ೧

ಶರಣು ವಾಮನ ಭಾರ್ಗವರಾಮಗೆ ಶರಣು ರಾಮ ಬಲರಾಮಗೆ
ಶರಣು ಶ್ರೀಕೃಷ್ಣ ಕಲ್ಕಿರೂಪಗೆ ಶರಣು ಕರುಣಾಳು ರಂಗಗೆ* ೨

### ೩೦

### ಪವಿತ್ರೋತ್ಸವ ಗೀತೆ

ಪವಿತ್ರ ಉತ್ಸವವನ್ನು ನೋಡುವ ಬನ್ನಿ ಭಕ್ತರೆಲ್ಲಾ ಪ

ವರಶುಕ್ಲಪಕ್ಷದ ಏಕಾದಶಿಯಲಿ ಅನೇಕಾ
ಭರಣವ ಬಿಟ್ಟು ರಂಗ ವೈದೀಕನಂತೆ
ಪೊರಟು ವೈಜಯಂತಿ ಜನಿವಾರ ಕೌಸ್ತುಭಮಣಿಯು
ಕೊರಳೊಳು ಹೊಳೆಯೆ ಓಲ್ಯಾಡುತಲೆ
ಅರಳಿದಪುಷ್ಪದ ಮೇಲೆ ಯಾಗಶಾಲೆಗೆ ಬಂದರಂಗನ ೧

ವೇದಘೋಷಗಳನ್ನು ವಿಪ್ರರು ಮೋದದಿಂ ಮಾಡುತಿರಲು
ವೇದಮೂರುತಿ ರಂಗನಾಥಗೆ ಆ
ರಾಧನೆ ಮಾಡಿ ಮುನ್ನೂರುಅರವತ್ತು ಪೂಜೆಯನು ಮಾಡಿ
ಮುದ್ದುರಂಗನಿಗೆ ಮಜ್ಜನವ ಮಾಡಿ
ನಿಂದು ಹರುಷದಿ ಯಾಗಪೂರ್ತಿಯ ಮಾಡಿದ ರಂಗನ ೨

ತಂದ ತಂಡುಲವರವಿಯೆ ಮಧ್ಯದಿ ಭಾಂಡಗಳ
ತಂದಿರಿಸಿ ತಂಬಿ ಪವಿತ್ರವನು ಕಲ್ಪೋಕ್ತದಿಂದ ಪ್ರತಿಷ್ಠೆ ಮಾಡಿ
ಒಂದು ಪವಿತ್ರವನು ಪ್ರದಕ್ಷಿಣೆಯಿಂದ
ತಂದು ಧರಿಸಿ ಚಂದದಿಂ ವೈಯ್ಯಾರ ನಡೆ
ಯಿಂದ ಮಂದಿರಕೆ ನಡೆತಂದ ರಂಗನ ೩

ದ್ವಾದಶಿ ದಿವಸದಲಿ ಶ್ರೀರಂಗನ ಪೊಗಳೆ
ವೇದಪಾಠಕರು ಅನಾದಿಮೂರುತಿ ರಂಗನಾಥಗೆ ಆ
ರಾಧನೆ ಮಾಡಿ ಮುನ್ನೂರು ಅರವತ್ತು ಮಂಗಳಾರತಿ ಮು
ಕ್ತಿದಾಯಕಗೆತ್ತಿ ಪೂಜೆಗೊಂಡು ಪವಿತ್ರವನು ಧರಿಸಿ ವಿ
ನೋದ ಸೇವೆಯ ತೋರಿದ ರಂಗನ ೪

ಸಂಧ್ಯಾರಾಗದಿ ಇಂದಿರಾಪತಿ ಬಂದು ಮಂಟಪದಲಿ
ಚಂದದಿಂದಲೆ ಪೂಜೆ ನೈವೇದ್ಯವ ಆ
ನಂದದಿಂದ ಗ್ರಹಿಸಿ ದಿಂಧಿಮಿತೆಂಬ ವಾದ್ಯದಿ ಗೋ
ವಿಂದ ತಾನೆ ಪೊರಟು ಚಂದದಿಂದ ಶಾರ್ದೂಲನಡೆ
ಯಿಂದ ಮಂದಹಾಸದಿ ಬಂದ ರಂಗನ ೫

ಸಪ್ತದಿವಸದಿ ಪವಿತ್ರದಾಭರಣವಿಟ್ಟು
ಭಕ್ತವತ್ಸಲ ಕರ್ಪೂರದ ಚೂರ್ಣಾಭಿಷೇಕವ

---

* ಈ ಕೀರ್ತನೆಯನಂತರ ಈ ವಚನವಿದೆ.
"ಭಕ್ತವತ್ಸಲ ಶ್ರೀರಂಗನಾಥನಿಗೆ ಪವಿತ್ರೋತ್ಸವವನ್ನು ನಡೆಸಬೇಕೆನುತ ವಿಪ್ರರೆಲ್ಲರು ಕೂಡಿ ವಿಶ್ವಕ್ಸೇನರು ಪೊರಟು ಲಕ್ಷ್ಮೀದೇವಿಯರ ಮನೆಯಲಿ ನಿಂದು ಭೂದೇವಿಯನು ಪೂಜೆ ಮಾಡಿ ಹರುಷದಲಿ ಮೃತ್ಸಂಗ್ರಹಣವನು ಮಾಡಿ ಮೊಳೆಯಿಟ್ಟು ಭಕ್ತವತ್ಸಲನ ಪ್ರಥಮೋತ್ಸವಕ್ಕೆ ಪ್ರಾರಂಭವ ಮಾಡಿದರು"

ಅರ್ಥಿಯಿಂದ ಗ್ರಹಿಸಿ ಪತ್ನಿಯರು ಸಹಜವಾಗಿ
ಭತ್ತದಕೊಟ್ಟಿಗೆ ಎದುರೆ ಭತ್ತವಳಿಸಿಯೆ ನಿಂತ
ಭಕ್ತವತ್ಸಲ ಮಿತ್ರರಎದುರಲಿ ನಿಂದ ರಂಗನ ೬

ಒಂಭತ್ತು ದಿನದಲಿ ಅಂಬುಜನಾಭ ಆನಂದ
ದಾಭರಣವಿಟ್ಟು ಕುಂದಣದ ಕೋಳಿಕೆಯನೇರಿ
[ತುಂಬು ಚೆಲ್ವನಾ] ಚಂದ್ರಪುಷ್ಕರಿಣಿಯಲಿ
ಶುಭ್ರತೀರ್ಥವ ಆನಂದದಿಂದಲಿತ್ತು ಬಂದು
ಅವಭೃತ ಮಾಡಿಯೆನಿಂದ ಶ್ರೀನಿವಾಸರಂಗನ ೭

ಉತ್ಸವದ ಮರುದಿನದಿ ಶ್ರೀರಂಗನು ತನ್ನ ಏಕಾಂತ
ಭಕ್ತರಿಗೆ ಇತ್ತು ಪವಿತ್ರದಾಭರಣ ತೀರ್ಥಪ್ರಸಾದವನ್ನು
ಮುಕ್ತಿದಾಯಕ ಮುನಿಗಳ ಮುಂದೆ ಚಂದ್ರನಂತೆ ಬ
ರುತ್ತಿರಲು ಸುತ್ತ ತಾರಕೆಯಂತೆ ವೈಷ್ಣವರು
ಒತ್ತಿ ಬರುವ ಅಂದಚಂದದ ೮

## ೩೧

## ಕೋಲು ಉತ್ಸವಗೀತೆ

ಕೋಲುವ ನೋಡುವ ಬನ್ನಿ ಶ್ರೀರಂಗನಾಯಕಿಯ
ಕೋಲುವ ನೋಡುವ ಬನ್ನಿರೆಲ್ಲ ಪ

ಚಪ್ಪರವನು ಶೃಂಗರಿಸಿ ಪಟ್ಟುಪೀತಾಂಬರದ
ಮೇಲೆ ಕಟ್ಟುಗಳಿಂದ ವಿಸ್ತರಿಸಿ
ಕದಳಿಯಕೊನೆ ಕಬ್ಬು ತೆಂಗಿನ ಫಲಗಳ
ವಿಧವಿಧವಾಗಿ ಶೃಂಗಾರ ಮಾಡಿದರು ೧

ಭಾದ್ರಪದ ಕನ್ಯಾಮಾಸದಲ್ಲಿ ಶುದ್ಧಪಾಡ್ಯದಲ್ಲಿ
ಭದ್ರೆ ಶ್ರೀರಂಗನಾಯಕಿಯು

ಬಂದು ಮಜ್ಜನವನು ಮಾಡಬೇಕೆನುತಲೆ
ಮೂರ್ದ್ವಾರಮಧ್ಯದಲಿ ತಾ ನಿಂದಳು ೨

ತಂದು ಹರವಿದರು ಬತ್ತವ ವಿಸ್ತಾರವಾಗಿ
ತಂದಿಟ್ಟು ಕರ್ಪೂರಬಟ್ಟಲುಗಳು
ಗಂಧದ ತೀರ್ಥವ ತುಂಬಿ ಕಲ್ಪೋಕ್ತ
ದಿಂದಲೆ ಪೂಜೆಯ ಮಾಡಿದರು ೩

ಎಂಭತ್ತೊಂಬತ್ತು ಬಟ್ಟಲಲ್ಲಿ ಇರುವ ಉದಕವನು
ರಂಭೆಗಭಿಷೇಕವ ಮಾಡೆ ಗಂಧವ
ಅಂಬೆ ಶಿರದೊಳು ಧರಿಸಿ ಪೂಮಾಲೆಯ
[ಸಂಭ್ರಮದಿ]ಧರಿಸಿ ನಿಂದಳು ದೇವಿ ೪

ಸುಖನಿಧಿ ಪದ್ಮಾನಿಧಿಗೆ ಹಣ್ಣಿನ ಹರಿವಾಣವ
ಶಂಕೆ ಇಲ್ಲದೆ ಭಕ್ತರು ಪಿಡಿದು [ನಿಂತಿರುವ]
ಶಂಖನಾದವು ತಾಳಮೇಳ ವಾದ್ಯಗಳಿಂದ
ಪಂಕಜಮುಖಿಗಭಿಷೇಕವ ಮಾಡಿದರು ೫

ಪುಷ್ಪದ ಮಂಟಪದಲ್ಲಿ ಪುರುಷೋತ್ತಮನ
ಒಪ್ಪವಾದ ಅಶ್ವವ ತಂದಿರಿಸಿದರು ಆನಂದದಿ
ಕಲ್ಪೋಕ್ತದಿಂದಲೆ ಪೂಜೆ ನೈವೇದ್ಯವ ಮಾಡಿ
ಒಪ್ಪುವ ಕಂಕಣವನು ಕಟ್ಟಿದರಾಗ ೬

ರತ್ನದ ಕಿರೀಟವಿಟ್ಟು ಲಲಾಟದಲ್ಲಿ
ಮತ್ತೆ ತಿದ್ದಿದ ಕಸ್ತೂರಿಬಟ್ಟು
ರತ್ನದ ಪದಕವು ಇಟ್ಟು ಕೊರಳೊಳು
[ರತ್ನ] ಮಂಟಪಕೆ ಇಂದಿರೆ ವಂದಾಳು ೭

ಮಧ್ಯದ ಕೊಟ್ಟಿಗೆಯಲ್ಲಿ ವಿಪ್ರರು ಕೈಕಟ್ಟಿ
ನಿಂದು ಸೇವೆಯ ಮಾಡುತಿರಲು ಅರ್ತಿ
ಯಿಂದಲೆ ಧೂಪದೀಪ ನೈವೇದ್ಯದಿ ಲಕ್ಷ್ಮೀ
ದೇವಿಗೆ ಪೂಜೆಯ ಮಾಡಿದರು ೮

ಭೇರಿ ದುಂದುಭಿ ವಾದ್ಯಗಳಿಂದ ತಾಳಮೇಳವು
[ನಾರಿಯರ] ರ ಸಾಲುಗಳಿಂದ ಬಾಣ
ಬಿರುಸು ಮತಾಪು ಅಗರುಬತ್ತಿ [ಗಳ ನಡುವೆ]
ನಾರಾಯಣನರಾಣಿ ಕೋಲುವಿನಲ್ಲಿ ೯

ಛತ್ರಿಚಾಮರ ಸೂರೆಪಾನ ಪಿಡಿಯೆ ಮದ
ಹಸ್ತಿಗಳು ಮಾಡುವ ಸಲಾಮು
ಸುತ್ತಿ ದೀವಟಿಗೆಯು ತುತ್ತೂರಿ ನಾದವು
ಮತ್ತಧಿಕಾರಿಗಳು ಮಂಟಪದಲಿ ೧೦

ಆರುದಿವಸದಲ್ಲೊರೆಗೊಂಡು ಪಾನುಪಟ್ಟಿಯು
ಸೂರ್ಯಚಂದ್ರರು ಮುತ್ತಿನಬಟ್ಟು
[ಆ]ರಾಗಟೆಹೆರಳು ಭಂಗಾರಗೊಂಡೆಗಳಿಟ್ಟು ವ
ಯ್ಯಾರದಿಂದಲೆ ಬಂದಳು ಮಂಟಪಕೆ ೧೧

ಸಪ್ತದಿನದಲಿ ಲಕ್ಷ್ಮೀದೇವಿಗೆ ಉತ್ರಾಜಿಮಾಲೆ
ಹಸ್ತವಡಗೆ ಹರಡಿವಂಕಿ ದಕ್ಷಿಣ
ಹಸ್ತದಿ ರತ್ನದಹಂಸವು ವಾಮ
ಹಸ್ತವ ಮೊಣಕಾಲಿನೊಳಿಟ್ಟಳು ೧೨

ಅಂದುಗೆ ಗೆಜ್ಜೆ ಮುಂಗೈಮುರಾರಿ ಉಂಗುರವು
ಕುಂದಣದ ಪಾಗಡವಿಟ್ಟು
ಹಿಂದಿನತೋಳಿಗೆ ಬಂದಿ ತಾಯಿತನಿಟ್ಟು
ಕುಂದಣದ ಮಂಟಪದಲಿ ಕುಳಿತಳು ೧೩

ಅಷ್ಟಮ ದಿವಸದಲ್ಲಂದು ಸೃಷ್ಟಿಗಿರೀಶ್ವರಿಗೆ
ಕಟ್ಟಿದರು ಕಲ್ಕೀತುರಾಯಿ
ದೃಷ್ಟಿಯಬಟ್ಟು ರತ್ನದ ಕುಂಡಲ
[ಇಟ್ಟು] ಮತ್ತರಗಿಣಿಯನು ಮಾತಾಡಿಸುತ ೧೪

ಮುಕ್ತಿದಾಯಕಿಗೆ ಮೂರು ಪಾವಡೆಯನುಡಿಸಿ
ಮತ್ತೆ ವಡ್ಯಾಣವನಿ[ಡಲು]
ರತ್ನದ ಹಸ್ತದಿ ಅಭಯವ ಕೊಡುತ
[ನಿಂತಳು] ಮೊನೋರ್ಮಿಯ ಮಂಟಪದಲ್ಲಿ ೧೫

ಮುಂದೊಂಭತ್ತು ದಿನದಲ್ಲಿ ರಂಭೆರಂಗನಾಯಕಿಯು
ಮಿಂದು ಮಡಿಗಳ ತಾನುಟ್ಟು
ಚಂದದಿ ನೈವೇದ್ಯವ ಭಕ್ತರಿಗಿತ್ತು
ಬಂದು ಆಸ್ಥಾನದಿ ನಿಂದಳು ದೇವಿ ೧೬

೩೨

## ಪಾರ್ವಟೆ ಉತ್ಸವಗೀತೆ

ನೋಡಿದೆ ನೋಡಿದೆ ಪಾರ್ವಟೆ ಉತ್ಸವವ
ರೂಢಿಗೊಡೆಯ ರಂಗನ ಪರಮಸಂಭ್ರಮವ ಪ.

ಮುದದಿ ವಿಜಯದಶಮಿಯಲಿ ಭುಜಗಶಯನ ರಂಗ
ವಿಧವಿಧವಾದ ಆಭರಣ ವಸ್ತ್ರಗ[ಳಿಂದ]
ಮದನನಯ್ಯನು ತಾನು ಶೃಂಗಾರವಾಗಿ
ಒದಗಿ ಪಲ್ಲಕ್ಕಿ ಏರಿ ಬರುವ ವೈಭೋಗವ ೧

ಮುತ್ತಿನಕಿರೀಟ ಮುಗುಳುನಗೆಯ ನೋಟ
ರತ್ನದ ಪದಕಗಳ ಹತ್ತುಅಳವಟ್ಟು ಬಟ್ಟಲಲಿ

ಭಕ್ತರು ಬಿಟ್ಟ ಉಭಯವನ್ನೆಲ್ಲ ಗ್ರಹಿ
ಸುತ್ತ ನರಸಿಂಹನಪುರದ ಮಂಟಪದಲ್ಲಿ ೨

ಅಂಬುಮಾಲೆ ಆನೆಮೇಲೆ ನೇಮದಿಂದಲೆ ತಂದು
ನೀಲವರ್ಣಗೆ ಕೊಡಲು ಪೂಜೆಯನು ಮಾಡಿ
ನಾಲ್ಕುದಿಕ್ಕಿಗೆ ಅಂಬು ನಾಗಶಯನ ಬಹರಿನೇರಿ
ಲೀಲೆಯಿಂದ ಬರುವ ಪರಮವೈಭೋಗವ ೩

ಶರಧಿಯಂತೆ ಪುರುಷ ಭೋರ್ಗರೆಯುತ ಬರುತಿರೆ
ಮುರುಜ ಮೃದಂಗ ಭೇರಿವಾದ್ಯ ಘೋಷಗಳು
ಗರುಡಮಂಟಪದಲ್ಲಿ ಗಜ ಸಿಂಹ ವೃಷಭ
ಶಾರ್ದೂಲನಡೆಯಿಂದ ಬಂದ ವಸುದೇವಪುತ್ರನ ೪

ಬಂದು ಅಶ್ವವನಿಳಿದು ಅರ್ಥಿಯಿಂದಲೆ
ನಿಂದು ಗಾಯಿತ್ರಿಮಂಟಪದಲ್ಲಿ ಮಿತ್ರರು ಸಹಿತ
ಮಿಂದು ಮಡಿಯನಟ್ಟು ಇಂದಿರೆ ಸಹಿತಲೆ
ನಿಂದ ವೆಂಕಟರಂಗ ಮಂದಿರದೊಳಗೆ ೫

## ೩೩

## ಉಯ್ಯಾಲೆ ಉತ್ಸವಗೀತೆ

ಜೊ ಜೊ ಜೊ ಜೊ ಶ್ರೀರಂಗನಾಥ
ಜೊ ಜೊ ರಂಗನಾಯಕಿರಮಣನೆ ಭೂಮಿಕಾಂತ ಪ.

ಮಂಟಪವನು ಶೃಂಗರಿಸಿದರಂದು
ಎಂಟುದಿಕ್ಕಿಗೆ ಪುಷ್ಪಗಳಲಂಕರಿಸಿ ವೈ
ಕುಂಠವಾಸನ ಉಯ್ಯಾಲೆಮಂಟಪವನ್ನು
ಭಂಟರು ಬಂದು ಶೃಂಗಾರ ಮಾಡಿದರು ೧

ಆಶ್ವೀಜ ಮಾಸದ ಶುಕ್ಲಪಕ್ಷದಲ್ಲಿ ಆ
ತುಲಾ ಮಾಸದ ಆರುದಿವಸದಲ್ಲಿ
ವಾರಿಜಮುಖಿಯರ ಒಡಗೊಂಡು ರಂಗ ವೈ
ಯ್ಯಾರದಿಂದಲೆ ಬಂದನು ಮಂಟಪಕೆ ೨

ಮತ್ತೆ ಮರುದಿನದೊಳಗಚ್ಯುತನಂತ
ಕುತ್ತನಿಅಂಗಿ ಕುಲಾವಿ ಧರಿಸಿ
ರತ್ನದ ಪಾನುಪಟ್ಟಿಯು ಅರಳೆಲೆ ಕಟ್ಟಿ
ಭಕ್ತವತ್ಸಲನಾಡಿದನುಯ್ಯಾಲೆ ೩

ಮೂರುದಿವಸದಲಿ ಮುರವೈರಿ ತಾನು
ಭಾರಿ ವಜ್ರದ ಮಕರಕಂಠಿಯಾ ಧರಿಸಿ
ನೀರಜನೇತ್ರನು ನಿಗಮಗೋಚರನು ವೈ
ಯ್ಯಾರದಿಂದಲಿ ಆಡಿದನುಯ್ಯಾಲೆ ೪

ನಾಲ್ಕು ದಿವಸದಲಿ ನಂದನಕಂದ ನವ
ರತ್ನದ ಮಕರಕಂಠಿಯಧರಿಸಿ
ನಾನಾ ವಿಧದ ಪುಷ್ಪಮಾಲಿಕೆಯನು
ಧರಿಸಿ ನಾಗಶಯನನಾಡಿದನುಯ್ಯಾಲೆ ೫

ಐದು ದಿವಸದಲಿ ಅಕ್ರೂರವರದಗೆ ಕರಿ
ದಾದ ಕುಲಾವಿ ಕಲ್ಕಿಯ ತುರಾಯಿ
ಗಂಡಭೇರುಂಡಪಕ್ಷಿಯ ಪದಕವನಿಟ್ಟು
ಪುಂಡರಿಕಾಕ್ಷನಾಡಿದನುಯ್ಯಾಲೆ ೬

ಆರು ದಿವಸದಲಿ ಅಂಗಜನಯ್ಯಗೆ
ಕೂರೆ ಕುಲಾವಿ ವೈಯಾರದಿಂಧರಿಸಿ
ಹಾರ ಮಾಣಿಕ ರತ್ನ ಸರಗಳಳವಡಿಸಿ
ನೀರಜನೇತ್ರನಾಡಿದನುಯ್ಯಾಲೆ ೭

ಸಪ್ತದಿವಸದಲಿ ರತ್ನ ಮೌಳಿಯ ಧರಿಸಿ
ಹಸ್ತದಿ ರತ್ನಹಾರ ಗಂಧವಿರಿಸಿ
ಅರ್ತಿಯಿಂದಲೆ ತನ್ನ ಮಿತ್ರರು ಸಹಿತಲೆ
ಬತ್ತವಳಿಸಿ ಬಂದ ಭಕ್ತವತ್ಸಲನು ೮

ಓರೆಗೊಂಡೆಯ ವೈಯಾರದಿಂ ಧರಿಸಿ
ನಾರಿಯರೆಡಬಲದಲಿ ಕುಳ್ಳಿರಿಸಿ
ವಾರಿಜನೇತ್ರನು ನಡುವೆ ಕುಳ್ಳಿರಲು
ವಾರಾಂಗನೆಯರೆಲ್ಲ ಪಾಡುತಿರಲು ೯

ಅಷ್ಟಮ ದಿವಸದಿ ಅರ್ತಿಯಿಂದಲೆ
ಕೃಷ್ಣಮೂರುತಿಗೆ ರಾಜಮುಡಿಯನು ಧರಿಸಿ
ಹಿಂದಿನ ತೋಳಿಗೆ ಬಂದಿ ತಾಯಿತನಿಟ್ಟು
ಇಂದಿರೆ ರಮಣನಾಡಿದನುಯ್ಯಾಲೆ ೧೦

ಎಡಬಲದಲಿ ಭಕ್ತರು ನಿಂತಿರಲು
ಪಿಡಿದು ಚಾಮರ ವ್ಯಜನವ ಬೀಸುತಿರಲು
ಬೆಡಗಿನಿಮ್ಮ [ಡಕೆ]ಲೆ ಕರ್ಪೂರದ ಗುಳಿಗೆಯ ಎ
ನ್ನೊಡೆಯಗೆ ಭಕ್ತರು ಪಿಡಿದು ನಿಂದಿರಲು ೧೧

ದಾಸರಿಸಂದವು ಧಗಧಗನುರಿಯೆ ಸಹ
ಸ್ರ ಸೂರ್ಯನಂತೆ ಪದಕಗಳೊಳೆಯೆ
ಲೇಸಾದ ರತ್ನದ ಪಾದುಕೆಯನು ಧರಿಸಿ
ವಾಸುದೇವನು ಆಡಿದನುಯ್ಯಾಲೆ ೧೨

ಇಂದಿರೆ ರಮಣ ಒಂಭತ್ತು ದಿನದೊಳು
ಚಂದ್ರ ಪುಷ್ಕರಣೀಲಿ ತೀರ್ಥವನ್ನಿತ್ತು
ಬಂದು ಮಜ್ಜನವನ್ನು ಮಾಡಿ ವೆಂಕಟರಂಗ
ಇಂದಿರೆಸಹಿತಲೆ ನಿಂದ ಹರುಷದಲಿ ೧೩

## ೩೪

ಲಾಲಿ ರಂಗನ ರಾಣಿ ಪರಮಕಲ್ಯಾಣಿ
ಲಾಲಿ ಕೀರವಾಣಿ ಪಂಕಜಪಾಣಿ ಲಾಲಿ ಪ.

ಕ್ಷೀರಸಾಗರದಲಿ ಜನಿಸಿ ತಾ ಬಂದು
ವಾರಿಜಾಕ್ಷನ ವಕ್ಷಸ್ಥಳದಿ ತಾ ನಿಂದು
ಘೋರ ಪಾತಕಿಗಳನು ಪೊರೆವೆನೆಂತೆಂದು
ಶ್ರೀರಂಗಕ್ಷೇತ್ರದಲಿ ಬಂದು ತಾ ನಿಂದು ೧

ಶುದ್ಧ ಪಾಡ್ಯ ತುಲಾ ಕಾರ್ತೀಕದಲಿ
ಮುದ್ದು ಶ್ರೀರಂಗನ ರಾಣಿ ಹರುಷದಲಿ
ದಂತದ ಉಯ್ಯಾಲೆಮಂಟಪದಲ್ಲಿ
ಕಂತುಪಿತನರಸಿಯಾಡಿದಳೆ ಉಯ್ಯಾಲೆ ೨

ಕಸ್ತೂರಿಯನಿಟ್ಟು ಮುತ್ತಿನ ಮೂಗುಬಟ್ಟು
ಹಾರಪದಕಗಳು ಪೀತಾಂಬ್ರವನೆ ಉಟ್ಟು
ಕುಂದಣದ ಒಡ್ಯಾಣವನ್ನು ಅಳವಟ್ಟು
ಇಂದಿರಾದೇವಿ ಆಡಿದಳೆ ಉಯ್ಯಾಲೆ ೩

ರತ್ನದಾ ಕಿರೀಟವನ್ನು ತಾ ಧರಿಸಿ
ಕತ್ತರಿಯ ಬಾವುಲಿಯ ಕಮಲ ಸರಗಳಳವಡಿಸಿ
ಮುತ್ತು ಸುತ್ತಿದ ರತ್ನದಸುಲಿಯನು ಧರಿಸಿ ಅ
ಚ್ಚುತನರಾಣಿ ಆಡಿದಳೆ ಉಯ್ಯಾಲೆ ೪

ದೋಸೆ ವಡೆ ನೈವೇದ್ಯ ಮೀಸಲನು ಸವಿದು
ದಾಸರೆತ್ತಿದ ಪಿಷ್ಟದಾರತಿಯಲಿ ನಲಿದು
ಲೇಸಾದ ಕರ್ಪೂರ ವೀಳ್ಯವನು ಸವಿದು
ವಾಸುದೇವನರಾಣಿ ಆಡಿದಳೆ ಉಯ್ಯಾಲೆ ೫

ವರರಂಗವಂಶದವರು ವರದಿಂದ ಪಾಡೆ
ಕರುಣಾಕಟಾಕ್ಷದಿಂ ದೇವಿ ತಾ ನೋಡೆ
ಪ್ರಜೆಗಳೆಲ್ಲರು ಬಂದು ವರಗಳನು ಬೇಡೆ
ವಜ್ರದಭಯಹಸ್ತಗಳಿಂದ ವರಗಳನು ನೀಡೆ ೬

ಕರ್ತ ಶ್ರೀ ಶ್ರೀನಿವಾಸ ರಂಗನಾರಾಣಿ
ಸಪ್ತದಿನದುಯ್ಯಾಲೆಯನು ತಾ ರಚಿಸಿ
ಭಕ್ತರಿಗೆ ತೀರ್ಥ ಪ್ರಸಾದಗಳನಿತ್ತು
ಅರ್ಥಿಯಿಂ ತೆರಳಿದಳು ತನ್ನರಮನೆಗೆ ೭

## ೩೫

## ಕೌಶಿಕೋತ್ಸವ ಗೀತೆ

ಕೌಶಿಕೋತ್ಸವ ನೋಡುವ ಜನರಿಗೆ ಕಣ್ಗಳೆರಡು ಸಾಲದು ಪ.

ಕಾರ್ತೀಕ ಶುದ್ಧ ಏಕಾದಶಿಯಲ್ಲಿ ಕಂ
ದರ್ಪಜನಕನು ಪೊರಟುಬಂದು
ಶಂತನುಮಂಟಪದಲಿ ಮಜ್ಜನ ಮಾಡಿ
ಎಂದಿನಂದದಿ ತನ್ನ ಮಂದಿರಕೆ ನಡೆದನು ೧

ನಿತ್ಯಕರ್ಮವನೆಲ್ಲ ಗ್ರಹಿಸಿ ರಂಗಸ್ವಾಮಿ
ಅರ್ತಿಯಿಂದಲೆ ನೀರಾಡಿ ಎದ್ದು
ಭಕ್ತರೆಚ್ಚರಿಕೆ ಪರಾಕು ಎಂದೆನುತಿರೆ
ಅರ್ತಿಯಿಂದಲೆ ಬಂದ ಅರ್ಜುನಮಂಟಪಕೆ ೨

ಮಂಟಪದಲಿ ಶ್ರೀರಂಗನಿರೆ ವ್ಯಾಸ
ಭಟ್ಟರು ಬಂದು ಪುರಾಣ ಪೇಳೆ
ಮುನ್ನೂರುಅರವತ್ತು ವಲ್ಲಿಗಳನ್ನು ಧರಿಸಿ
ಮು[ನ್ನ]ಸೇವೆಯನಿತ್ತ ಮೋಹನರಂಗನ ೩

ಕರಿಯಕುಲಾವಿ ಕುತ್ತನಿಅಂಗಿ ವಜ್ರ
ದರಳೆಲೆ ಮುತ್ತುಗಳಲುಗಾಡುತಾ ಕರ್ಣ
ಕುಂಡಲ ಹಾರ ಪದಕಗಳ್ಹೊಳೆಯುತ
ಪಡಿಯನೇರಿ ಬಂದ ಕರ್ಪೂರಧೂಳಿಯಿಂದ ೪

ನೋಡಿದ ಅಗ್ನಿ ನಾಲ್ಕು ಕಣ್ಗಳಿಂದ ಬಂದು
ನೋಡಿದ ರುದ್ರ ಹತ್ತು ಕಣ್ಗಳಿಂದ
ನೋಡಿದ ಇಂದ್ರ ಸಹಸ್ರಕಣ್ಗಳಿಂದಲೆ ಹರಿಯ
ನೋಡಿದನೆಂಟು ಕಣ್ಗಳಿಂದ ಬ್ರಹ್ಮ ವೆಂಕಟರಂಗನ ೫

## ೩೬

## ಕೃತ್ತಿಕೋತ್ಸವ ಗೀತೆ

ಕೃತ್ತಿಕೋತ್ಸವ ನೋಡುವ ಬಾರೆ ನ
ಮ್ಮಾರ್ತಿಯ ಪರಿಹರಿಪನು ನೀರೆ ಪ.

ವೃಶ್ಚಿಕ ಕಾರ್ತೀಕ ಮಾಸದಿ ಕೃತ್ತಿಕೆ
ಪೋರ್ಣಮಿ ದಿವಸದಿ ಕಂಕಣವನು
ಆನಂದದಿ ಕಟ್ಟಿ ಶಂತನುಮಂಟಪದಿ
ಬಹುಚಂದದಿ [ನಿಂದ] ೧

ಮಿಂದು ಮಡಿಯ ತಾನುಟ್ಟನೆ
ಚಂದಂದಾಭರಣ ತೊಟ್ಟನೆ
ಭಕ್ತರಿಗೆ ತೀರ್ಥ ಕೊಟ್ಟನೆ ಸ್ವಾಮಿ
ಅರ್ತಿಯಿಂದಲೆ ತಾ ಪೊರಟಾನೆ ೨

ಮಾನಸದಲಿ ಮಹಾದೀವವನು
ಮಹಾಧ್ಯಾನದ ಮೇಲಿರಿಸಿ

ಬೇಗ ಉತ್ತಮ ನಂಬಿದೀಪವನಚ್ಚಿದನಾಗ
ಭಕ್ತವತ್ಸಲನಾಲಯಕೆಲ್ಲ ೩

ಹಾರ ಪುಷ್ಪದ ಕೋಳಿಕೆಯಲ್ಲಿ ವೈ
ಯಾರದಿಂದಲೆ ಶ್ರೀರಂಗನೇರಿ
ಭೇರಿದುಂದುಭಿ ವಾದ್ಯಗಳಲ್ಲಿ ಸ್ವಾಮಿ
ಚಕ್ರಮೂರುತಿಯಮಂಟಪದಲ್ಲಿ ೪

ಭಕ್ತವತ್ಸಲ ಶ್ರೀಕೃಷ್ಣನೆ ಮತ್ತೆರಡು
ಪಂದ (?)ವನಿತ್ತಾನೆ ಮುದದಿ
ಪಕ್ಕೆ ಪುರಿ (?) ಇಟ್ಟಾನೆ ಸ್ವಾಮಿ ಮಹ
ಲಕ್ಷ್ಮಿಗೆ ಸೇವೆ ಕೊಟ್ಟಾನೆ ೫

ಆಳ್ವಾರರಿಗೆ ಓಲೆ ಬರೆದಾನೆ
ಆಳುಗಳ ಕೈಲಿತ್ತು ಪೊರೆದಾನೆ
ಕರ್ಪೂರವನೆ ಸೂರೆಗೊಂಡನೆ ಸ್ವಾಮಿ
ಭಕ್ತರ ಹಸ್ತದಲಿ ಚಿತ್ತೈಸಿದನೆ ೬

ನಂದನಕಂದ ಮುಕುಂದನೆ
ಇಂದಿರೆರಮಣ ಗೋವಿಂದನೆ
ಸುಂದರ ಮಂದರೋದ್ಧಾರನೆ
ಭವಬಂಧನಂಗಳನೆಲ್ಲ ಕಳೆವನೆ ೭

ಕೃತ್ತಿಕ ದೀಪದುತ್ಸವವನ್ನು
ಅರ್ತಿಯಿಂದಲೆ ನೋಡಿದವರಿಗೆ
ಭಕ್ತವತ್ಸಲ ಶ್ರೀ ವೆಂಕಟರಂಗನು
ಮುಕ್ತಿಯ ಕೊಡುವನು ಸತ್ಯವಿದು ೮

## ೩೭

## ಧನುರ್ಮಾಸದ ಸೇವೆಯ ಗೀತೆ

ಧನುರ್ಮಾಸದ ಸೇವೆಯ ನೋಡುವ ಬನ್ನಿ
ದಾನವಾಂತಕ ರಂಗನ ಪ.

ಶ್ರೇಯೋನಿಧಿಗಳಿಗೆರಗಿ
ಶ್ರೀವೇದಾಂತ ಗುರುಗಳಿಗೆ ವಂದಿಸಿ
ಶ್ರೀ ಭಾಷ್ಯಕಾರ ಶಠಗೋಪರಿಗೆ ವಂದಿಸಿ
ಶ್ರೀರಂಗೋತ್ಸವವ ಸಂಕ್ಷೇಪದಿಂ ಪೇಳುವೆ ೧

ಮಾರ್ಗಶಿರ ಮಾಸದಲಿ
ಮಹಾನುಭಾವ ಶ್ರೀರಂಗನಾಥನಿಗೆ
ಮಹದುತ್ಸವವನ್ನು ನಡೆಸಬೇಕೆನುತಲೆ
ಮಹಾಪುರುಷರು ಸಂಕಲ್ಪವ ಮಾಡಿದರು ೨

ಕೇಶವ ಮಾಸದಲಿ ಎದ್ದು
ದಾಸರು ಮೂರನೆ ಜಾವದಲಿ
ಭೂಸುರರಿಗೆ ಎಚ್ಚರವಾಗಬೇಕೆಂದು ಬಾ
ರೀಸಿದರು ಭೇರಿ ದುಂದುಭಿ ವಾದ್ಯಗಳ ೩

ಕನಕಿ ಸುಜೋತಿ ಹೇಮಾವತಿಯ
ಕಪಿಲೆ ಕಾವೇರಿ ತೀರ್ಥದಲಿ
ಸ್ನಾನವ ಮಾಡಿ ತೀರ್ಥವ ತಂದು ನೇಮದಿ
ನೀಲವರ್ಣನಿಗಭಿಷೇಕವ ಮಾಡಿದರು ೪

ಛಳಿಗೆ ಕುಲಾವಿಯನಿಟ್ಟು
ಶಾಲುಗಳ ಹೊದಿಸಿ ನಳಿನನಾಭ ರಂಗಗೆ

ಪರಿಪರಿ ಪುಷ್ಪದ ಸರಗಳ ಧರಿಸಿಯೆ
ಶ್ರೀಮೂರ್ತಿಯ ಸರವನು ಧರಿಸಿದರಾಗ ೫

ತಾಪಹರವಾದ ಸೂಕ್ಷ್ಮದ ದಿವ್ಯ
ಧೂಪವನು ಬೆಳಗಿದರು
ವ್ಯಾಪಿಸುವ ತಿಮಿರವ ಪರಿಹರಿಸಿ ರಂಜಿಸುವ
ದೀಪವ ಬೆಳಗಿದರು ಶ್ರೀಪತಿಗೆ ೬

ಋಗ್ವೇದ ಯಜುರ್ವೇದವು ಸಾ
ಮವೇದ ಅಥರ್ವಣವೇದಂಗಳು
ದ್ರಾವಿಡವೇದ ಪುರಾಣಶಾಸ್ತ್ರಗಳನು ಬಾಗಿ
ಲಾ ವೊಳಗೆ ನಿಂತು ಭಕ್ತರು ಪೇಳಿದರು ೭

ವಾರಾಂಗನೆಯರಾಗ ವೈಯ್ಯಾರದಿಂದ
ಆರತಿಗಳನೆ ತಂದು
ವಾರಿಜನಾಭಗೆ ನೇಮದಿಂದಲೆ ಗುಂ
ಭಾರತಿಗಳನೆತ್ತಿ ನೈವೇದ್ಯವ ತಂದರು ೮

ಮುದ್ಗಾನ್ನ ಘಮಘಮಿಸುವ ಪಾಯಸ
ದಧ್ಯೋದನಗಳು ಪರಿಪರಿ ಶಾಕಪಾಕವು
ಆ ದಿವ್ಯ ಭಕ್ಷ್ಯನೈವೇದ್ಯವ ಪರಮಪುರುಷಗೆ
[ಆದ್ಯರು] ಆರೋಗಣೆ ಮಾಡಿದರು ೯

ಕಳಿಯಡಿಕೆ ಬಿಳಿಯೆಲೆಯು ಕರ್ಪೂರದ
ಗುಳಿಗೆಗಳನ್ನೆ ತಂದು ಸೃಷ್ಟೀಗೀಶ್ವರಗೆ
ಒಳ್ಳೆ ತಾಂಬೂಲವ ಸಮರ್ಪಿಸಿ
ಹಿಟ್ಟಿನ ಮಂಗಳಾರತಿಯನೆತ್ತಿದರಾಗ ೧೦

ಆ ಮಹಾ ಶ್ರೀನಿವಾಸ ರಂಗ ನೈವೇದ್ಯವ
ಶ್ರೀಮದ್ರಾಮಾನುಜರ ಮತದಿ

ನೇಮದಲಿ ವಿನಿಯೋಗವ ಮಾಡಲು ಪಾವ
ನಾಮಾದೆವೆಂದೆನುತ ಪೋದರು ಎಲ್ಲ ೧೧

## ೩೮

## ಏಕಾದಶಿ ಉತ್ಸವಗೀತೆ

ಲೋಕನಾಯಕನ ಏಕಾದಶಿಯ ಉತ್ಸವಕೆ ಅ
ನೇಕ ವಿಧದಿಂದ ಪಟ್ಟಣವ ಸಿಂಗರಿಸಿ ೧

ಸುಣ್ಣ ಕೆಮ್ಮಣ್ಣಿಂದ ಕಾರಣೆಯನು ರಚಿಸಿ
ಚೀಣೆ ಚೀಣಾಂಬರದ ಮೇಲುಕಟ್ಟುಗಳು ೨

ಕದಳಿಯ ಕಂಬಗಳು ಗೊನೆಸಹಿತ ನಿಲ್ಲಿಸಿ
ತೆಂಗು ಕ್ರಮುಕದ ಫಲವ ತಂದು ಸಿಂಗರಿಸಿ ೩

ವಿಧ ವಿಧವಾದ ಪುಷ್ಪಗಳನು ತರಿಸಿ
ಮದನನಯ್ಯನ ಮಂಟಪವ ಸಿಂಗರಿಸಿ ೪

ಶುದ್ಧ ಪಾಡ್ಯದ ದಿವಸ ಮುದ್ದು ಶ್ರೀರಂಗ
ಅಧ್ಯಯನೋತ್ಸವಕೆಂದು ಪೊರಟು ತಾ ಬಂದ ೫

ಭಟ್ಟರು ವೇದಾಂತಿ ಜಯಿಸಿದರ್ಥವನು
[ನಟ್ಟ]ಮಾವಾಸೆರಾತ್ರಿಯಲಿ ಅರೆಯರ್ಪಾಡಿದರು ೬

ಸಂಧ್ಯಾರಾಗವ ಪೋಲ್ವ ಅಂಗಿಕುಲಾವಿ
ಛಂದ ಛಂದದ ಆಭರಣವನು ಧರಿಸಿ ೭

ಸಿಂಹನಡೆಯಿಂದ ಮೂರಡಿಯಲಿ ನಿಂದು
ಮಹಾಶ್ರೀವೈಷ್ಣವರಿಗೆ ಶ್ರೀಪಾದವಿತ್ತು ೮

ಮಂತ್ರಿ ಎದುರಲಿ ನಿಂತು ಮಾಲೆಗಳನಿತ್ತು
ಕಂತುಪಿತ ಬಂದ ನಾಗಿಣಿಯ ಮಂಟಪಕೆ ೯

ವಾಸುಕೀಶಯನಮಂಟಪದಲಿ ನಿಂತು
ದಾಸಿ ವರವನು ಸಲಿಸಿದ ಕ್ಲೇಶನಾಶಕನ ೧೦

ಸುರರಿಗೊಡೆಯನು ಸುಂದರಾಂಗ ತಾ ಬಂದು
[ವರ]ಸುಲ್ತಾನಿ ಎದುರಲಿ ನಲಿನಲಿದು ನಿಂದು ೧೧

ಕುಂದಣದ ಛತ್ರಿ ಚಾಮರಗಳಲುಗಾಡೆ
ಇಂದಿರಾರಮಣ ಸತಿಯಿದುರೆ ನಲಿದಾಡೆ ೧೨

ಆದಿಮೂರುತಿ ಮಂಟಪದೊಳು ನಿಂತು
ಆದಿ ಆಳ್ವಾರುಗಳಿಗೆಲ್ಲ ಆಸ್ಥಾನವಿತ್ತು ೧೩

ವಿಷ್ಣುಚಿತ್ತರು ಮಾಡಿದರ್ಥಂಗಳನ್ನು
[ವಿಶೇಷ]ದಭಿನಯದಿಂದ ಪೇಳಿದರು ೧೪

ಅರೆಯರು ಬಂದು ತಾವೆದುರಲ್ಲಿ ಪಾಡೆ ಭೂ
ಸುರೋತ್ತಮರೆಲ್ಲ ಹರುಷದಿಂ ನೋಡೆ ೧೫

ಮಂಟಪದಲ್ಲಿ ನೇವೇದ್ಯವನ್ನು ಗ್ರಹಿಸಿ ವೈ
ಕುಂಠವಾಸನು ಬಂದ ವೈಯ್ಯಾರದಿಂದ ೧೬

ದರ್ಪಣದೆದುರಲ್ಲಿ ನಿಂತು ಶ್ರೀರಂಗ ಕಂ
ದರ್ಪನಾಪಿತ ಬಂದ ಆನಂದದಿಂದ ೧೭

ಮದಗಜದಂತೆ ಮೆಲ್ಲಡಿಯಿಟ್ಟು ಬಂದು
ಒದಗಿ ಮೂರಡಿಯಲ್ಲಿ ತಿರಿಗುತಾ ನಿಂದು ೧೮

ಅಡಿಗೊಂದು ಉಭಯವನ ಗ್ರಹಿಸಿ ಶ್ರೀರಂಗ
ಬೆಡಗಿನಿಂದಲೆ ಬಂದ ಮಂಟಪಕೆ ಭವಭಂಗ ೧೯

ಶ್ರೀಧರನು ಮಂಟಪದಲ್ಲಿ ತಾ ನಿಂತು ಮ
ರ್ಯಾದೆಯನಿತ್ತು ಶ್ರೀವೈಷ್ಣವರಿಗೆ ೨೦

ವೈಯ್ಯಾರ ನಡೆಯಿಂದ ಒಲಿದೊಲಿದು ಬಂದು
[ನಯ] ಸೋಪಾನದೆದುರಲಿ ನಲಿನಲಿದು ನಿಂದು ೨೧

ಕರ್ಪೂರ ಪುಷ್ಪವನು ಬೆರೆಸಿ ತಾವ್ತಂದು
ಅಪ್ರಮೇಯನ ಶಿರದೊಳೆರೆಚಿದರು [ಅ]ಂದು ೨೨

ಇಂದಿರಾರಮಣ ಗುಂಭಾರತಿಯ ಗ್ರಹಿಸಿ
ಎಂದಿನಂದದಿ ತನ್ನ ಮಂದಿರಕೆ ನಡೆದ ೨೩

ಬಿದಿಗೆ ತದಿಗೆಯು ಚೌತಿ ಪಂಚಮಿಯಲ್ಲಿ
ವಿಧವಿಧದ ಆಭರಣಮನೆ ಧರಿಸಿ ೨೪

ಷಷ್ಠಿ ಸಪ್ತಮಿ ಅಷ್ಟಮಿ ನೌಮಿಯಲ್ಲಿ
ಸೃಷ್ಟಿಯೊಳಗುಳ್ಳ ಶೃಂಗಾರವನೆ ಮಾಡಿ ೨೫

ದಶಮಿಯ ದಿವಸದಲಿ ಕುಸುಮನಾಭನಿಗೆ
ಶಶಿಮುಖಿಯ ಅಲಂಕಾರವನ್ನು ಮಾಡಿದರು ೨೬

ಸುರರು ಅಸುರರು ಕೂಡಿ ಶರಧಿಯನು ಮಥಿಸೆ
ಭರದಿ ಅಮೃತವು ಬರಲು ಅಸುರರಪಹರಿಸೆ ೨೭

ಸುರರೆಲ್ಲರು ಬಂದು ಶ್ರೀಹರಿಗೆ ಇಡಲು
ಮೊರೆ ಸಾಧಿಸುವೆನೆಂದೆನುತ ವರಗಳನು ಕೊಡಲು ೨೮

ಎನಗೆ ತನಗೆಂದು ಹೋರಾಡುವ ಸಮಯದಿ
ವನಜನಾಭನು ಮೋಹಿನಿಯ ರೂಪಿನಲಿ ೨೯

ವಾರೆಗೊಂಡೆಯವನು ವೈಯ್ಯಾರದಿಂದ ಧರಿಸಿ
ತೋರಮುತ್ತಿನ ಕುಚ್ಚುಗಳ ಅಳವಡಿಸಿ ೩೦

ಹೆರಳು ರಾಗಟೆಯು ಬಂಗಾರಗೊಂಡ್ಯಗಳು
ಅರಳುಮಲ್ಲಿಗೆ ಹೂವ ದಂಡೆಗಳ ಮುಡಿದು ೩೧

ಪಾನಪಟ್ಟಿಯು ಸೂರ್ಯಚಂದ್ರಮರನಿಟ್ಟು
ಫಣೆಯಲ್ಲಿ ತಿದ್ದಿದ ಕಸ್ತೂರಿ ಬಟ್ಟು ೩೨

ಚಾಪವನು ಪೋಲುವಾ ಪುಬ್ಬಿನಾ ಮಾಯ
ಆಪ್ತಭಕ್ತರನು ಕರುಣದಿಂ ನೋಡುವ ನೋಟ ೩೩

ತಿಲಕುಸುಮವನು ಪೋಲ್ವ ನಾಸಿಕದ ಚಂದ
ಥಳಥಳಿಸೆ ಮುತ್ತಿನ ಮುಕುರದ ಅಂದ ೩೪

ಕುಂದಕುಸುಮವ ಪೋಲ್ವ ದಂತಪಂಕ್ತಿಗಳು
ಕೆಂ[ದ]ವಳಲತೆಯಂತಿರುವ ಅಧರಕಾಂತಿಗಳು ೩೫

ಚಳತುಂಬು ಬುಗುಡಿ ಬಾವುಲಿಗಳನಿಟ್ಟು
ಥಳಥಳಿಪ ವಜ್ರದ ಓಲೆ ಅಳವಟ್ಟು ೩೬

ಗಲ್ಲದಲಿ ಪೊಳೆಯುವ ದೃಷ್ಟಿಯ ಬೊಟ್ಟು ಮೊಗ
ದಲ್ಲಿ ಮಂದಹಾಸದ ಕಾಂತಿ ಇನ್ನಷ್ಟು ೩೭

ಕೊರಳೊಳಗೆ ಹಾರ ಪದಕವನು ತಾನಿಟ್ಟು
[ಉರದಿ] ದುಂಡುಮುತ್ತಿನ ದಿವ್ಯಸರಗಳಳವಟ್ಟು ೩೮

ಧರಿಸಿ ನಾನಾವಿಧ ಪುಷ್ಪ ಗಿಣಿಮಾಲೆಯನು
ಅರಳುಮಲ್ಲಿಗೆ ಹೂವಸರಗಳಲಂಕರಿಸಿ ೩೯

ಉಂಗುರ ವಂಕಿ ಬಾಜಿಯ ಬಂದುದ್ವಾರ್ಯ(?) ಕೈಕಟ್ಟು
ಮುಂಗೈ ಮುರಾರಿಯನ್ನು ಇಟ್ಟು ೪೦

ಬಿಳಿಯ ಪೀತಾಂಬರವ ನಿರಿಹಿಡಿದುಟ್ಟು
ಥಳಥಳಿಪ ಕುಂದಣದ ವಡ್ಯಾಣವಿಟ್ಟು ೪೧

ಅಂದುಗೆ ಗೆಜ್ಜೆಗಳ ಚಂದದಿಂದಿಟ್ಟು
ಕುಂದಣದ ಪಾಡಗವನ್ನು ಅಳವಟ್ಟು ೪೨

ಈ ರೂಪಿನಿಂದ ಅಸುರರನು ಮೋಹಿಸುತ
ಸುರರಿಗೆ ಅಮೃತವನು ಎರೆದು ಪಾಲಿಸುತ ೪೩

ಮೂರುಕಣ್ಣುಳ್ಳವನು ಮೋಹಿಸಿದ ರೂಪ
ಈ[ರೇಳು]ಲೋಕದವರಿಗೆ ತೋರಿದನು ಭೂಪ ೪೪

ಗರುಡಮಂಟಪದಲ್ಲಿ ನಿಂತು ಶ್ರೀರಂಗ
ಬೆರಗಿನಿಂದೆಲ್ಲರಿಗೆ ಬಿಡದೆ ಸೇವೆಯನಿತ್ತು ೪೫

ಆಳ್ವಾರುಗಳಿಗೆಲ್ಲ ವಸ್ತ್ರಗಂಧವನಿತ್ತು
ಅವರವರ ಆಸ್ಥಾನಕ್ಕವರ ಕಳುಹಿಸುತ ೪೬

ಬಂದು ಬಾಗಿಲ ಹಾಕಿ ಇಂದಿರಾರಮಣ
ನಿಂದ ವೆಂಕಟರಂಗ ಆನಂದದಿಂದ ೪೭

## ೩೯

## ಕೊಟ್ಟಿಗೋತ್ಸವ ಗೀತೆ

ಕೊಟ್ಟೋಗೋತ್ಸವ ನೋಡಿ ಸೃಷ್ಟಿಗೀಶ್ವರನ ಪ.

ವಾಸುದೇವನ ಸಹಸ್ರಸ್ತಂಭಮಂಟಪವ
ದಾಸರು ಬಂದು ಶೃಂಗಾರವ ಮಾಡಿ

ದೇಶದ ಮೇಲುಳ್ಳ ಬೊಂಬೆಗಳನು ರಚಿಸಿ
ಲೇಸಾದ ಮೇಲುಕಟ್ಟುಗಳ ಕಟ್ಟಿದರು ೧

ಸೃಷ್ಟಿಗೀಶ್ವರನಾದ ರಂಗನಾಥನಿಗೆ
ಕೊಟ್ಟಿಗೋತ್ಸವವನ್ನು ನಡೆಸಬೇಕೆನುತ
ಕಟ್ಟಿ ಕಂಕಣವನ್ನು ನಾಲ್ಕುವೇದಗಳಿಂದ
ಭಟ್ಟರು ಓದಿ ಪೇಳಿದರು ಸಂಭ್ರಮದಿ ೨

ವಜ್ರದ ಕಿರೀಟವಿಟ್ಟು ರತ್ನದಂಗಿಯ ತೊಟ್ಟು
ಅರ್ಜುನಸಖ ಸಂಭ್ರಮದಲಿ ಪೊರಟು
ಸ್ವರ್ಗದ ಬಾಗಿಲೊಳಗೆ ತಾ ನಿಂದು
ಮೂರ್ಜಗವೆಲ್ಲ ಮೋಹಿಸುತಲೆ ಬಂದು ೩

ಮಂದಹಾಸದಲಿ ನಿಂದು ಮಂಟಪದಲಿ
ಬಂದ ಆಳ್ವಾರರಿಗಾಸ್ಥಾನವಿತ್ತು
ಚಂದದಿಂದ ದಿವ್ಯ ಪ್ರಬಂಧವ ಕೇಳಿ
ಒಂದುಅಂಕಣ ಬಿಡದೆ ಬಂದ ಶ್ರೀರಂಗ ೪

ಸಂಕ್ರಾಂತಿಯಲಿ ಶಂಕರನ ಪ್ರಿಯನು
ಶಂಕೆ ಇಲ್ಲದೆ ಆಭರಣವನು ಧರಿಸಿ
ಪಂಕಜಮುಖಿಯರೊಡಗೊಂಡು ಹರುಷದ
ಲಂಕಾರವಾಗಿ ಬಂದನು ಮಂಟಪಕೆ ೫

ಮತ್ತೆ ಮರುದಿನದಲ್ಲಿ ಭಕ್ತವತ್ಸಲನು
ಮುತ್ತಿನಅಂಗಿ ಮುಂಡಾಸನಳವಡಿಸಿ
ಮುತ್ತಿನಛತ್ರಿ ಚಾಮರ ಸೂರೆಪಾನದಿ
ಮುತ್ತರಸಿಯ ಮಂಟಪಕೆ ನಡೆತಂದ ೬

ಅರ್ತಿಯಿಂಬಂದು ತಾ ಅಶ್ವವನೇರಿ
ಮತ್ತೆ ಬೇಟೆಯಮೃಗವನೆ ಕೊಂದು ಸಂ

ಕ್ರಾಂತಿಯ ಪಾರ್ವೇಟೆಯನಾಡಿ
ಸಂತೋಷದಿ ಬಂದ ೭

ನಾರಿವೇಷವ ಆಳ್ವಾರರಿಗೆ ಧರಿಸಿ
ಪೇರಿಯ ತಾ ಬಿಟ್ಟು ತೇಜಿಯನೇರಿ
ಚೋರತನವ ಮಾಡಿದ ಭಕ್ತರಿಗೆ
ಮೂಲಮಂತ್ರವ ಪೇಳಿ ಮುಕ್ತಿಯನಿತ್ತ ೮

ಮಿಂದು ಮಡಿಯನುಟ್ಟು ಅಂದು ರಾತ್ರಿಯಲಿ ಹ
ನ್ನೊಂದು ವಿಧ ಭಕ್ಷ್ಯಗಳನು ತಾ ಗ್ರಹಿಸಿ
ಬಂದ ಆಳ್ವಾರರಿಗೆ ಮುಕ್ತಿಯನಿತ್ತು
ಬಂದು ಆಸ್ಥಾನದಿ ನಿಂದ ಶ್ರೀರಂಗ ೯

ಭಕ್ತರು ಮಾಡಿದ ಪ್ರಬಂಧವನೆಲ್ಲ
ಭಕ್ತಿಯಿಂದಲೆ ಪೇಳಿದ ಆಚಾರ್ಯರಿಗೆ
ಯುಕ್ತಿ ತೋರಿದ ಪರಾಶರವ್ಯಾಸರಿಗೆ ಬ್ರಹ್ಮ
ರಥವನಿತ್ತ ಬ್ರಹ್ಮಾಂಡರೂಪ ೧೦

[ಶೌ]ರಿಯು ತಾನಿರಲು ಮೇಘಮಂಡಲದಂತೆ
ತೋರುವುದು ತಾರಕೆಯಂತೆ ಮೈಯುಡುಗೆ
ವಾರಿಜನಾಭನ ಮುತ್ತಿನಂಗಿಯ ನೋಡು
ವವರಿಗೆ ತಾ ಆನಂದವಾಗಿಹುದು ೧೧

ಕ್ಷೀರಸಾಗರದಲ್ಲಿ ಪವಡಿಸಿಹ ಹರಿಗೆ
ಕ್ಷೀರಬಿಂದುಗಳು ಮೈಯೊಳಗೆ ಬಿದ್ದಂತೆ
ವಾರಿಜನೇತ್ರಗೆ ವಜ್ರದನಾಮವು
ಧರಿಸಿದರು ಹೇಮದ ಪಾದಹಸ್ತಗಳ ೧೨

ಮುತ್ತಿನಂಗಿಸೇವೆ ನೋಡಬೇಕೆನುತ
ಹತ್ತುಸಾವಿರ ಪ್ರಜೆ ಬಂದು ನಿಂತಿರಲು

ಇತ್ತು ಕಾಣಿಕೆಯನು ನೋಡಿ ವೆಂಕಟರಂಗನ
ಮುಕ್ತರಾದೆವೆಂದು ಭಕ್ತರು ನುಡಿದರು ೧೩

## ೪೦

## ಪುಷ್ಯೋತ್ಸವ ಗೀತೆ

ಮಕರಪುಷ್ಯದ ಶುದ್ಧ ಷಷ್ಠಿಯಲಿ
ನಗರಶೋಧನೆ ಮಾಡಿ ಮಂತ್ರಿಯು ೧

ಮೊದಲು ದಿವಸದಿ ಧ್ವಜವನೇರಿಸಿ
ಭೇರಿಯಿಡೆ ಸುರರ ಕರೆದರು ೨

ಯಾಗಶಾಲೆಯ ಪೊಕ್ಕು ರಂಗನು
ಯಾಗಪೂರ್ತಿಯಾ ಮಾಡಿ ನಿಂದನು ೩

ಯಾತ್ರದಾನವ ಬೇಡಿ ಹರುಷದಿ
ಸೂತ್ರ ಧರಿಸಿದಾ ಧಾತ್ರಿಗೊಡೆಯನು ೪

ಕಂದರ್ಪನಾಪಿತ ದರ್ಪಣಾಗ್ರದಿ ಹ
ನ್ನೊಂದು ದಿನದಲಿ ನಿಂದ ಹರುಷದಿ ೫

ಸೂರ್ಯಚಂದ್ರರು ಹಂಸಯಾಳಿ[ಸಹಿತ]
ಏರಿ ಬಂದನು ಸಿಂಹ ಶರಭವ ೬

ಸರ್ಪವಾಹನ ಕಲ್ಪವೃಕ್ಷವು [ಗರು
ಡ] ಪಕ್ಷಿ ಹನುಮನ ಏರಿ ಬಂದನು ೭

ಏಳು ದಿವಸದಿ ಚೂರ್ಣಾಭಿಷೇಕವ
ಸೀಳೆಸಹಿತಲೆ ಗ್ರಹಿಸಿ ಮಿಂದನು ೮

ಎಂಟು ದಿವಸದಿ ಏರಿ ತೇಜಿಯ
ಬಿಟ್ಟನು ಪೇರಿ ತೇರಿನಿದಿರಲಿ ೯

ಒಂಬತ್ತು ದಿನದಲಿ ಶೃಂಗರಿಸಿದಾರು
ಸಂಭ್ರಮದಿಂದಲೆ ಬೊಂಬೆರಥವನು ೧೦

ಪುನರ್ವಸುವಿನಲ್ಲಿ ಪುರುಷೋತ್ತಮನು ರಥ
ವನೇರಲು ಪೊರಟುಬಂದನು ೧೧

ಇಂದುಮುಖಿಯರು ಅಂದಣವೇರಿ
ಸಿಂಧುಶಯನನ ಹಿಂದೆಬಂದರು ೧೨

ಅಷ್ಟಪತಿಯನು ಅಷ್ಟು ಕೇಳುತಾ
ಸೃಷ್ಟಿಗೀಶ್ವರ ರಥವನೇರಿದ ೧೩

ಪತ್ನಿ ಸಹಿತಲೇ ಹತ್ತಿ ರಥವನು
ಉತ್ತರಬೀದಿಯ ಸುತ್ತಿಬಂದನು ೧೪

ಇಂದಿರಾಪತಿ ಇಳಿದು ರಥವನು
ಚಂದ್ರಪುಷ್ಕರಿಣಿಯಲಿ ತೀರ್ಥವಿತ್ತನು ೧೫

ಕರೆತಂದರು ಕರಿಯಮೇಲಿಟ್ಟು ಚ
ದುರಂಗಗೆ ನಜರು ಕೊಟ್ಟರು ೧೬

ಸಪ್ತಾವರಣವ ಶಬ್ದವಿಲ್ಲದೆ
ಸುತ್ತಿಬಂದನು ಭಕ್ತವತ್ಸಲ ೧೭

ಸುತ್ತಿ ಲಕ್ಷ್ಮೀಗೆ ಇತ್ತು ಸೇವೆಯ
ಭಕ್ತ ಭಾಷ್ಯಕಾರರಿಗೆ ಒಲಿದು ನಿಂದನು ೧೮

ತನ್ನ ಚರಿತೆಗಳನು ಕೇಳುತ
ಪನ್ನಗಶಯನನು ಪರಮ ಹರುಷದಿ ೧೯

ಬಂದ ಸುರರ ಆನಂದದಿಂದಲೇ
ಮಂದಿರಕ್ಕೆ ತಾ ಕಳುಹಿ ರಂಗನು ೨೦

ಬಿಚ್ಚಿ ಕಂಕಣ ನಿಂದ ಹರುಷದಿ
ಅರ್ಥಿಯಿಂದಲೆ ಅಚ್ಚುತಾನಂತ ೨೧

ಏರಿ ಆಳಂಪಲ್ಲಕ್ಕಿ ಹರುಷದಿ ಒ
ಯ್ಯಾರದಿಂದ ಬಂದ ರಂಗನು ೨೨

ಪುಷ್ಯರಥವನು ನೋಡಿದವರಿಗೆ
[ಮೋಕ್ಷ] ಕೊಡುವನು ಮುದ್ದುವೆಂಕಟರಂಗನು ೨೩

## ४१

ನೋಡುವಾ ಬನ್ನಿರೆ ರಂಗಯ್ಯನ ನೋಡುವಾ ಬನ್ನಿರೇ ಪ.

ರೂಢಿಗೊಡೆಯ ಹರಿಯಕೂಡಿ ಇಷ್ಟಾರ್ಥವ
ಬೇಡಿಕೊಳ್ಳುವ ನಾವು ಅ.ಪ.

ಕುಂಭಮಾಸದಲಿ ಭಕ್ತರು ಬಿಟ್ಟಾನಂದಮಂಟಪದಿನಿಂದು ಪೂಜೆ
ಗೊಂ[ಬ] ಹರುಷದಿ ಮಂದಹಾಸದಿ ಬಂದ ಶ್ರೀರಂಗನ ೧

ಹಂಸ ಯಾಳಿ ಸಿಂಹ ಆನೆಯು ಮೊದಲಾದ ಗರುಡ ಹನುಮ ಕಲ್ಪ
ವೃಕ್ಷವು ಸರ್ಪವಾಹನವೇರಿ ಅರ್ಥಿಯಿಂದಲೆ ಬರುವ ಶ್ರೀರಂಗನ ೨

ಶುದ್ಧದಶಮಿಯಲಿ ರಂಗಯ್ಯ ಮುದ್ದು ಸತಿಯರ ಒಡಗೊಂಡು ಅ
ಲ್ಲಿದ್ದ ಮಂಟಪದಲಿ ಹರುಷದೀ ತಾನಿ[ದ್ದ] ಶ್ರೀರಂಗನ ೩

ತೆಪ್ಪಮಂಟಪವ ಭಕ್ತರೆಲ್ಲ ವಿಸ್ತಾರದಲಿ ಕಟ್ಟಿ ಪತ್ನಿಸಹಿತಲೆ
ತೆಪ್ಪವ ಹತ್ತಿ ಸುತ್ತಿಸುತ್ತಿ ಮೂರುಬಾರಿ ಬರುವ [ಶ್ರೀರಂಗನ] ೪

ಮಧ್ಯಮಂಟಪದಿ ತಾನಿದ್ದು ಭಕ್ತರಿತ್ತ [ಸವಿಯಾದ] ಕ್ಷೀರವು
ಉದ್ದಿನವಡೆ ಹುಗ್ಗಿ ಮೆದ್ದು ಬರುವ ಶ್ರೀಮುದ್ದುರಂಗನ ೫

ಪುಷ್ಪಬಾಣಂಗಳು ಸುತ್ತಿಬಿಡುವ ಚಕ್ರಬಾಣಂಗಳು ನಕ್ಷತ್ರಬಾಣಂಗಳ
ಲಕ್ಷ್ಮಿಯೆದುರಲರ್ತಿಯಿಂದಲೆ ನೋಡಿ ನಿಂದ ಶ್ರೀರಂಗನ ೬

ಏಕಾದಶಿಯಲಿ ಚಂದ್ರಪ್ರಭೆಯನೇರಿ ಸಹಸ್ರ[ಕಂ]ಗಳಿಂದ ಭಕ್ತರಿಗೆ
ತಾ ಕರುಣದಿಂದಲೆ ತೀರ್ಥಸ್ನಾನವನಿತ್ತು ಬರುವ ವೆಂಕಟರಂಗನ ೭

೪೨

## ದ್ವಾದಶನಾಮ ಸ್ತುತಿ

ನಿನ್ನ ನೋಡಿ ಧನ್ಯನಾದೆನು ಶ್ರೀರಂಗನಾಥ ಪ

ನಿನ್ನ ನೋಡಿ ಧನ್ಯನಾದೆ ಪನ್ನಗಶಯನ ರಂಗ
ಮನ್ನಿಸಿ ರಕ್ಷಿಸು ಎನ್ನ ಮುನ್ನಜನ್ಮ ಬಾರದಂತೆ ಅ.ಪ.

ಆಚಾರ್ಯರಿಗೆ ಅಭಿವಂದಿಸಿ ಅಜನರಾಣಿಯನ್ನು ಭಜಿಸಿ
ಅರ್ಚ ಶೇಷಶಯನ ಲಕ್ಷ್ಮಿಗೆರಗಿ **ಕೇಶವ** ನಿಮ್ಮ ಸ್ತುತಿಸುವೆ ೧

ಆದಿಸೃಷ್ಟಿಯಲ್ಲಿ ಬ್ರಹ್ಮನ ನಾಭಿಕಮಲದಲ್ಲಿ ಸೃಷ್ಟಿಸಿ
ವೇದಸಾರವಾದ ಪ್ರಣವ ಓದಿ ಪೇಳಿದ **ನಾರಾಯಣ** ೨

[ಆರ್ತಿ]ಯಿಂದ ಅಜನು ನಿಮ್ಮ ಮೂರ್ತಿಗಾಗಿ ತಪವ ಮಾಡೆ
ಅರ್ತಿಯಿಂದ ಒಲಿದು ಬಂದ ಮಧುವೈರಿ **ಮಾಧವಾ** ೩

ಪ್ರಣವಾಕಾರ ವಿಮಾನದಲ್ಲಿ ನಾಲ್ಕು ವೇದಶೃಂಗವಿರಲು
[ವಿಷ್ಣು] ಪರವಾಸುದೇವರಿಂದ ಬಂದ **ಶ್ರೀಗೋವಿಂದ** ೪

ಸತ್ಯಲೋಕದಲ್ಲಿ ನಿಂತು ನಿತ್ಯಪೂಜೆಯನ್ನು ಗ್ರಹಿಸಿ
ಮತ್ತೆ ಇಕ್ಷ್ವಾಕುಗೊಲಿದ ವಿಶ್ವಮೂರುತಿ **ವಿಷ್ಣುವೇ** ೫

ಸರಯು ತಮಸ ತೀರಮಧ್ಯದಿ ಹರಿಯೆ ನಿಮ್ಮನಿರಿಸಿ ದೊರೆಯು
ಪರಮಪುರುಷನಿಂದ ಪೂಜೆ ಗ್ರಹಿಸಿದ **ಮಧುಸೂದನ** ೬

ರಾಜ್ಯಾಭಿಷೇಕ ಕಾಲದಲ್ಲಿ ರಾಮಚಂದ್ರರು ರಾಕ್ಷಸೇಂದ್ರಗೆ ಕೊಡಲು
[ರಾಜ್ಯವ] ಕಾವೇರಿ ಮಧ್ಯದಿನಿಂದು ತ್ರಿಜಗವಳೆದ **ತ್ರಿವಿಕ್ರಮ** ೭

ಫಾಲ್ಗುಣ ಮೀನ ಉತ್ತರ ಫಲ್ಗುನೀ ನಕ್ಷತ್ರದಲ್ಲಿ
ಬಾಲನಾಗಿ ಚಂದ್ರಪುಷ್ಕರಿಣಿ ತೀರದಿ ನಿಂದ **ವಾಮನ** ೮

ಧರ್ಮವರ್ಮದೊರೆಯು ತನ್ನ ಕನ್ನಿಕೆಯನು ಕೊಡಲು
ಜಾಮಾತನೆನಿಸಿ ಗ್ರಹಿಸಿ[ದ] ಶ್ರೀದೇವಿ ಸಹಿತ **ಶ್ರೀಧರ** ೯

ಮಳೆಯನಿಟ್ಟು ಧ್ವಜವಕಟ್ಟಿ ಸುರರ ಕರದು ಯಾಗವ ಮಾಡಿ
ಯಾತ್ರದಾನದ [ತಳೆದ] ಹೃದಯವಾಸ **ಹೃಷಿಕೇಶವ** ೧೦

ವೀರ ಮರುದಿನದಿ ಜಟಾಶೋಧಕರ ಮಂಟಪದಿ ನಿಂದು (?)
[ಧೀರ] ಮುದುಕಿಗೊಲಿದು ದಧ್ಯಾನ್ನವ ಉಂಡ **ಶ್ರೀಪದ್ಮನಾಭ** ೧೧

ನಾಲ್ಕು ದಿವಸದಲ್ಲಿ ನಾಗವೈರಿಯನ್ನು ಏರಿಬಂದು
ಕಲ್ಪವೃಕ್ಷವು ಸರ್ಪವಾಹನ ಏರಿದ **ದಾಮೋದರ** ೧೨

ಆರು ದಿವಸದಲ್ಲಿ ವರಿಯೂರಿಗೆ ಹೋಗಿ ನಿಮ್ಮ
ನಾರಿಯ ಸಂತೈಸಿ ಮಾಲೆಧರಿಸಿದ **ಸಂಕರ್ಷಣ** ೧೩

[ಮಾರನೆ] ದಿವಸದಲಿ ಚೂರ್ಣಾಭಿಷೇಕವನು ಧರಿಸಿ
ನಾರಿಮನೆಯಲಿ ನಿಂದು ವಾಸವಾದ **ವಾಸುದೇವ** ೧೪

ಎಲ್ಲೇಕೆರೆಗೆ ಪೋಗಿ ಭೂಮಿಯೆಲ್ಲ ನೋಡಿ ಹರುಷದಿಂದ
ಅ[ಲ್ಲೆ] ತೇಜಿಯನೇರಿ ತೇರಿನೆದುರೆ ಪೇರಿಬಿಟ್ಟ **ಪ್ರದ್ಯುಮ್ನ** ೧೫

ಪಂಗುನ್ಯತ್ತರವು ಬರಲು ಉಂಗುರವನು ಬೇಡಿತಂದು
ಅಂಗನೇಯ ಬಾಗಿಲೆದುರೆ ಪ್ರಸಿದ್ಧನಾದ **ಅನಿರುದ್ಧ** ೧೬

ಸಿಂಧುಶಯನ[ನ] ಬರವನೋಡಿ ಇಂದುಮುಖಿಯು ಕದವಮುಚ್ಚೆ
ತಿಂದ ಪಂಜಿನಪ್ರಹಾರ ಹರುಷದಿಂದ **ಪುರುಷೋತ್ತಮ** ೧೭

ಪತ್ನಿಯೊಡನೆ ಪ್ರೇಮಕಲಹ ಅರ್ತಿಯಿಂದ ಮಾಡುತಿರಲು ವಿಷ್ಣು
ಚಿತ್ತರ ವಾಕ್ಯದಿಂದ ಅರಸಿಗೇರಿದಾ **ಅಧೋಕ್ಷಜಾ** ೧೮

ಮಂದರೋದ್ಧರ ತನ್ನ ಇಂದಿರೆಸಹಿತವಾಗಿ
ಬಂದು ಗೋರಥವನೇರಿ ನಾಲ್ಕುಬೀದಿ ಮೆರೆದ **ನಾರಸಿಂಹ** ೧೯

ವಾರಿಜಾಕ್ಷ ರಥವನಿಳಿದು ಕಾವೇರಿಯಲ್ಲಿ ತೀರ್ಥವಿತ್ತು
ದರ್ಪಣದ ಗೃಹದಿ ನಿಂದ ಅರ್ತಿಯಿಂದ **ಅಚ್ಯುತ** ೨೦

ಸಪ್ತ ಆವರಣವೆಲ್ಲ ಶಬ್ದವಿಲ್ಲದೆ ಸುತ್ತಿ ಬಂದು
ಭಕ್ತ ಭಾಷ್ಯಕಾರರಿಗೊಲಿದ ದುಷ್ಟಮರ್ದನ **ಜನಾರ್ಧನ** ೨೧

ಪೃಥವಿಯೊಳಗಾಶ್ಚರ್ಯವಾದ ಪ್ರತಿಯಿಲ್ಲದ ಪಲ್ಲಕ್ಕಿಯೇರಿ
ಅತಿಶಯದಿಂದ ಬಂದ ಉರಗಶಯನ **ಉಪೇಂದ್ರ** ೨೨

ಅಂದು ಸುರರ ಛಂದದಿಂದ ಮಂದಿರಕ್ಕೆ ಕಳುಹಿ ರಂಗ
ಬಂದು ಭಕ್ತರ ಪಾಪ[ವ] ಪರಿಹರಿಸಿದಾ **ಶ್ರೀಹರಿ** ೨೩

ಅಷ್ಟು ಚರಿತ್ರೆಯನ್ನು ಕೇಳಿ ಕಟ್ಟಿದ ಕಂಕಣವ ಬಿಚ್ಚಿ
ಶ್ರೇಷ್ಠವಾದ ಸ್ಥಾನದಲ್ಲಿ ಮಂತ್ರಿ ಸಹಿತನಿಂದ **ಶ್ರೀಕೃಷ್ಣ** ೨೪

ದಕ್ಷಿಣಗಂಗೆಯಾಗಿ ನಿಂದು ಭಕ್ತನ ದ್ವೀಪವನ್ನು ನೋಡುತ
ಮುಕ್ತಿಮಾರ್ಗವನ್ನು ತೋರಿದ ಭಕ್ತವತ್ಸಲ **ವೆಂಕಟರಂಗ** ೨೫

## ೪೩

## ಪುಷ್ಪಸೇವೆಯ ಗೀತೆ

ಪುಷ್ಪಸೇವೆಯ ನೋಡುವಾ ಬನ್ನಿರೆ ನ
ಮ್ಮಪ್ರಮೇಯ ರಂಗನಾ ಪ.

ಕ್ಷಿಪ್ರದಿಂದಲೆ ಬಂದು ಚಪ್ಪರದಲಿ ನಿಂದು
ವಿಪ್ರರೆಲ್ಲರು ತಂದು ಪುಷ್ಪ ಸಮರ್ಪಿಸುವ ಅ.ಪ.

ಮೇಷರಾಶಿಗೆ ರವಿಯು ಬರಲು
ವಾಸುದೇವ ಹರಿಯು ಆಗ
ಬೇಸಿಗೆ ತಾಪವ ಪರಿಹರಿಸುವೆನೆಂದು
ವಾಸನೆಗಂಧವ ಮೈಯೊಳು ಪೂಸಿದ ೧

ಕರ್ಪೂರದ ಕಸ್ತೂರಿ ಗಂಧವ ತಂದು
[ಒಪ್ಪದಿಂ] ವಕ್ಷಸ್ಥಳದಿ ಧರಿಸಿ ವಕುಳ
ಪುಷ್ಪಗಳಿಂದ ಮೌಳಿಯ [ಲಂಕ]ರಿಸಿದ
ರು ಪನ್ನೀರವಲ್ಲಿಯ ಚೆನ್ನಾಗಿ ಪ್ರೋಕ್ಷಿಸಿದರು ೨

ಮರುಗ ಮಲ್ಲಿಗೆ ಜಾಜಿ ಮುಡಿವಾಳ
ಇರವಂತಿಗೆ ಪಚ್ಚೆ ದವನ ಕೇದಿಗೆ ಪಾ
ದರಿ ಕಮಲ ಸಂಪಿಗೆ ಪುಷ್ಪಮಾಲೆಯ
ಧರಿಸಿ ಪನ್ನೀರ ತಳಿದರಾಗ ೩

ಪುಷ್ಪದ ದುಬಟಿಯನು ತಂದು ನಮ್ಮ
ಸರ್ಪಶಯನನಿಗ್ಹೊದ್ದಿಸೆ
ಕ್ಷಿಪ್ರದಿಂದಲೇ ತೀರ್ಥಪ್ರಸಾದವನಿತ್ತು ಎ
ನ್ನಪ್ಪ ರಂಗನು ಬಂದ ಒಯ್ಯಾರ ನಡೆಯಿಂದ ೪

ಪರಿಪರಿ, ವಾದ್ಯಂಗಳು ಭೋರಿಡುತಿರೆ
ವರಾಂಗನೆಯರು ಪಾಡೆ
ಸುರರು ಭೂಸುರ ನರರೆಲ್ಲರ ಕೂಡಿ
ದೊರೆಯುಮಂಟಪಕ್ಕಾಗ ಪರಮಪುರಷ ಬಂದ ೫

ಅಲ್ಲಿ ಪೂಜೆಯ ಗ್ರಹಿಸಿ ರಂಗಯ್ಯ ತಾ
ಎಲ್ಲರೊಡನೆ ಪೊರಟಿರೆ
ವಲ್ಲಭನನು ವೀಣೆಸೊಲ್ಲಿನಿಂ ಪಾಡುತಿರೆ ಲಕ್ಷ್ಮೀ
ಮೆಲ್ಲಮೆಲ್ಲನೆ ಬಂದ ಏಕಾಂತದಿ ರಂಗ ೬

ಚಿತ್ರಪೌರ್ಣಮಿಯಲ್ಲಿ ಶ್ರೀರಂಗ ವಿ
ಚಿತ್ರದಿಂದಲೆ ಪೊರಟು
ಉತ್ತರಕಾವೇರಿ ತೀರದ ಮಂಟಪದಲಿ ನಿಂದು
ಭಕ್ತವತ್ಸಲನು ಮಜ್ಜನವ ಮಾಡಿದನಾಗ ೭

ಮಕರಿ ಕಾಲ್ಪಿಡಿಯಲಾಗ ಮತಂಗ
ವು ಕರೆಯೆ ನಿಮ್ಮನು ಅತಿ ವೇಗದಿಂದ
ಚಕ್ರದಿ ನಕ್ರನ ಕೊಂದು ಕರಿಯ
ರಕ್ಷಿಸಿ ಬಂದ ಕರುಣದಿಂದಲೇ ರಂಗ ೮

ಕಲಿಯುಗದೊಳಗಿರುವ ಕರ್ಮಿಗಳನ್ನು
ಸಲಹುವೆನೆಂದೆನುತಾ ಕರುಣದಿಂ
ದಲೆ ಅರ್ಚಾವತಾರವ ಮಾಡಿ
[ಸಲೆ] ಬಿರುದು ಧರಿಸಿ ಬಂದ ವರದವೆಂಕಟರಂಗ ೯

೪೪

## ಚೈತ್ರದುತ್ಸವ ಗೀತೆ

ಚೈತ್ರಮಾಸದ ಕೃಷ್ಣಪಕ್ಷ ಷಷ್ಠಿಯಲಿ
ಕಟ್ಟಿ[ದರು] ಕಂಕಣವನು ಸೃಷ್ಟಿಗೀಶ್ವರಗೆ ಪ.

ಮೊದಲು ದಿವಸದಿ ಧ್ವಜಪಟವನೇರಿಸಿ
ನದಿಗಳೆಲ್ಲವ ಕರೆದು ಭೇರಿಯಿಂದ ಸುರರು ೧

ಯಾಗಶಾಲೆಯ ಪೊಕ್ಕು ಯಾತ್ರದಾನವ ಬೇಡಿ
ಯಾಗಪೂರ್ತಿಯ ಮಾಡಿ ಸೂತ್ರ ಧರಿಸಿದರು ೨

ಸರ್ಪಮೊದಲಾದ ಅಲ್ಲಿರ್ಪ ವಾಹನವೇರಿ ಕಂ
ದರ್ಪನಪಿತ ಬಂದ ಚಮತ್ಕಾರದಿಂದ ೩

ಬೆಂಡಿನ ಚಪ್ಪರ ಬೆಳ್ಳಿಕುದುರೆಯನೇರಿ
ಪಾಂಡವಪಕ್ಷ ಬಂದ ಪುಂಡರೀಕಾಕ್ಷ ೪

ರೇವತಿ ನಕ್ಷತ್ರದಲಿ ಏರಿ ರಥವನ್ನು
[ತಾ] ವೈಯ್ಯಾರದಿಂದಲೆ ಬಂದ ವಾರಿಜನಾಭ ೫

ಗೋವಿಂದ ಗೋವಿಂದಯೆಂದು ಪ್ರಜೆಗಳು
[ತಾವಾ]ನಂದದಿಂದ ನೋಡಿ ಪಾಡುತ್ತ ೬

ಗೋವುಗಾಣಿಕೆಯನ್ನು ಗೋಪಾಲರು ತಂದು ನೀ
ಲಾವರ್ಣನಿಗಿತ್ತರು ನೇಮದಿಂ ಪೂಜೆಯ ೭

ಧ್ವಜಮಂಟಪದಲ್ಲಿ ಹರಿಭಜನೆಗಳ ಮಾಡು[ತ್ತಿರೆ]
ಭುಜಗಶಯನನು ವರವಿತ್ತು ಕಳುಹಿದನು ೮

ಸಪ್ತಾವರಣವ ಸುತ್ತಿ ತೀರ್ಥವನಿತ್ತು
ಅರ್ಥಿಯಿಂದಲೆ ಬಂದ ಭಕ್ತವತ್ಸಲನು ೯

ಬೊಂಬೆ ಅಂದಣವೇರಿ[ದ] ಅಂಬುಜನಾಭ
ಕುಂಭಿಣಿಗಧಿಕವೆಂತೆಂಬ ಶ್ರೀರಂಗ ೧೦

ಚಿತ್ರರಥ[ದ] ವಿಚಿತ್ರಮೂರುತಿಯ ನೋಡಿ ಪ
ವಿತ್ರರಾದರು ಧಾತ್ರಿ[ಯ] ಉತ್ತಮರೆಲ್ಲ ೧೧

ಬಂದ ಪ್ರಜೆಗಳು ಎಲ್ಲ ಆನಂದದಿ ಪೋಗೆ
ಬಂದು ಆಸ್ಥಾನದಿ ನಿಂದ ಶ್ರೀರಂಗ ೧೨

ಸೃಷ್ಟಿಯಲಿ ಪುಟ್ಟಿದ ದುಷ್ಟಪ್ರಾಣಿಗಳ [ನೆಲ್ಲ]
ಶ್ರೇಷ್ಠ ಮಾಡಲಿ [ನಮ್ಮ] ವೆಂಕಟರಂಗ ೧೩

## ೪೫

## ವೈಶಾಖದುತ್ಸವ ಗೀತೆ

ವರ್ಣಿಸಲಳವೆ ವೈಶಾಖದುತ್ಸವವಾ ಪ.

ವೃಷಭಸೇರಿದ ವೈಶಾಖಮಾಸದ ಶುಕ್ಲ
ಪಕ್ಷದ ಷಷ್ಠಿಯಲಿ ಕಂಕಣವ ಕಟ್ಟಿ ಪಟ್ಟದರಸಿ

ಯರ್ಸಹಿತ ದಿಟ್ಟತನದಲಿ ಪೊರಟು
ಶ್ರೇಷ್ಠವಾದ ಮಧ್ಯಮಂಟಪಕೆ ನಡೆತಂದ ೧

ಮುದ್ದುಮೊಖ ಮುಗುಳ್ನಗೆಯು ವಜ್ರದ ಕಿರೀಟವು
ತಿದ್ದಿದ ಕಸ್ತೂರಿತಿಲಕ ಹೊಳೆವ ವಜ್ರದ
ಪದಕಗಳು ನಾಲ್ಕು ಮೂರನೆ ಧರಿಸಿ ಪ್ರಜ್ವಲಿಸುತ
ಬಂದ ಅರ್ಜುನ ಸಾರಥಿಯು ೨

ಶಿರದಿ ಪುಷ್ಪವ ಧರಿಸಿ ಪರಮಪುರುಷನು ತಾನು
ಕೊರಳಲ್ಲಿ ವೈಜಯಂತಿಮಾಲೆಯನು ಧರಿಸಿ
ಕರದಲ್ಲಿ ಪರಿಮಳದ ಗಂಧವನು ಧರಿಸಿ ಪರಮ
ಪುರುಷನು ಬರುವ ಪರಿಯನೇನೆಂಬೆ ೩

ದಂತದ ಉಯ್ಯಾಲೆಮಂಟಪದಲಿ ನಿಂದು
ಕಂತುಪಿತ ಕರ್ಪೂರದಚೂರ್ಣದಲಿ ಮಿಂದು
ಅಂತರಂಗದಿ ಭಕ್ತರಿತ್ತ ನೈವೇದ್ಯ ಉಂಡ ಲಕ್ಷ್ಮೀ
ಕಾಂತನು ನಡೆತರುವ ಪರಿಯನೇನೆಂಬೆ ೪

ಮುಂದೆ ದ್ರಾವಿಡವೇದ ಹಿಂದೆ ವೇದಘೋಷಗಳು ಆ
ನಂದದಿಂ ಭಕ್ತರೆಲ್ಲ ಮುಂದೆ ಬರುತಿರಲು
ಛಂದದಿಂ ರಂಭೆಯರ ಕೋಲಾಟಗಳ ನೋಡಿ
ಇಂದಿರೆಯಿದಿರು ಮಂಟಪಕೆ ನಡೆತಂದ ೫

ಸೃಷ್ಟಿಪತಿ ರಂಗನಿಗೆ ದೃಷ್ಟಿ ತಾಕುವುದೆಂದು
ಹಿಟ್ಟಿನಾರತಿಯಿಂದ ದೃಷ್ಟಿಯನು ತೆಗೆದು
ಶ್ರೇಷ್ಠವಾದ ಕರ್ಪೂರದ ಆರತಿಯನೆತ್ತಲು
ಥಟ್ಟನೆ ತಿರುಗಿದನು ಕೃಷ್ಣಮೂರುತಿ ತಾನು ೬

ಸಪ್ತದಿನದಲಿ ರಂಗ ರತ್ನಮೌಳಿಯ ಧರಿಸಿ
ಮುತ್ತಿನಾ ಹಾರವನು ಹಾಕಿ

ರತ್ನದ ಉಡದಾರ ಉಡಗೆಜ್ಜೆಯನು ಧರಿಸಿ
ಪತ್ನಿ ಸಹಿತಲೆ ಬಂದು ಭತ್ತವನಳಿಸುವ ಸೊಬಗ ೭

ಮುತ್ತಿನ ಕಿರೀಟವಿಟ್ಟು ಮುದದಿ ನಿಲುವಂಗಿ ತೊಟ್ಟು
ರತ್ನದಾ ಹಸ್ತದಲಿ ಅಭಯವನು ಕೊಟ್ಟು
ಕತ್ತಿ ಈಟಿ ಗುರಾಣಿ ಬತ್ತಳಿಕೆ ಅಳವಟ್ಟು
ಹಸ್ತದಲಿ ಕಡಿವಾಣವಿಟ್ಟು ಬರುವ ಸೊಬಗ ೮

ಹತ್ತಿ ಹಯವನು ರಂಗ ಒಂಭತ್ತು ದಿನದಲಿ
ಚಿತ್ರಬೀದಿಯನೆಲ್ಲ ಸುತ್ತಿ ಬಂದು
ಮತ್ತೆ ಪುಷ್ಕರಣಿಯ ತೀರ್ಥದಲ್ಲಿ ಮಿಂದು
ಅರ್ತಿಯಿಂ ಬಂದ ನೀರಾಳಿಮಂಟಪಕೆ ೯

ಮಿಂದು ಮಡಿಯನೆ ವುಟ್ಟು ಛಂದದಿಂದಲೆ ರಂಗ
ಬಂದು ಕಂಕಣವನ್ನು ಬಿಚ್ಚಿ ಆ
ನಂದದಿಂ ಕ್ಷೀರ ಘೃತ ಚೂತಫಲಗಳ ಸವಿದು
ನಿಂದ ವೆಂಕಟರಂಗ [ಕರುಣಾಂತರಂಗ] ೧೦

## ೪೬

## ಪುಷ್ಪಧರಿಸುವ ಉತ್ಸವಗೀತೆ

ಪುಷ್ಪವನ್ನು ಧರಿಸುವ ಉತ್ಸವ ನೋಡುವ ಬನ್ನಿ
ಭಕ್ತವತ್ಸಲನರಾಣಿ ರಂಗನಾಯಕಿಗಿಂದು ಪ.

ವೈಶಾಖಮಾಸದಲಿ ಕೃಷ್ಣಪಕ್ಷದಲಿ ಲಕ್ಷ್ಮೀಗೆ
ಪುಷ್ಪವನ್ನು ಧರಿಸುವ ಅರ್ತಿಯ ನೋಡುವ ಬನ್ನಿ ೧

ಪೊದಿಸಿ ಪನ್ನೀರವಲ್ಲಿಯ ಪುಷ್ಪದ ಮೌಳಿಯ ಧರಿಸಿ
ವಿಧವಿಧದ ಪುಷ್ಪವ ಮುಡಿಸಿ[ದರು] ಮದನನಮಾತೆಯ ಶಿರಸಿಗೆ ೨

ಪಂಕಜನಾಭನರಾಣಿ ಪರಮಕಲ್ಯಾಣಿ ನೀಲವೇಣಿ
ಪಂಕಜಪಾಣಿ ಕೀರವಾಣಿ ಸುಶೋಣೀ ೩

ಸುರರು ಅಸುರರು ಕೂಡಿ ಶರಧಿಮಥನವ ಮಾಡೆ
ಭರದಿಂದ ಉದಿಸಿಬಂದ ವರಲಕ್ಷ್ಮೀದೇವಿಗಿಂದು ೪

ಜಯವಿಜಯರಿಗಾಗಿ ಜನಿಸಿ ತಾ ಭೂಮಿಯಲಿ [ಗೆದ್ದ]
ರಾಯ ಜನಕನಾ ಮಗಳು ಜಾನಕೀದೇವಿಗೆ ಇಂದು ೫

ಸೃಷ್ಟಿಭಾರವನಿಳುಹಲೆಂದು ಕೃಷ್ಣಮೂರುತಿ ಜನಿಸಿ [ಒಲಿದ]
ಭೀಷ್ಮಕನುದರದಿ ಬಂದ ರುಕ್ಮಿಣೀದೇವಿಗೆ ಇಂದು ೬

ಮಲ್ಲೆ ಮಲ್ಲಿಗೆ ವಕುಳ ಮಂದಾರ ಪಾರಿಜಾತ[ವ]
ಫುಲ್ಲನಾಭನರಾಣಿಗೆ ಲೋಲಾಕ್ಷಿಯರು ಮುಡಿಸಿದರು ೭

ತಾಳೆ ಚಂಪಕ ಕಮಲಮಾಲೆ ಸುರಗಿ ಜಾಜಿಯ
ನೀಲವರ್ಣನರಾಣಿಗೆ ಲೋಲಾಕ್ಷಿಯರು ಮುಡಿಸಿದರು ೮

ಮರುಗ ದವನ ಪಚ್ಚೆತೆನೆಯು ಸುಗಂಧರಾಜವ ಪರಮ
ಪುರುಷನರಾಣಿಗೆ ಸುರರು ತಂದು ಮುಡಿಸುವರು ೯

ವಸಂತೋತ್ಸವಕೆಂದು ವಸುಧೀಶನರಸಿ ತಾನು
ಕುಶಲದಿಂದಲೆ ಬಂ[ದಳಾವ]ಸಂತಮಂಟಪಕಿಂದು ೧೦

ರತ್ನದ ಕೆಂಪಿನ ಕಿರೀಟವಿಟ್ಟು ತಿದ್ದಿದ ಕಸ್ತೂರಿಬಟ್ಟು
ಮುತ್ತುಸುತ್ತಿದ ಮೂಗಿನಬಟ್ಟು ಹರಿದ್ರಾವಸ್ತ್ರವನುಟ್ಟು ೧೧

ಕರ್ಪೂರರದ ಚೂರ್ಣದಿ ಮಿಂದು ಭಕ್ತರಿಟ್ಟ ನೈವೇದ್ಯವನುಂಡು
[ತಾ]ಪೊರಟಳು ಮಿತ್ರೆಯರ ಕೋಲಾಟವ ನೋಡುತ್ತ ತನ್ನರಮನೆಗೆ ೧೨

ಹುಟ್ಟಿದಮನೆ ಕ್ಷೀರಾಬ್ಧಿ ಹೊಕ್ಕಮನೆ ಶ್ರೀವೈಕುಂಠವ
ಬಿಟ್ಟು ಭಕ್ತರ ಸಲಹುವೆನೆಂದು ಬಂದ ವೆಂಕಟರಂಗನರಸಿಗೆ ೧೩

## ೪೭

## ಜ್ಯೇಷ್ಠಾಭಿಷೇಕ ಗೀತೆ

ನೋಡಿದೆ ಜ್ಯೇಷ್ಠಾಭಿಷೇಕದುತ್ಸವವ ಸೃಷ್ಟಿಯೊಳಾಶ್ಚರ್ಯವಾ ಪ.

[ಒಪ್ಪುವ] ಮಿಥುನಮಾಸದ ಶುಕ್ಲಪಕ್ಷ ಚತುರ್ದಶಿಯಲ್ಲಿ
ವಿಪ್ರರು ಕೂಡಿ ಸಹ್ಯೋದ್ಭವೆಯನ್ನು ತರುವೆವೆಂದೆನುತಲೆ
ವಿಪ್ರರು ಪೋದ ವಿಚಿತ್ರ[ವ] ನೋಡಿದೆ ೧

ಅಂದು ಗಜೇಂದ್ರನ ತಂದು ಸಿಂಗಾರ ಮಾಡಿ
ಕುಂದಣದ ಕೊಡವ ಕುಂಭಸ್ಥಳದೊಳಿಟ್ಟು
ಕುಂದಣದ ಛತ್ರಿ ಚಾಮರ ಬೀಸುತ್ತ ವಿಪ್ರರು ಬರುವುದ ೨

ವೇದಘೋಷಗಳಿಂದ ವಿಪ್ರರು ಕೊಡಗಳ ವಿ
ನೋದದಿಂದಲೆ ಪೊತ್ತು ತಾ[ಳ] ತಮ್ಮಟೆ ಭೇರಿ ನಾನಾ
ವಾದ್ಯಂಗಳ ಮುಂದೆ ರಜತದಕೊಡ ಬರುವ ವೈಭೋಗವ ೩

ಕುಶಲದಿಂದಲೆ ಕರಿ ಕೊಡವನ್ನು ಇಳಿಸಲು
ಅಸಮಾನ [ಿನಿ]ರಿಗಳ ಬಿಚ್ಚಿ ಹೊಸಬಟ್ಟೆಗಳ ಹಾಸಿ
ಕುಶಲದಿಂದಲೆ ಹೊಲೆದು ಪೊಸದಾಗಿ ಕಟ್ಟುವತಿಶಯ[ವ] ೪

ಗರ್ಭಗೃಹವು ಗಾಯಿತ್ರಿ ಮಂಟಪವನ್ನು
ಶುಭ್ರವಾಗಿಯೆ ತೊಳೆದು ಘಮಘಮಿಸುವ ದಿವ್ಯ ಪರಿಮಳ
ವು ಬರುವಂಥ ಗಂಧವ ತಳಿದರು ಅಂದು ಆಲಯಕ್ಕೆಲ್ಲ ೫

ಭಕ್ತರಿಗೆ ತೊಟ್ಟಕವಚವ ಕಳೆದು ಅಭಯ ಹಸ್ತ ಪಾದವ
ನಿತ್ತು ಕಸ್ತೂರಿ ಕಮ್ಮೆಣ್ಣೆ ಒತ್ತಿ ಸಂಭ್ರಮದಿಂದ
ಮಿತ್ರಸಹಿತ ನಿಂದ ಭಕ್ತವತ್ಸಲ ರಂಗ ೬

ಛಂದದಿ ಇಕ್ಷುರಸವು ಚೂತ ಕದಲಿ ರಸಂಗಳು
ಮಧು ದಧಿ ತಿಂತ್ರಿಣಿ ನಿಂಬೆರಸ ಕ್ಷೀರ ಘೃತಗಳಿಂದ ಆ
ನಂದದಿ ಯೆರೆದರು ಇಂದಿರೆರಮಣಗೆ ೭

ಕಸ್ತೂರಿ ಕರ್ಪೂರ ಕೇಸರಿ ಪುನಗಿನ ತೈಲವನೆ ತೆಗೆದು
ವಾಸುಕಿಶಯನಗೆ ಲೇಪವನು ಮಾಡಿ ಸ
ಹಸ್ರಕೊಡದ ಅಭಿಷೇಕವ ಮಾಡಿದರು ೮

ಪಟ್ಟುಪೀತಾಂಬರವನುಟ್ಟು ಶ್ರೀರಂಗನು ಕಳೆದ ಕವಚ
ತೊಟ್ಟು ಹತ್ತುಸಾವಿರಸೇರಿನ ಅಕ್ಕಿ ಅನ್ನವ
ನಿಟ್ಟು ವಿಪ್ರರು ಸುರಿದರು ವಿಸ್ತಾರವಾಗಿಯೆ ೯

ಛಂದದಿಂದಲೆ ದಧಿ ಚೂತ ಕದಳಿ ಫಲದಿಂದ ನೈ
ವೇದ್ಯ ಮಾಡಿ ಆನಂದದಿಂದುಂಡೆಯು ಮಾಡಿ ಭಕ್ತ
[ವೃಂದಕ್ಕೆ] ಕರೆಕರೆದು ಕೊಡುವ ಪರಿಯ ನಾ ೧೦

ರಂಗನಾಯಕಿ ಪಟ್ಟದರಸಿ [ವೆರಸಿ]ನರಹರಿ ಚಕ್ರಮೂರುತಿಗೆ
ಆಗ ಕಲ್ಪೋಕ್ತದಿಂದಭಿಷೇಕವ ಮಾಡೆ ಕರ್ಪೂರ ತೈಲವ [ಲೇ
ಸಾಗಿ]ಹಚ್ಚಿ ಮಲಗಿದ ವೆಂಕಟರಂಗ[ನ] ೧೧

## ೪೮

ಮಂಗಳಂ ಜಯ ಮಂಗಳಂ ಕಾವೇರಿರಂಗಗೆ ಪ

ವಿರಜಾನದಿಯು ಕಾವೇರಿಯಾಗಿ
ಪರಮಪದವೇ ಶ್ರೀರಂಗವಾಗಿ

ಪರಮಪುರುಷ ಅರ್ಚಾವತಾರವ ಮಾಡಿ
ಕರುಣದಿಂ ಬಂದ ಕಸ್ತೂರಿರಂಗಗೆ ೧

ಕರ್ಕಾಟಮಾಸದದಿನೆಂಟು ದಿನದಲ್ಲಿ ಕ
ನಕನದಿಯೆಂಬ ಕಾವೇರಿಗೆ [ಬ
ಲು] ಕರುಣದಿಂದಲೆ ಮರ್ಯಾದೆ ಮಾ [ಡ]
ಬೇಕೆನುತ ಬಂದ ಕಸ್ತೂರಿರಂಗಗೆ ೨

ಆನೆಯ ಮೇಲೆ ಅಂಬಾರಿಯನಿಟ್ಟು
ನಾನಾವಿಧ ಛತ್ರಿಚಾಮರವು ತಾಳತಮ್ಮಟೆ ಭೇರಿ
ನಾನಾ ವಾದ್ಯಗಳಿಂದ ವೈಯ್ಯಾರದಿಂದ
[ತಾನೆ] ಬಂದ ಕಾವೇರಿರಂಗಗೆ ೩

[ಎತ್ತರದ] ಸಹ್ಯಪರ್ವತ [ದಿತಂದು ತನ್ನ]
ಪುತ್ರಿಗೆ ವರನಾದ ರಂಗನಿಗೆ
ಮುತ್ತು ಮಾಣಿಕ ರತ್ನ ಗಂಧ ಪುಷ್ಪಗ
ಳಿತ್ತು ಅರ್ಚಿಸುವಾ ಕಾವೇರಿಯರಂಗಗೆ ೪

[ಚಂದದಿ] ರಂಗನಾಥನ ಕೃಪೆಯೆಂಬ ಕಾವೇರಿಯು
ಬಂದ ಭಕ್ತರ ಗುಣದೋಷಂಗಳ
ನೊಂದು ನೋಡದೆ ಉಪಮಾತೆಯಂದದಲಿ ಆ
ನಂದದಿಂ ಕಾಯ್ವ ಕಾವೇರಿರಂಗಗೆ ೫

ಗಂಗೆಗೆ ಮಿಗಿಲೆಂದೆನಿಪ ಕಾವೇರಿಯ
ರಂಗನಾಥನು ತನ್ನ ತೊಡೆಯೊಳಿಟ್ಟು ಪಾ
ಪಂಗಳೆಲ್ಲವ ಕಳೆದು ಬಂದ ನದಿಯ
[ಸಂಗಡ] ಮಂದಹಾಸದಿ [ನಿಂದ] ಕಾವೇರಿರಂಗ ೬

ಉತ್ಪತ್ತಿ ಪಿಡಿದು ಸಂಗಮ ಪರಿಯಂತರ
ಇತ್ತು [ಬೆಳೆ] ಕಾಲುವೆ ಕಟ್ಟಿ ಪೈರುಗಳ

ಹೆತ್ತ ತಾಯಂದದಿ ಸಲಹಿ ಪ್ರಾಣಿಗಳನ್ನು
ಭಕ್ತಿ ಮುಕ್ತಿಯನೀವ ಕಾವೇರಿರಂಗಗೆ ೭

ಮಂಟಪದಲಿ ಮಜ್ಜನವ ಮಾಡಿಯೆ ರಂಗ
[ಕಟ್ಟಿದ] ಮಾಲೆ ಕಸ್ತೂರಿಗಂಧವ[ನ]ಲ್ಲದೆ
ಮಾಟದ ವಸ್ತ್ರಾಭರಣ ನೈವೇದ್ಯವ ಆನೆ ಮೇ
ಲಿಟ್ಟು ಕಳುಹಿದ ಕಾವೇರಿ ರಂಗಗೆ ೮

ಕಾವೇರಿಗೆ ಮರ್ಯಾದೆಗಳನು ಮಾಡಿ
ಏರಿ ಹೂವಿನ ಪಲ್ಲಕ್ಕಿಯನು
ವಾರಾಂಗನೆಯರ ಕೋಲಾಟವ ನೋಡುತ್ತಾ ವೈ
ಯ್ಯಾರದಿಂ ಬಂದ ಕಾವೇರಿರಂಗಗೆ ೯

ಪಕ್ಷಮಾಸವು ಸಂವತ್ಸರೋತ್ಸವವೆಂಬ
ಪುಷ್ಪಮಾಲಿಕೆಯನ್ನು ರಚಿಸಿ ಹರಿಯ
ವಕ್ಷಸ್ಥಳದಿ ಧರಿಸೆ ತಪ್ಪ ಗ್ರಹಿ[ಸು
ತ] ಕ್ಷಮಿಸಿ ಭಕ್ತಿಮುಕ್ತಿಯನೀವ ವೆಂಕಟರಂಗಗೆ ೧೦

## ೪೯

ನಮೋ ನಮೋ ಶ್ರೀರಂಗ ಶ್ರೀನಿವಾಸ ವರದಗೆ
ನಮೋ ನರಹರಿ ನಾರಾಯಣ ಶ್ರೀಪರಮಪುರುಷಗೆ ಪ

ನಂದನಕಂದ ಮುಕುಂದ ಇಂದಿರೇಶಗೆ
ಮಂದರೋದ್ಧಾರ ಹರಿಸುಂದರಾಂಗಗೆ ಅ.ಪ

ಕಂದನ ನುಡಿಯ ಕೇಳಿ ತಾಯಿ ತಂದೆಗಳು ಆ
ನಂದ ಪಡುವ ತೆರದಿ ಮಂದಮತಿ

ಯಿಂದ ಪೇಳಿದ ಹೊಂದಿಕೆಯಿಲ್ಲದ ನುಡಿಯ
ಕುಂದ ಕ್ಷಮಿಸಿ ನಿಮ್ಮ ಪಾದದ್ವಂದ್ವದಲಿರೆಸೆನ್ನ ೨

ವಾಸುದೇವ ನಿಮ್ಮ ಪಾದದಾಶೆಯಿಂದಿದೆ ಆತ್ಮ ಇ
ನ್ನೇಸು ದಿನ ಈ ಹೇಸಿಕೆಭವದಿ
ಘಾಸಿಪಡುವುದೈ ವಾಸುಕಿಶಯನ ಶ್ರೀನಿ
ವಾಸ ರಂಗ ಶೀಘ್ರದಿಂಮುಕ್ತಿಯ ಪಾಲಿಸೋ ೩

## ೫೦

ಶ್ರೀರಂಗವಾಸಿಗಳು ಏನು ಸುಕೃತಿಗಳೊ ಪ

ಅರುಣ ಉದಯದೊಳೆದ್ದು ಮರುದ್ವೃಧೆ ಸ್ನಾನವ ಮಾಡಿ
ಪರಮಪುರುಷನ ವಿಶ್ವರೂಪ ನೋಡಿ
ಪರವಾಸುದೇವರ ಪ್ರಣವವಿಮಾನದಿ ನೋಡಿ
ವರಭಿಗಮನ ಮೊದಲಾದ ಐದು ಪೂಜೆ ಸೇವಿಸುವರು ೧

ಶ್ರಾವಣಮಾಸದಿ [ರಂಗನಿಗೆ] ಪವಿತ್ರೋ
ತ್ಸವವು ಭಾದ್ರಪದದಲಿ ಲಕ್ಷ್ಮೀಕೊಲುವು
ಪಾರ್ವಟೆಯು ಆಶ್ವೀಜಮಾಸದಿ ಉಯ್ಯಾಲೆಯು
ತ್ಸವವು ಕಾರ್ತೀಕಮಾಸದಿ ಕೌಶಿಕ ಕೃತ್ತಿಕದೀಪಾ ೨

ಮಾರ್ಗಶಿರ ಮಾಸದಿ ಪವಿತ್ರ ಕೊ
ಟ್ಟಿಗೋತ್ಸವ ಪುಷ್ಯಮಾಸದಿ ಪುನರ್ವಸುರಥವೂ
ಮಾಘಮಾಸದಲಿ ತೆಪ್ಪೋತ್ಸವ ಸಂಭ್ರಮವು
ಫಾಲ್ಗುಣಮಾಸದಿ ಪಂಗುನೋತ್ಸವ ನೋಳ್ಪರು ೩

ಪುಷ್ಪಸೇವ[ಯು] ಚೈತ್ರಮಾಸದಿ ಚಿತ್ರರಥವು
ವೈಶಾಖಮಾಸದಿ ವಸಂತೋತ್ಸವವು
ಜೇಷ್ಠಮಾಸದಲಿ ಜೇಷ್ಠಾಭಿಷೇಕವು
ಆಷಾಢಮಾಸದಿ ಕಾವೇರಿ ವೈಭೋಗವು ೪

ದೇಶಾಂತ್ರದೊಳಗಿದ್ದು ವಾಸುದೇವನ ಸ್ಮರಿಸೆ
ನಾಶವಾಗುವುದವರ ಪಾಪರಾಶಿಗಳು ಆ
ದೇಶವಾಸಿಗಳನ್ನು ಇನ್ನೇನು ಪೇಳಲಿ [ಬಿಡದೆ]
ವಾಸುಕಿಶಯನ ವೆಂಕಟರಂಗನ ನೋಳ್ಪರು ೪

## ೩. ಶ್ರೀರಾಮಧ್ಯಾನ

### ೫೧

ಸೀತಾರಾಮ ಶ್ರೀರಘುರಾಮ ಕಾ
ಕುತ್ಸ್ಥರಾಮ ಕರುಣಾಳು ರಾಮ ಪ

ಉತ್ತಮ ಗುರುಗಳಿಗೆ ಭಕ್ತಿಯಿಂದಲೆ ಎರಗಿ
ಭಕ್ತವತ್ಸಲನ ಚರಿತ್ರೆ ಪೇಳುವೆನು ೧

ಆದಿಮೂರುತಿಮಹಿಮೆ ವೇದಂಗಳರಿಯದು ಎನ್ನ
ಭೇದಬುದ್ಧಿಗೆ ಇದು ಬೋಧವಾಗುವುದೆ ೨

ಪತಿತಪಾವನ ನಿಮ್ಮ ಸ್ತುತಿಯ ಮಾಡುವುದಕ್ಕೆ
ಮತಿಯ ಪಾಲಿಸಿ ಸದ್ಗತಿಯ ಕೊಡೆನೆಗೆ ೩

ಆದಿಸೃಷ್ಟಿಯಲಿ ಆದುದು ಈ ಆತ್ಮ
ಬಾಧೆಯ ಪಡುತಿಹುದು ಭವರೋಗದಲಿ ೪

ಜನನ ಮರಣವೆಂಬ ಜಾಡ್ಯವನು ಬಿಡಿಸಿ
ನಿನ್ನ ಚರಣದೊಳಿರಿಸೆನ್ನ ಕರುಣವಾರಿಧಿಯೆ ೫

ಹೃಷಿಕೇಶವ ಎನ್ನ ಹೃದಯದೊಳಗೆ ಇದ್ದು
ವಿಷಯಕೆ ಎನ್ನನು ವಶವ ಮಾಡುವರೇ ೬

ನಮ್ಮ ಮಾಯೆಯು ಬಲು ಉನ್ನತವಾಗಿ
ದೆ ಮನ್ನಿಸಿ ರಕ್ಷಿಸೊ ಪನ್ನಗಶಯನ ೭

ಪಾರ್ಥಸಾರಥಿ ನಿಮ್ಮ ಪಾದವ ನಂಬಿದೆ
[ಅರ್ಥಿಯಿಂ] ಪಾವನ ಮಾಡೆನ್ನ ಪರಮಪುರುಷನೆ ೮

ನಿಮ್ಮ ಪಾದದ ಭಕ್ತಿ ನಿಮ್ಮ ಪಾದದ ಸ್ತುತಿ
ನಿಮ್ಮ ಪೊಗಳುವ ಮತಿಗತಿಯ ಕೊಡೆನಗೆ ೯

ತಂದೆತಾಯಿಯು ನೀನೇ ಬಂಧುಬಳಗವು ನೀನೆ ಆ
ನಂದದಿಂದಲಿ ಕಾಯೊ ಇಂದಿರಾರಮಣ ೧೦

ಸುರರೆಲ್ಲ ಪೋಗಿ ಮೊರೆಯಿಡಲಾಗಿ
ಅರಿತನು ಭೋಗಿಶಯನ ತಾನಾಗಿ ೧೧

ವಸುಧೆಯ ಭಾರವನಿಳುಹುವೆನೆಂದು
ದಶರಥನುದರದಿ ಜನಿಸಿ ತಾ ಬಂಧು ೧೨

ಪಂಕಜನೇತ್ರ ಪರಮಪವಿತ್ರ
[ಸು]ಕೋಮಲಗಾತ್ರ ಕೌಸಲ್ಯಪುತ್ರ ೧೩

ಪುತ್ರರ ನೋಡಿ ಸಂತೋಷಗೂಡಿ
ಅರ್ತಿಯಿಂದಲೆ ಚೌಲ ಉಪನಯನ ಮಾಡಿ ೧೪

ನೋಡಿ ಕೌಶಿಕನ ಚಿಂತೆಯ ಮಾಡಿ
ಕೂಡಿ ಅನುಜನ ಮುನಿವರನೊಡನೆ ವೋಡಿ ೧೫

ಕರೂಶದೇಶಕೆ ಬಂದು ತಾಟಕಿಯನು ಕೊಂದು ಮ
ಹ ಸ್ತ್ರೀಯೆಂದು ಆನಂದದಿ ಗ್ರಹಿಸಿ ೧೬

ಮಾರೀಚನ ಹಾರಿಸಿ ಕ್ರತುವನ್ನು ಪಾಲಿಸಿ
ತೋರಿಸಿ ಗಂಗೆಯ ಆನಂದದಿಂ ಸ್ತುತಿಸಿ ೧೭

ಮಾಡಿ ಶಿಲೆಯ ಪಾವನ ಮಿಥಿಲಪುರಕೆ ವೋಡಿ
ನೋಡಿ ಧನುವ ಮುರಿದು ಜಾನಕಿ ಕೂಡಿ ೧೮

ಮಾರ್ಗದಲ್ಲಾಗ ಭಾರ್ಗವನ ಆಗ್ರಹವ
ಬೇಗ ಮುರಿದು ತಾ ಶೀಘ್ರದಿಂ ಬಂದ ೧೯

ಅಯೋ[ಧ್ಯೆಗೆ] ಬಂದು ಸತಿ ಸಹಿತನಿಂದು
ರಾಜ್ಯ ಗ್ರಹಿಸುವೆನೆಂದ ಮಾತೆಗಾನಂದ ೨೦

ಮಾತೆಗೆ ವಂದಿಸಿ ಸೀತೆಯನೊಡಗೊಂಡು ಸು
ಮಿತ್ರೆಜಾತನ ಸಹಿತ ರಘುನಾಥ ತಾ ಪೊರಟ ೨೧

ಪೋಗಿ ಜನಕನಿಗಾಗಿ ವನಕೆ ತಾ
ಸಾಗಿ ಗುಹನಿಂದ ಗಿರಿಯಲ್ಲಿ ಯೋಗಿ ೨೨

ಬೇಗ ಭರತನಿಗಾಗಿ ಪಾದುಕೆಗಳ ಅನು
ರಾಗದಿಂದಿತ್ತು ಯೋಗದಿಂ ಪೋಗಿ ೨೩

ಅತ್ರಿಮಹಾಮುನಿ ಇತ್ತ ಆಭರಣವ
ವಸ್ತ್ರವ ಗ್ರಹಿಸಿದ ಪುರುಷೋತ್ತಮನು ೨೪

ವಿರಾಧನ ಕೊಂದು ಹರುಷದಿಂ ಬಂದು
ಕರುಣದಿಂದ ನಿಂದು ಋಷಿಗಳಿಗಭಯವ[ನಿತ್ತು] ೨೫

ದನುಜೆನಾಸಿಕವರಿದು ಖರದೂಷಣರ ತರಿದು
ತಾನೊಲಿದು ಸತಿಗೆ ಗುಹೆಯಲ್ಲಿ ನಲಿದು ೨೬

ಬಂದು ರಾವಣ ಜಾನಕಿಯ ಕದ್ದೊಯ್ಯಲಂದು
ಕೊಂದು ಮಾರೀಚನ ಗೃಧ್ರಗೆ ಮೋಕ್ಷಾವ [ನಿತ್ತು] ೨೭

ಕಬಂಧನ ಗೆಲಿದು ಪಂಪಾತೀರದಿ ನಲಿದು
ಶಬರಿಯಿತ್ತ ಫಲವನ್ನು ಸವಿದು ಹರಿಗೆ ತಾನೊಲಿದು ೨೮

ಕುಟ್ಟಿ ವಾಲಿಯ[ನು] ರವಿಜಗೆ ಪಟ್ಟವ ಕಟ್ಟಿ
ಸೃಷ್ಟಿಜಾತೆಯನರಸಲು ಕಪಿಗಳನಟ್ಟಿ ೨೯

[ಭರದಿವಾನರ] ಕೈಲಿ ಉಂಗುರವಿರಿಸೆ ಆ
ಮಾರುತಿ ಕಪಿಗಳುವೆರಸಿ ಜಾನಕಿ[ಯ]ನರಸೆ ೩೦

ಶರಧಿಯನ್ಹಾರಿ ಸೀತೆಯ ನೋಡಿ ಗುರುತನು ತೋರಿ
ದುರುಳನೊಡನ್ಹೋರಿ ಮಣಿಯ ತಂದನಾಧಾರಿ ೩೧

ವನವನ್ನು ಮುರಿದು ಅಕ್ಷನ ತರಿದು ಅಸ್ತ್ರಕ್ಕೆ ಅ
[ವನೊ]ಲಿದು ರಾವಣನೆದುರಲ್ಲಿ ನಲಿದು ೩೨

ಪುರವೆಲ್ಲ ಸುಟ್ಟು ವಿಭೀಷಣನ ಗುಟ್ಟು ಬಾಲ
ಶರಧಿಯೊಳಿಟ್ಟು ಕಪಿಗಳ ಸೇರಿದನಷ್ಟು ೩೩

ಭಂಗಿಸಿ ಮಧುವನವ ಭರದಿಂದ [ರಾಮನೆಡೆಗೆ]
ಲಂಘಿಸಿ ಮಾತೆಯ ಕಂಡೆವೆಂದೊಂದಿಸಿ ಮಣಿಯನಿರಿಸೆ ೩೪

[ವರರಾಮ] ತಾ ನೋಡಿ ವ್ಯಸ ಮಾಡಿ
ಹರಿಯನ್ನು ಕೂಡಿ ಆಲಿಂಗನೆ ಮಾಡಿ ೩೫

ಹರಿಗನ ಕೂಡಿ ಭರದಿಂದಲೋಡಿ
ಶರಧಿಯ ನೋಡಿ ಯೋಚನೆ ಮಾಡಿ ೩೬

ವರುಣನ ವಂದಿಸಿ ವಿಭೀಷಣನ ಮನ್ನಿಸಿ
ಶರಧಿಯ ಬಂಧಿಸಿ ಅಂಗದನ ಸಂಧಿಗೆ ಕಳುಹಿಸಿ ೩೭

ಇಂದ್ರಜಿತುವೊಡನೆ ಛಂದದಿಂದಲೆ ಕಾದಿ
ಬಂದ ಸರ್ಪಾಸ್ತ್ರವ ಖಗನಿಂದ ಬಿಡಿಸಿ ೩೮

ಹಂಗಿಸಿ ರಾವಣನಕಿರೀಟವ ಮೈಯೆಲ್ಲ ನಡುಗಿಸಿ
ಭಂಗಿಸಿ ತಾ ಜಗದೊಡೆಯನೆಂದೆನಿಸಿ ೩೯

ಕುಂಭನಿಕುಂಭ ಕುಂಭಕರ್ಣರ ಕೊಂದು
ಕುಂಭಿನಿಯೊಳು ನಿಂದನಂಬುಜನಾಭ ೪೦

ಪತಿತಪಾವನ [ನನುಜನ] ಪಿತಾಮಹಾಸ್ತ್ರದಿ ಕಟ್ಟೆ
ಹಿತದಿಂದೌಷಧಿ ತಂದ ಮಾರುತನ ಕುಮಾರ ೪೧

ಮಾಯೆ ಸೀತೆಯನರಿ[ಯದೆ] ಮೋಹಪಡು ತ ಉ
ಪಾಯದಿಂದಲೆ ಬಂದ ಮಾಯಾವಿಯೆಡೆಗೆ ೪೨

ತಮ್ಮ ಲಕ್ಷ್ಮಣ ತಾನು ಹೆಮ್ಮೆಯಿಂದಲೆ ಕಾದಿ
ಒಮ್ಮೆ [ಲೆ] ಅಸ್ತ್ರಗಳ ಸುಮ್ಮಾನದಿಂ ಬಿಟ್ಟು ೪೩

ಸತ್ಯಮೂರುತಿ ಪವಿತ್ರ ತಾನಾದರೆ ಅಸ್ತ್ರವೆ
ಶತ್ರುವ ಜಯಿಸಲೆಂದನಾಗ ೪೪

ಎಂದು ಬಾಣವಬಿಡೆ ಇಂದ್ರಜಿತುವ ಕೊಂದು ಆ
ನಂದದಿಂ ಲಕ್ಷ್ಮಣನ ಹೊಂದಿತಾ ಬಾಣ ೪೫

ವಿರೂಪಾಕ್ಷ ಯೂಪಾಕ್ಷ ಶೋಣಿತಾಕ್ಷನ ಕೊಂದು ಮ
ಕರಾಕ್ಷನ ಕೊಂದ ಮಹಾನುಭಾವರಾವಣನ ೪೬

ಮೂಲಬಲವನ್ನೆಲ್ಲ ಲೀಲೆಯಿಂದಲೆ ನಿ
ರ್ಮೂಲನ ಮಾಡಿ[ದ] ಲೀಲಾವಿನೋದದಿ ೪೭

ಬಂಧುಗಳೆಲ್ಲರು ಮರಣ ಪೋಗಲು ಕಂಡು
ಬಂದ ರಾವಣನು ತಾನು ಒಂದೆಮನಸಿನಲಿ ೪೮

ಯಾರು ಇಲ್ಲದಾಗ ಚೋರತನದಲ್ಲಿ
ನಾರಿಯ ಕದ್ದೊಯ್ದ ಧೀರ ಬಾರೆಂದ [ರಾಮ] ೪೯

ಅಸ್ತ್ರಕ್ಕೆ ಅಸ್ತ್ರವ ಒತ್ತಿ ಬಿಡಲು ಆಗ
ಮತ್ತೆ ಆಕಾಶವ ಮುತ್ತಿತು ಬಾಣ ೫೦

ರಾಮರಾವಣರ್ಯುದ್ಧ ನೋಡಿ ಮಹಾಸುರರೆಲ್ಲ
ಪ್ರೇಮದಿಂದಲೆ [ಹರಸಿದರು] ಆನಂದಗೂಡಿ ೫೧

ಕತ್ತರಿಸಿದ [ರಾವಣನ]ಶಿರ ಮತ್ತೆ ಬೆಳೆಯಲು ನೋಡಿ
ಚಿತ್ತದಿಂ ನೆನೆದು [ರಾಮ] ಬ್ರಹ್ಮಾಸ್ತ್ರದಿಂ ಕಡಿದ ೫೨

ದಶಕಂಠನೆಂತೆಂಬ ಹಸನಾದ ವೃಕ್ಷವ
ದಶರಥಸುತವಾತ ಬಂದು ಮುರಿಯಿತು ೫೩

ರಾವಣನೆಂತೆಂಬ ವಾರಣ[ದ ಕೋಡ] ವೀರ ರಾ
ಘವನೆಂಬ ಕೇಸರಿಯು ಮುರಿಯಿತು ೫೪

ಪುಲಸ್ತ್ಯಪುತ್ರನೆಂಬ ರಾಜವೃಷಭವನ್ನು ಇಕ್ಷ್ವಾಕು
[ಕುಲದ] ವ್ಯಾಘ್ರವು ಭಕ್ಷಿಸಿತಾಗ ೫೫

[ಆಮಹಾ] ರಾಕ್ಷಸೇಂದ್ರನೆಂಬ ಜ್ವಲಿಸುವ ಅಗ್ನಿಯ [ಶ್ರೀ]
ರಾಮಜೀಮೂತವು ಬಂದು ಕೆಡಿಸಿತು ೫೬

ಸುರರೆಲ್ಲ ಜಯವೆಂದು ಪುಷ್ಪಗಳರಳನ್ನು ಕರೆಯಲು
ಶಿರದಲ್ಲಿ ಧರಿಸಿದ [ತಾ] ಪರಮಪುರುಷನು ೫೭

ರಾಕ್ಷಸೇಂದ್ರ [ವಿಭೀಷಣ]ಗೆ ಮಾಡಿ ರಾಜ್ಯಾ
ಭಿಷೇಕವ ಮೂರ್ಜಗದಲಿ ಕೀರ್ತಿ ಪಡೆದ ರಾಘವ ೫೮

ತಂದೆಗೆರಗಿ ಅಗ್ನಿತಂದ ಸೀತೆಯ ನೋಡಿ ಆ
ನಂದದಿಂದಲೆ ಕೂಡಿನಿಂದ ರಾಘವನು ೫೯

ಅಜಭವಸುರರೆಲ್ಲ ಭುಜಗಶಯನನ ನೋಡಿ
ನಿಜವಾಗಿ ಸ್ತೋತ್ರ ಮಾಡಿದರು ನಿರ್ಮಲದಿ ೬೦

ವೇದವನಿತ್ತು ಅಜನಿಗೆ ಭಾರವ ಹೊತ್ತು
[ಆ] ಧಾರುಣಿಯ ತಂದು ಕಂಬದಿಂ ಬಂದು ೬೧

ದಾನವ ಬೇಡಿ ಕ್ಷತ್ರಿಯಕುಲವನೀಡಾಡಿ
ಜಾನಕಿಯ ತಂದು ಪ್ರಲಂಬನ ಕೊಂದು ೬೨

ಕಾಳಿಯ ಒತ್ತಿ ಕುದುರೆಯ ಹತ್ತಿ ಜಗ
ವೆಲ್ಲ ಸುತ್ತಿ ನಿಮ್ಮ ದರ್ಶನ ಮುಕ್ತಿ ೬೩

ಜಗದೋದ್ಧಾರ ದುರಿತಕ್ಕೆ ದೂರ
ಜಗಕೆ ಆಧಾರ ದುಷ್ಟರಿಗೆ ಕ್ರೂರ ೬೪

ಪೃಥುವಿಯ ಪಾಲ ದಿಟ್ಟಗೋಪಾಲ
ಸತ್ಯದಲಿ ಶೀಲ ರುಕ್ಮಿಣೀಲೋಲ ೬೫

ರಾಮರಘುಕುಲಭೀಮ ಅರಿ ನಿ
ಸ್ಸೀಮ ಭಕ್ತರಾಪ್ರೇಮ ೬೬

ವಿಶಾಲನೇತ್ರ ಪರಿಪೂರ್ಣಗಾತ್ರ [ವ
ರ] ಸೀತಾಕಳತ್ರ ಸುಗ್ರೀವಮಿತ್ರ ೬೭

[ರಾಜ] ದಶರಥ ಬಾಲ ಜಾನಕೀಲೋಲ
ಮೂರ್ಜಗಪಾಲ ಕೀರ್ತಿವಿಶಾಲ ೬೮

ಸತ್ಯಮೂರುತಿ ಪವಿತ್ರ ನೀನೆ ಜಗಕೆ
ಕರ್ತನೂ ಕಾರಣಮೂರ್ತಿಯೂ ನೀನೆ ೬೯

ನಂದನಕಂದ ಮುಕುಂದ ಗೋವಿಂದ
ಇಂದಿರಾರಮಣ ನೀನೆಂದು ಪೊಗಳಿದರು ೭೦

ಪುಷ್ಪಕವನು ಏರಿ ಲಕ್ಷ್ಮೀಸಹಿತವಾಗಿ [ರಾಮ]
ಲಕ್ಷ್ಮಣಸಹಿತಲೆ ಲಕ್ಷಕಪಿಗಳ [ಕೂಡಿ ಪೊರಟು] ೭೧

ನಾರಿ ಜಾನಕಿಗೆ ದಾರಿಯೊಳಗೆಲ್ಲ
ತೋರಿಸುತ ಬಂದನು ವಾರಿಜನಾಭ ೭೨

ಭರದಿಂದ ಬಂದು ಭಾರದ್ವಾಜರಿಗೆ ಎರಗಿ
ಭರತನ ಬಳಿಗೆ ವರಭಕ್ತನ ಕಳುಹಿದನು ೭೩

ಛಂದದಿಂದಗ್ನಿಯ [ಭರತ] ವಂದಿಸುವ ಸಮಯದಿ
ಬಂದ ರಾಘವನೀಶ ಎನಲು ಮಾರುತಿಯು ೭೪

ಎಲ್ಲಿ ಬಂದನು ಎನ್ನ ಫುಲ್ಲನಾಭಚರಿತ್ರ
ಎಲ್ಲವನ್ನು ಪೇಳು ನೀ ನಿಲ್ಲದೆ ಬೇಗ [ನೆನುತ] ೭೫

ಯಾಕೆ ಬಾರನು ಎನ್ನ ಲೋಕನಾಯಕನೀಗ
ವ್ಯಾಕುಲವಾಗಿದೆ ನೀ ಪೇಳು ಕಪಿಯೆನ್ನೆ ೭೬

ಅಕಾಲದ ಫಲ ಜೋಲಾಡುತಲಿದೆ
ಲೋಕಪಾಲಕರ ವರದಿಂದಲನೇಕವೆಂದು ಪೇಳುತಲಿರೆ ೭೭

ಬಹುಜನ್ಮದಲಿ ಬಂದು ಭವರೋಗದಲಿ ಬೆಂದು ನೊಂ
[ದಿಹ] ಪ್ರಾಣಿಗೆ ಮುಕ್ತಾನಂದ ಕಂಡಂತೆ ೭೮

ದುಷ್ಟರೆಲ್ಲರ ಕೊಂದು ಕ್ಷಿತಿಜಾತೆಯನು ತಂದು
ಥಟ್ಟನೆ ಬಂದನು ದಿಟ್ಟ ರಾಘವನು ೭೯

ಬಂದ ಶ್ರೀರಾಮ[ನ] ನೋಡಿ
ಆನಂದದಿಂ ಭರತನಾಲಿಂಗಿಸಿನಿಂದ ೮೦

ಧನ್ಯನಾದೆನೆಂದು ಹೊನ್ನಆವುಗೆ ತಂದು
ಪನ್ನಗಶಯನನ ಪಾದದೊಳಿರಿಸಿದ ೮೧

ನಂದಿಗ್ರಾಮಕೆ ಪೋಗಿ ಮಿಂದು ಮಡಿಯುಟ್ಟು ಆ
ನಂದದಿಂದಾಭರಣ ಜಾನಕಿಗೆ ಕೊಟ್ಟು [ರಾಮ] ೮೨

ಸ್ಯಂದನವನು ಯೇರಿ ಇಂದಿರೆ ಸಹಿತಲೆ ಬಂದ
ಹಿಂದೆ ಮುಂದೆ ನಡೆದರು ಭಕ್ತರೂ [ಆಗ] ೮೩

ಪಟ್ಟಣವನ್ನು ಪೊಕ್ಕು ದಿಟ್ಟ ರಾಘವನು ತಾನು
ಬಿಟ್ಟ ಬಿಡಾರವ ಸೃಷ್ಟಿಪಾಲರಿಗೆ ೮೪

ರಾಜ್ಯಾಭಿಷೇಕದ ರಂಗಮಂಟಪವನ್ನು
ನಿರ್ಜರರೆಲ್ಲ [ಕೂಡಿ] ನಿರ್ಮಾಣ ಮಾಡಿದರು ೮೫

ಹರಿಗಳು ರವಿಜನಾಜ್ಞೆಯಿಂದ ಹೋಗಿ
ಭರದಿಂದ ತಂದರು ಶರಧಿಯುದಕವನು ೮೬

ಮಾತೆಗೆ ನಮಿಸಿ ಭೂಜಾತೆಸಹಿತವಾಗಿ
ನೂತನಪೀಠದಿ ರಘುನಾಥ ಕುಳ್ಳಿರ್ದ ೮೭

ಅಷ್ಟಕನ್ನಿಕೆಗಳು ವಸಿಷ್ಠರು ಮೊದಲಾಗಿ
ಪಟ್ಟವ ಕಟ್ಟಿದರು ಸೃಷ್ಟಿಪಾಲಕಗೆ ೮೮

ಲಕ್ಷ್ಮೀಪತಿಗೆ ರತ್ನಕಿರೀಟವ ಧರಿಸಿದರು
ಇಕ್ಷ್ವಾಕುವಂಶದ ಪಕ್ಷಿವಾಹನಗೆ ೮೯

ಮಂದಾರಮಳೆಗಳ ಅಂದು ಸುರರು ಕರೆಯೆ
ಬಂದ ಭಕ್ತರು ಜಯವೆಂದು ಪೊಗಳಿದರು ೯೦

ವಿಶ್ವಾಮಿತ್ರ ವಸಿಷ್ಠ ವಾಮದೇವರು ಅತ್ರಿ
ಕಶ್ಯಪ ಜಮದಗ್ನಿ ಗೌತಮರೆಲ್ಲ ೯೧

ಅಗಸ್ತ್ಯ ಭಾರದ್ವಾಜ ವಾಲ್ಮೀಕಿ ಶತಾನಂದ
[ರುಗಳು] ಸ್ತುತಿಸಿದರು ಲಕ್ಷ್ಮೀಪತಿ ರಾಘವನ ೯೨

ವಿಭೀಷಣ ಮೊದಲಾದ ದೇಶಾಧಿಪತಿಗಳಿ
ಗೆ ಭೂಷಣವಿತ್ತನು [ರಾಮ] ಭೂರಿ ದಾನಂಗಳಂ ೯೩

ಕಂದರಂದದಿ ಪ್ರಜೆಗಳ ಅಂದು ಸಲಹುತ ರಾಮ ಆ
ನಂದದಿಂದಿದ್ದನು ಇಂದಿರೇ ಸಹಿತ ೯೪

ಪುಲಸ್ತ್ಯರವಂಶ [ಕಥೆ]ಅಗಸ್ತ್ಯ[ರಿ]ಂದಲೆ ಕೇಳಿ
[ಬಳಿಕ] ಪುತ್ರರ ಪಡೆದನು ಪುರುಷೋತ್ತಮ ೯೫

ಕ್ರತುವನ್ನು ಮಾಡಿದ ಪತಿತಪಾವನರಾಮ
ಪೃಥವಿಯನಿತ್ತನು ಸುತರಿಗೆ ಬೇಗ ೯೬

ಕಲಿಯುಗದೊಳಗಿನ ಕರ್ಮಿಗಳಿಗೆ ಈಗ
ಸುಲಭದಿಂದಲೆ ನಾನು ಒಲಿವೆನೆಂದೆನುತಾ ೯೭

ರಾಮನೆಂಬುವರ ಆ ಮಹಾಪಾಪವ
ಪ್ರೇಮದಿಂದಲೆ ಕಳೆವೆನೆಂತೆಂಬ ನೇಮ ೯೮

ಇಂದಿರೇಶನಮಹಿಮೆ ಒಂದು ತಿಳಿಯದಿಹ
ಮಂದಮತಿಯ ಆನಂದದಿ ಕ್ಷಮಿಸಿ ೯೯

ಕಂದನ ನುಡಿಯನು ತಂದೆತಾಯ್ಗಳು ಕೇಳಿ ಆ
ನಂದಪಡುವ ತೆರದಿ ಗೋವಿಂದ ೧೦೦

ಇಷ್ಟು ಕಾರ್ಯವ ಮಾಡಿ ಸೃಷ್ಟಿಗೀಶ್ವರ ತಾನು
ಬೆಟ್ಟವನೇರಿದ ದಿಟ್ಟ ವೆಂಕಟನು ೧೦೧

## ೫೨

## ಶ್ರೀಮದ್ರಾಮಾಯಣ ಮಂಗಳಂ

ಮಂಗಳಂ ಮಹಾನುಭಾವಗೆ ಮಂಗಳಂ ಲೋಕಮಾತೆ ಸೀತೆಗೆ
ಮಂಗಳಂ ಶತ್ರುಘ್ನ ಭರತಗೆ ಮಂಗಳಂ ಸೌಮಿತ್ರಿರಾಮಗೆ ಪ

ಸುರರು ಅಸುರರ ಬಾಧೆಗೋಸ್ಕರ
ಶರಧಿಶಯನನ ಸ್ತುತಿಯಮಾಡಲು
ದಶರಥನ ಉದರದಲಿ ಜನಿಸುವೆನೆಂದು ವರವನಿತ್ತ ರಾಮಚಂದ್ರಗೆ ೧

ಪುತ್ರಕಾಮೇಷ್ಟಿಯನು ಮಾಡಲು ಶತ್ರುಘ್ನ ಸೌಮಿತ್ರಿ
ಪತ್ನಿಯರು ಗರ್ಭವನು ಧರಿಸಲು
ಭರತಸಹವಾಗಿ ಜನಿಸಿದ ರಾಮಚಂದ್ರಗೆ ೨

ಜಾತಕರ್ಮವು ನಾಮಕರಣವು ಚೌಲ ಉಪನಯನಗಳ ಮಾಡಿ ವಿಶ್ವಾ
ಮಿತ್ರರೊಡನೆ ಸಕಲ ವಿದ್ಯವ ಕಲಿಯೆ ಪೊರಟ ರಾಮಗೆ ೩

ಬಲ ಅತಿಬಲವೆಂಬ ವಿದ್ಯವ ವಿಶ್ವಾಮಿತ್ರರೊಡನೆ
ಕಲಿತು ಅಶ್ವಿನಿದೇವತೆಗಳಂದದಿ ಬಂದ ಸೌಮಿತ್ರಿರಾಮ್ರಗೆ ೪

ಭರದಲಿ ಅನಂಗನಾಶ್ರಮವನು ಪೊಕ್ಕು ಸರಯು ನದಿಯನು ದಾಟಿ
ಖರದೂಷಣಜಾ ದೇಶದೊಳಗುಳ್ಳ ತಾಟಕಾಂತಕ ರಾಮಚಂದ್ರಗೆ ೫

ಅಸ್ತ್ರವನ್ನು ಗ್ರಹಿಸಿ ಬೇಗನೆ ಸಿದ್ಧಾಶ್ರಮಕ್ಕೆ ನಡೆತಂದು ಸುಭಾಹುವ
ನು ಸಂಹರಿಸಿ ಭರದಿ ಮಾರೀಚನ ಹಾರಿಸಿದ ರಾಮಗೆ ೬

ವಿಶ್ವಾಮಿತ್ರರ ಯಜ್ಞ ಪಾಲಿಸಿ ಕುಶನ ವಂಶವಿಸ್ತಾರವ ಕೇಳಿ
ಆಸರ [ಯು]ನದಿಯ ದಾಟಿ ಭರದದಿತಿಯಾಶ್ರಮಕೆ ಬಂದ ರಾಮಗೆ ೭

ಮರುತ್ತ ಜನ್ಮವ ಕೇಳಿ ಅಹಲ್ಯೆಯನ್ನು ಪಾವನ ಮಾಡಿ
[ವರ] ಸುಮತಿಯೊಡನೆ ಮಾತನಾಡಿ ಜನಕನ ಯಜ್ಞಕೆ
ಬಂದ ರಾಮಗೆ ೮

ಜನಕ ವಂದಿಸಿ ಧನ್ಯನೆನ್ನಲು ವಿಶ್ವಾಮಿತ್ರರು ವೃತ್ತಾಂತ ಹೇಳಿ
ಧನುವ ತರಿಸಲು ನೋಡಿ ಕ್ಷಣದಿಮುರಿದಾ ರಾಮಚಂದ್ರಗೆ ೯

ಸುರರು ಜಯಜಯವೆಂದು ಸ್ತುತಿಸಲು ಧರಣಿಸುತೆಯ ಕರವ ಪಿಡಿದು
ಶ್ರುತಕೀರ್ತಿ ಮಾಂಡವಿ ಊರ್ಮಿಳೆ ಅನುಜರೊಡನೆ
ಪೊರಟ ರಾಮಗೆ ೧೦

ಮಾರ್ಗದಲಿ ಭಾರ್ಗವನ ಬಲವನು ಕಳದು ಅಯೋಧ್ಯೆಗೆ ಬಂದು
[ಬೇಗ]ಮಾತಾಪಿತರ ಮಾತನಡೆಸಿ ಪ್ರೀತಿತೋರಿದ ಸೀತಾರಾಮಗೆ ೧೧

ಕಂಡವರ ಮನದಲ್ಲಿ ರಮಿಸುವ ಪುಂಡರೀಕಾಕ್ಷನಿಗೆ ರಾಜ್ಯವ
ಕೊಡುವೆನೆ[ನುತ] ದಶರಥ ವ್ರತವನಾಚರಿಸಿದ ರಾಮಚಂದ್ರಗೆ ೧೨

ಕೈಕೆ ಪೂರ್ವದ ವರವ ಸ್ಮರಿಸಿ ಭರತನಿಗೆ ರಾಜ್ಯವನು ಬೇಡಿ ರಾಮನರ
ಣ್ಯಕ್ಕೆ ಪೋಗೆನೆ ಬೇಗ ಪೊರಟ ಶ್ರೀರಾಮಚಂದ್ರಗೆ ೧೩

ಮಾತೆಯನು ಬಹುವಿಧದಿ ಮನ್ನಿಸಿ ಪಿತನ ಪ್ರತಿಜ್ಞೆಯನು ಪಾಲಿಸಿ
ಸೀತೆಲಕ್ಷ್ಮಣರೊಡನೆ ವನವಾಸಕ್ಕೆ ಪೊರಟ ರಾಮಚಂದ್ರಗೆ ೧೪

ಪುರದ ಜನರನು ಸಂತವಿಟ್ಟು ಗುಹನ ಸಖ್ಯದಿ ನದಿಯ ದಾಟಿ
ಭರದಿ ಭಾರದ್ವಾಜರ ಕಂಡು ಚಿತ್ರಕೂಟಕ್ಕೆ ಬಂದ ರಾಮಗೆ ೧೫

ಅರಸು ಸ್ವರ್ಗವನೈದೆ ಭರತನಕರಸಿ ಕರ್ಮವನೆಲ್ಲ ಕಳೆದು
[ವರ] ಮಾತೆಗೆ ಭಾಷೆ ಕೊಟ್ಟು ತಮ್ಮನಾಲಿಂಗಿಸಿದ ರಾಮಗೆ ೧೬

ಭರತನಂಕದೊಳಿಟ್ಟು ಪ್ರೇಮದಿ ಮನ್ನಿಸಿ ಮೃದುವಾಕ್ಯದಿಂದ
ಗುರುಗಳನುಮತದಿಂದ ಪಾದುಕೆಯಿತ್ತು ಕಳುಹಿದ ರಾಮಚಂದ್ರಗೆ ೧೭

ಬೇಗನೆ ಚಿತ್ರಕೂಟವ ಬಿಟ್ಟು ಅತ್ರಿ ಯಾಶ್ರಮಕೆ ಬಂದು
ಅಂಗರಾಗಾರ್ಪಣವನೆಲ್ಲ ಅಂಗೀಕರಿಸಿದ ರಾಮಚಂದ್ರಗೆ ೧೮

ದಂಡಕಾರಣ್ಯವನ್ನು ಪೊಕ್ಕು ಉದ್ದಂಡವಿರಾಧನ್ನ ಕೊಂದು
ಕಂಡು ಇಂದ್ರನ ಶರಭಂಗರಿಗೆ ಮುಕ್ತಿಯನಿತ್ತ ಶ್ರೀರಾಮಚಂದ್ರಗೆ ೧೯

ಋಷಿಗಳಿಗೆ ಅಭಯವನು ಇತ್ತು ಲೋಕಮಾತೆಯ ನುಡಿಯ ಕೇಳಿ
ಋಷಿಮಂಡಲವನು ಪೊಕ್ಕು ಬಂದು ಸುತೀಕ್ಷ್ಣರ ಕಂಡ ರಾಮಗೆ ೨೦

ಸುತೀಕ್ಷ್ಣರ ವಾಕ್ಯವ ಕೇಳಿ ಅಗಸ್ತ್ಯರಾಶ್ರಮಕೆ ಬಂದು
ಅಸ್ತ್ರವನು ಕೊಡಲು ಗ್ರಹಿಸಿ ಪಂಚವಟಿಗೆ ಬಂದ ರಾಮಗೆ ೨೧

ಶೂರ್ಪನಖಿ ರಘುಪತಿಯ ಮೋಹಿಸೆ ಕರ್ಣನಾಸಿಕವನ್ನು ಛೇದಿಸಿ
ದುರುಳ ಖರದೂಷಣರ ಕೊಂದು ಸತಿಯನಾಲಿಂಗಿಸಿದ ರಾಮಗೆ ೨೨

ದುರುಳ ಖಳನು ಜಾನಕಿಯ ಕದ್ದೊಯ್ಯೆ ಮಾರಿಚನ್ನ ಕೊಂದು
ಬರುತ ಮಾರ್ಗದಿ ಗೃಧ್ರರಾಜಗೆ ಮುಕ್ತಿಯಿತ್ತ ಶ್ರೀರಾಮಚಂದ್ರಗೆ ೨೩

ಕಬಂಧನಾ ವಾಕ್ಯವನು ಕೇಳಿ ಮಾರ್ಗದಲಿ ಅಯಮುಖಿಯ ಭಂಗಿಸಿ
ಶಬರಿ ಭಕ್ತಿಯೊಳಿತ್ತ ಫಲವನು ಸವಿದು ಮುಕ್ತಿಯನಿತ್ತ ರಾಮಗೆ ೨೪

ಸೀತೆಯರಸುತ ಮಾರ್ಗದಲಿ ಋಷ್ಯಮೂಕಪರ್ವತವ ಸೇರಿ ಪಂ
ಪಾತೀರದಿ ತಮ್ಮನೊ[ಂದಿ]ಗೆ ನಿಂತ ಶ್ರೀರಘುರಾಮಚಂದ್ರಗೆ ೨೫

ಪಂಪಾಪುಳಿನದ ವನವಕಂಡು ಪಂಕಜಾಕ್ಷಿಯ ನೆನೆದು ವಿರಹ
[ತಾಪದರೆ] ಬಂದ ಆಂಜನೇಯಗೆ ಸಖ್ಯ ನೀಡಿದ ರಾಮಚಂದ್ರಗೆ ೨೬

ಅಭಯವನು ಇತ್ತು ರವಿಜಗೆ ಏಳು ತಾಳೇಮರವ ಛೇದಿಸಿ ದುಂ
ದುಭಿಯ ಕಾಯವನು ಒಗೆದ ಇಂದಿರಾಪತಿ ರಾಮಚಂದ್ರಗೆ ೨೭

ಇಂದ್ರಸುತನು ರವಿಜನೊಡನೆ ದ್ವಂದ್ವಯುದ್ಧವ ಮಾಡುತಿರಲು
ಒಂದುಬಾಣದಿಂದ ವಾಲಿಯ ಕೊಂದು ಕೆಡಹಿದ ರಾಮಚಂದ್ರಗೆ ೨೮

ಸುಗ್ರೀವಗೆ ಪಟ್ಟವಕಟ್ಟಿ ಅಷ್ಟದಿಕ್ಕಿಗೆ ಕಳುಹಿಕಪಿಗಳ ಹನುಮಗೆ
ಮುದ್ರೆಯುಂಗುರವಿತ್ತು [ಅ]ಸಾಧ್ಯ ಇವನೆಂತೆಂದ ರಾಮಗೆ ೨೯

ಮಾರ್ಗದಲಿ ಸ್ವಯಂಪ್ರಭೆಯ ಕಂಡು ಪ್ರಾಯೋಪವೇಶವ ಮಾಡಿ
ಹರುಷದಿ ಅಂಗದ ಸಂಪಾತಿ ವಾಕ್ಯವಕೇಳಿ ಸಮುದ್ರತೀರದಿ
ಬೆಳೆದ ಹನುಮಗೆ ೩೦

ಶತ್ರುಪಟ್ಟಣವ ಕಂಡು ಛಾಯೆಯ ಕುಟ್ಟಿ
ಸುರಚಿಯುಪಾಯದಿಮನ್ನಿ
ಸುತ್ತ ಮೈನಕನ ಭರದಲಿ ಲಂಕಿಣಿಯನಡಗಿಸಿದ ಹನುಮಗೆ ೩೧

ಲೋಕಪಾಲಕರನ್ನು ವಂದಿಸಿ ಅರಸಿ ಜಾನಕಿಯನ್ನು [ಸಂಧಿಸಿ]
ಅಶೋಕವನದಲಿ ಲೋಕಮಾತೆಗೆ ಮುದ್ರೆಯುಂಗುರವಿತ್ತ
[ವೀರ] ಹನುಮಗೆ ೩೨

ಮಣಿಯಗ್ರಹಿಸಿ ವನವಭಂಗಿಸಿ ಕೊಂದುಅಕ್ಷನ ಸಿಕ್ಕಿಅಸ್ತ್ರದಿ ದುರುಳ ರಾ
ವಣನ ನಿಂದಿಸಿ ಪುರವಸುಟ್ಟಾ ವೀರಹನುಮಗೆ ೩೩

ಸೀತೆಯೊಡನೆ ಗುರುತಕೇಳಿ ಸಮುದ್ರತೀರಕೆ ಬಂದು ಬೇಗನೆ ಜಾಂಬ
ವಂತ ಅಂಗದರ ಕೂಡಿ ಮಧುವನವ ಭಂಗಿಸಿದ ಹನುಮಗೆ ೩೪

ಕಂಡೆ ಲೋಕಮಾತೆಯನನ್ನೆನ್ನುತ ಬಂದು ಮುದದಿ ವಂದಿಸಿ ಇತ್ತ
ಚೂಡಾಮಣಿಯಲ್ಲಿ ಸೀತೆನ ನೆನದು ತಾಪದಿ
ಹನುಮನನಾಲಿಂಗಿಸಿದವಗೆ ೩೫

[ಯೋಜಿಸಿ] ಶುಭಲಗ್ನ ಶುಭವಾರ[ಲಂಕೆಗೆ] ರವಿಜ ಕಪಿಗಳ ಸಹಿತ
ಪೊರಟು ಆಂಜನೇಯನನೇರಿ ಹರುಷದಿ ಸಮುದ್ರತೀರಕೆ
ಬಂದ ರಾಮಗೆ ೩೬

[ಭಕ್ತ] ವಿಭೀಷಣಗೆ ಅಭಯವನಿತ್ತು ಶರಧಿಗೆ ಸೇತುವೆಯನ್ನು ಬಂಧಿಸಿ
ಮುತ್ತಿ ಲಂಕಾಪುರವ ಸಂಧಿಗೆ ಅಂಗದನ ಕಳುಹಿಸಿದ ರಾಮಗೆ ೩೭

ಇಂದ್ರ[ಜಿತ್ತು]ವೊಡನೆ ಕಾದಿ ಸರ್ಪಾಸ್ತ್ರದಿಂದ ಬಿಡಿಸಿಕೊಂಡು
[ಆ]ದುರುಳ ರಾವಣನ ನಡುಗಿಸಿ ಕಿರೀಟವನು
ಭಂಗಿಸಿದ ರಾಮಗೆ ೩೮

ಕುಂಭಕರ್ಣನೊಡನೆ ಕಾದಿ ರವಿಜ ಕಿವಿಮೂಗನ್ನು ಕಡಿಯಲಾ
ಕುಂಭಕರ್ಣನ ತುಂಡುತುಂಡಾಗಿ ಕೊಂದುಕೆಡಹಿದ ರಾಮಚಂದ್ರಗೆ ೩೯

ಕೊಂದು ವಜ್ರದಂಷ್ಟ್ರ ಆಕಂಪ ದೇವಾಂತಕ ನರಾಂತಕರನ್ನು ಮ
ಹೋದರ ಮಹಾಪಾರ್ಶ್ವ ಅತಿಕಾಯ ತ್ರಿಶಿರಸ್ಸನ್ನು ಕೊಂದ ರಾಮಗೆ ೪೦

ಮಾಯೆಯುದ್ಧದಿ ಮೇಘನಾಥನು [ಅನುಜನ] ಬ್ರಹ್ಮಾಸ್ತ್ರದಲಿ ಕಟ್ಟಲು
ವಾಯುನಂದನನಿಂದ ಸಂಜೀವನವ ತರಿಸಿದ ರಾಮಚಂದ್ರಗೆ ೪೧

ಮಾಯಾಸೀತೆಯ ಶಿರವನರಿಯಲು ವಿಭೀಷಣನ ಉ
ಪಾಯದಿಂದ ಇಂದ್ರಜಿತ್ತು ಶಿರವಕಡಿದ ತಮ್ಮನಾಲಂಗಿಸಿದ ರಾಮಗೆ ೪೨

ಮೂಲಬಲವನು ಕಡಿದು ರಾವಣನೊಡನೆ ಯುದ್ಧವ ಯೋಚಿಸೆ
ಕೇಳಿ ಮಾತಲಿಯ ವಾಕ್ಯವನು ಬ್ರಹ್ಮಾಸ್ತ್ರದಿಂ [ಂದವನತಲೆ]
ಕಡಿದ ರಾಮಗೆ ೪೩

ರಾವಣಾನೆಂಬ ಗಂಧಹಸ್ತಿಯ ರಾಮಕೇಸರಿ ಬಂದು ಮುರಿಯಲು
ಪೂ[ವ] ಮಳೆಯನು ಸುರರು ಕರೆಯಲು
ಶಿರದಿ ಧರಿಸಿದ ರಾಮಚಂದ್ರಗೆ ೪೪

ವಿಭೀಷಣಗೆ ಪಟ್ಟವನು ಕಟ್ಟಿ ಸೀತೆಯೊಡನೆ ಪ್ರತಿಜ್ಞೆ ಮಾಡಿ
ರೆ ಬ್ರಹ್ಮರುದ್ರಾದಿಗಳು ಸ್ತುತಿಸಲು ತಂದೆಗೆರಗಿದ ರಾಮಚಂದ್ರಗೆ ೪೫

ಸೀತೆಯಂಕದೊಳಿಟ್ಟು ಕಪಿಗಳಸಹಿತ ಪುಷ್ಪಕವೇರಿ ಭರದಿ [ಬ
ರುತ್ತ] ಭಾರದ್ವಾಜರಿಗೆರಗಿ ಭರತನ ಮನ್ನಿಸಿದ ರಾಮಗೆ ೪೬

ಕೈಕೆಸುತ ಕೈಮುಗಿದು ಕಿಶೋರ ಭಾರವ ತಾಳಲಾಗದೆಂದಾ ಳುತ
[ಲಾ]ಯಿತ್ತ ರಾಜ್ಯವನ್ನು ಕೊಡಲು ಗ್ರಹಿಸಿದ ರಾಮಚಂದ್ರಗೆ ೪೭

ಉಟ್ಟ ಮಡಿಯ ಜಟೆಯನುತಾ ಶೋಧಿಸೆ ಸೀತೆ ಸಕಲಾಭರಣ
ತೊಟ್ಟು ಸುಗ್ರೀವ ಸಕಲರೊಡನೆ ರಥವನೇರಿದ ರಾಮಚಂದ್ರಗೆ ೪೮

ಸರಮೆಪತಿ ಸೌಮಿತ್ರಿ ಚಾಮರ ಪಿಡಿಯೆ ಶತ್ರುಘ್ನ ಛತ್ರಿಯನು
ಭರತ ಸಾರಥ್ಯವನು ಮಾಡಲು ಪುರಕೆತೆರಳಿದ ರಾಮಚಂದ್ರಗೆ ೪೯

ರಾಜಗೃಹವನು ತೋರಿ ರವಿಜಗೆ ಶರಧಿಯುದಕಗಳೆಲ್ಲ ತರಿಸಿ [ವಿ
ರಾಜಿಸಿ] ಪೀಠದಿ ಸೀತೆಯೊಡನೆ ವೊಪ್ಪಿದಾ ರಘುರಾಮಚಂದ್ರಗೆ ೫೦

ವಸಿಷ್ಠ ಮೊದಲಾದ ಸಪ್ತ ಋಷಿಗಳು ಲಕ್ಷ್ಮೀಪತಿಗಭಿಷೇಕ ಮಾಡಲು
[ವಿಶಿಷ್ಟ] ಕಿರೀಟವನು ಧರಿಸಿದ ಪಟ್ಟಾಭಿಮೂರುತಿ
ರಾಮಚಂದ್ರಗೆ ೫೧

ವಾಮಭಾಗದಿ ಸೀತೆ ಭರತ ಶತ್ರುಘ್ನ ದಕ್ಷಿಣದಲ್ಲಿ ಲಕ್ಷ್ಮಣ ವಾಯುನಂದನ
[ಕೈ ಮುಗಿದು] ಹರುಷದಿಂದಲೆ ಪಾದ ಪಿಡಿದಿಹ ರಾಮಚಂದ್ರಗೆ ೫೨

ಸುಗ್ರೀವ ಅಂಗದ ಜಾಂಬವಾದಿಗಳು ವಿಭೀಷಣನು ನಳ ನೀಲ
ಮುಖ್ಯರು [ಹಿಗ್ಗುತ] ಸುರರು ಭೂಸುರರೆಲ್ಲ ಲಾಜಾಕ್ಷತೆಯ
ತಳಿದರು ರಾಮಚಂದ್ರಗೆ ೫೩

ರವಿಜಗೆ ಹಾರ ಅಂಗದಗೆ ಬಾಪುರಿ ದೇವಮಾಲಿಕೆಯಿತ್ತು ಹನುಮಗೆ
[ಸುವಿಭೀಷಣಗೆ] ರಂಗನಾಥನ ಇತ್ತು ಕಳುಹಿದ
ರಾಮಚಂದ್ರಗೆ ೫೪

ಧರೆಯ ಧರ್ಮದಿ ಪೊರೆದು ಪ್ರಜೆಗಳ ಪುತ್ರರಂದದಿ ಪಾಲಿಸುತ
[ವರ] ಅಶ್ವಮೇಧವ ರಚಿಸಿ ಶೇಷಾದ್ರಿಯಲಿ ನೆಲಸಿದ
ರಾಮಚಂದ್ರಗೆ ೫೫

೧

ಆರತಿ ಬೆಳಗುವೆ ಕೂಟದಲಿ ಮಂಗಳಾರತಿ
ನೋಡುವೆ ನೋಟದಲಿ
ಧೀರ ಶ್ರೀಗುರು ಮಹಾ ತಾರಕ ಬ್ರಹ್ಮನ ಆರತಿ
ನೋಡುವೆ ನೋಟದಲಿ ಪ

ಗಂಗೆ ಯಮುನೆಗಳ ಸಂಗಮದೀ ಮಿಂದು
ಅಂಗ ಸಂಗ ರಹಿತಾಂಗನದೇ
ಮಂಗಳಾಂಗ ದಿವ್ಯಾಂಗಪೂಜೆಯ ಮಾಡಿ
ರಂಗ ಮಂಟಪ ಪಾಂಡುರಂಗನಿಗೆ ೧

ಈಡೆ ಪಿಂಗಳೆಗಳ ಜೋಡುಗೂಡಿ
ಮೂಡು ರವಿಶಶಿ ಸೂಡಿ ಮಧ್ಯಿರುವಾಗ್ನಿ
ಗೂಡಿನೋಳಾಡುವಜೀವನ ವಿಚಾರೋನ್ಮೂರ್ತಿಗೆ ೨

ಹೃದಯದಿ ಬೆರಿತು ಹಂಸನ ಭರದಿ
ತಿರುಗಿತಲೆರಡೊಂದೊಂಕಾರದಿ
ಎರಕವಾಗಿ ಸಸ್ವರದಿ ಮನ
ಪರಮ ಪುರುಷ ದಿವ್ಯಾಂಗನಿಗೆ ೩

ಒಳಹೊರಗೊಂದಾಗಿ ದೇವಾ
ಸುಲಭದಿ ಭಕ್ತರ ಸುಖವೀವಾ
ಥಳಥಳ ಹೊಳೆಯುವ ಕಳೆಯೊಳು
ಬೆಳಗುವ ನಲಿನಲಿದಾಡಿ ೪

ಆರು ಚಕ್ರಗಳ ಮೀರಿ ಮುಂದಣ ಸಣ್ಣ
ದಾರಿಹಿಡಿದು ಹಿಂದಕೆ ನಡೆದು

ತೋರುವ ಪರಿಪೂರ್ಣ ತಾರಕ ಬ್ರಹ್ಮನ
ಸೇರಿ ನಿರ್ಭಯಲಾ ಚಿದ್ರೂಪಗೆ ೫

ಅಂತರ್ಯಾಮಿ ಪೂರ್ಣಾಂತರದಿ
ನಿಶ್ಚಿಂತ ಮೂರ್ತಿ ಹೃದಯಾಂತರದಿ
ಸಂತ ಸಾಧು ನಿಜ ಶಾಂತಿ ಪಾಲಿಪ ಗುರು
ಚಿಂತೆರಹಿತ ನಿಶ್ಚಿಂತದಲಿ ೬

೨

ಆಶೆಯ ಬಿಡಿಸಿದ್ಯೋ ಎನ್ನಾ ಮುಂದೆ
ವಾಸವಾಗದಂತೆ ಕಾಯೋ ಮೋಹನ್ನಾ
ವಾಸುದೇವನೆ ನಿನ್ನ ಸ್ಮರಣೆಯೊಳಗೆ ಮನ
ಸೂಸದಂತೆ ಸ್ಥಿರ ನಿಜದಲ್ಲಿ ನಿಲಿಸಯ್ಯಾ ಪ

ನಂಬಿದವರ ಕಾಯುತ್ತಿರುವಾ ಅವರ
ಬೆಂಬಿಡದೆಲೆ ನಿಜದರಿವನ್ನು ಕೊಡುವಾ
ಕುಂಭಿಣಿಯೊಳಗೆಲ್ಲಾ ನೀನಲ್ಲದೆ ಎನ್ನಾ
ನಂಬಿಗೆ ಕೊಡುವವರ್ಯಾರೋ ನಾರಾಯಣಾ ೧

ಬೆಂದೆನು ನಾ ಭವದೊಳಗೆ ಎನ್ನಾ
ತಂದೆ ನೀ ಕಾಯೋ ನಿಜಪದದೊಳಗೆ
ಹಿಂದಿನ ಪ್ರಾರಬ್ಧ ಬವಣೆಯ ತೀರಿಸಿ
ಮುಂದೆ ನೀ ಸಲಹೊ ಪರಮಪುರುಷನೆ ಹರಿ ೨

ವಾಸನೆ ಬಂಧವೇ ಜೀವಾ ನಿ
ರ್ವಾಸನೆಯನು ಕೊಟ್ಟು ಸಲಹೊ ಮಾಧವಾ
ಶೇಷಶಯನನೆ ನಿಜ ಧ್ಯಾನದೊಳಿರಿಸೆನ್ನಾ
ಆಶೆಯನು ಸಲಿಸಯ್ಯಾ ಮುರಾರಿ ೩

ಅನಂತ ಮಹಿಮಾ ಮೇಘಶ್ಯಾಮಾ
ನಿಶ್ಚಿಂತ ನಿಜ ಶಾಂತಿ ಸ್ವಸುಖವೀವಾ
ನಂತಪರಾಧವ ಕ್ಷಮಿಸೆನ್ನಾ ಗುರುವೇ ೪

೩

ಇಂದಿರೇಶಾನಂದ ಕಂದನೇ
ಮಂದರಧರ ಗೋವಿಂದ ಗೋಪತಿಯೇ ಪ

ಮುದ್ದು ಮೋಹನ ಕೃಷ್ಣಾ
ಸಿದ್ಧನಾಗಿಹೆ ನೀ
ಇದ್ದು ನೀ ಇಲ್ಲದಂತೆನ್ನಾ
ಬುದ್ಧಿವಂತನೆ ನೀನು ಕದ್ದು ಪೋಗುವೆಯೊ ೧

ಮರೆತು ನಾಬಿಟ್ಟೆನು
ಧರೆಯೊಳು ನಿನಗೆ
ಪರಮ ಪುರುಷ ಹರಿಯೇ
ಚರಾಚರವ ತುಂಬಿ ಭರಿತನಾಗಿರುವಿ ೨

ಎಡೆಬಿಡದೀಗಲೆ
ಮೃಡಸಭಾ ನಿನಗೆ
ತಡಮಾಡದೆ ಪಿಡಿದು
ಧೃಢದಿಂ ಕಟ್ಟುವೆ ಕಡಲೊಡೆಯನೇ ೩

ವಾಸುದೇವನೇ ಜಗ
ದೀಶ ಗೋಪಾಲಾ
ಈಶ ಶಾಂತಿಯ ಪಾಲಿಪಾ
ಶೇಷ ಶಯನನೆ ಸರ್ವೇಶಾ ಶ್ರೀ ಗುರುವೇ ೪

೪

ಕಂಗಳಿದ್ಯಾತಕೋ ಚಿನುಮಯ ರಂಗನ ನೋಡದಾ
ಕಂಗಳೊಳಗೆ ಮಂಗಳ ಮೂರುತಿ
ಸಂಗರಹಿತಾತ್ಮನ ನೋಡದಾ ಪ

ಶರೀರವೇ ತಾನೆಂದು ನಂಬಿ ಮರೆದು ನಿಜಾನಂದವನ್ನು
ಬೆರದು ವಿಷಯಾದಿಗಳಲ್ಲಿ ಹರಿದು
ದೃಷ್ಯಂಗಳನ್ನು ನೋಡುವಾ ೧

ತಾನಿದ್ಯಾರು ತನಗೆ ತೋರ್ಪ ತನುವಿದೇನೆಂದರಿವುತಿರ್ಪ
ಜ್ಞಾನದೃಷ್ಟಿಯಿಲ್ಲದಂಥ ಆನನಂಗಳನು ನೋಡುವ ೨

ಹಂಸ ತಾನಾಗಿ ಚರಿಪ ಹಂಸನ ಪ್ರಕಾಶವನ್ನು
ಶುಂಶುಮಾರದಿ ಬೆಳಗುತಿರ್ಪಭ್ರಂಶಿತಾಂ ತನ್ನ ನೋಡದಾ ೩

ಸಂತಸಾಧು ಚರಣಕ್ಕೆರಗಿ ಚಿಂತೆಗಳನು ಹರಿದು ಭರದಿ
ಶಾಂತಿ ಸುಖವನಿತ್ತ ಗುರು ಶಾಂತಮೂರುತಿ ನೋಡಲಾರದ ೪

೫

ದೇವಾ ನಿನ್ನ ಚರಣವನ್ನು ಮರೆಯಲಾರೆನು
ಮರೆಯದಂತೆ ಕರುಣದಿ ಎನ್ನಾ ಸ್ಮರಣೆಯೊಳಿಡು ನೀನು ಪ

ಪಂಕಜಾಂಬಕಿ ಲಕ್ಷ್ಮೀರಮಣಾ ರಂಗ ರಕ್ಷಕಾ
ಶಂಕಾನಾಶ ಸರ್ವಾಧಾರ ಶಂಕರಸಖಾ
ಶಂಖ ಚಕ್ರಗಳ ಕರದೊಳ್ ಪಿಡಿದ ಪಂಕಜನೇತ್ರನೇ ೧

ತನ್ನವರಿಂತೆಂದೆನಿಸಿ ಕೊಂಡು ಅನ್ಯರ ಭಜಿಪುದು
ನಿನ್ನ ಮತವೇ ದೇವಾ ನಾನು ಬನ್ನ ಬಡುವುದು
ಮುನ್ನ ಎನ್ನನು ಪೊರೆವರ್‍ಯಾರೊ ಪನ್ನಗಶಯನನೇ ೨

ಅಂತು ಇಂತೆನಲೊಲ್ಲೆ ದೇವಾ ಅನಂತ ಮಹಿಮೆಯಾ
ಸಂತಸಾಧು ಸಾಧ್ಯನಾಗಿಹ ಅಂತರಾತ್ಮನಾ
ಚಿಂತೆ ಭ್ರಾಂತಿಗಳ ತೊರೆದು ಗುರುವರ ಶಾಂತಿ ಪಾಲಿಪನೇ ೩

೬

ದೇವಾ ನಿನ್ನ ಪಾದವನ್ನು ಯಾವಾಗಲೂ ಸ್ಮರಿಸುವೆನೂ
ಭಾವ ಭಕ್ತಿ ಪ್ರೇಮವಿತ್ತು ಕಾವುವೆನ್ನ ಹರಿಯೇ ನೀನು ಪ

ದೀನನಾಥನೆಂಬ ಬಿರುದಾ ಮಾನಭಕ್ತರಿಂದ ಪೊರೆದಾ
ಹೀನ ದೀನನಾದ ಎನ್ನಾ ಜ್ಞಾನವಿತ್ತು ರಕ್ಷಿಪುದು ೧

ಇಂದಿರೇಶ ನಾರಾಯಣಾ ಬೃಂದದಿಂದಾ ಭಜಿಪೆ ನಿನ್ನಾ
ಮಂದಮತಿಯ ಕಳೆದು ನಿಜಾನಂದದೊಳಗಿರಿಸೊ ಯನ್ನಾ ೨

ಬೇಡಿಕೊಂಬೆನೀಗ ನಿನ್ನಾ ನೋಡುವುದು ಕೃಪೆಯೊಳೆನ್ನಾ]
ಬಿಡಬ್ಯಾಡಾ ಬ್ಯಾರೆನಗೆ ಇಡೊ ಇಡೊ ನಿನ್ನೊಳೆನ್ನಾ ೩

ಚಿಂತೆಗಳನ್ನೆಲ್ಲಾ ತೊರಿಸೊ ಸಂತ ಸಂಗದೊಳಿರಿಸೊ
ಕಂತುಪಿತನೆ ಗುರುವೆ ಎನ್ನಾ ಶಾಂತಿ ಪದವ ಪಾಲಿಸೊ ೪

೭

ದೇವಾ ನಿನ್ನಯ ಪಾದ ಸೇವೆಯೊಳಿರುವಂತೆ
ಕಾವುದೆನ್ನಯ ಮನ ಪಾವನ ಮೂರುತಿ ಹರಿಯೇ ಪ

ಒಲವಿನ ಸಂಸಾರ ಸ್ಥಿರವೆಂದು ನಂಬುತ್ತ
ಬರಿದೆ ಪೋಗದೆ ನಿಜದರಿವಿನೋಳ್ ನಿಲಿಸೆನ್ನಾ ಹರಿಯೇ ೧

ಎಂದು ಕುಂದದ ನಿತ್ಯಾನಂದವಾಗಿಹ ನಿಜ
ಛಂದದೊಳಿರುವತ್ಯಾನಂದದೊಳ್ ನಿಲಿಸೆನ್ನಾ ಹರಿಯೇ ೨

ಶರಣರಕ್ಷಕ ನಿನ್ನ ಕರುಣವೆನ್ನಯ ಮೇಲೆ
ಮರೆಯವೆ ಇರುವಂತೆ ಎರಕವಾಗಿಸೆನ್ನಾ ಹರಿಯೇ ೩

ಆ ಸ್ವಪ್ರಕಾಶದಿ ಸೂಸದೆ ನಿಲುವಂತೆ
ಭಾಸುರ ಘನಸುಖವಾಸದೊಳ್ ನಿಲಿಸೆನ್ನಾ ಹರಿಯೇ ೪

ಭಾವಭಾವನೆಯಲ್ಲಿ ಶೀವಿ ನಾರಾಯಣಾ
ಪಾವನ ಗುರುಮೂರ್ತಿ ಸೇವೆ ಶಾಂತಿಯನೀಯೋ ಹರಿಯೇ ೫

## ೮

ದೇವಾ ಪಾಲಿಸೋ ಎನ್ನಾ ನಿಜ ಭಾವದಿ ರಕ್ಷಿಸೆನ್ನಾ
ದೇವಾ ಪದಸೇವಾ ಸುಖವೀವಾ ನಿಜಭಾವದಿ
ಕಾವುದೆನ್ನನು ನೀನೂ ಪ

ಗಜರಾಜ ಪಶುವಾ ಹಿಂದೆ ಭಜಿಪಾಗ ತಾ ನೀನೇ ಕಾಯ್ದೆ
ಸುಜನ ಮನವಿ ಹರಿಭಜನೆಯೊಳ್ ಗಜನೀಗೆ
ನಿಜದಾಪದವ ತೋರಿದೇ ೧

ಮಂದವಾಗಿಹೇ ನಾನು ನಿಜಾನಂದದೊಳ್ ಇಡೋ ನೀನು
ದ್ವಂದ್ವ ನಿರ್ದ್ವಂದ್ವ ಸ್ವಾನಂದ ಆನಂಧದಿ
ಛಂದದೀ ಸಲಹೊ ನೀನು ೨

ಚಿಂತೆಗಳೆಲ್ಲ ತೊರಿಸೊ ನಿಶ್ಚಿಂತ ಪದದೊಳ್ ಪಾಲಿಸೊ
ಶಾಂತ ವಿಶ್ರಾಂತ ಮಹಂತ ಅನಂತನೇ
ಶಾಂತಿ ಪದದೊಳ್ ಇರಿಸೊ ೩

## ೯

ನಾರಾಯಣ ನರಹರಿ ಪರಬ್ರಹ್ಮನಿರ್ವಿಕಾರಿ ಪ

ದ್ರುಕ್ ದೃಶ್ಯ ಮಧ್ಯದಲ್ಲಿ ಚೊಕ್ಕಟ್ಟಾಗಿರುವನಲ್ಲಿ
ಪ್ರಕಟವಾಗಿ ತ್ರಿಕೂಟ ನಿಜ ಸ್ಥಾನದಲ್ಲಿ ತೋರುವನಲ್ಲಿ ೧

ಏನೊಂದು ತಿಳಿಯದದನೆ ತಾನೆಂದು ತಿಳಿಯಲವನೆ
ಧ್ಯಾನದರುವಿನಲ್ಲಿ ಮನ ತಾನೆ ಚಿನ್ಮೂರ್ತಿ ಘನ ೨

ತನುವಿನೊಳ ಹೊರಗಿರ್ಪ ತನ್ನ ತಾನೆ ಕಾಣುತಿರ್ಪ
ಚಿನುಮಯಾತ್ಮ ಪರಂಜ್ಯೋತಿ ಘನಪರಾತ್ಪರ ಮೂರ್ತಿ ೩

ಅಂತರಾತ್ಮ ಗುರು ಪೂರ್ಣನಂತ ಮಹಿಮ ನಾರಾಯಣ
ಸಂತ ಸಾಧು ಸಾಧ್ಯ ಜ್ಞಾನ ಶಾಂತಿ ಪಾಲಿಪ ಘನ ೪

## ೧೦

ನಾರಾಯಣ ನಿನ್ನ ಸ್ಮರಣೆಯಲಿ ಮನ
ಬೇರು ವೂರಿರುವಂತೆ ಕಾರುಣ್ಯದಲಿ ಕಾಯೊ ಪ

ವೇದನಾಲ್ಕರ ಕದ್ದಂಥಾ ದೈತ್ಯನ ಕೊಲ್ಲಾ
ಶದಿ ಮತ್ಸ್ಯಾವತಾರ ಧರಿಸಿದೆ ಹರಿಯೇ ೧

ದೇವದಾನವರ ಮಥನದಿ ಮಂದರ ಪೊತ್ತೆ
ಭಾವಕಿಯಳ ಮೋಹಿಸಿ ಮೋಹಿನಿಯಾದೆ ೨

ವರಹರೂಪದಿ ಪೋಗಿ ಧರೆಯನು ಧರಿಸಿದೆ
ದುರುಳ ಹಿರಣ್ಯಕನ ಕರದಿಂದ ಸೀಳಿದೆ ೩

ಕಂದನ ನುಡಿಕೇಳಿ ಕಂಬದಿಂದುದಿಸಿದೆ
ತಂದೆಯ ಬಗೆದವನಾ ಛಂದದಿ ಸಲಹಿದೆ ೪

ಬಲಿಯ ದಾನವ ಬೇಡಿ ನೆಲನ ಈರಡಿ ಮಾಡಿ
ತುಳಿದು ಆತನ ಮನೆ ಬಾಗಿಲ ಕಾಯ್ದೆಯೊ ೫

ತಾತನ ಮಾತನು ಕೇಳಿ ಮಾತೆಯ ಕೊಂದೆ
ಖ್ಯಾತಿಯಿಂದಲಿ ಕ್ಷತ್ರಿಯರನು ಸಂಹರಿಸಿದೆ ೬

ಮಾತೆಯ ವರ ಕೇಳಿ ನೀತಿಯಿಂದಲಿ ಪೋದೆ
ಸೇತುವೆ ಕಟ್ಟಿ ನೀಖ್ಯಾತರಾವಣನಕೊಂದೆ ೭

ಪುಟ್ಟ ಶಿಶುವಾಗಿ ಗೋಪಿಗೆ ಮುದ್ದು ತೋರಿದೆ
ಬೊಟ್ಟಿಲಿ ಗಿರಿಯನು ನೆಗಹಿದೆ ಶ್ರೀ ಕೃಷ್ಣಾ ೮

ತ್ರಿಪುರರ ಸತಿಯರ ವ್ರತವಗೆಡಿಸುವಂಥಾ
ಅಪರಿಮಿತದಿ ಮೋಹಿಸುವಾ ಮೂರ್ತಿಯಾದೆ ೯

ಭಕ್ತವತ್ಸಲ ದೇವಾ ಯುಕ್ತಿಯಿಂದಲಿ ಕಾಯ್ವ
ವ್ಯಕ್ತಿ ಕಲ್ಕ್ಯಾವತಾರ ಧರಿಸಿದ ಹರಿಯೇ ೧೦

ಶಬ್ದವ ನುಡಿಸುವ ಅಬ್ದಿನಿನ್ನದೊ ದೇವಾ
ಶಬ್ದವಾಲಿಸದ ನಿಶ್ಯಬ್ದದೊಳಿರಿಸೆನ್ನಾ ೧೧

ಅಂತರದೊಳಗೆನ್ನಾ ಕಂತುನಾರಾಯಣಾ
ಸಂತಸದೊಳು ನಿಜ ಶಾಂತಿ ಪಾಲಿಪ ಗುರು ೧೨

## ೧೧

ನಾರಾಯಣಾ ಕರುಣಾ ಘನಚರಣಕ್ಕೆರಗುವೇ
ಸ್ಮರಣೆಯೊಳಗೆ ಮನ ಒಲಿಯಿಸಿ ಪ್ರೇರಣೆ ಮಾಡುವಾ ಪ

ನನ್ನ ನಿಜವನರಿಯದೆ ನಾ
ಅನ್ಯ ಯೋನಿಯೊಳಗೆ ತಿರುಗಿ

ಬನ್ನ ಬಡುವುದನ್ನು ತಿಳಿದು
ನಿನ್ನ ಬಿಡೆನೆನ್ನೆ ೧

ಭಾವಭಕ್ತಿಯಿಂದ ಪಿಡಿದು
ನೋಯದಂತರದೊಳಗಿಳಿದು
ಸಾವಧಾನದಿ ಸೇವೆಮಾಳ್ಪೆ
ಭಾವ ಬಲಿದು ನಾ ೨

ಎಲ್ಲಿಯೂ ಪರಿಪೂರ್ಣ ನೀನೆ
ಸೊಲ್ಪಗೊಡಲಶಕ್ಯ ನಾನೈ
ಬಲ್ಲಿದವರಿಂದೆಲ್ಲಾ ಅರಿಶ
ಫುಲ್ಲನಾಭನೇ ೩

ನಾದದ ಮೊದಲಿನ ಮೂಲದಿ
ಭೇದಭಾವವೆಲ್ಲ ಅಳಿದು
ಆದಿಶಾಂತಿ ಸುಖವನೀವ
ನಾದಿ ಶ್ರೀಗುರು ೪

## ೧೨

ನಿನ್ನ ಹೊರತು ಅನ್ಯರನರಿಯೆನೂ ಶ್ರೀ ವಾಸುದೇವಾ
ನಿನ್ನ ಹೊರತು ಅನ್ಯನರಿಯೆನೂ
ನಿನ್ನ ಹೊರತು ಅನ್ಯರರಿಯೆ ಪನ್ನಗೇಂದ್ರವಾಸ ಹರಿಯೆ
ಸನ್ನುತಾತ್ಮ ನಿಜವನಿತ್ತು ಪ್ರಸನ್ನ ಗುರುವರೇಂದ್ರ ದೇವಾ ಪ

ಉರಗನ್ಹೆಡೆಯ ನೆರಳ ಸ್ಥಿರವೆಂದು ಕಪ್ಪೆಯು ನಿಂತ
ತೆರದಿ ವಿಷಯದೊಳಗೆ ಬೆರದು ಬೆಂದೆನು ನಾ
ದುರಿತ ದುಷ್ಟಗಣದಿ ಹರಿದೂ ಮೃತ್ಯುವನೆ ಮರೆದು
ಅರಿವು ಮಾಯವಾಗಿರುವ ಎನ್ನಾ ಸ್ತರದ ಆತ್ಮಪ್ರಭೆಯ ಮರೆತು
ಇರುವ ಎನ್ನ ಮೇಲೆ ನಿನ್ನ ಕರುಣವಿಟ್ಟು ಕಾಯ್ದು ದೇವಾ ೧

ತತ್ವವಿಂಶತಿ ನಾಲ್ಕು ಕೂಡಿದಾ ಈ ದೇಹದಲಿ ಏ
ಕತ್ವವಾಗಿ ಇದನೆ ನಂಬುತಾ ಮುನ್ನರಿಯದಲೆ ವಿ
ಚಿತ್ರವಾಸ್ತುವನ್ನು ಮರೆತು ಸತ್ತು ಹುಟ್ಟಿತೊಳಲಿ ಬಳಲಿ
ಕತ್ತೆಯಂತೆಯಿರುವ ಎನ್ನಾ ನಿತ್ಯ ನಿಜದೊಳಿಟ್ಟ ದೇವಾ ೨

ಆದಿ ಮಧ್ಯ ಅಂತರಾಂತದಿ ತುಂಬಿರುವ ವಸ್ತು
ನಾದ ಬಿಂದು ಸ್ವಪ್ರಕಾಶದಿ ಹೃದಯದಲಿ ತೋರ್ಪ
ಭೇದಾತೀತ ನಿರ್ವಿಕಾರದಿ ಸುಬೋಧದಿ
ಆದರದಿ ಶಾಂತಿ ನಿಜದಾದಿ ಸುಖವನಿತ್ತ ಗುರು
ಪಾದಪದ್ಮ ನೆನೆದು ಪೂರ್ಣನಾದ ನಾರಾಯಣ ಪ್ರಭು ೩

## ೧೩

ನೆನೆವೇ ನಾ ನಿತ್ಯ ಚರಣ ಕಮಲವನ್ನು
ಕರುಣಾಕರ ಭವ ಹರಣ ನಾರಾಯಣ ಪ

ಕನಸಿನ ಸಂಸಾರ ನೆನಸದಂತೆ ಎನ್ನಾ
ಮನಸ್ಸು ಶ್ರೀಹರಿನಿಜ ಬರಿವಿನೊಳ್ ನಿಲಿಸಯ್ಯಾ ೧

ಮಂದ ಬುದ್ಧಿಲಿ ನಿಜಾನಂದವನರಿಯದೇ
ಬಂಧನೆಗೊಳಗಾದೆ ತಂದೆ ನೀ ರಕ್ಷಿಸೊ ೨

ದುರಿತಗಳೆಲ್ಲವ ಹರಣಗೊಳಿಸಿ ನಿಜ
ಸ್ಮರಣೆಯೊಳಿರುವಂತೆ ಕರುಣದಿ ನೋಡೆನ್ನಾ ೩

ಶಬರಿಯ ಕಾಯ್ದೆಯಾ ಬದರಿಯ ಫಲವುಂಡು
ವಿಭು ಪರಮಾನಂದಾ ಪ್ರಭೆಯೊಳಗಿರಿಸೆನ್ನಾ ೪

ನೆನೆವರ ಮನದಾ ಕೊನೆಯಲಿ ಮಿನುಗುವ
ಸನಕಸನಂದನ ವಂದಿತನೀದೇವಾ ೫

ವಾಸುದೇವನೇ ನಿನ್ನ ದಾಸಿ ಶಾಂತಿಘನ
ವಾಸ ಸ್ವಸುಖವೀವ ಕೇಶವಾಶ್ರಮಗುರು ೬

೧೪

ಪಾಲಯಮಾಂ ಶ್ರೀ ರಾಮಾ ಮೂಲ ಸುಗುಣ ಶೀಲನೆ ಪ

ನೀಳ್ಗರೆವ ಹೃದಯನಿವಾಸಾ ಕಾಲಾಂತಕ ಕರ್ಮನಾಶಾ
ಜಾಳಿಕ ಚಿನ್ಮಯ ಸುರೇಶ ಹರೀ ಲೋಲಗುಣಾತೀತನೆ ೧

ಚಂಡಕಿರಣ ಕುಲಜರಾಘವಾ ಸುಂದರಶ್ರೀ ಸೀತಾಧವಾ
ಛಂಧ ನಿಜಾನಂದ ವೀಯುವಾ ಬಂದಭಯನಿವಾರನೇ ನೀ ೨

ದಶಮುಖರಾವಣ ನಿವಾರಣಾ ಅಸುರಾಸುರ ನಿಕ್ರಂದ ನಾ
ಕುಶಲ ವಿಭೀಷಣ ಪಾಲಯಸ್ವಾಮೀ
ಋಷಿಯಾಗವ ಕಾಯ್ದ ದೇವಾ ೩

ಅಂಬುಜಾಕ್ಷಾನಂತರೂಪಾ ತುಂಬಿಹ ಸದ್ಗುರು ಸ್ವರೂಪಾ
ನಂಬಿದ ಭಕ್ತರನೆ ಪಾಲಿಪಾ ಚಿದಂಬರ ಶಾಂತಿದಾಯಕಾ ೪

೧೫

ಬಿಡಬ್ಯಾಡೆನಗೆ ಹರಿಯೇ ತಡಮಾಡಲ್ಯಾಕೆ ದೊರೆಯೇ
ದಯಮಾಡಿ ಪೊರೆಯೋ ಇಂದು ಭಯ
ನಿವಾರನೇ ನೀ ಬಂದು ಪ

ಗಜರಾಜ ಪಶುವ ಹಿಂದೆ ಭಜಿಪಾಗ ನೀನೆ ಬಂದೆ
ನಿಜವಾಗಿ ನಕ್ರನೊದೆದು ಸುಜನನಾಥ ನೀ ಕರೆದೊಯ್ದು ೧

ಪಾಂಚಾಳಿ ಸಭೆಯೊಳಂದು ವಂಚಕ ದುಶ್ಯಾಸನ ಬಂದು
ಮುಂಚಿತದಿ ಸೀರೆ ಎಳೆಯೆ ವಾಂಛಿತದಿ ಕಾಯ್ದ ಆ ಪರಿಯೇ ೨

ಅಂದಾಗಲೂ ಪುತ್ರನನು ಕರೆದಾಗಲಜಾಮಿಳನು ಭರ
ದಿಂದ ಕಾಯ್ದೆ ಅವನಾ ಮರದ್ಯಾತಕೀಗಲೆನ್ನಾ ೩

ಈ ಪರಿಯ ಕೀರ್ತಿ ಪಡದು ಕೋಪಿಸಲು ಬ್ಯಾಡ ಮರೆದು
ಶ್ರೀ ಪತಿಯೆ ಪದವನೀಯೋ ಉಪರಮೆ ಶಾಂತಿ ಕಾಯೋ ೪

## ೧೬

ರಾಮಾ ನಿನ್ನಯ ದಿವ್ಯ ನಾಮಾ ನೆನೆವೆನು
ರಾಮಾ ನಿನ್ನಯ ದಿವ್ಯ ನಾಮಾ
ಪ್ರೇಮವ ಕೊಟ್ಟೆನ್ನಾ ನೇಮದೊಳಿರಿಸೊ ನೀ ಕರುಣದಿ ಪ

ಚಿತ್ತ ಶುದ್ಧವ ಮಾಡಿ ಮತ್ತೆ ನಿನ್ನಯ ಪಾದ
ನಿತ್ಯದಿ ನೆನೆವಂತೆ ಭಕ್ತಿಯೊಳಿರಿಸೊ ನೀ ಎನ್ನನು ೧

ದಶರಥನುದರದಿ ಶಿಶುವಾಗಿ ಜನಿಸಿದೆ
ಹೊಸ ಆಭರಣವಿಟ್ಟು ಕುಶಲಮಾತೆಯನು ನೋಡುವ ೨

ಛಂದದಿಂದಲಿ ಆನಂದದೊಳಿಹ ರಾಮಾ
ಚಂದ್ರನ ಮೊಗ ಅತಿ ಸುಂದರವಾಗಿರುವವನೇ ೩

ಬಿಲ್ಲ ಬಾಣವಪಿಡಿದು ಎಲ್ಲಾ ದೈತ್ಯರ ಕೊಂದು
ಅಲ್ಲೇ ಕೌಶಿಕಯಾಗ ಎಲ್ಲ ಸಲಹಿದೆ ಧೀರನೇ ೪

ವಿಥುಳಾಪುರದಿ ಬಂದು ಅತುಳ ಧನುವ ಮುರಿದು
ಸತಿ ಸೀತಾ ಸಹಗೂಡಿ ಪಿತನಾ ಪಟ್ಟಣವನು ಸೇರಿದೆ ೫

ಮಾತೆಯ ವರ ಕೇಳಿ ನೀತಿಯಿಂದಲಿ ಅನು
ಜಾತನ ಒಡಗೂಡಿ ಖ್ಯಾತಿಯಿಂದಲಿ ಪೋದಂತಹ ೬

ಸರಯು ತೀರದಿ ಬಂದು ಪುರದ ಜನರ ಬಿಟ್ಟು
ಭರದಿ ನಾವೆಯನೇರಿ ತ್ವರಿತದಿಂ ದಾಟಿ ನೀ ಪೋದೆ ೭

ಭಕ್ತಿಯಿಂದಲಿ ಆ ಸಕ್ತ ಭರತನ ಕಂಡು
ಯುಕ್ತಿಯಿಂದಲಿ ತೇಜೋಯುಕ್ತಪಾದುಕವನು ಕೊಟ್ಟೆನೀ ೮

ಪುಸಿಯತಿಯಾಗಿ ಶೀತೆಯ ಅಸುರ ಕೊಂಡೊಯ್ದನೆಂದು
ವ್ಯಸನದಿಂದಲಿ ಪೋಗಿ ಪಕ್ಷಿಯುದ್ಧರಿಸಿದೆ ಘಮ್ಮನೆ ೯

ಶಾಂತಮೂರುತಿ ಹನುಮಂತರೆಲ್ಲರು ಕೂಡಿ
ಅಂತರದಲಿ ಸೇತು ನಿಂತು ನೋಡುವೆ ನೀ ಛಂದದಿ ೧೦

ಶರಣ ಬಂದ್ವಿಭೀಷಣನ ಕರುಣದಿಂದಲಿ ಕಾಯ್ದೆ
ಸ್ಥಿರದಾಪಟ್ಟವಗಟ್ಟಿ ಹರುಷದೋಳ್ ನಿಲಿಸಿದೆ ಅವನನು ೧೧

ವಾನರರೊಡಗೊಂಡು ಸೇನೆ ಸಹಿತಲೇ ದಶಾ
ನನ ರಾವಣನಕೊಂದು ಮಾನಿನೀ ಸಹಿತನೀ ಬಂದಿಹೆ ೧೨

ಪುಷ್ಪಕವನೆ ಏರಿ ಅಕಸ್ಮಾತದಲಿ ಬಂದು
ಆಕ್ಷಣದಲಿ ಭರತ ರಕ್ಷಣ ಮಾಡಿದ ದೇವನೇ ೧೩

ಪಟ್ಟಣದಲಿ ಮಾಹಾ ಪಟ್ಟವನೇರಿಸಿ
ಶಿಷ್ಟ ಅಯೋಧ್ಯೆಯ ಪಟ್ಟಣವಾಳಿದೆ ರಾಮನೆ ೧೪

ಬ್ರಹ್ಮಮೂರುತಿ ರಾಮಾಗಮನ ಚರಣದಿ
ಸುಮ್ಮಾನದಲಿ ಶಾಂತಿ ತನ್ಮಯಗೊಳಿಸಾನಂದದಿ ೧೫

## ೧೭

ಗೋಪಿ : ವೇಣುಗೋಪಾಲ ನಿನ್ನ ಜಾಣತನವ ಬಿಡು ಬಿಡು
ಕಾಣದರ್ಮನೆಯ ಸೇರಿ ತ್ರಾಣ ಬಲಹರಣವ
ಮಾಡುವೇಜಾಣ ಪ

ಕೃಷ್ಣ : ನೀರೆ ಗೋಪಿಯೆ ನಿನ್ನ ದ್ವಾರದೊಳಿರುವೆ
ತೋರದೆನ್ನನು ನೀನು ಭಾರಿ ಬಳಲಿರುವೆ ನೀರೆ ೧

ಗೋಪಿ : ಹತ್ತಿರದಲ್ಲಿದ್ದು ನೀನು ಇತ್ತೆನಗೆ ತೋರದಂತೆ
ಚಿತ್ತ ಬೋರ್ಗರೆಳುಕೃಷ್ಣ ಮತ್ತೆನಾ ಬಿಡುವೆನೆ
ನಿನ್ನನು "ವೇಣು ೨

ಕೃಷ್ಣ : ಅಕ್ಷಿಯೊಳಗೆ ನಿನ್ನ ಸಾಕ್ಷಿಯಾಗಿರುವೆ
ಈಕ್ಷಿಸಲರಿಯೆ ನೀ ಕುಕ್ಷಿ ತುಂಬಿರುನೆ । ನೀರೆ ೩

ಗೋಪಿ : ಆರು ಬಾಗಿಲು ನೀಗಿ ಜೋರಗಂಡಿಯೊಳ್ ಪೋಗಿ
ಏರಿ ಮೇಲಣ ತುದಿಯೋಳ್ ಸಾರಿ ಸಕಲಧ್ವನಿಗಳ
ಮಾಡುವೆ ॥ವೇಣು॥ ೪

ಕೃಷ್ಣ : ಮನುಮುನಿ ಜನರೆಲ್ಲಾ ವಿನಯದಿಂ ಪಿಡಿದು
ಘನಸುಖ ಪಡುವರು ಮನದೊಳಗರಿದು ॥ನೀರೆ॥ ೫

ಗೋಪಿ : ಆಗಮ ಸಂಚಿತ್ತ ಭೋಗ ಸಂಸಾರವನ್ನೆಲ್ಲಾ
ನೀಗಿಸುವೆ ನೀನವರಾ ಯೋಗೀ
ಜರೆನಿಸಿದೆಲ್ಲಾ ॥ವೇಣು ॥ ೬

ಕೃಷ್ಣ : ನಿಮಿಷ ಮಾತ್ರದಿ ಸುಖವ ಮನದೇಸ್ಮರಿಸಿ
ಅಮಮ ಘನಾನಂದ ರಮಿಸು ಸ್ವಸುಖವಿ ॥ನೀರೆ॥ ೭

ಗೋಪಿ : ಕಣ್ಣ ಸನ್ನೆಯ ಮಾಡಿ ಅನ್ಯರ್ಮನ್ಮನೆಗಳಲ್ಲೋಡಿ
ಬೆಣ್ಣೆ ಪಾಲುಮೊಸರು ಸುರಿದು ಬನ್ನಣೆ
ಮಾತುಗಳಾಡುವೆ ॥ವೇಣು ॥ ೮

ಕೃಷ್ಣ : ಧೊರೆಯಾಗಿರುವೆ ನಾನು ತಿರಿದುಣ್ಣಲರಿಯೆ
ಬೆರತು ಎನ್ನೊಳು ನೀನು
ಅರಿವಿನಿಂದರಿಯೆ ॥ ನೀರೆ॥ ೯

ಗೋಪಿ : ಕಂತು ಪಿತನೆ ನಿನ್ನ ಭ್ರಾಂತಿ ಹತ್ತಿತು ಎನಗೆ
ಸಂತಸದೊಳು ನಿಜ ಶಾಂತಿಪಾಲಿಪ
ಗುರುವರ ॥ವೇಣು ॥ ೧೦

## ೧೮

ವೈಕುಂಠವಾಸಿ ನಾರಾಯಣಗೆ ನೀಲಕಂಠ ವಿಶ್ವೇಶ್ವರಗೆ
ಬಾಲೆ ದ್ರೌಪದಿ ಅಭಿಮಾನವ ಕಾಯ್ದಗೆ
ಭಾಳಲೋಚನ ಭವಹಾರಕಗೆ
ಮಂಗಲಂ ಜಯ ಮಂಗಲಂ ಪ

ವಾಸುಕಿ ಫಣಿವರ ಭೂಷಿತಗೆ ಶೇಷ ಪರೀಯಂಕ ವಾಸನಿಗೆ
ಭಾಸ ಸರ್ವಾಂತರ ವಾಸ ಜಗದೀಶಗೆ
ತೋಷಪಾಲಕ ವಾಸುದೇವನಿಗೆ
ಮಂಗಲಂ ಜಯ ಮಂಗಲಂ ೧

ಗಿರಿವರ ಬಿರುಳಲಿ ನೆಗಹಿದಗೆ ತರಳೆಗಂಗಾ ಜಲಧಾರನಿಗೆ
ಶರಧಿಗೆ ಸೇತು ಕಟ್ಟಿದ ಶ್ರೀರಾಮಗೆ
ಪರಮ ಪುರುಷ ವಿಶ್ವೇಶ್ವರಿಗೆ
ಮಂಗಲಂ ಜಯ ಮಂಗಲಂ ೨

ಗಜಾಸುರ ವರವಿತ್ತ ಗಜಚರ್ಮಧಾರಗೆ
ಗಜರಾಜನ ಕಾಯ್ದ ಗೋವಿಂದಗೆ

ಗಜವದನನ ಪಿತ ಗೌರೀರ ಮಣಗೆ
ಅಜಪಿತನಾದ ನಾರಾಯಣಗೆ
ಮಂಗಲಂ ಜಯ ಮಂಗಲಂ ೩

ಶಂಖಚಕ್ರಧರ ಶಂಕರ ಪ್ರಿಯಗೆ ಪಂಕಜಾಂಬಕ ವಿಷ್ಣು ವಲ್ಲಭಗೆ
ಶಂಕರ ನಿಜಪದ ಶಾಂತಿಪಾಲಿಪಗುರು
ರಂಗರಕ್ಷಕ ಮಹಾಬಲೇಶ್ವರಗೆ
ಮಂಗಲಂ ಜಯ ಮಂಗಲಂ ೪

## ೧೯

ಹರಿಗೋವಿಂದ ಗೋಪಾಲ ಮುಕುಂದನೆ ಕರವ ಮುಗಿವೆ
ಚರಣಕ್ಕೆರಗುವೆ ಭರದಿ ರಕ್ಷಿಸು ಬಿಡದೇ ಶ್ರೀ ಪ

ಮಾನಿನಿ ದ್ರೌಪದಿ ಮಾನವ ಕಾಯ್ದೆಯೊ
ಹೀನರ ಮದಗರ್ವವನೆಲ್ಲ ಅಳಿದೆಯೊ
ಧ್ಯಾನ ಮಾಡುವ ಸ್ವಾನುಭವಿಗಳ
ಸ್ಥಾನ ಹೃದಯವಾಸ ಶ್ರೀ ೧

ಧ್ಯಾನಿಸಿದಂಥಾ ಗಜರಾಜನ ಕಾಯ್ದೆ
ಮಾನಿನಿ ಅಹಲ್ಯೆಯ ಪಾದದೊಳುದ್ಧರಿಸಿದೆ
ದೀನರಕ್ಷಕ ಬಿರುದ ಪೊತ್ತ ವಿ
ಜ್ಞಾನದೊಳಗಿರಿಸೆನ್ನಾ ೨

ಶಬರಿಯ ಭಕ್ತಿಗೆ ಮೆಚ್ಚನೀ ಬಂದೆಯೊ
ಬದರಿಯ ಹಣ್ಣನೆ ಸವಿಸವಿ ದುಂಡೆಯೊ
ವಿಭು ಪರಮಾನಂದಾ ಪ್ರಭೆಯೊಳಗಿರಿಸಿದೆ ೩

ಸ್ವರ್ಣಕಶ್ಯಪನ ಸೊಕ್ಕಗಿಸಿದೆ ದೇವಾ
ಮನ್ನಿಸಿ ಪಾಂಡವರ್ಯವರ ಸಲಹುವಾ
ಚನ್ನ ಗೋಪಿಯರ ಕೂಡಿ ಮನ್ನಣೆಕ್ರೀಡೆಯ ನಾಡಿ ೪

## ೨೦

ಹರಿಬಾಬು ರಾಮಚಂದ್ರ ಶೀತಾಪತೇ ಪ

ದಶರಥನುದರದೊಳ್ ಶಿಶುವಾಗಿ ಪುಟ್ಟಿದೆ
ದಶಕಂಠನಾಶನೇ ನೀನೆವ್ವೋಹರಿ ಶೀತಾಪತೇ ೧

ತಾಪತ್ರಯಗಳಿಂದ ಪಾಪಿಯಾಗಿಹೆ ನಾನು
ತಾಪವಿದಾರನೇ ನೀನೇವ್ವೋಹರಿ ಶೀತಾಪತೇ ೨

ವಾಸುದೇವನೇ ನೀನು ದಾಸರ ಸಲಹುವ
ಭೂಷಣ ಪೋಷಿಪ ನೀನೇವ್ವೋಹರಿ ೩

ಆಶಾಪಾಶಗಳಿಂದ ಘಾಶಿಯಾದೆನು ನಾನು
ದೋಷವಿದಾರನೇ ನೀನೇವ್ವೋಹರಿ ೪

ಶಾಂತಿಪದದಲಿ ವಿಶ್ರಾಂತಿ ಕೊಟ್ಟಿನ್ನಾ
ಭ್ರಾಂತಿಯ ತೋರಿಸುವ ನೀನೇವ್ವೋಹರಿ ಶೀತಾಪತೇ ೫

## ೨೧

ಹೃದಯ ವೃಂದಾವನದೊಳಿರುವ ಕೃಷ್ಣನ
ಸಾಧಿಸಿ ನೋಡ್ವೆನೆಂದು ಪೋದರು ಗೋಪಾಂಗನಾ ಪ

ನಾದದ ಕೊಳಲನ್ನು ಊದುವ ವೇಳ್ಯದಿ
ಸದ್ಭಕ್ತಿವೆತ್ತಿಗೋಪಾಂಗನಾ ವಿನೋದದಿ
ಆಧಾರ ಮಾರ್ಗದಿಂದಾ ಪೋದರು ಬೇಗದಿ
ಶೋಧಿಸಿ ನೋಡಲಾಗಿ ತ್ಯಾಗಿಸಿ ಕಾಮನಾ ೧

ಉಬ್ಬೇರಿ ಮೆಲ್ಭಾಗದಿಂದಾ ವಿನೋದದಿ
ಅಬ್ಬರದಿಂದಲೀ ಆ ಷಟ್ದ್ವಾರ ಭೇದದಿ

ಗರ್ಭಿತನಾದ ರಾಜಹಂಸೊಹಂಸ್ವರದಿ
ಮುಬ್ಬರದಿಂದಲಿ ಪಾಡುತ್ತಾ ರಂಗನ ೨

ನಳಿನ ಚಂಪಕಾದಿ ನಾಗ ಪುನ್ನಾಗವು
ಪಾಟಲ ಶಾವಂತಿಗೀ ಕುಂದ ಬಕುಲವು
ಮಾಲತಿ ಜಾಜಿ ಹೂವು ಶ್ರಿಲೋಲನಾಮವೂ
ಮೇಳಿತವಾಗಿ ಪೋಗಿ ಏರಿದರು ಸುಮನಾ ೩

ಶ್ರೀ ಮನೋಹರ ಮೂರ್ತಿ ಸಂಗೀತ ಕೇಳುತಾ
ಆ ಮಹಾ ಮಕುಟದಾ ಬೆಳಕು ನೋಡುತಾ
ಶ್ರೀ ಗುರುಮಹಾದೇವನೊಳ್ ರಮಿಸಿ ಸೂಸದಾ
ಪ್ರೇಮದಿ ಶಾಂತಿ ಸುಖದೊಳ್ ಬೆರತು ಸಘನಾ ೪

## ೨೨

## ಸರಸ್ವತಿ ದೇವಿ

ವಾರಿಜನೇತ್ರೆಯ ಶಾರದೆ ಶ್ರೀಮುಖಿ
ತೋರುವದೆನ್ನಯ ಪಾರ ಪರಾತ್ಪರೆ ಪ

ಮಯೂರ ವಾಹಿನಿ ಕಾಯುವುದೆನ್ನ
ತಾಯೆ ಚಿದ್ಘನ ನಿಜದಾಯುವ ನೀಯುವ ೧

ಬಾಲೆಯ ಭಾಗ್ಯವಿಶಾಲೆಯ ನವಕುಸುಮ
ಮಾಲೆಯ ಗಾನವಿಲೋಲೆ ವಾಗೇಶ್ವರಿ ೨

ಛಂಧದೊಳೆನ್ನ ಸಾನಂದವ ಪಾಲಿಪ
ಮಂದಮತಿಯ ತಿದ್ದಿ ಸುಂದರ ಮುಖಿಯೆ ನೀ ೩

ನಂಬಿಕೆ ಹೊಂದಿಹನೆಂಬುವ ಭಕ್ತರ
ಇಂಬುಗಳನ್ನೆ ಕೊಟ್ಟು ಬೆಂಬಲಕಿರ್ಪಳೆ ೪

ಕಂತು ಬ್ರಹ್ಮನರಾಣಿ ಅಂತರಿಕ್ಷಣೆವಾಣಿ
ಶಾಂತಿ ಸದ್ಗುರುಪದ ಸಂತಸಕಾರಿಣಿ ೫

## ೨೩

## ಶಿವಸ್ತುತಿ

ಶಂಕರನೇ ಸೌಖ್ಯದಾತ ಸಂಕಟ ನಿವಾರಣ ಶಿವ ಪ

ತನುಮನಕಾಧಾರನಾದ ಘನಪರಾನಂದಾರ್ತ
ವಿನಂಯದಿಂದ ನೋಡಲಕ್ಷ ಚಿನುಮಯಾತ್ಮನೇ ನೀ ೧

ಚಿದ್ವಿಲಾಸ ಜಗವಿದೆಲ್ಲಾ ಅದ್ವಯಾನಂದಾಖ್ಯನೇ
ಸಿದ್ಧನಾಗಿ ತೋರುತಿರುವಚಿದ್ರೂಪಾರ್ತನೇ ನೀ ೨

ವಾಗ್ಮನಗೋಚರನೇ ಸಂಗರಹಿತ ಸ್ವಪ್ರಕಾಶ
ಮಂಗಳಾತ್ಮ ಜ್ಯೋತಿರ್ಮಯ ಗಂಗಾಧರನೇ ನೀ ೩

ಅಂತರಾನಂದಾರ್ತ ಜ್ಞಾನ ಸಂತ ಸಾದು ಸಾಧ್ಯನೇ
ಶಾಂತಿ ಪದವನಿತ್ತ ಗುರು ಶಾಂತರೂಪನೇ ನೀ ೪

## ೨೪

ಶ್ರೀ ಗೌರೀವರೇಂದ್ರನೇ ನಮೋ ನಮೋ ನಮೋ
ಯೋಗಮಯನೆ ಭೋಗದಯನೆ ನಾಗಾಭರಣನೆ
ಭೋಗೀ ಭೂಷಣ ವ್ಯಾಘ್ರವಸನನೆ ಪ

ವಾಸುದೇವ ಪ್ರಿಯನೇ ಸದಾ ಶಿವಾ ಶಿವಾ
ಶಶಾಂಕಧರನೇ ಕ್ಲೇಷಹಾರನೇ ದೋಷನಾಶನೇ
ಭಾಸುರ ಪ್ರಕಾಶಾ ತೋಷದಾತನೇ ೧

ಪಂಚ ಪ್ರಾಣಧಾರನೇ ಪರಾತ್ಪರಾವರಾ
ಸಂಚಿತ ಅಘದೋಷಹರಣ ಸರ್ವಸುಖಕರಾ
ಪಂಚವದನಾ ಪಂಚಶರಹರಾ ೨

ಜ್ಞಾನಮಯ ಸುಚೇತನಾ ಕೃತಾಘನಾವನಾ
ಸ್ವಾನುಭವ ಸ್ವಶಾಂತಿದಾತ ಧ್ಯಾನಿಪಾಜನಾ
ದೀನೋದ್ಧಾರಕಾ ವಿಜ್ಞಾನಮಯನೇ ೩

## ೨೫

ಹರಹರ ವಿಶ್ವೇಶ್ವರ ಕರುಣಾಕರ
ಪರಮ ಪುರುಷ ದೇವಾ
ಚರಾಚರವ ತುಂಬಿಭರಿತವಾಗಿ
ಸ್ಮರಿಸುವ ಭಕ್ತರ ತ್ವರಿತದಿ ಪಾಲಿಪ ಪ

ಗಜಾಸುರನೆಂತೆಂಬ ದನುಜನ
ವಿಜಯನಾಗಿ ತೊಗಲನ್ನು ಪೊತ್ತೆ
ಭುಜಗ ಭೂಷಣ ನೀ ಸುಜನರ ಪಾಲಿಪ
ನಿಜಾನಂದವ ನೀವಾ ಚಿನ್ಮಯನೇ ೧

ತನುಮನದೊಳಗೆಲ್ಲಾ ಹೊಳೆಯುತಲಿರ್ಪಾ
ಜನಜನಿತಳಲ್ಲಿ ಪ್ರಣವರೂಪನಾದ
ತುಂಬುತ್ತಾ ತುಳುಕುತ್ತಾ
ಘನಪರಮಾನಂದಾ ಸಚ್ಚಿದ್ರೂಪಾ ೨

ಒಳಹೊರಗೆಂಬೀ ಭೇದಗಳೆಲ್ಲವ (ಹೊರಗೆ ಒಳಗೆ)
ಹರಣ ಮಾಡುತಿರ್ಪಾ
ಹರನೇ ನಾನೀನಾದ ಕಾರಣ
ಬೆರತು ನಿನ್ನೊಳು ಸ್ಮರಿಸುವೆ ಭರದಿ ೩

ಚಿಂತೆಗಳೆಲ್ಲವನೀಗೆ ನಿಜಾನಂದ
ಸಂತಸಗಳನೀವಾ
ಅಂತವಿಲ್ಲದಾನಂತ ಪರಾತ್ಪರ
ಶಾಂತಿ ಪದವನೀವ ಮಹಾದೇವಾ ೪

## ೨೬

## ಆತ್ಮನಿವೇದನೆ

ಮನವೇ ನಿನ್ನಯ ನಿಜಮೂಲ ನೀನೋಡು
ಸಮರಸವನೆಗೂಡು ॥ ಚಾಲ ॥
ವಿಷಯವಾಸನೆಗಳ ನಿಶಿದು ಹೋಗಲಿ ಕುಳ
ಅಸಮ ಸಾಹಸಿಯಾಗಿ ನಿಜಸುಖದೊಳಗೆ ಪ

ಹಿಂದೆ ಬಹು ಜನ್ಮದೊಳು ನೀ ತೊಳಲಿ ವಾಸನೆಯೊಳು ಬಳಲಿ
ಇಂದೆ ನೀ ಬಂದೆ ನರಜನ್ಮದಲಿ ಎಚ್ಚರು ನಿನಗಿರಲಿ
ಮುಂದೆ ಸಿಕ್ಕುವ ನಿಜವಿಲ್ಲದರಲ್ಲಿ ಆ ನಿಮಿತ್ಯದಲೀ
ಸಂದೇಹಂಗಳ ಬಿಟ್ಟು ಸತ್ಪುರುಷರ ಹೊಂದಿ
ನಿಜದೊಳತಿ ಛಂದದಿ ನಿಲ್ಲೈ ೧

ಗುರುಪಾದ ಕಮಲದ ಸೇವೆಯ ಮಾಡಿ ಇಷ್ಟಾರ್ಥವ ಬೇಡಿ
ದೃಢದೀ ಅದರಲ್ಲಿ ನಲಿನಲಿಹಾಡಿ ಸತ್ ಶಬ್ದವ ಗೂಡಿ
ಬಿಡದೇ ನಡುಮಾರ್ಗದಿಂ ಮುಂದೊಡೊ
ಮೂರ್ಧ್ನಿಯಲಿ ಲೋಲ್ಯಾಡಿ
ಸದಮಲ ನಿಜಸುಖ ಅದರಲಿ ನಿಲ್ಲುತ ಚದಲದೆ
ದೃಢತರವದಗಿ ನಿರಂತರ ೨

ಭಕ್ತಿಭಾವವನೆ ದೃಢಮಾಡು ಸದ್ಧರ್ಮವಗೂಡು
ಯುಕ್ತಿಯಿಂದಲೀ ಸಾಧನೆಮಾಡು ಗುರುಪದದೊಳಗಾಡು ವಿ

ರಕ್ತಿ ನಿಜವಾಗಿ ಹರಿಯನ್ನೆ ಮಾಡು ಸತ್ಸಂಗದೊಳಾಡಾ
ಸಕ್ತನಾಗಿ ತೇಜೋಕ್ತ ಸದ್ಗುರು ವಚನೋಕ್ತಿಯಿಂದಲಿ
ಅನುರಕ್ತನಾಗಿ ನಿಜ ೩

ಕಾಷ್ಠದೊಳಗಿಂದಾ ಅಗ್ನಿಯ ಪುಟ್ಟು ಕಾಷ್ಠವನೆ ಸುಟ್ಟು
ಉತ್ಕೃಷ್ಟ ಚಿತ್ತವನೆ ಪುಟವಿಟ್ಟು ಜಡಭಾವನೆ ಬಿಟ್ಟು
ಥಟ್ಟನೇ ಜ್ಞಾನಾಗ್ನಿ ಪುಟವಿಟ್ಟು ಕ್ಷಡ್ರಿಪುಗಳ ಸುಟ್ಟು
ಶ್ರೇಷ್ಟ ಚಿಜ್ಯೋತಿಯಿಂದೆಸೆವ ನಾರಾಯಣ ದಿಟ್ಟ
ಸದ್ಗುರುವಿನೊಳ್ ಇಟ್ಟ ಶಾಂತಿ ನಿಜ ೪

೨೭

## ಆತ್ಮನಿವೇದನೆ

ಯಾವಾಗಲೂ ನಿನ್ನ ಸೇವೆಯೊಳಿರುವಂತೆ
ಕಾವುದೆನ್ನಯ ನಿಜದೀ ಕೃಪಾನಿಧೇ
ಈ ಪರಿಯಿಂದನಾ ಭಾರಿ ಭವದಿ ನೊಂದೆ
ತೋರೋ ನಿನ್ನಯ ಚರಣಾ ನಾರಾಯಣ ಪ

ಆಶಾಪಾಶದಲಿ ನಾ ಘಾಸಿಯಾದೆನು ದೇವಾ
ವಾಸನೆಯೊಳು ತೊಳಲಿ ಬಹು ಬಳಲಿ
ವಾಸುದೇವನೆ ನಿನ್ನ ಪಾದದೊಳಗೆನ್ನಯ
ಬೇಸರದಲೆ ರಕ್ಷಿಸೋ ನಿಜಪಾಲಿಸೋ ೧

ನೀರಮೇಲಿನ ಗುಳ್ಳೆಯಂತೆ ತೋರುವ ಕಾಯ
ಸೇರಿ ನಂಬಿದೆ ಭರದಿ ಬಹು ವಿಧದಿ
ದೂರನಾದೆನು ನಿಜದರಿವುನಾನರಿಯದೇ
ಸೇರಿಸೊ ನಿಜ ಸುಖದಿ ಪ್ರಬೋಧದಿ ೨

ನಂಬಿದವರ ಕಾಯ್ವ ಸಂಭ್ರಮ ಪೊತ್ತವ
ಶಂಭು ಶಂಕರ ಪ್ರಿಯನೇ ಸರ್ವೇಶನೇ
ಇಂಬು ದೋರೆನ್ನಾ ಚಿದಂಬರ ನಿಜಪದ
ನಂಬಿ ನಿಲ್ಲುವ ತೆರದಿ ಸದೃಢದೀ ೩

ತತ್ವಮಸಿ ಮಹಾ ವಾಕ್ಯವ ಶೋಧಿಸಿ
ನಿಸ್ತರಿಸುವ ಭವವಾ ಉಪಾಯವಾ
ಚಿತ್ತಚೈತನ್ಯವಾಗಿ ನಿತ್ಯಶಾಂತಿಸ್ವಸುಖ
ಸತ್ಯ ಸದ್ಗುರು ಸ್ವಾನಂದಾ ಸಹಜಾನಂದಾ ೪

ಕಡಹದಾ ಮರನೇರಿ ಮಡುವಾ ಧುಮ್ಮಿಕ್ಕೃ ಇದ್ಯೋ
ಪಿಡಿದು ಕಾಳಿಂಗನಾ ಹೆಡೆ ತುಳಿದು ಕುಣಿದ್ಯೋ
ಸಡಗರದಿಂದಲಿ ಮಾತೆಯ ತೊಡೆಯ ಮೇಲೆ ಬಂದು ಕುಳಿತೆ ೫

ದುರುಳ ದುಷ್ಟರ ಶಿರವ ಶರದಿಂದಾ ಕಡಿದೆಯೊ
ಶರಣ ಬಂದ ದೀನರನು ಸಲಹಿದೆಯೊ
ಪರಮ ಪುರುಷನೇ ನಿನ್ನ ಸ್ಮರಣೆಯೊಳಿರಿಸೆನ್ನಾ ೬

ಅನ್ಯಾಯದಲಿ ಕುರುಪತಿಯ ಮಡುಹಿದೆಯೊ
ಕರ್ಣನ ಕಂಠವ ಕತ್ತರಿಸಿದೆಯೊ
ಧನ್ಯಧರ್ಮಾರ್ಜುನರ ಶಿರವಾ ಸನ್ಮತದಿಂದಲಿ ಕಾಯ್ದೆ ೭

ಪುಂಡಲೀಕನ ಭಕ್ತಿಗೆ ಮೆಚ್ಚಿ
ಪಂಡರಪುರದಲ್ಲಿ ನಿಂತೆನಿ ಹೆಚ್ಚಿ
ತಂಡತಂಡದಲ್ಲಿ ಬರುವ ಹಿಂಡುಭಕ್ತರುಗಳ ಕೂಡುವ ೮

ಅಂತರದೊಳಗೆನ್ನಾ ಕಂತು ನಾರಾಯಣ
ಶಾಂತಿ ಪದದಲಿ ವಿಶ್ರಾಂತಿಯ ಕೊಟ್ಟೆನ್ನಾ
ಭ್ರಾಂತಿಗಳನೆಲ್ಲ ತೋರಿಸಿ ಸಂತ ಸಂಗದೊಳಿರಿಸೆನ್ನಾ ೯

ಸುರಪವೈರಿಯ ಸೂರಿಮಾಡಿದ । ಸೂರಿಗಳ ಭಯ ಘೋರಬಿಡಿಸಿದ
ಕ್ರೂರ ದೈತ್ಯನ ಕೊರಳ್ಗಾರ ಹರಿದಶಿರಿ ೧

ಶ್ರೀಶ ನಿನ್ನಯದಾಸತ್ವಕೆ ಆಶಿಸುವೆ । ಎನ್ನ ಪೋಷಿಸುವುದೊ
ದೋಷದೂರಿನೆ ನರಸಿಂಹ ವಿಠಲ ೨

ಎನ್ನ ಬಿನ್ನಪವನ್ನು ಮನ್ನಿಸಿ ಇನ್ನು ಈ ಪುರಕಿನ್ನು ಸಾರಿದೆ
ಘನ್ನ ಮಹಿಮೆ ಶಿರಿ ನರಸಿಂಹ ವಿಠಲನೆ ೩

## ೩

## ಸೀಸ ಪದ್ಯ

ರಘುನಾಯಕ ನಿನ್ನ ರಾತ್ರಿ ಹಗಲು ನೆನೆವೆ
ರಾಘವಾ ಕೈಪಿಡಿದು ಸಲಹನ್ನನು ಪ

ಸೀತಾ ಮನೋಹರಾ । ಶ್ರೀ ರಾಮಚಂದಿರಾ
ಪಾತಕಾಮೃಗವಳಿದು । ಪರಮಧೀರಾ ೧

ಶಬರಿ ಫಲಗಳ ತಿಂದು । ಶಾಶ್ವತಾ ಫಲವಿತ್ತು
ಅಗಣಿತಾಗುಣಧಾಮ । ಆನಂದ ರಾಮ ೨

ಸೇತು ಮಾರ್ಗದೊಳಿಂದ । ಆತ ರಾವಣನ ಕೊಂದ
ಸೀತೆಯನು ತಂದ ಪ್ರಖ್ಯಾತಮಹಿಮಾ ೩

ಲೋಕದೊಳು ನೇಮ ನಿನ್ನ । ಪಾಪಹರ ನಾಮ
ವಾಲ್ಮೀಕಿ ಜಪಿಸಿದಾ ಶ್ರೀ ರಾಮನಾಮ ೪

ಶ್ರೀ ಕಾಂತ ನರಸಿಂಹ ವಿಠಲಾ । ಸ್ವೀಕರಿಸೈಗಂಧವಾದೇವ ೫

೪

## ಲಕ್ಷ್ಮೀದೇವಿ

ದೇವೀ ಕಮಲಾಕ್ಷೀ ಭಜೇಹಂ ಸದಾ ತ್ವಂ ಅಂಬಾ ಪ

ಸಲ್ಲಲಿತಾಂಗೇ । ಸುಂದರವದನೆ । ಮಲ್ಲಿಮರ್ದನ
ಹೃದಯ ಸದನೇ
ಮಲ್ಲಿಕಾದಿ ಪುಷ್ಪವದನೇ । ಫುಲ್ಲಲೋಚನೇ । ಸುನಯನೇ ।
ಬಲ್ಲಿದ ಭಕ್ತಿ ಸಮುದಾಯನೇ । ಕೊಲ್ಲಾಪುರ, ಅವಧಾರಣೇ
ಆಹ್ಲಾದಕರಸುವದನೇ, ಕೊಲ್ಲಾಪುರವಾಸಿನೇ । ಶ್ರೀ ಲಕ್ಷ್ಮಿದೇವಿ ೧

ಮೋಕ್ಷದಾಯಿಕೇ । ಮಂದಗಮನೇ । ಅಕ್ಷಯ
ಫಲ ಪ್ರದಾಯಿನೇ
ರಕ್ಷಿಸೇ ಹಂಸಗಮನೇ । ಅಕ್ಷಯ ಫಲ ಪ್ರದಾಯಿನೇ ।
ಪಕ್ಷಿವಾಹನ ವಕ್ಷವಾಸಿನೇ । ಲಕ್ಷಕೋಟಿ ನಿಭಾನನೇ,
ರಕ್ಷಮಾಂ ಲಕ್ಷ್ಮಿದೇವಿ ೨

ನರಸಿಂಹ ವಿಠಲ ಪ್ರೀಯೇ ನಾರೀಮಣೀ ಹೃದಯ ಸೇವೆ
ಹಾರ ದೇಹಾಲಂಕಾರಿಯೇ । ಮಾರಜನನಿ । ಜಯ
ಚಾರುಚಂದ್ರ ಸಹೋದರಿಯೇ । ಕರವೀರ
ಪುರವಾಸಿನೇ ಲಕ್ಷ್ಮೀದೇವಿಯೇ ೩

೫

ನಿನ್ನ ನೋಡಿದೆ ಕನ್ಯಕುಮಾರಿ । ನಿನ್ನ ನೋಡಿದೆ
ಎನ್ನ ಪಾಪಗಳ ನೀಡ್ಯಾಡಿದೆ ಪ

ಹಿಮರಾಜಪುತ್ರಿ । ಹೇಮಾಭರಣಗಾತ್ರಿ
ಆ ಮಹಾ ಪವಿತ್ರಿ । ಆನಂದ ನೇತ್ರೆ ೧

ಉಡುರಾಜನಂತೆ ತಿಲಕದಾಕಾಂತಿ
ನೋಡುತಾಲಿ ನಿಂತೆ । ಓಡುತಾಲಿ ಬಂದೆ ೨

ಕೋಟಿಸೂರ್ಯಕಿಂತ ಮೇಟಿ ಆದಂಥ
ಮಾಟವಾದ ಮುಖವ ನೋಡುತ್ತಾ ನಿಂತೆ ೩

ತಂದೆ ನಾರಸಿಂಹ ವಿಠಲನ್ನದಯದಿ
ಬಂದೆ ಈ ದಿನದಿ ನಿಂದು ಕರುಣಿಸಿದೆ ೪

೬

ಕಾಮಿತಾರ್ಥದಾಯಿನೇ । ತುಳಸಿ ಕಲ್ಯಾಣಿ
ಶ್ಯಾಮಾ ವಿಶಾಲನಯನೇ ಪ

ಹಸುರು ಕಂಚುಕಧರೆ ಆನಂದ ರಸಿಕೇ
ಶಶಿ ಬಿಂಬಸಮ ಸುಂದರಮುಖೇ
ಉಸಿರುಬಿಡದೆ ನಿನ್ನ ಕೊಸರುವೆ ವರಗಳ
ಹಸನಾಗಿ ಕೊಡುವೆನೀ ಅತಿಶಯದಿಂದಲಿ ೧

ಬಣ್ಣಾದ ಸರಪಳಿ ಹಾಕಿದ ಕೊರಳೇ
ಬಟ್ಟು ಮುತ್ತಿನ ಹರಳೇ
ಹುಣ್ಣಿಮೆ ಚಂದ್ರನಂತೆ ಸುಂದರಮುಖದವಳೇ
ಪನ್ನಂಗ ಶಯನಗೆ ಮಾಡಿದೆ ಮರುಳೇ ೨

ಬಡನಡುವಿಗೆ ಒಡ್ಯಾಣಾ । ರುಳಿ ಪೈಜಣ
ಕಡಗಾ ಕಂಕಣ ಹೊಳೆಯುವ ಜಾಣೆ ।
ನಡೆದು ಬಾರೆ ಶ್ರೀ ನರಸಿಂಹವಿಠಲನ
ಹಿಡಿದು ನಿನ್ನ ಪಾದ ಬಿಡದೆ ಭಜಿಪೆನಮ್ಮ ೩

## ೭

ನೋಡಿದ್ಯಾ ನೋಡಿದ್ಯಾ ಪ

ನೋಡಿದ್ಯಾ ಶ್ರೀ ಗುರುಗಳನ್ನು । ಈ ಡಾಡಿ ಕೊಂಡಾಡಿದ್ಯಾ
ಆಹಾ ನೋಡಿ ಮನದಲ್ಲಿ ಕೊಂಡಾಡುತ್ತ ಗುರುಗಳ
ರೂಢಿವಳಗೆಲ್ಲ ಈಡಿಲ್ಲ ಯತಿಗಳ ಅ.ಪ

ನಿಂತರೆದುರಲ್ಲೆ ಮುಖ್ಯ ಪ್ರಾಣಾ । ಜಗ
ದಂತ ರೊಳಗೆಲ್ಲಿ ಅತಿ ಪ್ರಾಣಾ
ಅಂತರಂಗದಲ್ಲಿ ಶಾಂತ ಮೂರುತಿಗಳು
ಮಂತ್ರಾಲಯದಲ್ಲಿ ನಿಂತಿದ್ದ ಗುರುಗಳಾ ೧

ಹೊದ್ದ ಕಾವೀಶಾಟಿಯಿಂದಾ ಶ್ರೀ
ಮುದ್ರೆ ಹಚ್ಚಿದ ದೇಹ ದಿಂದಾ
ಮಧ್ಯದಿ ಕೇಸರಿ ಗಂಧಾ । ಬಲು
ಮುದ್ದು ಸುರಿವನಾಮದಿಂದಾ
ತಿದ್ದಿದ ಅಂಗಾರ ಮುದ್ರೆಯೊಳಕ್ಷತೆ
ಎದ್ದು ಬರೂವಂಥ ಮುದ್ದು ಗುರೂಗಳಾ ೨

ಮುದ್ದು ಬೃಂದಾವನದ ಮಾಟಾ
ಅಲ್ಲಿದ್ದು ಜನರ ಓರೆನೋಟಾ
ಪ್ರಸಿದ್ಧ ರಾಯರ ಪೂರ್ಣನೋಟ
ನಮ್ಮಲ್ಲಿದ್ದ ಪಾಪಗಳೆಲ್ಲ ಓಟ
ಹದ್ದು ವಾಹನ ನರಸಿಂಹ ವಿಠಲಾ । ಅ
ಲ್ಲಿದ್ದು ವರವ ಕೊಡುವ ಗೋಪಾಲಕೃಷ್ಣನ್ನಾ ೩

೮

ಬಲ್ಲೀದ ಬೀದಿಯೊಳು ನಿಲ್ಲಾದೆ ಬರುವರು ।
ಎಲ್ಲಿ ಜನರೆಲ್ಲನೋಡುವರು
ನೋಡುವರು ಗುರುಗಳನಾ । ಪ್ರಹ್ಲಾದನೆಂದು ಹೊಗಳುವರು ೧

ಭೂಸುರರು ಬಂದು ವೇದ ಘೋಷಣೆಯ ಮಾಡುವರು ।
ದಾಸಜನರೆಲ್ಲ ನೋಡುವರು
ನೋಡುವರುಗುರುಗಳನಾ । ವ್ಯಾಸ
ಮುನಿಯೆಂದು ಹೊಗಳುವರು ೨

ಅಂಥವರೆ ಇಂಥವರೆ ಎಂಥವರೆ ಗುರುಗಳು ।
ಮಂತ್ರಾಲಯದ ದೊರೆಗಳು
ದೊರೆಗಳು ಕೈಮುಗಿದ ಜನರಿಗೆ । ಚಿಂತೆಯನು
ಬಿಡಿಸಿ ಕಳುಹುವರು ೩

ಮಂತ್ರಾಲಯಕ್ಕೆ ಹೋಗಿ । ನಿಂತು ಕೈಮುಗಿಯಲು ।
ಎಂಥ ಕರುಣಾಳು
ಎಂಥ ಕರುಣಾಳು । ಕೈ ಮುಗಿದ ಜನರಿಗೆ ।
ಸಂತಾನಕೊಟ್ಟುಸಲಹುವರು ೪

ಬೃಂದಾವನ ದಲಿನಿಂದು ಮೆರೆಯುವರು ।
ಬಂದ ಜನರನ್ನು ಪೊರೆಯುವರು
ಪೊರೆಯುವರು । ಜನರು ಶ್ರೀ ರಾಘವೇಂದ್ರ
ನೆಂತೆಂದು ಕರಿಯುವರು ೫

ಯಾರಯ್ಯ ಗುರುಗಳು ತೇರಿನಲಿ ಕುಳಿತಿಹರು ।
ತೋರಮುತ್ತಿನ ಹಾರವನು
ಮುತ್ತಿನ ಹಾರವನು । ಹಾಕಿದ್ದ ಉತ್ಸವ ಕಂಡು ರಾಯರಿಗೆ
ಕೈಯ ಮುಗಿವೇನು ೬

ಸೃಷ್ಟಿಮೇಲಿನ ಜನರು । ಎಷ್ಟು ವರ್ಣಿಸಲಮ್ಮ ।
ಮೃತ್ತಿಕೆ ಅಂಗಾರ ಧರಿಸುವರು
ಮಂತ್ರಾಕ್ಷತೆಯಿಂದ । ಕುಷ್ಟ ರೋಗಗಳನೆಲ್ಲ ಕಳೆಯುವರು ೭

ತಂದೆ ರಾಘವೇಂದ್ರರ । ನಿಂದು ಸೇವಿಸಲಾಗ ।
ವಂಧ್ಯುರಿಗೆ ಕಂದರಾಗುವರು
ಆಗುವರು ಗುರುಗಳು । ಜನರು ಆನಂಧದಿಂದ ಭಜಿಸುವರು ೮

ಮಂತ್ರಾಲಯವು ಇನ್ನೆಂತು ವರ್ಣಿಸಲಮ್ಮ ।
ಆನಂದಕ್ಕೆ ಅಳವಲ್ಲ
ಅಳವಲ್ಲ ಗುರುಗಳನ । ನಿಂತು ನೋಡುವರ ನೆಲೆಯಿಲ್ಲ ೯

ಪ್ರಹ್ಲಾದವರದ ನಿಲ್ಲಾದೆನೆನೆಯುವನೆ ।
ಎಲ್ಲದುರಿತಗಳ ಪರಿಹಾರ
ಪರಿಹರಿಸುವ ಲಕ್ಷ್ಮೀ ವಲ್ಲಭ । ನರಸಿಂಹ ವಿಠಲನ ನೆನೆವೇನೆ ೧೦

## ೯

ರಾಘವೇಂದ್ರನೆಂದು ನುಡಿದವರಿಗೆ । ಅನುರಾಗದಿಸಲಹುವರಾ
ಭಾಗವತಾ ಪ್ರಿಯ ಯೋಗಿ ಜನನುತ ।
ಶ್ರೀ ರಾಘವೇಂದ್ರರಾಯಾ ಪ

ರಾಮಧ್ಯಾನವನು ಮಾಡುತಲನುದಿನ । ಜಯಿಸಿದಿ ರಾಕ್ಷಸರಾ
ರಾಘವೇಂದ್ರನಂಘ್ರಿಗಳನು ಅನುರಾಗದಿ ।
ರಾಯರಾವ್ಯಾಧಿಗಳಳಿದು ಸೇವಾ ಕೊಡುತಿಹರಾ
ರಮಾವಲ್ಲಭನಾಶ್ರಯ ಮಾಡಿ । ರಾಜ್ಯವಾಳಿದರೆ ರಾಘವೇಂದ್ರ ೧

ಘಾತುಕ ದನುಜನ ಕಾಲವಿದೆಂದು ಎಣಿಸದೆ ಕಲಿಯುಗ
ಘನ ಪರಾಕ್ರಮದಿಂದ ಮೆರೆಯುವಿ । ಸುಯತೀಂದ್ರ ನೀ
ಘನ ಜಾಡ್ಯಗಳ ಕಳೆದು ಜನರಿಗೆ ಸುರಿಸಿದಿ ಸುಖಮೇಘ
ಘಾ ಬುರಿಯಿಂದಲಿ ಬಂದ ಆತುರರಿಗೆ ಕಳದಿರೊ ನೀ ಅಘವಾ ೨

ವೇದಶಾಸ್ತ್ರ ಪಾರಾಯಣ ಮಾಡುತ । ವೃಂದಾವನ ದೊಳಿರುವೇ
ವ್ಯಥೆಯಿಂದಲಿ ಬಂದಾ ತುರರಿಗೆ । ಅತಿಸುಖವನು ಸುರಿವೇ
ವೇದವ್ಯಾಸರು ಮೊದಲಾದರೊಳು । ಆಧಾರದೊಲಿರುವೇ
ವೇಷತಾಳಿ ನೀ ಯತಿಯಾಗಿ ಈ ಜಗದೊಳುನೀ ಮೆರೆವೆ ೩

ಭ್ರಮ ತಪ್ಪೀದಂತೆ ಭವದೊಳು ಬಿದ್ದು ।
ಬಿಡುವೆನುರಾಘವೇಂದ್ರಾ
ದ್ರಾವಿಡ ಬಡಗ ಮತ್ಸ್ಯ ಮೊದಲಾದವರೊಳು ।
ದ್ರಾಕ್ಷಾಫಲದಂತೆ
ಮಧುರವು ತೋರಿಸಲಹೊಗುಣಸಾಂದ್ರಾ ದ್ರವ್ಯ ಪತಿಸಿರಿ
ನರಸಿಂಹ ವಿಠಲನ ತೋರೋದಯದಿಂದ ನೀರಾಘವೇಂದ್ರಾ ೪

## ೧೦

ವರ ಮಂತ್ರಾಲಯ ವಾಸಾ । ನಿನ್ನ ಚರಣವ
ನಂಬಿದೆನು ಸರ್ವೇಶಾ
ಕರುಣದಿಂದಲಿ ಕಾಯೊ ಯನ್ನಧೀಶಾ । ನಿನ್ನ
ಸ್ಮರಣೆಯೆ ಉಲ್ಲಾಸಾ ೧

ಹೆಚ್ಚು ಬೇಡುವುದಿಲ್ಲ ನಿನ್ನಾ । ಜಗದಿರಚ್ಚು
ಮಾಡಲಿಬೇಡ ಇನ್ನಾ
ಇಚ್ಛಿಸುವೆ ಭಕ್ತಿರನ್ನಾ । ಯನಗೆ ಪ್ರತ್ಯಕ್ಷನಾಗೂಯತಿರನ್ನಾ ೨

ಎಂಥೆಂಥವರನು ಪೊರೆದೇ । ಯನ್ನಂಥವರು ನಿನಗೆ ಹಿರಿದೇ
ಪಂಥದಿಂದಲಿ ನಾನಿನ್ನ ಕರದೇ । ಮನದ
ಚಿಂತೆಯನೀ ತರಿದೇ ೩

ನಿನ್ನ ಮೆಚ್ಚಿಸಲೆನಗೆ ಶಕ್ತಿ । ಘನ್ನ ಮಹಿಮನೇಕೊಡು ಭಕ್ತಿ
ಇನ್ನು ಬೇಡುವುದೆಲ್ಲ ವಿರಕ್ತೀ । ಎನಗೆ
ಚೆನ್ನಾಗಿ ಪಾಲಿಸು ಮುಕ್ತೀ ೪

ಪ್ರಥಮದಲಿ ಪ್ರಹ್ಲಾದನಾಗೇ । ಅಲ್ಲಿದಿತಿವಂಶದಲಿ ನೀ ಪೋಗೇ
ಹತ ಮಾಡದೆ ಅವನೀಗೇ । ಪಿತಗೆ ಸದ್ಗತಿಯಿತ್ತೆಯೋಗೀ ೫

ಘೋಷಿಸಲೇ ನಿನ್ನ ವ್ಯಾಸ ಮೂರ್ತಿ । ಹದಿನಾಲಕ್ಕು
ಲೋಕದಲಿ ಪ್ರಖ್ಯಾತಿ
ಏನೆಂಥೇಳಲಿ ವಾರ್ತೀ । ರಾಶಿರಾಶಿತುಂಬಿದವು ನಿನ್ನ ಕೀರ್ತೀ ೬

ಶ್ರೀರಾಘವೇಂದ್ರ ಮುನಿರಾಯಾ । ಸದ್'ಯೋಗಿಗಳ
ಮನಸಿಗೆ ಪ್ರೀಯಾ
ಮೂಲರಾಮನಿಗೆ ನೀ ಪ್ರೀಯಾ । ಬೇಗ ಎದ್ದು
ಬಂದು ಪಿಡಿಕೈಯಾ ೭

ಸತ್ಯ ಸಂಧರು ನೀವೆನಿಸೀ । ದೊಡ್ಡ ಉತ್ತರಾದಿ ಮಠದಿ ಜನಿಸೀ
ಭಕ್ತರನೆಲ್ಲಾ ಸ್ವೀಕರಿಸೀ । ಮಧ್ವಮತವನುದ್ಧರಿಸೀ ೮

ಬಿದ್ದೆ ನಿನ್ನ ಪಾದಕೈಯಾ । ಎನ್ನ ವುದ್ಧಾರ ಮಾಡುಜೀಯಾ
ವಿದ್ವಾಂಸರಿಗೆ ನೀ ಘೇಯಾ । ಬೇಗ ಎದ್ದು ಬಂದು ಪಿಡಿಕಯ್ಯಾ ೯

ನರಸಿಂಹ ವಿಠಲನ ಪ್ರೀಯಾ । ಕರೆಸಿದ್ದು ನೀ ಎನ್ನ ಖರೆಯಾ
ಮನಸಿನೊಳಿದ್ದದ್ದು ಅರಿಯಾ । ನಮಸ್ಕರಿಸಿ ಬೇಡುವೆನು
ಮಹರಾಯಾ ೧೦

## ೧೧

ಸುಂದರಾ ಶ್ರೀರಾಮ ಚಂದ್ರರಾ । ಪಾದಾರವಿಂದಗಳೀಗೆ
ನಾ ವಂದಿಸುವೆ
ವಂದಿಸೂವೆ ಆನಂದಿಸೂವೆ । ಬಹು ಚಂದದಿಂದಲಿ
ನಲಿದಾಡುವೇ ಪ

ಉತ್ತರಾದಿಮಠದ ವಿಚಿತ್ರಗಳು । ಯನ್ನ ನೇತ್ರದಿಕಂಡು
ಪವಿತ್ರಳಾದೇ

ಶ್ರೀ ಸತ್ಯಧ್ಯಾನ ತೀರ್ಥರು ನಿತ್ಯ ಪೂಜಿಸೂವೋ
ಪರಮಾತ್ಮನ ಕಂಡು ಕೃತಾರ್ಥಳಾದೇ ೧

ಮೂರ್ಜಗದೊಳಗೆಲ್ಲಾ ಪ್ರಜ್ವಲಿಸುವೊ । ವಜ್ರ
ಮಂಟಪ ವೈಭವನೋಡಿದೆ
ಮಧ್ಯದಲಿ ಮೂಲ ಸೀತಾ ರಾಮ ಕೂತದ್ದು
ನೋಡಿ ಉಧೃತಳಾದೇ ೨

ಸತ್ಯಧ್ಯಾನರು ಎತ್ತಿ ಮಾಡುವಂಥ । ಮಂಗಳಾರ್ತಿಯನೆ ಕಂಡೆನೇ
ಮುತ್ತು ಮಾಣಿಕ್ಯದಾ ನವರತ್ನದಾ ಚಾಮರ ಎತ್ತಿ ಬೀಸುವ
ವಿಸ್ತರ ನೋಡಿದೆ ೩

ವುಂಡುವುಂಡು ಲೋಕದೊಳಗೆಲ್ಲ ಜನರು
ಕೊಂಡಾಡುವುದ ನಾ ಕೇಳಿದೆ
ಪಂಡಿತರೆಲ್ಲಾ ಹಿಂಡು ಹಿಂಡಾಗಿ ಅಖಂಡ ದಕ್ಷಿಣೆ
ಪಡೆವುದ ನೋಡಿದೆ ೪

ಸತ್ಯಬೋಧರು ಸತ್ಯಸಂಧರು ಮೊದಲಾಗಿ
ಮುಟ್ಟಿಪೂಜಿಸಿದ ಮೂರ್ತಿಯು
ಮತ್ತೆ ಕುಬೇರನ ಅಳಕಾ ಪಟ್ಟಣವೇ ಪ್ರತ್ಯಕ್ಷ ಬಂದಿರುವುದಿಲ್ಲಿ ೫

ಬೆಳ್ಳಿ ಭಂಗಾರದ ಮಿಳ್ಳೆ, ತಂಬಿಗಿ ಢಾಲಿಯನು ಕೈಯಲಿ
ಜನರು ಕೊಂಡೊಯ್ವರು
ಸುಳ್ಳಲ್ಲಿ ಈ ಮಾತು ಒಳ್ಳೇ ಜನರು ಕೇಳಿ ಬಲ್ಲಷ್ಟು ಪೇಳುವೆನು
ಭಾಳಿರುವುದು ೬

ಧಿಟ್ಟ ಶ್ರೀರಾಮರ ದಯದಿಂದಲೀಗ
ಪ್ರತ್ಯಕ್ಷವೈಕುಂಠವೆನಿಪುದೂ
ದುಷ್ಟಜನರಸೂಯೆ ಬಟ್ಟರೆ ಯಮಪಟ್ಟಣದ
ದಾರಿಯಪಿಡಿವರೂ ೧೦

ದೋಷರಹಿತ ವೇದವ್ಯಾಸದೇವರ ಸಂಪುಟ ಲೇಸಾಗಿ
ನೋಡಿ ಸಂತುಷ್ಟಳಾದೇ
ಕಾಶಿಮೊದಲಾದ ಸುಕ್ಷೇತ್ರಗಳು ವಾಸವಾಗಿರುವುವು
ಈ ಮಠದಲಿ ೧೧

ಮರುತನಧೀಷ್ಟಾನರಾಗಿ ಮಾಡುವರು ಈ ಪೂಜೆ
ಮತ್ಯಾರಿಗೀಡಿಲ್ಲನೋಡು
ಹೆಚ್ಚಿನ ಶಾಸ್ತ್ರ ವಿಚಾರ ಮಾಡುವರು
ಸೃಷ್ಟಿವೊಳಗಿನವರಿಗೀಡಿಲ್ಲನೋಡು ೧೨

ವಾದಿಮತದ್ವಾದಿನೀ ಸೋಲಿಸುವರು । ಮಾಯಮತಿಗಳ
ಮಾಯಮಾಡುವರೂ
ನ್ಯಾಯ ವ್ಯಾಕರಣ ವೇದಾಂತ ಸಿದ್ದಾಂತಗಳನ್ನು ಬಾಯಿ
ಪಾಠದಿಬೋಧಿಸುವರೂ ೧೩

ನರಸಿಂಹ ವಿಠಲನದಯದಿಂದಲೀ ನರಲೋಕ
ಸುರಲೋಕ ಪೂಜ್ಯರಿವರೂ
ವರ ಪೀಠದಲಿ ಕುಳಿತು ಮೆರೆಯುವರು । ಜಗದ್ಗುರು
ಶಿರೋಮಣಿಯೆಂದು ಕರೆಸಿಕೊಳ್ಳುವರೂ ೧೪

## ಕಥನಾತ್ಮಕ

### ೧೨

ಬಾಗಿಲಿಕ್ಕಿದ ಬಗಿಯೇನೆ । ಬ್ಯಾಗದಿಂದ ಪೇಳೆ ನೀನೆ ।
ನಾಗವೇಣಿಯೆನ್ನ ಕೂಡ ಜಾಗುಬ್ಯಾಡ ಬಾಗಿಲುತೆಗೆಯೆ ಪ

ಬಂದೆಯಾದರಿಂದಿನ ದಿನದಿ । ಛಂದದಿಂದ ಪೇಳೊ ಮದದಿ
ಬಂದದೇನು ಗಾಡಾಂಧಕಾರದಿ । ನಿಂದು
ನಾಮವುಸಾರೊ ಮುದದಿ ೧

ಅಚ್ಯುತಾನ ಇಚ್ಛೆಯಿಂದ । ಸ್ವೇಚ್ಛ ದೈತ್ಯರಾಳಿದೇನೆ
ಮತ್ಸ್ಯರೂಪಗೈದುನಾನೆ । ಭೀಭತ್ಸು ರಾಯ ನಲ್ಲವೇನೆ ೨

ಯೇಸು ಪೇಳಿದೀಗುಣವನ್ನು । ಈಸು ಮಂದಿಯೊಳು ನೀನು
ಭೂಸುರಾಗೆ ಭಾಷೆಕೊಟ್ಟು । ಕೂಸೀನ ಕೊಡದಾವ ನೀನು ೩

ಪಾರ್ವತಿಯ ಪತಿಯನೊಲಿಸಿ । ಪಾಶು ಪತಾಸ್ತ್ರವ ಗೆಲಿಸಿ
ಪರಮ ಕೂರ್ಮಗೆ ಪಾದಸೇವಕ ।
ಪಾರ್ಥರಾಯನೆ ಪಾಂಚಾಲಿ ೪

ಪಾರ್ಥರಾಯ ನೀನಾದರೇನು, ಕೀರ್ತಿಯೆಲ್ಲಾ ಬಲ್ಲೆನಾನು
ಸ್ತೋತ್ರ ಮೂರುತಿ ತಂಗಿಗೀಗ । ತೀರ್ಥಯಾತ್ರೆಲಿ ಗೆಲಿಹೋಗೊ ೫

ಘಂಡತೊರೆವ ಗಂಡನಾನೆ । ಖಾಂಡವನ ದಹಿಸಿದೆನೆ
ಗಂಡುಗಲಿ ವರಹನ ದಾಸಾ । ಗಾಂಡೀವರ್ಜುನ ನಲ್ಲವೇನೆ ೬

ಧೀರ ನೀನಾದರೆ ಏನು ಭಾರಿ ಗುಣವೆಲ್ಲಾ ಬಲ್ಲೆನಾನು
ದ್ವಾರಾವತಿಯಲ್ಲಿ ದೊರೆತನದಲ್ಲಿ ಧೀರ
ಯತಿಯಾಗಿರು ಹೋಗೋ ೭

ಕೋಟಿರಾಯಗೆ ಮೇಟಿ ನಾನು । ಮಾಟವಾದ ಮುಖದವನು।
ವಟುರೂಪನ್ನ ವಲಿಸಿದೆನೆ ಕಿರೀಟಿ ಅಲ್ಲವೆ ಕೃಷ್ಣಿನಾನೆ ೮

ಕೋಟಿರಾಯಗೆ ಮೇಟಿ ನೀನು । ಮಾಟವಾದ ಮುಖದವನು ।
ಬೂಟಿತನದಿ ವಿರಾಟನಲ್ಲಿ । ಆಟವಾ ಕಲಿ ಸ್ಪೋಗೊ ನೀನು ೯

ಘಾತುಕ ಕರ್ಮಗಳನ । ಖ್ಯಾತಿಯಿಂದ ಜೈಸಿದ್ದೇನೆ
ಮಾತೆ ಅಳಿದಗೆ ದೂತನಾನು ಶ್ವೇತವಾಹನ ದ್ರೌಪದಿನಾ ೧೦

ಶ್ವೇತ ವಾಹನ ನೀನಾದರೇನು । ಖ್ಯಾತಿಯೆಲ್ಲ ಬಲ್ಲೆ ನಾನು
ಜೂತದಲ್ಲಿ ಸೋತವ ನೀ । ಅಗ್ನಾತವಾಸದಲ್ಲಿರು ಹೋಗೋ ೧೧

ವಿಪಿನಾವಾಸದಿಯುದ್ಧ । ವಿಪರೀತ ಮಾಡಿದೇನೇ ಶ್ರೀ
ಪತಿ ಶ್ರೀ ರಾಮದೂತ, ಭೂಪ ವಿಜಯನಾ ವಿಮಲಾಂಗೀ ೧೨

ಭಾಳ ಪೇಳಿದಿ ಗುಣವನ್ನು ಕೇಳಲಿಕೆ ಅಶಕ್ಯವಿನ್ನು
ಬೋಳರಾಯರೊಳ್ ಕಾಳಗವನು ।
ಭಾಳ ಹರುಷದಿಗೆಲಿ ಹೋಗೋ ೧೩

ಉಕ್ಕುವ ಯೆಣ್ಣೆಯೊಳ್ ನೋಡಿ ।
ಮೀನು ಫಕ್ಕನೆ ಖಂಡಿಸಿದೆನೇ
ರುಕ್ಮಿಣಿ ಪತಿ ಶ್ಯಾಲ ನಾನು । ಹೆಚ್ಚಿನ ಸವ್ಯಸಾಚಿ ನಾನು ೧೪

ದುಷ್ಟ ಕುರುಪತಿಗೆ ಭಯವ ಪಟ್ಟು । ಶ್ರೇಷ್ಟ ಸ್ತ್ರೀ ವೇಷ ಬಿಟ್ಟು
ಅಷ್ಟು ಜನರೊಳು ಗುಟ್ಟುತೋರದೆ । ಧಿಟ್ಟದ್ವಿಜನಾಗಿ ಹೋಗೊ ೧೫

ಯುದ್ಧದಲಿ ಪ್ರಸಿದ್ಧನಾನು । ಭದ್ರವಾಗಿ ಮಾಡುವೆನು
ಬೌದ್ದ ರೂಪಗೆ ಬಂಧು ನಾನು । ಪ್ರಸಿದ್ಧ ಕೃಷ್ಣ ನಾನಲ್ಲವೇನು ೧೬

ಯುದ್ಧದಲ್ಲಿ ಪ್ರಸಿದ್ದನೆಂದು । ಸಿದ್ದಿಗಳನು ಹೇಳಿದಿಂದು
ಮುದ್ದು ಬಬ್ರುವಾಹನನಲ್ಲಿ । ಬಿದ್ದ ಸುದ್ದಿಯ ಪೇಳೊ ಇಲ್ಲಿ ೧೭

ಕಂಜ ಮುಖಿಕಲಿ ಭಂಜನಾನ ಮಾಯಾ
ಪಂಜರದೊಳಿರುವೆನೆ । ಮಂಜುಳ ವಾಣಿ
ಕೇಳೆ ನಾರಾಯಣನಲ್ಲವೇನೆ ೧೮

ವಜ್ರದಬಾಗಿಲು ತೆಗೆದು । ಅರ್ಜುನನಪ್ಪಿದಳ್ ಬಿಗಿದು
ಸರ್ಜಯೊದೊಳು ಬಾರೆಂದು ಕರೆದು । ಮೂರ್ಜಗ
ದೊಡೆಯಗೆ ಕೈಮುಗಿದು ೧೯

ನಿರುತವೀ ಸಂವಾದ ಪಠಿಸಲು ಭರಿತವಾದ ಸುಖವೀವೊದು
ತ್ವರಿತ ದಿಂದಲಿ ದುರಿತಕಳಿಯೋದು।ನರಸಿಂಹ
ವಿಠಲನ್ನ ನೆನೆಯೋದು ೨೦

## ೧೩

ಶಶಿವದನೇರೆಲ್ಲ ದಿವಸಿವ್ರತವ ಮಾಡಿರೇ
ಶಶಿಧರನ ಮಡದಿಯಾ ಭಜಿಸಿ ಪಾಡಿರೇ ಪ

ಕರ್ತೆರಾಯನ ಪತ್ನಿಯೂ । ಸುಪುತ್ರನ್ನ ಪಡೆಯಲೂ
ಇತ್ತಳು ವಸ್ತ್ರಗಳನ್ನು ಚೆಂದದಿ ದ್ವಿಜರಿಗೆ ಕೊಡಲೂ
ಪಡೆದಳು ಪುತ್ರನಾ ಬುಧರು ಕಾಳಿಂಗ ನೆಂದು ಕರೆದರು
ಪರಿ ಪರಿವಿಧದಿಂದ ರಾಜರು ಹರುಷಗರೆದರೂ ೧

ಗಿರಿಕಾನನದಿ ಚಲಿಸಿ । ಮೃಗವ ಸಂಹರಿಸೀ
ಬಾಲಕನೂ । ಬರುತಿರಲು ಬಾಲಕನು ವ್ಯಾಘ್ರದ ದನಿಕೇಳಿ
ಮೂರ್ಛೆಗೈದು ಮೃತನಾದನು ೨

ಮೃತನಾದ ಸುತಗೆ । ಸತಿಯ ಕೊಡಬೇಕೆಂದು ಸಾರಿಸಿದ
ಸತತ ದ್ರವ್ಯಗಳ ಕೊಡುವೆನೆಂದು ಸಾರಿಸಿದ
ಸತತ ದ್ರವ್ಯ ಕೊಡುವೆನೆಂದು ಮಾತ ನಾಡಿದೆ ದ್ವಿಜನಸುತನ
ಸತಿಯ ತ್ಯಜಿಸಿ ಹೋಗಿರಲು ನಿಜಸುತಗೆ ಭಗಿನಿಯ
ಕೊಡುವೆನೆಂದು ನುಡಿದಾನು ೩

ಬೆಳ್ಳಿ ಬಂಗಾರ ಸಹಿತ ನಮಗೆ ಇರುವೋದೂ
ಕನ್ನಿಕೆಗೆ ಮಾಂಗಲ್ಯ ಬಂಧನ
ಮಾಡಿಹೋದಾರು ೪

ರಾಜನು ಹೋಗುವಾಗ । ಸೊಸಿಯಮನೆಗೇಳೆಂದನು
ಪತಿಯ ಬಿಟ್ಟು ಹ್ಯಾಂಗೆ ಮನೆಗೆ ಬರುವೋದೆಂದಳು
ಪತಿಯ ಬಿಟ್ಟು ಬಂದರೆ ಪತಿವ್ರತವು ಇರುವೋದೆ
ಹಿತವು ಬಯಸಿ ಬಂದರೆ ಸದ್ಗತಿಯು ದೊರೆವುದೇ ೫

ಒಂದು ದಿನ ಸುಂದರಿ ಬಂದವರ ಕೇಳಿದಳು
ಮಂದಗಮನೆ ಇಂದು ದಿವಸಿ ವ್ರತವು ಅಂದರು

ಹಿಂದೆ ಗೌರಿಪೂಜಿಸಿದೆ ಮುಂದೆ ವ್ರತವನು
ಬಂಧು ಬಳಗ ಇಲ್ಲದಲೆ ಮಾಡುವುದೇನು ೬

ನಾರುಬತ್ತಿ ನೀರು ಎಣ್ಣೆ ಗೌರಿಗೆ ಮಾಡಿದಳು
ಅಪಾರ ಸದಿಗೆ ಮುರಿದುಗೌರಿ ಪೂಜಿಸಿದಳು
ಹರತಾ ಭಂಡಾರ ಒಡೆದು ಹರುಷಗರೆದನು
ವರ ಕಾಳಿಂಗ ಕ್ಷಣ ದೊಳೆದ್ದು ಮಾತಾಡಿದನು
ಪತಿಯಸಹಿತಾಗಿ ತಮ್ಮ ಗೃಹಕೆ ಬಂದರು
ಸತತ ನಾರಸಿಂಹನ ಸ್ಮರಣೆ ಮಾಡಿದರು ೭

## ಸಂಪ್ರದಾಯ

### ೧೪

ಆರುತೀಯಾ ಬೆಳಗೆ ಬೇಗಾ ಸಾರಸಾಕ್ಷ ದೇವನೀಗೆ ಪ

ನಾರಿಮಣಿಯರೆಲ್ಲ ಕೂಡೀ । ತಾರೆ ಮುಕ್ತಿನಾರುತೀಯಾ ಅ.ಪ

ರಕ್ಕಸಾಂತಕ ದೇವನೀಗೆ । ಸಕ್ಕುಬಾಯಿ ವರದನಿಗೇ
ಲಕ್ಷೂಮೀಯ ಪ್ರೀಯನೀಗೆ । ಮಂಗಳಾ ಜಯಮಂಗಳಾ ೧

ನಾರಸಿಂಹಾ ವಿಠಲನೀಗೆ । ಚಾರುಮಹಿಮಾತೋರಿದವಗೇ
ನಾರೆಯರು ಹರುಷದಿಂದಾ । ತಾರೆ ಮುತ್ತಿನಾರುತೀಯಾ ೨

### ೧೫

ಮಂಗಲಾರತಿಯ ಪಾಡಿರೇ । ರಂಗನಾಥರುಕ್ಮಿಣೀಗೆ ಪ

ಸಿಂಧು ಸುತೆಗೇ । ಸೀತಾರಾಮಚಂದ್ರಗೇ । ಉಪೇಂದ್ರಗೇ ಅ.ಪ

ನೀರೊಳಾಡಿದಾ ಮತ್ಸ್ಯ ಕೂರ್ಮವರಹಾವತಾರಗೇ
ಕರುಳ ಮಾಲೆಧರಿಸಿದಾ ಲಕ್ಷ್ಮಿನಾರಸಿಂಹಗೇ ೧

ಬಲಿಯ ದಾನವನ್ನೇ ಬೇಡಿ ಮಾತೆ ಶಿರವನಳಿದವಗೇ
ಛಲದಿ ದೈತ್ಯನ ಕೊಂದು । ತಾಯಿಗೆ ಬಾಯಲ್ಲಿ
ಜಗವತೋರ್ದವಗೇ ೨

ಬೆತ್ತಲಾಗಿ ನಿಂತಿದ್ದ ಉತ್ತಮ ಬೌದ್ಧ ಕಲ್ಕಿಗೇ
ಸೃಷ್ಟಿಗೊಡೆಯ ಬಳ್ಳಾರಿ ಲಕ್ಷ್ಮೀನಾರಸಿಂಹವಿಠಲಗೇ ೩

## ೧೬

ಲಾಲಿ ಕಶ್ಯಪಗೋತ್ರ ಪರಮ ಪವಿತ್ರ ।
ಲಾಲಿ ತ್ರಿ ಗುಣಗಾತ್ರ ಲಕ್ಷ್ಮಿಕಳತ್ರಾ ಲಾಲೀ ಪ

ನೀರೊಳಗೆ ಮನೆಯು ಮಾಡಿಒಡ್ಯಾಡೀ ।
ಕೋರೆಯನೆ ಮಸೆದು ಭೂಮಿಗೆ ಕಡೆದಾಡೀ
ಮೋರೆಯನು ಮುಚ್ಚಿಕೈಕಾಲು ತೂಗ್ಯಾಡೀ
ಘೋರ ರೂಪವ ಧರಿಸಿ ಬಲಿದಾನವನೆ ಬೇಡೀ ೧

ಕೊಡಲಿಯನು ಪಿಡಿದು ಮಾತೆಯ ಶಿರವನೇ ಒಡೆದೂ
ಮಡದಿಗೋಸ್ಕರ ದಶಶಿರನ ಶಿರವತರಿದೂ
ತುಡುಗ ತನದಿ ಮೊಸರು ಗಡಿಗೆಗಳ ಒಡೆದೂ
ಮಡದಿಯರ ವ್ರತಭಂಗ ಮಾಡಿದೆಯೊ ಪಿಡಿದೂ ೨

ಹಯವನೇರಿದ ಹರಿಯು ಬಹುಜನರ ಪೊರೆಯೇ
ಚೆಲುವ ಮೂರುತಿ ತೊಟ್ಟಿಲೊಳು ಮುದ್ದು ಸುರಿಯೇ
ಪರಮ ಪುರುಷ ಸದ್ಭಕ್ತರ ಸಿರಿಯೇ
ಪವಡಿಸೋ ನರಸಿಂಹ ವಿಠಲಾ ಧೊರಿಯೇ ಲಾಲೀ ೩

## ವಿಶೇಷ ಸಂದರ್ಭ

### ೧೭

ಕಂಡೆ ಸ್ವಾದಿ ಪುರರನ । ಕೊಂಡಾಡುವೆ
ವಾದಿರಾಜ ಗುರುಗಳನಾ ಪ

ಭೂತಪ್ರೇತವ ಬಿಡಿಸುವವನಾ । ಅನಾಥರಿಗೆ
ಪ್ರೀತಿ ತೋರುವವನಾ
ಮಾತಿಗೆ ಮಾತು ಮಾಡುವವನಾ । ಗುರುನಾಥನ
ದೂತ ವಾದಿರಾಜನಾ ೧

ಧವಳ ಗಂಗೆಯ ದಿವ್ಯ ಸ್ನಾನ । ಅಲ್ಲಿ ಹೊಳೆಯುವಂಥಾ
ಸಾಲು ಬೃಂದಾವನಾ
ಕೊಳಲ ಕ್ರಿಷ್ಣನ ದರುಶನಾ । ಚಂದದೊಳು
ಅನಂತೇಶ್ವರನ ಸನ್ನಿಧಾನಾ ೨

ವಾತಸುತನಿಗೆ ಸಮನೀತ ಅದ್ಭುತ ಖ್ಯಾತ ।
ಲೋಕಜನರಿಗೆ ಪ್ರೀತ
ಪ್ರಖ್ಯಾತ ಮಹಿಮ ಯಮರಾಜನ ದೂತ । ಜಗಖ್ಯಾತ
ಗುರುವರನಾ ೩

ಪಂಚ ಬೃಂದಾವನವ ನೋಡಿ ಮನದ
ಸಂಚಿತಾಗಮ ಈ ಡ್ಯಾಡಿ
ಮುಂಚೆ ನಮಸ್ಕಾರ ಮಾಡಿ । ಪ್ರಪಂಚದಲ್ಲೆ ।
ಅಧಿಕ ವಾದಿರಾಜರ ನೋಡಿ ೪

ಭೂಸುರನಂತ್ಥೊಳಿಯುವದ । ಬಂದು ನೋಡಲು
ಜನಕೆ ಉಲ್ಲಾಸ
ಲೇಸಾದ ಮಹಿಮೆ ಉಳ್ಳವರನಾ । ಸ್ವಾದಿಲ್ವಾಸ
ಮಾಡುವ ವಾದಿರಾಜರ ೫

ಚಕ್ರ ಶಂಖವ ಧರಿಸಿದಾ । ನಮ್ಮ ರುಕ್ಮಿಣಿ ಸಹಿತ ಬಂದು ನಿಂತಿಹ
ಶಕ್ರನಾಗರ್ವಮುರಿದನ । ಅಮಿತ ವಿಕ್ರಮ ಚರಿತ ।
ತ್ರಿವಿಕ್ರಮದೇವನಾ ೬

ಎಂತು ಹೇಳಲಿ ಧ್ವಜಸುತ್ತಿ ಅಲ್ಲಿ । ಸಂತಾನವನು
ಬೇಡುವವರನು । ಬೆನ್ನತ್ತಿ
ನಿಂತು ಹರಸಿದರು । ಎತ್ತಿ ಅದರಲಿ ಸಂತಾನ
ಬೀಜಗಳನು ಬಿತ್ತುವರು ೭

ಚವಕಿ ಮಠದಿ ದಿವ್ಯಪ್ರಸ್ತ । ಓಡಾಡಿ ಬಡಿಸುವ ಜನಗಳ ಸಿಸ್ತಾ
ನಿಂತು ನೋಡಿದೆನು ಪ್ರಶಸ್ತಾ ಅಲ್ಲಿ ಕೂತು ನೋಡುವ
ಯತಿಗಳ ಸಿಸ್ತಾ ೮

ಭೋಗತನದ ಫಳಾರ ಅಲ್ಲಿ ಹೋಗಿ ಕುಳಿತು
ಜನರ ಅಲಂಕಾರ
ಕೂತು ನೋಡಿದೆನು ಶೃಂಗಾರ । ಓಡ್ಯಾಡುತಿಹ
ಯತಿಗಳ ಗಂಭೀರಾ ೯

ಭೂತಬಲಿಗಳ ನೋಡಿ । ನಮ್ಮ ಭೀತಿ–ಭಯಗಳನ್ನು ಬೀಸಾಡಿ
ಪ್ರೀತಿಲಿ ನಮಸ್ಕಾರ ಮಾಡಿ । ಪ್ರಖ್ಯಾತ ಮಹಿಮೆ
ಭೂತರಾಜನ ನೋಡಿ ೧೦

ರಥದುತ್ಸವ ಅಲಂಕಾರ ಅಲ್ಲಿ । ಅನೇಕ ಜನರಾ
ಪೀಳಿಗೆ ಪೂಜೆ ಚಂದ
ಕಣಕದ್ವಾಲಗವು ಬಹು ಚೆಂದ । ಮನಕೆ ಆಯಿತು
ನೋಡಲು ನಂದ ೧೧

ಮುತ್ತು ಕೆತ್ತಿಹ ಕಿರೀಟ । ಬಹು ಚಿತ್ರವಾಗಿಹಗದ್ದುಗೆ ಮಾಟ
ಸುತ್ತ ಜನರು ನಿಂತು ನೋಟ । ಜೀವೋತ್ತಮ
ವಾದಿರಾಜರ ದೊಡ್ಡ ಆಟಾ ೧೨

ಈಕ್ಷಿಸಲಳವೆ ಮತವಾ ಎನ್ನಕ್ಷಿಗಳಿಂದ ನೋಡಲು
ಸಾಕ್ಷಾತ ವೈಕುಂಠದವನಾ । ನಮ್ಮ ಲಕ್ಷ್ಮೀ ಅರಸಾ
ನರಸಿಂಹ ವಿಠಲನ್ನಾ ೧೩

## ೧೮

ನೋಡಿದೆನು ಭದ್ರಾಚಲವಾಸನ । ನೋಡಿದೆನು ಜಗದೀಶನಾ
ನೋಡಿದೆನು ಶ್ರೀ ಸೀತಾರಮಣನ । ನೋಡಿದೆನು ಸರ್ವೇಶನಾ ಪ

ಅಂಗನೇಯರ ಕೂಡಿ ನಾನು ಮಂಗಳಗಿರಿನೋಡಿದೆ
ಮಂಗಳಾಂಗಾ ನಾರಸಿಂಹಗೆ ತಂದು ಪಾನಕ ನೀಡಿದೆ ೧

ಸಜ್ಜನರಿಂದ ಕೂಡಿ ನಾನು ಬೆಜ್ಜವಾಡವ ನೋಡಿದೆ
ಮೂರ್ಜಗ ಪಾವನಿಯ ಕೃಷ್ಣೆಯ ಮಜ್ಜನವು ನಾ ಮಾಡಿದೆ ೨

ಮಾಧವನ ದಯದಿಂದ ನಾನು ಗೋದಸ್ನಾನವು ಮಾಡಿದೆ
ಮೋದದಿಂದಲಿ ಬಂದು ವಿಮಾನರಾಮನ ನೋಡಿದೆ ೩

ನೇಮದಿಂದಲಿ ಬಂದು ನಾನಾ ರಾಮದಾಸನ ನೋಡಿದೆ
ವಾಮಭಾಗದಿ ಕುಳಿತ ಲಕ್ಷ್ಮಣ ಸ್ವಾಮಿ ದರುಶನ ಮಾಡಿದೆ ೪

ಸಪ್ತಋಷಿಗಳು ದಶರಥಾದಿ ಉತ್ತಮರ ನಾ ನೋಡಿದೆ
ಸುತ್ತು ಮುತ್ತು ದೇವತೆಗಳನಾ ಮತ್ತೆ ಮತ್ತೆನಾ ನೋಡಿದೆ ೫

ದೋಷದೂರ ಭದ್ರಾಚಲದಿವಾಸ ರಾಮಚಂದ್ರನ
ಸೋಸಿನಿಂದಲಿ ಬಂದು ನಾ ವಿಶೇಷ ದರುಶನ ಮಾಡಿದೆ ೬

ಕಡುಹರುಷದಿಂದಲಿ ರಾಮನ ತೊಡೆಯಮ್ಯಾಲೆ ಒಪ್ಪಿದ
ಮಡದಿ ಸೀತಾದೇವಿಯನ್ನು ಸಡಗರದಿ ನಾ ನೋಡಿದೆ ೭

ಇಷ್ಟದಿಂದಲಿ ಭಜನೆಗೊಳ್ಳುವ ಶ್ರೇಷ್ಠ ರಾಮನ ನೋಡಿದೆ
ಉಷ್ಣಕುಂಡದ ಸ್ನಾನವನ್ನು ಥಟ್ಟನೇ ನಾ ಮಾಡಿದೆ ೮

ಉನ್ನತವಾಗಿರುವ ಸುವರ್ಣಗೋಪುರ ನೋಡಿದೆ
ಮುನ್ನ ಮಗ್ನವಾಗಿರುವ ಅನ್ನ ಛತ್ರವ ನೋಡಿದೆ ೯

ಪರ್ಣಶಾಲೆಯನ್ನು ನೋಡಿ ಪರಮ ಹರುಷವ ತಾಳಿದೆ
ನಿರ್ಮಲ ಚರಿತ್ರ ರಾಮನ ವರ್ಣಿಸಲಳವಲ್ಲವೆ ೧೦

ಲಕ್ಷ್ಮೀವಲ್ಲಭ ರಾಮನ ಪ್ರತ್ಯಕ್ಷಮದಿವೆಯ ನೋಡಿದೆ
ಮುತ್ತು ಮಾಣಿಕ್ಯದ ಹಾರವು ನವರತ್ನದಾಕಿರೀಟವನು
ನಾ ನೋಡಿದೆ ೧೧

ಚಂದ ಚಂದಾ ಜನರು ಎಲ್ಲಾ ಆನಂದದಿಂದಲಿ
ತಂದು ತಂದು ಹಾಕುವಂತಹ ಚಂದವನು ನೋಡಿದೆ ೧೨

ಇಂತಹ ರಾಮನವಮಿ ಉತ್ಸವ ಲೋಕವಲಿ ನಡೆವುದು
ಹತ್ತುವದನ ಶೇಷನಿಗೂ ಸಹಾ ತಪ್ಪದೇ ಎಣಿಸಲಾಗದು ೧೩

ನಮ್ಮವಾಯು ಸುತನ ಪಾದಕೆ ಸುಮ್ಮನೇನಾನೆರಗಿದೆ
ಘನ್ನ ಮಹಿಮನ ಪ್ರಸನ್ನ ಸೀತಾರಾಮನನು ನಾ ನೋಡಿದೆ ೧೪

ತೇರನೇರಿ ಬರುವ ರಾಮನ ವೈಯಾರವನು ನಾ ನೋಡಿದೆ
ಮೇರು ನಂದನ ಭದ್ರಾಚಲದಿ ವಿಚಾರ ಮಾಳ್ಪುದ ನೋಡಿದೆ ೧೫

ಪ್ರಹ್ಲಾದವರದ ನಾರಸಿಂಹ ವಿಠಲನ
ಎಲ್ಲ ಉತ್ಸವ ನೋಡಿ ಮನಕೆ ಆಹ್ಲಾದವನೆ ನಾ ಪಾಡಿದೆ ೧೬

## ೧೯

ನೋಡಿದೆನು ಶ್ರೀ ಶೈಲವಾಸನ । ನೋಡಿದೆನು
ಪಾರ್ವತಿರಮಣನಾ
ನೋಡಿದೆನು । ನೋಡಿದೆನು । ಪರ್ವತ ಮಲ್ಲೇಶನಾ ೧

ಆಟವಾಡುತ ಪಾಟ ಪಾಡುತ । ಕೋಟಿ ಜನರ ಸಹಿತಾಗಿ
ಸಾಟಿಯಿಲ್ಲದ ಪರ್ವತ । ನಾಗಾ ಲೋಟಿಯನೆ ನಾ ನೋಡಿದೆ ೨

ಶುದ್ಧ ಸ್ನಾನವ ಮಾಡಿನಾನು । ವಿಧ್ಯುಕ್ತದಿಂದಲಿ ।
ಅಲ್ಲಿದ್ದ ಜನರ ಸಹಿತಾಗಿ
ಪೆದ್ದ ಚೆರುವನ್ನೆದಾಟಿದೆ । ಪುಟ್ಟ ಬೆಟ್ಟಗಳೇರಿ ಇಳಿಯುತ
ಕೃಷ್ಣಧ್ಯಾನವ ಮಾಡುತ
ದಿಟ್ಟ ಮಲ್ಲಿಕಾರ್ಜುನನ ಮನ ಮುಟ್ಟಿ ಸ್ಮರಣೆಯ ಮಾಡುತ ೩

ನಿಸ್ಸೀಮಗುಣಗಣಧಾಮ । ಅರಿಯದಮನ । ಸಾರ್ವಭೌಮ
ಶ್ರೀಭೌಮನ ಕೊಳ್ಳ ನೇಮದಿಂದಲಿ ದಾಟಿದೆ ೪

ಆ ಶೈಲ ಕೈಲಾಸ ಧಾಮಕೆ । ಸೋಂಪಿನಿಂದಲಿ ಬಂದೆನೂ
ಸಾಕ್ಷಿಗಣಪಗೆ ಕೈಯ ಮುಗಿದೂ । ಶ್ರೀ ಶೈಲಶಿಖರವ ಕಂಡೆನು ೫

ಭಂಗಾರ ಗೋಪುರದ ಮ್ಯಾಲೆ । ಶೃಂಗಾರವನು ನಾ ನೋಡಿದೆ
ನಂದಿ ಭೃಂಗಿ ಮೊದಲು ಮಾಡಿ ಸಕಲ ತೀರ್ಥವ ನೋಡಿದೆ ೬

ಅಲ್ಲಿ ಸ್ನಾನವ ಮಾಡಿನಾನು । ಬಲ್ಲಿದನ ಬಲದಿಂದಲಿ
ಎಲ್ಲ ಫಲ ಪುಷ್ಪಧರಿಸಿದ ಮಲ್ಲಿಕಾರ್ಜುನನ ನೋಡಿದೆ ೭

ಪಂಚಾಮೃತವ ಮಾಡಿನಾನು । ಸಂಚಿತಾಗಮ ಕರ್ಮವು
ವಂಚನಿಲ್ಲದೆ ಕರೆದು । ನಿಶ್ಚಿಂತೆ ಮನವನು ಮಾಡಿದೆ ೮

ರಂಗ ಸಂಗದಿ ಜನಿತ ಪಾತಾಳಗಂಗಿ ಉದಕವು ತಂದು
ಗಂಗಾಧರಗೆ ಎರೆದು ನಾನು । ಕಂಗಳಿಂದಲಿ ನೋಡಿದೆ ೯

ಧೂಪ–ದೀಪ–ನೈವೇದ್ಯದಾರುತಿ । ಅನೇಕ ಭಕ್ತಿಲಿ ಮಾಡಿದೆ
ಪ್ರೀತಿಯ ತೋರೆಂದು ಶಿವಗೆ । ಪ್ರೀತಿಲಿ ಕರಮುಗಿದೆನು ೧೦

ಮುದ್ದು ಕೋಟಿಲಿಂಗಗೆ ನಾನು । ವಿಧ್ಯುಕ್ತದಿ ನಮಿಸಿದೆ
ವೃದ್ಧ ಮಲ್ಲೇಶ್ವರನ ನೋಡಿ । ಅಲ್ಲಿದ್ದದೇವರ ಭಜಿಸಿದೆ ೧೧

ಅಮರರಿಂದರ್ಚಿಸಿಗೊಂಬ । ಭ್ರಮರಾಂಬನ ನೋಡಿದೆ
ಭ್ರಮೆಯು ಬ್ಯಾಡೆಂದು ಸಂಸಾರದ । ಬ್ಯಾಗದಿಂದಲಿ ಬೇಡಿದೆ ೧೨

ಥಟ್ಟನೇ ಪಂಚಾ ಮಠವನೋಡಿ । ಅಟಕೇಶ್ವರಕೆ ಬಂದೆನು
ಶಿಖರೇಶ್ವರನ ದರ್ಶನ ಮಾಡಿ । ಹಾಟಕೇಶ ಪುರ ನೋಡಿದೆ ೧೩

ಭಾರತಿಯ ಶೈಲಿ ವಿಸ್ತಾರ ಪತ್ರಿ ಪುಷ್ಪಗಳ ಫಲಗಳ
ನಾರಸಿಂಹ ವಿಠಲಗರ್ಪಿಸಿ । ಧಾರೆ ಎರೆದು ಬಂದೆನು ೧೪

## ೨೦

### ತರಕಾರಿ ಹಾಡು

ನಿನ್ನ ದಾಸರ ಬಿಟ್ಟನಾ ಬಾಳೆ ಕಾಯೋ ಪ

ಸಣ್ಣ ಮೂರುತಿ ನೀ ನೆಂಬೆ ಕಾಯೋ
ಮಾರ ಜನಕನೆ ಅಳಿದ ಮಾವನ್ನ ಕಾಯೋ
ಸಾರಿ ಕರೆದರೆ ನೀ ಬಾರೆ ಕಾಯೋ
ಮಾರ ಜನಕ ನರಸಿಂಹ ವಿಠಲ ನೀ
ಮಾಡಿದ್ದೆಲ್ಲವು ಎನಗೆ ಸಮತೆ ಕಾಯೋ

## ೨೧

ತಪ್ಪೆಣಿಸುವರೇನೋ । ತಾಮರದಳಾಕ್ಷ
ಅಪ್ಪ ನೀ ಒಪ್ಪಿದರೆ ತಪ್ಪೆಲ್ಲಿ ಇಹುದೋ ಪ

ಅಕ್ಕರದ ಅಜಮಿಳನು ಅಕ್ಕನಾಮಗ ನೇನೋ
ಚಿಕ್ಕ ಧೃವನಾ ತಾಯಿ ಚಿಕ್ಕಮ್ಮನೇನೋ
ರಕ್ಕಸಾ ಸುತ ನಿನಗೆ ರೊಕ್ಕ ಕೊಟ್ಟನೊ ಎನೋ
ಇಕ್ಕಿ ನೀ ಭವದೊಳಗೆ ಹೀಂಗೆ ನೋಡುವರೇನೋ ೧

ಅಂತ್ಯಜಳ ಕೂಡಿ । ಅನಂತ ಕರ್ಮವ ಮಾಡಿ
ಅಂತರದಿ ನಿನ್ನೊಮ್ಮೆ ನೆನೆದನೇ ನೋ
ಅಂಥ ಶೊಬಚನ ಮಗಳ ಕಾಂತನೆಂದೆನಿಸಿದೀ
ಕಂತು ಪಿತನೇ ನಿನ್ನ ಕರುಣವಿದ್ದರೆ ಸಾಕೊ ೨

ನಾಮಾಡಿದಪರಾಧ ನೀಕ್ಷಮಿಸದಿದ್ದರೆ
ಯಾರು ಪೊರೆವರೊ ಎನ್ನ ವಾರಿಜಾಕ್ಷ
ಧೀರ ನರಸಿಂಹ ವಿಠಲ ನಿನ್ನಾಧೀನಳಾದೆನೋ
ಇನ್ನೇನು ಮಾಡಿದರು ಮಾಡೋ ನೀನು ೩

# ದೀರ್ಘಕೃತಿಗಳು

## ೧

## ದ್ರೌಪದಿ ವಸ್ತ್ರಾಪಹರಣ

ಕರಿಮುಖನಿಗೆ ನಾನು ಕರಮುಗಿದು ಪೇಳುವೆನು, ವರಶಾರದಿಗೆ
ನಾನು ವಂದಿಸುವೆನೂ । ಕರಿಪುರದ
ದೊರಿಸತಿಯ ಚರಿತೆಯನಾ
ಪೇಳುವೆನು । ತ್ವರಿತದಿ ಕೇಳಿ ವಿಸ್ತರಿಸಿ ಪೇಳುವೆನೂ
ಹರಿಯನೆ ಸ್ತುತಿಸೆಲೊ ಮನವೆ । ಶಿರಿಧೊರಿಯನೆ
ಸ್ತುತಿಸೆಲೊ ಮನವೆ.
ಅಜಮೀಳ ಧೃವನ ತಾ ಪೊರಿದಾ । ತನ್ನ
ಭಜಿಸುವ್ವೋರಿಗೆ ಸುಖತಂದಾ
ನಿಜ ಭಕ್ತರನ್ನೆತಾ ಪೊರಿದಾ । ತ್ರಿಜಗದೊಳಗತಿ ಮೆರೆದಾ ೧

ತರಳ ಪ್ರಹ್ಲಾದನು ಕರೆಯೆ । ಅಲ್ಲಿ ತೆರಳಿದ ಕಂಬದಿಂಧರಿಯೆ
ಕರುಳ ಧರಿಸಿದಂಥ ಧೊರೆಯೆ । ಶಿರಿನರಸಿಂಹ ವಿಠಲನು ಪೊರೆಯೆ ೨

## ವಚನ

ಸ್ವಸ್ತಿದಲಿ ಪಾಂಡವರು ತಾವು । ಇಂದ್ರ
ಪ್ರಸ್ತದಾ ಪುರದಲ್ಲಿ ಇರುತಿರಲು
ಹಸ್ತಿನಾ ಪುರದ ದೊರೆಯು ತಾನು
ಚಿತ್ತದೊಳಗೆ ಯೋಚಿಸಿದನು
ರಾಜಸೂಯಾಗವನು ಮಾಡಿ । ಧರ್ಮ ರಾಜನೆನಿಸಿದ್ದು ನೋಡಿ
ಧುರ್ಯೋಧನನು ತನಗಾದ ಅವಮಾನಗಳ ಶಕುನಿ
ಕರ್ಣಗೆ ಅರುಹಿದನು

## ಹಾಡು

ಕರ್ಣಭೀಮಸೇನರೆಲ್ಲಾ । ಕೇಳಣ್ಣನಾ ಬಿಡದೆನ್ನ । ಬ
ಕಣ್ಣೇಲಿನೋಡಿ ಆ ಬಣ್ಣೇಸೂವೆನೀಗ ಪ

ವಚ್ಚ್ಯಾನೀರುಗಳನ್ನು । ಸ್ವಸ್ಥಜಲಗಳೆಂದು ।
ಬಿಚ್ಚ್ಯಾದನೆರಿಗೆಯು ಎತ್ತಿ ಹಿಡಿದೆನೀಗೆ ೧

ಮಾಡಿಯೊಳೆ ಕುಳುತವಳ । ನೋಡುತಲೆನ್ನನು ।
ಮಾಡಿದಳಾ ಶ್ಯಾಮಲೆ ಘಡನಾಗಿಗಳಿಂದ ೨

ಕಾಣುತ್ತಲೆನ್ನನು । ಘಾಣಿಯ ಹೊಡೆದು ಬಲೆ
ಝಾಣೆ ತನ್ನ ಫಣಿಯೊಳಿಟ್ಟಳು ೩

ಇಂಥಾವಮಾನಗಳ ಮಾಡಿದಳೊ । ಇನ್ನೆಂತು ಸೈರಿಸಲೊ
ಇನ್ನೆಂತು ಇನ್ನೆಂತು ಜಾನಿಸಲೊ ೪

ಧಿಟ್ಟಾ ಶ್ರೀ ನರಸಿಂಹ ವಿಠಲನ ಪಾದ । ಮುಟ್ಟಿ
ಭಜಿಪೊರಿಗೆ । ಕಷ್ಟತಾರನೆಂದ ೫

## ವಚನ

ರಾಜಸೂಯಾಗದಲಿ ದುರ್ಯೋಧನನು ।
ತನಗಾದ ಅವಮಾನಗಳ
ಶಕುನಿ ಕರ್ಣರಿಗೆ ಹೇಳಲು ಆಗ । ರಾಜನಿಗೆ ಧೈರ್ಯವನು
ಮೋಜಿನಿಂದಲಿ ನುಡಿದ ಮಾತುಗಳನೂ ।

## ಹಾಡು

ಚಿಂತಿಯಾಕೆಲೋರಾಜಾ । ಚಿಂತಿಯಾಕೆಲೋ ಪ

ಕೊಂತಿಯ ಸುಜಾತರನಾ । ನಿಂತಗಾಲೆಲೆ ಕರಿಸೂ । ಚಿಂತೆಪೆ
ಉಪಾಯವನ್ನೆ । ಏಕಾಂತದಲ್ಲೆ ಪೇಳುವೆನೂ ೧

ಬಣ್ಣ ಬಣ್ಣದಾಟವಾಡಿ । ಅರಣ್ಯ ಕವರ ಕಳಿಸೂವೇನು
ಸಣ್ಣಮಾರಿಯಾಕೆ ಇನ್ನು । ಕಣ್ಣಿನಿಂದಲಿ ನೋಡೋ ಯನ್ನಾ ೨

ನಾರಸಿಂಹ ವಿಠಲನ್ನ ಚಾರು ಚರಣ ಭಜಿಸೂವರನ್ನ
ಭಾರಿ ಎಳತಂದು ನಿನ್ನ । ಪಾದಕ್ಕೆ ಬೀಳಿಸುವೆ ಘನ್ನಾ ೩

## ವಚನ

ಶಕುನಿ ಯಾರೀತಿ ಯುಕುತಿಯನ್ನು ಹೇಳಲು ನಸುನಗುತ
ಧುರ್ಯೋಧನನು ಧೃತರಾಷ್ಟನಲ್ಲಿಗೆ ಬಂದೂ । ಪಿತನಲ್ಲಿಗೆ
ಬಂದು ಈ ಯುಕುತಿಯನು ಪೇಳಲು ಸುತನ ವಾಕ್ಯವು
ಕೇಳಿ ಅನುಮತಿಸಲಿಲ್ಲಾ ।

## ಹಾಡು

ಪಾಂಡು ನಂದನರೊಳು ಪಂಥಗಳ್ಯಾತಕೋ ಪ
ಅನ್ಯಾಯವೆಂಬುದು ಧರ್ಮಜಗಿಲ್ಲವೋ ।
ನಿರ್ಮೂಲವಾಗೋದೂ ಧರ್ಮನಾಶಕ್ಕಿದೂ ೧

ತಂದೆ ಹೀನರು । ಸುತರೀಗ ಬಾಲಾರೊ । ಮತಿಹೀನ ನೀನಲ್ಲೆ
ಉನ್ಮತ್ರ ನಾಗಿರುವಿಯಾಕೆಲೋ ೨

ಧರ್ಮದೊಳೆ ಶೀಲರು । ತಮ್ಮನ ಬಾಲರೊ
ನಿಮ್ಮನೆ ಪೋಲುವರೋ । ಸುಮ್ಮನೆ ಯಿರೆಲೋ ೩

ಭೀಮ ಬಲ್ಲಿದನೋ । ಭೂಮಿಯೊಳಾಳು ವನೋ
ಭೀಮ ಮುನಿದರೆ ನಿನ್ನ । ನಿರ್ಮೂಲ ಮಾಳ್ಪನೋ ೪

ನರಸಿಂಹ ವಿಠಲಾ । ಸುರಪ ಸೂನುಗೆ ಭಲಾ
ಧರಿಸಿರೂ ಫಲಾ । ಕರಿಸು ನೀ ಹೋಗೆಲಾ ೫

## ವಚನ

ಧೃತರಾಷ್ಟ ಈ ನುಡಿಯ ದುರ್ಮತಿಗೆ
ಬೋಧಿಸುತಿರಲು । ಸುತನ
ಮೋಹಕೆ ಶಿಲುಕಿ ಅತಿಹರುಷದಲಿ । ಪಾಂಡುಸುತರನ್ನು
ಕರೆಯಲಟ್ಟಿದನು ತಾ ಬ್ಯಾಗೇ ಆರ್‍ಯ
ಸೂತನು ಬಂದು ಯುಧಿಷ್ಟಿರನ ಕರೆಯಲು ।
ಪ್ರೀತಿಯಿಂದ ನುಡಿದ ಬ್ಯಾಗೆ.
ತಾತನ ಬಳಿಗೆ ನಾ ತೆರಳುವೆನು ರಥವನು ತಾ ತಾರೆನುತ
ನುಡಿದನು ಆಗೆ । ಅಂದ ಮಾತನೆ ಕೇಳಿ
ಬಂದುಭೀಮನ ಕೇಳೆಂದನು
ನುಡಿಗಳು ಸಂದೇಹವು ಮಂದಮತಿಗಳ
ಮಂದಿರಕೆ ಹೋಗೋದು

ಇಂದೇನು ನಮ್ಮದೇ ಕಾರ್ಯಗಳೆ । ಆಡದಿರಪವಾದ ನೋಡಿ
ಬರುವನೊ । ಬ್ಯಾಡ ಬ್ಯಾಡೆಂಬುದೇಮನು ಥರವೋ ।
ರೂಢಿಯೊಳೇ ನರಸಿಂಹ
ಮಾಡಿದ್ದು ಮಾಡಲಿ ನೋಡಿ ಬರುವುದು ಸತ್ಯವೂ

## ವಚನ

ವಿಧದಿ ಧರ್ಮಜಗೆ ಪೇಳಲಾ ನಾಲ್ವರೂ । ಬಾಹೆನೋ ಪೋಗಿ
ಬಾಂಧವರನೋಡಿ ಎಂದೆನುತ । ವಾಹನವೇರಿ ಬಂದ್ಹಸ್ತಿನಾ ಪುರದಿ
ತಂದಿಯನು ಕಂಡು ವಂದಿಸಿ ಮುಂದೆನಿಂತಾ

## ಹಾಡು

ಸುಖಿಯಗಿರು ಎನ್ನಬಾಲಾ । ದ್ರೌಪದಿಯನು ಕೂಡನುಗಾಲಾ ಪ

ತೊಡಿಯಮ್ಯಾಲಿಟ್ಟು । ಮುಖಕೆ ಮುದ್ದು ಕೊಟ್ಟು ।
ಕಡು ಹರುಷದಿ
ಶಿರ ತಡವಿದನಾಗಲೆ । ಬಹುದಿನ ವಾಯ್ತು । ಬಾರದೆ
ಬಿಟ್ಟು ಹೋಯ್ತೋ
ಬಹುಬಲಿ ಭೀಮ ಬಂದಿಹಾನೆನುತಲಿ ಅನುಜರ
ಸಹಿತ ರಾಜ್ಯವ
ನಾಳೊರಿಹಿತಾ ಮುದದಿ ಶ್ರೀ ನರಸಿಂಹ ವಿಠಲನ ಸ್ಮರಿಸುತ

## ವಚನ

ಕುಂದ ಮನಸಿನೊಳಿಟ್ಟು ಅಂಧಕನು ಬಿರೆ ನಂದನರ
ಸಂತೈ ಸುತಿರಲೊಂದು ದಿನ ಎರಡು ದಿನಗಳಾಗುತಿರೆ
ಮಂದಮತಿ ದುರ್ಯೋಧನ ಧರ್ಮನಂದನ ನೊಡನೆ
ಜೂಜಾಡುವೆ ನೆಂದು ನುಡಿದಾ

## ಹಾಡು

ನೋಡು ನೋಡೋನೀ, ಈ ಡ್ಯಾಡೋ ಜೂಜನೆ । ಮಾಡೋ
ಧೈರ್ಯವನೇ । ನೀ ಹೂಡೋಧನವ ನೆಪ,ರಾಸಿರಾಸಿಗಳ
ಸೋಸಿಲಿ ಸುರಿದು ರೋಷಾವೇಷದಿಂದಲವರೂ
ಮೀಶೆ ತಿರುವಿದಾರೆ ೧

ಚಂಡಕೌರವಾ । ಭಂಡಾರಗೆದ್ದಾ । ಮಂಡಲಾಧಿಪನೂ ।
ಭೂಮಂಡಲ
ಹೂಡಿದನೂ । ಶಕುನಿ ಪಾಶವಾರಿಸಿ ಕೊಡುವಾ ।
ಇಕ್ಕೋ ನೋಡು
ಇನ್ನಾ ಕಡಕೋ ಧೈರ್ಯವನ್ನಾ ೨

ಅನುಜರ ಹೂಡಿದಾ । ಭಲೆಘನದಿ ಆಡಿದಾ ।
ತನುವೆ ಹೂಡಿದಾ
ಅವನ ಧೀನ ಮಾಡಿದಾ । ಅರಸಿಯಾನೋಡೋ ।
ಭಲೆ ಸರಸ
ದಿಂದಾಡೋ । ನರಸಿಂಹವಿಠಲನ್ನಾ । ಸ್ಮರಿಸಿಕೋನೀಯನ್ನಾ ೩

## ವಚನ

ಅನುಜನನೆ ಸೋತ । ಧನ ಸೋತ । ತನು ಸೋತಾ ।
ವನಜಾಕ್ಷಿಯಳ
ಸೋತಾ । ಧರ್ಮಜನು । ಹರುಷದಲಿ ದುರ್ಯೋಧನನು,
ವನಜಾಕ್ಷಿಯಳ ಕರೆತರಲು ತನ್ನ ಅನುಜನಿಗರುಹಿದಾ

## ಹಾಡು

ನಡಿ ನಡಿ ತಡವಡಕೆ ಧರ್ಮಾ । ಮಡದಿಯ
ಹಿಡಿದು ತಾರೆಲಾ ।

ಕಡುಗಲಿ ಭೀಮನಬಿಂಕಾ । ತಡಿಯದಲೆ ಬಿಡಿಸುವೆ
ಕೇಶವ ಪಿಡಿದು ಎಳೆತರಲಾ । ಸಭಾಸ್ಥಾನವ ಕೇಳಿತರಲಾ ।
ಲೇಸುಭಯವು ಬಗಯಾಡಲಾ । ದುಶ್ಯಾಸನ
ನೀನೆ ಪೋಗೆಲಾ । ೧

ನಕ್ಕಳೆನ್ನ ನೋಡುತಾ । ಯನಗೆ ಸಿಕ್ಕೆದಳೆಂದಾಡುತಾ
ಫಕ್ಕನೆ ಓಡತಾರಿತ್ತಾ । ಎನ್ನ ತೆಕ್ಕಿಗವಳ ತೂರುತ್ತಾ ೨

ಷಂಡರಂತೆ ಇರ್ಪರೋ । ಈ ಪಾಂಡುನಂದನರಿಂಥವರೋ ।
ಮಂಡಿಯನೆಲ್ಲಕ್ಕೀ ಡ್ರರೇ । ತಮ್ಮೆಂಡತಿ ಮಾರಿಕೊಂಡರೋ ೩

ಸುಂದರಿ ಎನಗೀಡೆಲೋ । ಸಂದೇಹ
ಎಲ್ಲ ನೋಡೆಲೋ ಮಂದ
ಗಮನೆಯತಾರೆಲೋ । ಯನಗೊಂದ್ವಿಸವಳ ನೋಡೆಲೋ ೪

ಪತಿಗಳಭಯ ಬ್ಯಾಡೆಲೊ ದ್ರೌಪದಿಯ ಓಡಿದು ತಾರೆಲೋ
ಸತತ ಮೂರುತಿ । ನರಸಿಂಹ ವಿಠಲನ ಭಯ ಬ್ಯಾಡೆಲೋ ೫

## ವಚನ

ಘುಡು ಘುಡಿಸುತ್ತ । ದುಃಶ್ಯಾಸನನು ಅಣ್ಣನ ಅಡಿಗಳಿಗೆರಗಿ
ಕಡು ಚಿಂತೆಬ್ಯಾಡಣ್ಣ ದ್ರೌಪದಿಯೆಳ । ಮುಡಿ ಓಡಿದೆಳೆ ತಂದೆ
ತಾನೆಂದೆನುತ । ನಡೆದ ಜಡಮತಿಯೂ

## ಹಾಡು

ಛಲದಿಂದೆ ದ್ರೌಪದಿ । ಮಂದಿರದೊಳಗೆತಾ । ಘುಡು ಘುಡಿಸುತ
ಅಡಿಯನಿಕ್ಕುತ । ಪಲ್ಲ ಕಡಿಯುತ । ನಡಿಯಿರೆದ್ರೌಪದಿ ಎಂದು
ಮುಡಿ ಪಿಡಿದೆಳದಾ ೧

ಫಕ್ಕನೆ ಆರಕ್ಕಸಾ ತಾ ಬಂದಾ । ಯಲೆ ನಕ್ಕರೆ
ನಾ ನಿನ್ನ ಬಿಡನೆಂದಾ ।
ಭಲೆ ನಕ್ಕಿದೆ । ನೀ ಸಿಕ್ಕಿದೆ । ಯನಗೆ ದಕ್ಕಿದೆ । ಫಕ್ಕನೆ ಅಣ್ಣನ
ತೆಕ್ಕೆಯೊಳಗೆ ನಾ ನಿನ್ನನಿಕ್ಕುವೆ ನೆಂದ ಖಳ ೨

ಬಲ್ಲಿದ ಖಳನ ಕಾಣುತಲಂಜಿದಳೂ । ಜಲ್ಲನೆ ಎದಿ ತಲ್ಲಣಿ
ಸುತ್ತಲಿಕೆ ಕರಗಲ್ಲದಲ್ಲಿಟ್ಟಳು ೩

ತಡಮಾಡಲಿ ಬ್ಯಾಡ । ಬಿಡು ನಿನ್ನ ಬಿಂಕಾ । ನಡಿ ದ್ರೌಪದಿ ।
ನಿನ್ನೊಡೆಯ
ನರಸಿಂಹ ವಿಠಲ ನನು ಸ್ಮರಿಸುತಾ ।

## ವಚನ

ನಡಿನಡಿಯಲೇ ಹೆಣ್ಣೇ । ಬಿಡು ನಿನ್ನ ಬಿಂಕಗಳ ।
ತಡ ಮಾಡಿದರಣ್ಣ
ಕೋಪಿಸುವನು ಎಂದೆನುತ । ಘುಡು ಘುಡಿಸಿದನು ಖಳ ।
ಮಡದಿಯಳ್ಮೇಲೆ

## ರಾಗ

ಖಳ ಏನೋ ನಿನ್ನಾಮನಸಿನೊಳಗಿದೆಯೊ । ಹೀನ ಮನುಜ
ನಿನ್ನ ಮನಸಿ ನೊಳಗೇನಿಹೂದೋ ಪ

ಯಾತಕೆ ಈ ಭಾರಾ । ಯೇನಿದು ಮಚ್ಚರಾ । ಸಾವೆ
ಕಾರವಯನ್ನ ಯಾತಕ್ಕೆ ಕರೆಸಿದಾ ೧

ನ್ಯಾಯವೇನೆಲೋ ಧೊರೀ । ರಾಯರ
ಮಡದಿಯಾ । ರಾಯಭಾರಕ್ಕೆಯನ್ನಾ ।
ಬಾಯೆನು ತೀಯೆಖಳ ೨

ಎಲ್ಲಿ ಹ್ಯಾರೋ ಎನ್ನಾ । ವಲ್ಲಭರೇಯನ್ನಾ ।
ಬಲ್ಲೀದ ನರಸಿಂಹಾ ವಿಠಲಾ ಸಲಹೋ ೩

## ವಚನ

ಭರದಿಂದಲೆನ್ನನೂ ಈ ಸರಿ ದುರುಳ ಕಾಡುತ್ತಿರುವಿ ।
ಎಲ್ಲಿಹನೋ ವಲ್ಲಭ ಧರ್ಮಜಾ ಎನಲೂ । ಮೂಢ ದರ್ಮಜ
ಹೂಡಿದ ಅಣ್ಣನಿಗೆ ನಿನ್ನನೂ । ಘಾಡನೆಯೇಳೇ । ತಡಮಾಡ
ಬ್ಯಾಡೆಂದೆನು । ನೋಡಿದನು ದುರದುರುನೆ । ಕಾಡ ಖಳನೂ

## ರಾಗ

ಆಹಾಹಾ ವಿಧಿಯೇ । ಬಂದೊದಗಿತೊಯಿನ್ನಾ । ಈ ಮದ
ಮೂರ್ಖಖಳನಿಗೆ
ಪೇಳುವರ್‍ಯಾರೋ ಮುನ್ನಾ । ವಿಧಿ ವಿಧದಲಿ
ಧರ್ಮಜಗೆ ಪೇಳಿದೆನು ।
ಹಾ ವಿಧಿ ವದಗಿತು ಇದಕೇನು ಮಾಡುವೆನಾ ೧

ಮೊದಲೆನಮ್ಮೊಳು ದ್ವೇಷಾಯಿತ್ತೋ ಕುರುಪಗೆ, ವಿಧದಿ
ಮಾಡಿದಕೇಡೂ ಧರ್ಮಜಗೆ ನೋಡೂ ೨

ಭಿಕ್ಷೆ ಬೇಡಿಸಿದಾ । ಪ್ರತ್ಯಕ್ಷಭೀಮನ
ಮಡುವಿನೊಳಗೆ ಹಾಕಿಸಿದೆನೋ
ಅರಸಿ ಪೇಳಲು ಯನ್ನ । ಉದ್ಧರಿಸೂವರಿಲ್ಲಾ
ನರಸಿಂಹವಿಠಲಾ ನಿನ್ಹೊರತಿನ್ಯಾರಿಲ್ಲಾ ೩

## ವಚನ

ಧರ್ಮಜನಿಗೆ ಜೂಜೆಲ್ಲಿ ನಿರ್ಮಾಣವಾಯಿತೋ ।
ದುರ್ಮನಸಿಗ್ಯಾಕೆ
ಒಪ್ಪಿದನು ಧರ್ಮಜಾ । ದುರ್ಮನಿಸಿನಾ ಜನರು ।
ಈ ಪರಿ ಮರ್ಮದಲಿ

ಆಡಿಸಿ । ಕರ್ಮ ಬಂದೊಗಿತಯ್ಯೋ । ಹರಿ ಹರಿ ಮೋಸಗಾರನ
ಕೃತಿ ಕೂಡಿಸಿಕೊಂಡಾಯ್ತು । ಮೂಷಿಕವು ಬಿಡಾಲನಿಗೆ ।
ದೊರೆತಂತಾಯ್ತು
ಘಾಸಿಯಾಯಿತು ಎಂದು ಆಕಿ ಶೋಕಿಸುತ್ತಿರಲು ।
ರೋಷದಿಂದಲಿ ಖಳ ಸಮೀಪಕ್ಕೆ ಬಂದಾ

## ಹಾಡು

ಕೇಶ ಹಿಡಿದೆಳೆದನೂ । ದುಶ್ಯಾಸನನು ಭರದಲೀ । ವಿಲಾಸದಿಂದೆ
ಸೆಳೆದೊಯ್ದನೋ । ಭಲೆ ಸೊಗಸಿನಿಂದಲೀ ಪ

ಮಡದಿಯಳನೆ ಪಿಡಿದ ಭರಕೆ । ಉಡುಪ ತಾರೆ, ಕಡಲು,
ಸೂರ್ಯರೆಲ್ಲ ನಡುಗಿದಾರಾಗಾ ೧

ಬಂದಳಾಗ ಸಭೆಯೊಳಗೆ । ಇಂದಿರಾಮುಖಿ
ಯಾ ಮಂದಮತಿಗೆ
ನೇತ್ರದಲ್ಲಿ ಜಲಗಳನ್ನು ಪೂರ್ತಿ ಸುರಿಸುತಾ
ತಾ ಸ್ತೋತ್ರ ಮಾಡುವೆ
ಮನದೊಳಗೆ । ಸ್ತೋತ್ರ ಮಾಡುತ್ತಾ । ಬಂದ
ಕ್ರೂರ ಖಳನ ಮ್ಯಾಲೆ
ಮ್ಯಾಲೆ ವಿವಿಧವಾಗಿ ಕರೆಯುತಾ । ಲೀ ನಾರಸಿಂಹ
ವಿಠಲನ್ನ ಸ್ತೋತ್ರ ಮಾಡುತ್ತಾ ೨

## ವಚನ

ಅಗ್ರಜ ಕೇಳಿ ನಿಮ್ಮಪ್ಪಣೆ ಸಲಿಸಿಹೆ । ಶೀಘ್ರದಿ ಮಾನವ । ಭಗ್ನ
ಮಾಡುವೆ ಸಖಿಯಳ ಕೂಡಿ । ಅಂದ
ಮಾತುಗಳ ಕೇಳುತಾಖಳ
ಬಂದನಪ್ಪಿದ ಅನುಜನ ನೋಡಿ ।
ಮಂದಗಮನಿಯಳ ತಂದು ನೀ
ಮುಂದೆ ನಿಲಿಸಿದಿ । ಯಿಂದು ನೀ ಧೈರ್ಯಮಾಡಿ

## ಹಾಡು

ಬಾರೆ ಬಾರೆ ಭಾಸುರವದನೆ । ಬಾರಿಬಾರಿಗೂ ನೀ
ತೋರೆ ಮುಖವನೆ ಪ.

ಏಸು ದಿವಸ ನಿನ್ನಾ ಆಶೆಯೊಳಿದ್ದನಾ
ಶ್ರೀ ನರಸಿಂಹವಿಠಲ ಈಗ ತೋರಿದನೆ ೧

ಕಾಮಿನಿ ಕೇಳೆ ಕರಿಪುರದ ದೃಶ್ಯ । ನಿನ್ನಾ
ಕರದೊಳಿರಿಸುವೆಯನ್ನ ಕಾಮಪೂರೇಸೇ ೨

## ವಚನ

ಬಾರೆ ಬಾರೆ ಸಖಿ ಸಾರೆ ಎನ್ನ ತೊಡೆಯ
ಯೇರೆ ನೀ ಬ್ಯಾಗೆ ನೀರೆ ಬಾರೆ ನಿನ್ನ
ಸರಸ ಸಲ್ಲಾಪವನು ತೋರೆ । ಸುರತ
ಸೂರೆಯನ್ನು ಮಾಡುವೆ ನಿನ್ನ
ತಿರುಕ ಪಾಂಡವರಿಂದ ತೀರದು ನಿನ್ನ ಸುಖವೂ ।
ದೊರೆತನಕೆ
ನಾನೇಯಿೀಡೆ । ಯೆಂದೆನುತ ಖಳ ತಾನು । ಇಂದು
ವದನೆಯ ಕೂಡ ಚೆಂದದಿಂದೆ ನುಡಿದ ಬ್ಯಾಗಾ

## ಆರ‍್ಯ

ಇಂದರ ಮುಖಿಯನು । ಮಂದಿರದೊಳಗಿಡು
ಚೆಂದದ ಸುಖವನು ತೋರುತಲೀ
ಸುಂದರಿ ನಿನ್ನ ಭರದಿಂದಲಿ ಕೂಡುವೆ ।
ಸೌಂದರ್ಯದಾ ಮುಖನೋಡುತಲೀ

## ವಚನ

ಬ್ಯಾಡ ಬ್ಯಾಡೆಲೋ ಖೂಳಾ । ಆಡದಿರು
ಈ ಮಾತು ಸಲ್ಲಾ ಎಲ್ಲಾ
ನಿನ್ನ ಹೂಳುವೋನು ಶ್ರೀ ಲಕ್ಷ್ಮೀನಲ್ಲಾ ।
ನಾನು ಪೇಳುವೋದು ಮಾತು
ಹುಸಿಯಲ್ಲಾ । ಹಾಳು ಮಾಡುವೆ ನಿನ್ನ
ಕುಲಕೆ ಬಂತೀಗ ನೋಡೋ
ಕೇಡು ನಿನ್ನ ತಾಯಿ ತಂದೆಗೆ ಸುಖವಾಗದೋ । ನಿನ್ನ ಬಾಯಿ
ಹುಳಿಯೋದೋ । ಆಡಬ್ಯಾಡೆಂದೆನುತ ಖಳನೊಡನೆ ಇಂದು
ವದನೆಯು ತಾನು ಛಂದದಿಂದ ನುಡಿದಳಾಗಾ ಬ್ಯಾಗಾ

## ಹಾಡು

ಆಡದಿರಿ ಮಾತು ಸಲ್ಲಾ । ನೋಡಲಾರೆನೀಪರಿಎಲ್ಲಾ
ಹಿರಿಯೋನು ನಾಲಿಗೆಲ್ಲಾ
ಮುರಿಯೋನು ನಿನ್ನ ಹಲ್ಲಾ ಪ

ಕಂದಮಾತನಾಡಿ ಕರೆವಾ । ಕೆಂಡನಿನ್ನ ಬಾಯೊಳಿಡುವಾ
ಗುಂಡಿಗೇಯ ಕೇಳು ಬಗಿವಾ । ಚಂಡವಿಕ್ರಮಾನು ಮೆರೆವಾ ೧

ಬ್ಯಾಡೊ ನಿನಗಿಂತ ಹಗೆಯಾ । ನೋಡಿ ನಿನ್ನ ಭೀಮನುಬಗಿವಾ
ಮೂಢ ನಿನ್ನ ತೊಡಿಯ ಸರ್ವಾ ।
ಕೂಡತ್ಯೊ ಭೀಮನ ಗದೆಯಾ ೨

ಮಾರುತೀಶ ನಿನ್ನ ಮುರಿವಾ । ವೈರ ನಿನ್ನ ಸೂರೆಮಾಡ್ವಾ
ನಾರಸಿಂಹ ವಿಠಲಾ ಇರುವಾ । ಪಾರು
ಮಾಡ್ಯೆ ನಮ್ಮ ಚೆಲುವಾ ೩

## ವಚನ

ವನಜಾಕ್ಷಿಯೊಳೆ ಮಾತು ದನುಜಾಕೇಳುತಲೀ ಘನಕೋಪದಿಂದ'
ಅವಳನೆಳೆ ತರಲು । ವನಜ ಮುಖಿ ನಡೆದಳಾ ಅವನೊಡನೆ

## ಹಾಡು

ಸರ್ವರೀಗಿದೂ ನ್ಯಾಯವೇನೋ ।
ಸಜ್ಜನರಾರಿಲ್ಲವೇನೋ । ದುರ್ಜನ
ಮಾಡುವ ಕಾರ್ಯವನ್ನು ಮರ್ಜಿಗೆ ಸರಿ ಹೋಗೋದೇ ನೂ ಪ

ದ್ರೋಣ ಭೀಷ್ಮಾ ಕೃಪಾಚಾರ್ಯರೆಲ್ಲಾ ।
ಜಾಣರು ನೋಡಿ ಚರ್ಯಾ
ಖಳಮಾಡುವ ಕಾರ್ಯ । ನೋಡೆ ಆಶ್ಚರ್ಯಾ ೧

ಆರ್ಯರೆನ್ನರಿಯರೆ ಕೇಳಿ । ಕಿರಿಯರ ಈ ಚರ್ಯಸಾಧುವೇನು
ಮರೆವರೇ ಋಷಿವರ್ಯರೇ ನನ್ನ ನೀವೆಲ್ಲ ।
ಇದು ಏನು ಕಾರ್ಯಸಲ್ಲಾ ೨

ತುಂಬಿದ ಸಭಿಕರೆಲ್ಲಾ । ನಂಬಿದವರೆಕಾಯ್ವೊರಿಲ್ಲಾ । ತಂದೆ
ನರಸಿಂಹನೇ ಬಲ್ಲ । ಬಂಧನವಾ ಬಿಡಿಸಿಯೆಲ್ಲಾ

## ವಚನ

ಅತ್ತಿಗಾಂಧಾರಿಯೇ । ಅಕ್ಕ ಭಾನುಮತಿಯೇ, ರಕ್ಕಸನಕಾರ್ಯ
ಅಕ್ಕರವೆ ನಿಮಗೆ । ಲಕ್ಕುಮೀ ಪತಿಯರ ಇಕ್ಕುವನೋ
ಬಂಧನಕೆ, ಸಿಕ್ಕು ಸಿಕ್ಕದಿರಿನ್ನು ದಕ್ಕದೀಕಾರ್ಯ

## ಹಾಡು

ಯಾರಿಗೆ ಪೇಳಲಿನ್ನೂ । ಎನ್ನ ಪಾರುಗಾಣಿಪರಾರಿನ್ನೂ ।
ಯಾರಿಗೆ ಪೇಳಲಿನ್ನೂ ೧

ಅತ್ತಿ ಮೌನವಹಿಡಿದಳೋ । ಈ ಮಾತಿಗೆ
ಸುತ್ತಲೆಲ್ಲವರು ನುಡಿಯರೋ
ಮತ್ತೆ ಮಾವನವರು । ಯಿನ್ನಿತ್ತ ಹಿರಿಯರು ।
ಸುತ್ತ ಕುಳಿತವರಿಗೆ
ರಕ್ಕಸನ ಕೈಗೆ ಸಿಕ್ಕಿಹೆಇನೆನುತ । ನಕ್ಕು ನುಡಿಯೋರು ರಕ್ಕಸರಿನ್ನು
ಲಕ್ಕುಮೀಪತಿ ಹೂಳಿಯವನ । ಸೊಕ್ಕು
ಮುರಿಯೋದು ಸತ್ಯವಿನ್ನೂ ೨

ಆ ಪಂಥವೇನು ಕೇಳಿ ಮುನ್ನಾ ಈ ಸಭೆಯು
ದುರ್ಮತಿಯಾಗಿ ತೋರ್ಧುದಿನ್ನಾ । ಹಿತವೆ ನಿಮಗಿದು ಪಿತಾಮಹ
ಪಡೆ ರಥರುಯಿರುತಿರೆ ಅತಿಶಯವಾಗಿದೆ । ಪತಿತಪಾವನ
ನರಸಿಂಹವಿಠಲನೆ । ಗತಿಯೇನಿನ್ನಾ ೩

## ವಚನ

ಹೇಧರ್ಮ ಹೇಭೀಮ ಅರ್ಜುನಾ ನಕುಲಾ । ಸಾದೇವ ನಿಮ್ಮ
ಕಾರ್ಯಸಾ ಕಾಯಿತೇ ಈಗಾ । ಸಹಿಸಲಾರೆನೋ ಇಂತು ಸಭಿ
ವಳಗೆ ಎನ್ನನೂ ವಹಿಸಿ ಕಾಯುವರ ನಾಕಾಣೆನೋ ।

## ಹಾಡು

ಮಾರುತಾ ಸುತ ನಿನ್ನ ಮಹಿಮೇಯ ತೋರದೆ, ಮರತು
ಬಿಟ್ಟೀಯೇನೊ । ಮಾರುತೀ ಸೂನೂ
ಮರುತುಬಿಟೀಯೇನೋ ಪ

ಎಷ್ಟು ದಿನದಿ ಛಲಾ । ವಿಟ್ಟಿದ್ದ ಧರ್ಮಜಾ ।
ದ್ರಿಷ್ಟಿ ಪೂರಯಿಸಿತೇನೊ ।
ಮಾರುತ ಸೂನು । ಕೆಟ್ಟ ಖಳನ ಕೈಯೊಳ
ಇಟ್ಟು ಎನ್ನನು ಹೀಗೆ
ದೃಷ್ಟಿಲೀ ನೋಲ್ಪರೇನೋ । ಮಾರುತಿ ಸೂನೂ ೧

ಹಿಂದೆ ಹಿಡಿಂಬನಾ ಕೊಂದೆ ಮತ್ತೆ ಬಕನನು ಕೊಂದ ಶೌರ್ಯ
ವೆತ್ತೋಯ್ತು ಎಲ್ಲಿ ನಿನ್ನ ಆಧ್ಯೆರ್ಯಾ
ಕಾಮತರ್ಯೆವರ ಶೌರ್ಯಾಯಿಂತು ಪರಿ ಆಯಿತೇ । ಇನ್ನೇನು
ಜೀವಿಸಲೊ ನಾನು । ಮಾರುತಸೂನೂ । ಶಾಂತ ಶ್ರೀ ನರಸಿಂಹ
ವಿಠಲನೆಗತಿಯಿನ್ನೂ । ನಿಂತು ಬಿಡುವುದೋ
ಪ್ರಣಾ । ನೋಡೆಲೋಜಾಣಾ ೨

## ವಚನ

ಕ್ಷಿತಿವಳಗೆ ಸತಿಯರಿಗೆ ಪತಿ ಒಬ್ಬನೇ ಸಾಕೋ । ಸಕಳ ದುರಿತವ
ಕಳೆದು ಸುಖವ ತೋರುವನೋ ಅತಿಬಲರು ಈ ನಿಪುಣರ್ಯೆವರು
ಯಿದ್ದು ಗತಿಯೇನು ಯನಗೆ ಕಾಣಿಸಲಿಲ್ಲ ನೀನೇಗತಿ । ಯೆಂದೆನುತ
ಸಭೆವಳಗೆ ನಿಂದು ರೋಧಿಸಲಾಗೆ । ಬಂದು ಭೀಮನು ತನ್ನ
ಸತಿಯ ಸಂತೈಸಿದನು

## ಹಾಡು

ಯಾಕೆ ಸಂತಾಪ ಪಡುವೆ ಸಖೀ । ನಿನ್ಯಾಕೆ ಸಂತಾಪ ಪಡುವಿ ಪ

ಯಾಕೆ ಸಂತಾಪಬಿಡು । ಕಾಕುಮನುಜರ ನೂಕಿ ।
ಯಮನ ಪುರಕ್ಕಾಕುವೆ ಅ.ಪ

ವಡಲ ಬಗೆದುಯಿವನ । ಕುಡಿವೆ ರಕ್ತಾವನ್ನೆ ಮಡದಿಮಣಿಯೆ
ನಿನ್ನ । ಮುಡಿಯ ತೊಯಿಸುವೆನು ೧

ಮುಟ್ಟಿಗಿ ಮಾಡಿ ಇವನ । ಕೂಟ್ಟಿಯಮನ ಊರ ।
ಕಟ್ಟುವೆ ಅಣ್ಣನ ಒಟ್ಟಿಗೆ ಯಿರುವನ್ನ ೨

ಶೀಘ್ರದಿ ಧರ್ಮಜನಾಗ್ನೆ । ವಂದಾದರೀಗ ।
ಅಗ್ನಿವಳಗೆಯಿವನ ಭಗ್ನಾ ಮಾಡುವೆ ೩

ನರಸಿಂಹ ವಿಟಲನಾ ಸ್ಮರಿಸುತಲಿ ಖಳನ ।
ವರಸಿಬಿಡುವೆಯನ್ನ ಅರಸಿ ಕೇಳೆಲೆ ನೀ ೪

## ವಚನ

ಯಲ ಯಲ ಖಳನೆ । ಕಾಡಬೇಡವೊ ಇವಳನೆ ।
ನೋಡಿಸುವೆ ಯಮನ
ಲೋಕವನೂ । ನಿನಗೆ ಜೋಡುನಾ
ಇರುತಿಹೆನು ನೋಡೋ । ಯೆನ್ನ
ಕೂಡಾ ಕಾಳಗವನು ಮಾಡೊ । ಯೆನುತ ಭುಜ
ಚಪ್ಪರಿಸಿ ಭೋರ್ಗರೆ
ಯಲಾ ಖಳನು । ಘನಕೋಪದಲಿ
ಭೀಮನೊಡನೆ ಗಡನೆ, ಯಿಂದ
ರಂಗೇಡಿ ಆಟಗಳ ನಾಡಿ । ಎನಗೆ ವನಜಾಕ್ಷಯಳನೀಗ ಹೂಡಿ
ಮಣಿದು ಬೇಡೆಲೊನೀನು ದಣಿಯಾರು
ಎಂದೆನುತ । ಅನುಜನನೆ
ಕರೆದು ಆಗಾ ಬ್ಯಾಗಾ । ಈಗಾ ಘನತೀವ್ರದಲಿ ।
ಮತ್ತೆ ಮಾನವರು
ಇನ್ನಿತ್ತ ಹಿರಿಯರು । ಸುತ್ತ ಕುಳುತಿರೆ । ಮತ್ತೆ ಇವಳ
ಸೆಳೆದೂ । ಅವಳ ಮನವ ಸೂರೆಲೋ । ವಸ್ತ್ರವನೆಳೆದೂ
ಯೆಂದೆನಲು ಖಳತಾನು । ಬಂದು ನಿರಿಗಯ ಪಿಡಿಯೆ
ಇಂದು ವದನೆಯುಗೋವಿಂದನ ನೆನೆದಳಾಗ ಬ್ಯಾಗಾ

## ಹಾಡು

ನಿನ್ನ ಪೊರೆತು ಅನ್ಯರಿಲ್ಲವೋದೇವಾ । ಘನ್ನ ಮಹಿಮ ನಿನ್ನ
ಪಾದವನ್ನು ಪಿಡಿವೆ ಮನ್ಮಥಾಂಗಾ । ಸನ್ನುತಾಂಗ
ಎನ್ನನಾದರಿಸಿನ್ನು । ನಿನ್ನನು ಬಿನ್ನಹ ಮಾಡುವೆ ।
ಪನ್ನಂಗಶಯ ನನೇ ೧

ಕರಿಯುನಿನ್ನಾ ಕರೆಯಲಿಲ್ಲವೇ । ತ್ವರದಿ ಮಡುವಲೀ । ಭರದಿ
ನೀನು ಬಾರಲಿಲ್ಲವೇ । ಕರದಿ ನಿನ್ನ ಚಕ್ರದಿಂದಲಿ ತ್ವರಿತದಿಂದಲಿ
ನೀ ನಕ್ರನ ತರಿದು । ಕರಿಯ ಪೊರೆದೆಯೋ ೨

## ಹಾಡು

ಅತಿಶಯಾದಿಸ್ತುತಿಯ ಮಾಡಲು । ಪತಿತಪಾವನ ಕೇಳುನೀ
ಹಿತರಿಂದಲಿ । ಅವನಹತ ಮಾಡುತ ।
ಉನ್ನತ ಸೌಖ್ಯವ ನೀಡಿದೆ ೧

ಅರಸರಾರೆ ನಿಂತು ಸಭೆಯೊಳು । ಧರಿಸಿ ನೀ ಕೇಳೂ
ಸರಿಸತಿಯರೊಳು ಮಾನವಾ । ತೆಗಿಸಿ ತರುವಾ । ನೋಡು ೨

ಸರ್ವಾ। ನರಸಿಂಹವಿಠಲನೆ ಸೈರಿಸಲಾರೆನೋ ।
ಪರಿ ಹರಿಸಿಂತು ೩

## ವಚನ

ಕಾಯೋಕ್ಲೇಶಗಳಿಲ್ಲದೆ । ಪಾವಕನಲ್ಲುದಿಸಿದೆನೋ ।
ಆವ ತಪಗೈದು
ಪಿತ ಪಡೆದನೆನ್ನಾ । ಆವಧರ್ಮಜರೆನ್ನ । ಆಳುವವಲ್ಲಭರು
ಆವ ಪುಣ್ಯ ಬಂದು ಕಾಯೋದು

## ವಚನ

ಬಾಬಾಬಾಹರಿಯೆ । ಬಾಧೆಯೆನಗೆ ಬಿಡಿಸುಬಾ
ಹರಿಯಾಗ । ಮಾತುಳಾಂತಕ । ಯದೂ ವಂಶದ ಪ

ತಡಮಾಡದೆಬಾ । ಪಡೆಯ ಯನ್ನಯಾ । ತಡಿಯಲಾರೆನೂ
ವುಡಿಗಿ ಬಿಚ್ಚುವಾ । ಇವನಗುಣ ಎಣಿಸೆನಾ । ದಣಿವೆನಾ ।
ದಾನವಾಂತಕಾ ; ದೀನರಕ್ಷಕಾ ೧

ಬಾರಿಬಾರಿಗೆ । ಮುರಿ
ಹಲ್ಲ ಎಲ್ಲವಾ । ಕ್ರೂರಖಳನಾ । ಕ್ರೂರತನವಾಯಿ
ಅಸುರನಾ । ಅಸುವನಾ ಹರಿಸಿ ನೀ ।
ಮಂದರಾಬ್ಧಿಯೊಳ್ ತಂದಾ ದೇವನೆ ೨

ಮಂದಿಯೋಲೆನ್ನ ಮಾನಕಳಿವಾ ಕಾಡುವಾ ।
ನಿಂದಿಸೆನ್ನಾ ನಿಂದ್ಯ ಮಾಡುವಾ । ಆ ಹರಿಯನೆ ಕರೆವನು ।
ತಂದೆ ನರಸಿಂಹ ವಿಠಲೇಶನಾ ೩

## ವಚನ

ಕಾಯೋ ಕರಿವರದನೆ । ಕಾಯೊಕಮಲಾಕರನೆ ।
ಕಾಯೋ ಎನ್ನಯ
ಈಗ । ಕಾರುಣ್ಯ ನಿಧಿಯೇ । ಬಾಯಿ ಬಿಡುವೆನು ।
ಯಿಂತ ಸಭಿ ।
ವಳಿಗೆ ಯನ್ನನು । ಕಾಯುವರಾ ಕಾಣೆ । ನಿನ್ನೊರತು ।
ಶಿರಿಪಾದ ದಾಣೆ

## ಹಾಡು

ಕಾಯೆನುತಾ ಕಾಮನಪಿತಾ ಪ

ಆಪತ್ತು ಬಾಂಧವಾ । ಶ್ರೀ ಪತಿಯೆ ಕಾಯೊ ಬಾ
ಗೋಪಾಲ ಗುಣಶೀಲಾ । ಗುಣಶೀಲಾ ಲೋಲಾ
ಬಾ ಬಾರೊ ಹರಿಯೆ ೧

ನಾಗೇಂದ್ರವಂದಿತ ನಾರದಾದಿಸೇವಿತ । ಲೋಕೇಶ ಗುಣಧೀಶಾ
ಶ್ರೀಶಾ । ಬಾಬಾರೋ ಹರಿಯೆ ೨

ನರಸಿಂಹ ವಿಠಲಾ । ದುರಿತವೆಲ್ಲ ಕಾಯೊಬಾ, ಕಂಸಾರಿಯನ್ನ
ಪೊರೆ । ಕಂಸಾರಿ ಎನ್ನ ಪೊರೆಯಲು ಬಾ ಬಾರೊ ಹರಿಯೆ ೩

## ಆರ‍್ಯ

ಆರ್ತ ಸ್ವರಗಳಿಂದಲಿ । ಪಾರ್ಥನ ಸತಿ ಕೂಗಲು । ವಾರ್ತೆ
ಕೇಳಿದನೈ । ಅಬಲೆಯ । ಸ್ತೋತ್ರ ಮೂರುತಿಯ
ಶ್ರೋತ್ರಗೆ ಬೀಳಲು । ವಸ್ತ್ರವನು ನೀಡ್ದನೈ ಅಕ್ಷಯ ಮಾಡಿ
ಶೆಳೆಶೆಳದಾ ಖಳ ಶಾಲಿಗಳೊಟ್ಟಿಲಿ । ಬೆರಗಾದನಂತೆ
ಖಳನೋಡೀ ಭಳಿ ಭಳಿರೆನ್ನುತ । ಕಳವಳಿಸಿತು ಸಭ
ಕನಕಾಂಗಿಯಳ ಮಹಿಮೆಯನು ನೋಡಿ

## ಹಾಡು

ಕೊಂತಿಸುತನ ಸತಿಯ ಮಹಿಮೆ ಇನ್ನೆಂತು ಪೇಳಲೆ ।
ನಿಂತು ಸಭಿವಳಾಗೆ ವಸ್ತ್ರ । ಅನಂತವಾಗಿ ತೋರ್ದಳೇ ಪ

ಮೆಚ್ಚಿ ಭೀಷ್ಮದ್ರೋಣರೆಲ್ಲ । ಇಚ್ಚೆಯಿಂದೆ ನುಡಿದರೂ
ಮಚ್ಚರೂಪದಲಿದ್ದ ನೀರೆ । ಹೆಚ್ಚಿನಾರೀಕೆಂದರು ೧

ನೋಡಿ ಭೀಷ್ಮ ದ್ರೋಣರೆಲ್ಲ ಬ್ಯಾಡೋ ನಿನಗೆ ಯಂದರೂ
ರೂಢಿವಳಗೆ ಪಾಂಡ್ವರಿಗೆ । ಯೀಡುಯಿಲ್ಲ ಎಂದರು ೨

ಮಾರುತನ್ನ ಸತಿಯಮಹಿಮ ಯಾರು ಪೊಗಳಿ ಪಾಡುವರೋ
ನಾರಸಿಂಹ ವಿಠಲಾ । ವಲಿದು ಚಾರು ಸುಖವ ತೋರ್ವನೊ ೩

## ಹಾಡು

ಯಲೊ ಅಂಧಕನಸುತ ಕೇಳ್ । ಹಿಂದೀನ ಆಟವ ।
ಬಂದೂ ಯನ್ನನು
ಜೈಸೆಲೋ । ಏನು ತೆಲೆ ಮಂದಾಮತಿಯೆ ।
ಯೇನೆಂದೂ ನುಡಿಯುವೆ ।
ಯನ್ನಿಂದ ಆಟವ ನೀ ಜೈಸಲೆ । ಭೂಪಾರ್ರೈವರಗೆದ್ದು । ಆಪತ್ತು
ಬಿಡಿಸಿ । ಶ್ರೀ ಪತಿಪಾದಕ್ಕೆ ವಂದೀಸುವೆನೂ ।
ಕೆಟ್ಟ ಕುರುಪತಿ ನಿಟ್ಟಾ

ಆಟದಲ್ಲಿ ಪಟ್ಟದರಸನನ್ನು ಜೈಸಿದಳೂ । ದಿಟ್ಟಾ ಶ್ರೀ ನರಸಿಂಹ,
ವಿಠಲನ್ನ ಸ್ಮರಿಸಿ, ಪಟ್ಟಣರಾಜ್ಯವ ಜೈಸಿದಳೂ

## ಆರ್ಯ

ಕ್ಷಿತಿಪನು ಕಂಡತಿ ಭಯದಲಿ ದ್ರೌಪದಿಗೆ ನುಡಿದನು ಬ್ಯಾಗೆ ।
ಮತಿವಂತಿಯೆ
ನಿನ್ನೊಶ ಮಾಡಿದೆ । ಹೊಸರಾಜ್ಯವನಾಳೆಲೆ ನೀನೀಗೆ ।
ಅಂದ ಮಾತುಗಳ
ಕೇಳುತಾ । ಪಾಂಡ್ವರು । ತಂದಿಗೆ ವಂದಿಸು ತಲಿ ಬ್ಯಾಗೆ,
ಅಂದಣ ಪಲ್ಲಕ್ಕಿ
ಯನೇರಿ । ಆನಂದದಲಿ ನಡದರು ತಾವಾಗೆ

## ಮಂಗಳ

ಮಂಗಳಂ ಮಹರಾಯಾ । ಅಂಗನೇಯರ ಪ್ರಿಯ ।
ಯಿಂದು ತೋರೋ । ಜಯ
ಸಿಂಧುಶಯನ ಜಯಾ । ಪ

ದೋಷದೂರನಿಗೆ । ವಾಸುದೇವಾಗೆ,
ಭೂಸುರಾ ಪ್ರಿಯಾಗೆ, ದಾಸರಾ
ಭಾಗ್ಯಗೆ, ಕ್ಲೇಶಾದಿಗಳನಾ । ನಾಶ ಮಾಡಿದಗೆ,
ಕೇಸರೀಮುಖಿಗೆ ಸಾಸಿರನಾಮನೆ ೧

ಮಚ್ಛರೂಪನಿಗೆ । ಸ್ವಚ್ಛಕೂರ್ಮನಿಗೆ, ಸ್ವಚ್ಛವರಹನಿಗೆ
ಹೆಚ್ಚು ನರಸಿಂಹಗೆ । ಹೆಚ್ಚು ಪೌರುಷವನ್ನು । ಮೆಚ್ಚಿದ ಶ್ರೀಕೃಷ್ಣಗೇ
ಬಿಚ್ಚಿ ವಸ್ತ್ರಾ ಹಯ ಹತ್ತಿದ ಹರಿಗೇ ೨

ದುಷ್ಟ ಕಂಸನ್ನ । ಅಟ್ಟುಳಿಯನ್ನ । ಮೆಟ್ಟಿ ಆಳ್ದ ಘನಾ ।
ಶ್ರೇಷ್ಠವಾದ ನಿನ್ನಾ । ಸೃಷ್ಟಿಯೊಳೆ ನರಸಿಂಹ ವಿಠಲೇಶನಿಗಿನ್ನ
ಮುಟ್ಟಿ ಭಜಿಸುತ್ತ, ಇಟ್ಟು ಕರ್ಪೂರಾ ಬೆಳಗೀರೆ,

ಮಂಗಳಂ ಮಹರಾಯಾ
ಸಂಪೂರ್ಣ ಮಸ್ತು

೨

## ರಾಮದೇವರ ಹಾಡು

ಗಜಮುಖ ಗಣಪನ್ನ । ಭಜನೆಯ ಮಾಡಿ ।
ಅಜಭವಸುರರಿಗೆ ನಮಿಸುವೆನು ।
ತ್ರಿಜಗ ಮೂರುತಿ ಸಿರಿ । ರಾಮನ್ನ ಚರಿತೆಯಾ ।
ಸುಜನರಿಗೆಲ್ಲ ಅರಹುವೆನು ೧

ಕೇಶವಭಟ್ಟನೆಂಬೊ ಭೂಸುರನೊಂದಿ ।
ದೇಶದೊಳಗೆ ತಾನಿರುತ್ತಿದ್ದನು ।
ಗ್ರಾಸಕ್ಕೆ ಇಲ್ಲದೆ ಮನೆಯೊಳಗೆ ।
ಉಪವಾಸದಿಂದಲಿ ಇರುತ್ತಿದ್ದನಾಗ ೨

ನಿತ್ಯ ಭಕ್ಷಾಟನೆ ಮಾಡುತಲೆ ತನ್ನ ।
ಪತ್ನಿಸುತರನ್ನು ಸಲಹುವನು ।
ಉತ್ತುಮ ಕುಟುಂಬ ಸತ್ಯವಂತನು । ಬಹು
ಭಕ್ತಿಲಿ ಕಾಲವ ಕಳಿಯುವನು ೩

ಕಷ್ಟದಿ ಕಾಲವ ಕಳೆಯಲಾರದೆ ನಿತ್ಯ । ನಟ್ಟ
ಅಡವಿಗೆ ತಾನಡೆ ತಂದನು ।
ಶ್ರೇಷ್ಠಮನಿಗಳಿಗೆ ಮುಟ್ಟಿ ವಂದನೆ ಮಾಡಿ ।
ಭಕ್ತಿಲಿ ತಾನು ನಿಂತಿದ್ದನು ೪

ನಿಂತವಿಪ್ರನ ನೋಡಿ ಬಂದ ಕಾರಣವೇನೆಂದೂ ।
ಕೇಳಿದರು ಋಷಿಗಳಾಗ ।
ಬಂಧನ ಪಡುವೆನು ಬಹು ಸಂಸಾರದಿ ।
ತಿಂದೆನೆಂದರೆ ಕಾಣೆಂದನಾಗ ೫

ಯಾಕಯ್ಯ ಬಡತನ ಸಾಕು ನಿನಗೆ ಶ್ರೀ ।
ಲೋಕೇಶರಾಮನ ಕಥೆ ಪೇಳುವೆ ।
ಬೇಕಾದಷ್ಟು ಐಶ್ವರ್ಯ ಕೊಡುವೆನೆಂದು । ವಿವೇಕ
ಬುದ್ಧಿಗಳು ಪೇಳಿದರು ೬

ಎಂಥ ರಾಮನು ಆತ ನೆಂತು ಕೊಡುವೊನು । ನಿಂತು ಕೈ
ಮುಗಿದು ಕೇಳಿದನು
ಕಂತು ಜನಕನ 'ಏಕಾಂತ ಭಕ್ತರು ಆಗ '।
ಸಂತೋಷದಲಿ ಪೇಳೆ ತೊಡಗಿದರು ೭

ಅಜಭವ ಸುರರೆಲ್ಲ ಭಜನೆಯ ಮಾಡಲು ।
ತ್ರಿಜಗದೊಡೆಯನು ಕೇಳಿದನು ।
ನಿಜವಾದ ವೈಕುಂಠ ಬಿಟ್ಟು ಅಯೋಧ್ಯದಿ ।
ಭಜಕರಿಷ್ಟನು ತಾ ಜನಿಸಿದನು ೮

ದಿಟ್ಟ ದಶರಥ ಪಟ್ಟಸ ರಾಣಿಯು ।
ಶ್ರೇಷ್ಠದ ಕೌಶಲ್ಯನುದರದಲ್ಲಿ ।
ಸೃಷ್ಟಿಪಾಲಕ ದೇವ ಪುಟ್ಟ ಮಗುವಾಗಿ ।
ತಟ್ಟನೆ ತಾನಲ್ಲಿ ಜನಸಿದನು ೯

ಭರತ ಶತ್ರುಘ್ನ ಲಕ್ಷ್ಮಣರೆಂಬೊಅನುಜರೊಳ್।
ಅರ್ತಿಯಿಂದಲಿ ಆಗ ಬೆಳೆಯುತಿರೆ
ಉತ್ತಮ ಮುನಿ ವಿಶ್ವಾಮಿತ್ರನೊಡನೆ ಪೋಗಿ ।
ಶತ್ರುಗಳನೆಲ್ಲ ಜಯಿಸಿದನು ೧೦

ಘೋರ ಮಾರೀಚ ಸುಬಾಹುಗಳಳಿದು ।
ಮಾರಿತಾಟಕಿಯನು ಸಂಹರಿಸಿ ।
ಚಾರುಯಜ್ಞವ ಕಾಯಲು ಮುನಿಸತಿಯ ।
ಉದ್ಧಾರಮಾಡಿದ ದೇವ ಕೇಳೆಂದನು ೧೧

ಜನಕನ ಪುರಕೋಗಿ ಜಯಿಸಿ ಧನುವನು ।
ಜಾನಕಿ ಕೈ ಪಿಡಿದ ಜಗದೀಶನು ।
ಘನತೆ ಭಾರ್ಗವ ರಾಮನ್ನ ಗೆಲಿದು ।
ಇನಕುಲೇಶನು ತಾನಿರುತ್ತಿದ್ದನು ೧೨

ಜನಕನಾಜ್ಞೆಯಿಂದ ವನಕೆ ತೆರಳಿ ತಾನು ।
ಘನ ಚಿತ್ರ ಕೂಟದಿ ಸಂಚರಿಸಿ ।
ಅಣಕವಾಡುವ ಶೂರ್ಪಣಕೆ ನಾಸಿಕವನು ।
ಕಣಕೆ ಛೇದಿಸಿದಂತಘನಶೂರ ೧೩

ಕ್ರೂರಖರ ದೂಷಣರನ್ನೆ ಅಳಿದು ।
ಮಾರೀಚನಳಿದ ಮಹಾತ್ಮನೀತ ।
ಚೋರತನದಿ ತನ್ನ ನಾರಿಯ ನೊಯ್ಯಲು ।
ವಿಚಾರಿಸಿ ವನ ಪಂಚಾತ್ಮನೀತ ೧೪

ಸುಗ್ರೀವನನುಜನ ನಿಗ್ರಹಿಸಿ । ರಾಮ ಮುದ್ರಿಕೆನಿತ್ತು
ತನ್ನ ಮುದ್ದು ಸತಿಗೆ ।
ಅಗ್ರಜನಿಂದ ಸಮಗ್ರ ಕಪಿಯ ಸಹಿತ ।
ಸಮುದ್ರ ಕಟ್ಟಿದ ರಾಮಭದ್ರನೀತ ೧೫

ವಾತಸುತನ ಕೂಡಿ ಆತ ರಾವಣನಳಿದು ।
ಸೀತೆಯ ತಂದ ಪ್ರಖ್ಯಾತತನೀತ ।
ಖ್ಯಾತಿಯಿಂದಲಿ ಅಯೋಧ್ಯನಾಳಿದ । ರಘುನಾಥನ
ಕಥೆಗಳ ಕೇಳೆಂದನು ೧೬

ಸೇರುವರಿ ಹಿಟ್ಟು ಸೇರುವರಿ ತುಪ್ಪ ।
ಸೇರುವರಿ ಬೆಲ್ಲವನ್ನು ಹಾಕಿ ।
ಐದು ಉಂಡಿಯ ಮಾಡಿ ರಾಮರಿಗರ್ಪಿಸಿ ।
ಚಾರು ಪ್ರಸಾದವ ಸ್ವೀಕಾರ ಮಾಡು ೧೭

ರಾಮರಾಮ ನಿಮಗೊಂದನೆ ಮಾಳ್ಪೆ । ರಾಜ್ಯ, ಭೂಮಿ,
ಧನಧಾನ್ಯ ಕೊಡು ।
ಅ ಮಹಾ ವೈರಾಗ್ಯ ಭಕ್ತಿ ಸಂತಾನ । ನೇಮದಿ
ಕೊಡು ಎಂದು ಕೈ ಮುಗಿದರು ೧೮

ಇಂತುಪದೇಶಿಸಿ ಸಂತೈಸಿ ಕಳುಹಲು । ಚಿಂತಿ ಬಿಟ್ಟು
ತನ್ನ ಮನಿಗೆ ಬಂದು
ಸಂತೋಷದಲಿ ಸೀತ ಕಾಂತನ್ನ ಪೂಜಿಸಿ । ಅನಂತ
ಭಾಗ್ಯದಿ ಶ್ರೀಮಂತನಾದ ೧೯

ಒಂದುವರಿಯ ಸೇರು ಹಿಟ್ಟನು ತಂದು ।
ಮತ್ತೊಂದುವರಿ ಸೇರು ಬೆಲ್ಲತುಪ್ಪ ।
ಚೆಂದಿದಿ ಕೂಡಿಸಿ ಐದು ಉಂಡೆ ಹರಿಗೆ ।
ಮುಂದೆ ತಂದಿಟ್ಟು ಆನಂದಪಟ್ಟು ೨೦

ರಾಮರಾಮನಿಮಗೊಂದನೆ ಮಾಳ್ಪೆ । ರಾಜ್ಯಭೂಮಿ
ಧನಧಾನ್ಯ ಕೊಡೊ ।
ಆ ಮಹಾ ವೈರಾಗ್ಯ ಭಕ್ತಿ ಸಂತಾನ । ನೇಮದಿ ಕೊಡು
ಎಂದು ಕೈ ಮುಗಿದರು ೨೧

ಜೋಳಿಗಿ ಬಿಟ್ಟು ಮಾಳಿಗಿ ಮನೆ ಕಟ್ಟಿ । ಮೇಲು ಉಪ್ಪರಿಗೆ
ಉದ್ಯಾನವನಗಳು।
ಆಲಯದೊಳು ತಾನು ಬಹಳ ಭಾಗ್ಯಗಳಿಂದ ।
ಲೋಲಾಡುತ್ತಿದ್ದನು ವಿಪ್ರನಾಗ ೨೨

ಒಂದು ದಿವಸದಲ್ಲಿ ಕೇಶವಭಟ್ಟನು । ಕಂಡ
ನಾರಾಯಣ ಭಟ್ಟನನ್ನು ।
ಚೆಂದಾಗಿ ಕರೆದು ಮುಂದೆ ನಿಲ್ಲಿಸಿ ಹೀಗೆಂದು ।
ಉಪದೇಶವ ಮಾಡಿದನು ೨೩

ಕಂದಯ್ಯ ಕೇಳೋ ಮಂದಾಕಿನಿ ಸ್ನಾನ ।
ಚೆಂದದಿ ಮಾಡಿ ನಾ ಬರುವೆನು ।
ಇಂದಿನಾರಭ್ಯ ಒಂದು ಬಿಡದೆ । ರಾಮಚಂದ್ರನ್ನ
ಪೂಜೆಯ ಮಾಡೆಂದನು ೨೪

ಇಂತೆಂದು ಹೇಳಿ ಹೋದ ತಂದಿ ವಾಕ್ಯವ । ಸಂತೋಷದಲಿ
ಕೇಳಿ ಸುತನಾಗ ।
ಬಂತು ಆದಿತ್ಯವಾರವು ಎಂದು । ನಿಂತು
ಕೈಮುಗಿದು ಮಾತೆಗೆ ಪೇಳಿದ ೨೫

ನೇಮದಿ ಬಾರವ್ವ ರಾಮನ ಪೂಜೆಗೆ । ಆ ಮಹಾ
ಕಥೆಗಳ ಪೇಳುವೆನು ।
ಭಾಮೆ ಮನಸಿಗೆ ತಾರದೆ ಮನೆಯೊಳು ।
ಕಾಮಿಸಿ ಅತ್ತಿತ್ತ ತಿರುಗಿದಳು ೨೬

ಒಂದೆರಡು ವಾರವು ಹಿಂಗೆ ಮಾಡಲು ಭಾಗ್ಯ ।
ಕಂದಿ ಕುಂದ್ಹೋಯಿತು ಮನೆಯೊಳಿಲ್ಲ
ಹಿಂದಿನ ತಂಬಿಗೆ ಮುಂದೆ ಬಂದೊದಗಿತು ।
ಬಂದನು ಮನಿಮನಿಗೆ ವಿಪ್ರನಾಗ ೨೭

ಉಪರಿಗ್ಹೋಯಿತು ತಿಪ್ಪಿ ಕುಣಿಯಾಯಿತು ।
ಕಪ್ಪಕಾಸುಗಳೆಲ್ಲ ಕಳೆದೋಯಿತು ।
ಕಪ್ಪಾಯಿತು ದೇಹ ಕಂದಿ ಕುಂದ್ಹೋಯಿತು ।
ಒಪ್ಪಿತು ಗಾಜಿನ ಬಳೆಯುಕೈಯ ೨೮

ಗಂಗಾಸ್ನಾನವ ಮಾಡಿಕೊಂಡು ಕೇಶವಭಟ್ಟ ।
ಬಂದು ಮಂದಿರವನ್ನು ಹುಡುಕಿದನು।
ಕಂದಿ ಕುಂದಿದ ಮುಖದಿಂದ ನಿಂತಿರುವೂ ।
ಕಂದನ ನೋಡಿ ಹೀಗೆಂದನಾಗ ೨೯

ಎಷ್ಟು ಪರಿಯಲ್ಲಿ ಪೇಳಿದ ಮಾತನು ।
ಕೆಟ್ಟ ಮನಸಿಗೆ ನೀ ತಾರದಲೆ ।
ಕಷ್ಟಕ್ಕೆ ಗುರಿಯಾದಿ ಭ್ರಷ್ಟನೆ ಹೋಗೆಂದು ।
ಸಿಟ್ಟಲಿ ಮಗನ ಛಿ ಎಂದನು ೩೦

ರಾಮನ ಕಾಣದೆ ಪ್ರಾಣ ಅಹುತಿಗಳು । ನೇಮದಿ
ತಕ್ಕೊಳ್ಳ ಬ್ಯಾಡವೆಂದ ।
ಸೀಮಿಯ ಬಿಟ್ಟು ಹೊರಗೆ ಹೊರಡು ಎಂದು ।
ಭೀಮ ಘರ್ಜನೆಯಿಂದ ನುಡಿದನಾಗ ೩೧

ಪಿತನ ಪಾಕ್ಯವು ಕೇಳಿ ಅತಿ–ಭಕ್ತಿಯಿಂದ । ಸುತನು
ತಾ ಹೊರಗೆ ಹೋಗುತಿರೆ।
ಸತಿಯು ಕೊಟ್ಟಳು ತನ್ನ ಸುತೆಯ ಕೈಯಲಿ ಆಗ ।
ಸತತನವಲ್ಲಿಗೆ ಪೋಗೆಂದಳು ೩೨

ಹೆತ್ತಮಗಳು ತನ್ನ ಕುತ್ತಿಗೆ ಮ್ಯಾಲೆ ।
ಇತ್ತ ಋಷಿಗಳು ಬಂದರಾಗ ।
ಇತ್ತೆ ನಿಮಗೆ ಈ ಪುತ್ರಿಯನೆಂದು ।
ಚಿತ್ತೈಸಬೇಕೆಂದು ನುಡಿದನಾಗ ೩೩

ಒಬ್ಬನೆ ಅನ್ನವ ಕಾಣೆ ನಾನು । ಮತ್ತೊಬ್ಬಳ
ಕೊಂಡೇನು ಮಾಡಲೆಂದ ।
ಇಬ್ಬರ ಒಪ್ಪಿಸಿ ವಿವಾಹವು ಮಾಡಿ । ಕಬ್ಬು
ಬಿಲ್ಲಿನ ಕಥಿ ಪೇಳಿದನು ೩೪

ಸೇರುವರಿ ಹಿಟ್ಟು ಸೇರುವರಿ ಬೆಲ್ಲ । ಸೇವರಿ ತುಪ್ಪ
ಸೇರಿಸುತ ಐದು ಉಂಡೆಯಾನೆ ಮಾಡಿ ।
ನೂರ ಹತ್ತು ನಾಮದ ಒಡೆಯಗೆ ಅರ್ಪಿಸಿ ।
ಚಾರು ಪ್ರಸಾದ ಸ್ವೀಕಾರ ಮಾಡು ३೫

ರಾಮರಾಮ ನಿಮಗೊಂದನೆ ಮಾಳ್ಪೆ । ರಾಜ್ಯಭೂಮಿ
ಧನಧಾನ್ಯ ಕೊಡೊ ।
ಆ ಮಹಾ ವೈರಾಗ್ಯ ಭಕ್ತಿ ಸಂತಾನ । ನೇಮದಿ ಕೊಡು
ಎಂದು ಪೂಜೆ ಮಾಡೊ ३೬

ಅಂದುಪದೇಶಿಸಿ ಮುಂದಕ್ಕೆ ಬರಲು । ಅಂಥ
ಕುಂಟರು ಅಲ್ಲಿ ಕುಳಿತಿದ್ದರು ।
ಬಂದ ವಿಪ್ರನಿಗೆ ಮುಂದೆ ಜೊಡಿಸಿ ಕೈಯ । ತಂದೆ
ನೀವ್ಯಾರೆಂದು ಕೇಳಿದರು ३೭

ರಾಮಭಕ್ತನು ನಾನು ನೇಮದಿ ನಿಮಗೆ ।
ರಾಮಕಥೆಗಳನ್ನು ಪೇಳುವೆನು ।
ಪ್ರೇಮದಿ ಕೇಳಲು ನಯನ ಪಾದಗಳು । ಸ್ವಾಮಿ ತಾ
ಕೊಟ್ಟು ಸಲಹುವನು ३೮

ಸೇರುವರಿ ಹಿಟ್ಟು ಸೇರುವರಿ ಬೆಲ್ಲ । ಸೇರುವರಿ
ತುಪ್ಪ ಹಾಕಿ ಹರುಷದಿಂದ ।
ಐದು ಉಂಡಿಯ ಮಾಡಿ ರಾಮರಿಗರ್ಪಿಸಿ ।
ನೇಮದಿ ಕೊಡು ಎಂದು ಪೂಜೆ ಮಾಡು ४೦

ಅಂತುಪದೇಶಿಸಿ ಇತ್ತೆ ಬಂದೆನು । ಒಬ್ಬ ಮುತ್ತೈದಿ
ಮನೆಯೊಳು ಪೂಜೆಲಿರೆ ।
ವಿಪ್ರನ್ನ ಕಾಣುತ್ತ ಭಕ್ತಿಯಿಂದಲಿ । ಕರವೆತ್ತಿ
ಮುಗಿದು ತಾ ಕೇಳಿದಳು ४೧

ಬಡವರು ನಾವಯ್ಯ ಹುಡುಗನು ನನಗೊಬ್ಬ ।
ಒಡೆಯನು ಕಾಶಿಗೆ ಹೋಗಿದ್ದನು।
ಉಡಲು ವಸ್ತ್ರಗಳಿಲ್ಲ ಇಡಲು ಒಡವಿ ಇಲ್ಲ ।
ಬಡತನ ಬಲು ನಮ್ಮ ಬಂದಿಹುದು ೪೨

ಬ್ರಹ್ಮಾದಿಗಳ ವಂದ್ಯ ನಮ್ಮ ರಾಮನ ಕಥೆ ।
ನಿಮಗೆ ಪೇಳುವೆ ಕೇಳಿರೆಂದ ।
ಗಮ್ಮನೆ ಪೂಜೆಯ ಮಾಡಲು ಈ ರಾಜ್ಯ ।
ನಿಮ್ಮಗನಾಳುವ ಕೇಳಿರೆಂದ ೪೩

ಸೇರುವರಿ ಹಿಟ್ಟು ಸೇರುವರಿ ಬೆಲ್ಲ । ಸೇರುವರಿ
ತುಪ್ಪ ಹಾಕಿ ಹರುಷದಿಂದ ।
ಐದು ಉಂಡೆಯ ಮಾಡಿ ರಾಮರಿಗರ್ಪಿಸಿ । ಚಾರು
ಪ್ರಸಾದ ಸ್ವೀಕಾರ ಮಾಡು ೪೪

ಆನೆ ಕೈಯಲ್ಲಿ ದಿವ್ಯ ಹಾರವ ಕೊಟ್ಟು । ಪನ್ನೀರು
ಗಿಂಡಿಯ ಕೊಟ್ಟಿದ್ದರು ।
ಭಾರಿ ರಾಜರನ್ನೆಲ್ಲ ಬಿಟ್ಟು ಬಡ ಕುಮಾರಗೆ । ಹಾರ
ಹಾಕಿ ಕರೆದೊಯ್ದಿತು ೪೫

ಗಂಗಾಸ್ನಾನ ಮಾಡಿಕೊಂಡು ಬಂದನು ವಿಪ್ರ ।
ಕಂದನೈಶ್ವರ್ಯವ ನೋಡಿದನು ।
ಅಂದಣ ಪಲ್ಲಕ್ಕಿ ಏರಿಸಿಕೊಂಡು । ತಂದೆ ತಾಯಿಯ
ತಂದು ಬಿಟ್ಟರಾಗ ೪೬

ಅತ್ತಲುಪದೇಶಿಸಿ ಇತ್ತ ಬಂದನು ।
ಅಶ್ವತ್ಥಕಟ್ಟೆಯಲಿ ಮಲಗಿದನು ।
ಎತ್ತನೋಡಿದರೆಲ್ಲ ಪಟ್ಟಾಭಿರಾಮನು । ತತ್ತರ ಭಿತ್ತರವಾದ ನಾಗ ೪೭

ವೃದ್ಧ ಬ್ರಾಹ್ಮಣನಾಗಿ ಎದ್ದು ಬಂದನು । ಅಯೋಧ್ಯಧರ
ಸುತನು ನಗುತ ।

ಬಿದ್ದ ಮಗನ ನೋಡಿ ಎಬ್ಬಿಸಿ ಕುಳ್ಳಿರಿಸಿ । ಮುದ್ದಾಡಿ
ಸುದ್ದಿಯ ಕೇಳಿದನು ೪೮

ರತ್ನ ಸಿಂಹಾಸನದ ಮೇಲೆ ಶ್ರೀರಾಮರು ।
ಪತ್ನಿಸಹಿತ ಕುಳಿತಿರಲು ।
ಮುತ್ತಿನ ಚಾಮರ ಎತ್ತಿ ಬೀಸುತಲಿ ।
ಭರತ ಶತ್ರುಘ್ನ ನಿಂತಿದ್ದರು ೪೯

ಸೀತಾರಾಮರಿಗೆ ಅತ ಲಕ್ಷ್ಮಣ ತಾನು । ಶ್ವೇತ
ಛತ್ರಿಯನ್ನು ಹಿಡಿದಿದ್ದನು ।
ವಾತಸುತ ವಾಲಿ ಸುತ ಸುಗ್ರೀವರು । ಪ್ರೀತಿಲಿಕೈ
ಮುಗಿದು ನಿಂತಿದ್ದರು ೫೦

ಅಷ್ಟು ಜನರ ಸಹಿತ ಪಟ್ಟಾಭಿರಾಮರ ।ದೃಷ್ಟಿಯಿಂದಲಿ
ತಾ ನೋಡಿದನಾಗ ।
ಶ್ರೇಷ್ಠ ನಾರಾಯಣ ಭಟ್ಟನು ತಾ ।
ಸಂತುಷ್ಟನಾಗಿ ಕೈ ಮುಗಿದನಾಗ ೫೧

ರಾಮರಾಮ ನಿಮಗೊಂದನಿ ಮಾಳ್ಪೆ । ರಾಜ್ಯ ಭೂಮಿ
ಧನಧಾನ್ಯ ಕೊಟ್ಟೆ ।
ಆ ಮಹಾಭಕ್ತಿ ಸಂಪದ ದರ್ಶನವನು । ನೇಮದಿ ಕೊಡು
ಎಂದು ಬೇಡಿದನು ೫೨

ಪತಿತ ಪಾವನನಿಗೆ ಹಿತದಿಂದ ಕೈ ಮುಗಿದು । ಪಿತನಿಗೆ
ಈರೂಪ ತೋರೆಂದನು।
ಸತತ ಮೂರುತಿ ಕೇಳಿ ಸಂತೋಷದಿ । ನೇಮದಿ
ಇರುವೆನು ಪೋಗೆಂದನು ೫೩

ರಾಮದರ್ಶನ ಕೊಟ್ಟು ರಾಮ ಮುದ್ರಿಕೆಯನ್ನಿತ್ತು ।
ಪ್ರೇಮದಿ ಅತನ್ನ ಕಳಿಸಿದನು।

ಭೂಮಿಜ ಸಹಿತಾಗಿ ನಾನು ನಿಮ್ಮನಿಯಲ್ಲಿ ।
ನೇಮದಿ ಇರುವೆನು ಪೋಗೆಂದನು ೫೪

ರಾಮನ ಕಂಡು ನೇಮದಿ ಬಂದನು ।
ಆ ಮಹಾರಾಜನ ಮಂದಿರಕೆ ।
ಸ್ವಾಮಿಯ ಕಂಡು ಮಹಾ ಐಶ್ವರ್ಯದಿ । ಪ್ರೇಮದಿ
ಕರೆತಂದರರಮನಿಗೆ ೫೫

ಭಕ್ಷ ಪಾಯಸ ಶಾಕ । ಸೂಪಗಳಿಂದಲಿ ।
ಲಕ್ಷ್ಮೀಪತಿಯ ಪೂಜೆಯ ಮಾಡಿದರು।
ಲಕ್ಷಕೋಟಿ ದ್ರವ್ಯ ಕೊಟ್ಟು ವಿಪ್ರನಿಗೆ । ಪ್ರದಕ್ಷಿಣಿ
ನಮಸ್ಕಾರ ಮಾಡಿದರು ೫೬

ಸೇರುವರಿ ಹಿಟ್ಟು ಸೇರುವರಿ ಸವ್ವಸೇರು
ಬೆಲ್ಲ ತುಪ್ಪ ಹಾಕಿ ಹರುಷದಿಂದ ।
ಐದು ಉಂಡಿಯ ಮಾಡಿ ರಾಮರಿಗರ್ಪಿಸಿ ।
ಚಾರು ಪ್ರಸಾದವ ತಕ್ಕೊಂಡರು ೫೭

ರಾಮರಾಮ ನಿಮಗೊಂದನೆ ಮಾಳ್ಪೆ । ರಾಜ್ಯ ಭೂಮಿ
ಧನ ಧಾನ್ಯ ಕೊಟ್ಟೆ ।
ಆ ಮಹಾ ಭಕ್ತಿ ಸುತಾನ ನಯನ ಪಾದ । ಪ್ರೇಮದಿ
ಕೊಟ್ಟು ನೀ ಸಲಹಿದಿಯೋ ೫೮

ಇಂತು ರಾಮರ ಪೂಜೆ ನಿಂತು ಮಾಡಿಸಿಕೊಂಡು । ಕುಂಟ
ಕುರುಡರಲ್ಲಿ ಬಂದನಾಗ।
ನಿಂತು ವಿಚಾರಿಸಿ ಸಂತೋಷಧಿ । ವೃತ್ತಾಂತವನ್ನೆಲ್ಲಾ ಕೇಳಿದನು ೫೯

ಬಂದ ವಿಪ್ರನ ನೋಡ್ಯಾನಂದ ಭರಿತರಾಗಿ । ತಂದು
ಗದ್ದುಗೆನಿಟ್ಟು ಪೂಜೆ ಮಾಡಿ।
ಮಂಡಿಗಿ ತುಪ್ಪಗಳಿಂದ ರಾಮರ ಪೂಜೆ ।
ಹಿಂಡು ಹಿಂಡಾಗಿ ಮಾಡಿದರು ೬೦

ಸೇರುವರಿ ಹಿಟ್ಟು ಸೇರುವರಿ ಬೆಲ್ಲ । ಸೇರಯವರಿ
ತುಪ್ಪ ಸೇರಿಸುತ ।
ಐದು ಉಂಡಿಯ ಮಾಡಿ ರಾಮರಿಗರ್ಪಿಸಿ । ಪ್ರೇಮದಿ
ಪ್ರಸಾದ ತಕ್ಕೊಂಡರು ೬೧

ರಾಮರಾಮ ನಿನಗೊಂದನೆ ಮಾಳ್ಪೆ । ರಾಜ್ಯ ಭೂಮಿ
ಧನಧಾನ್ಯ ಕೊಟ್ಟೆ ।
ಆ ಮಹಾಭಕ್ತಿ ಸಂತಾನ ನಯನ ಪಾದ । ಪ್ರೇಮದಿ
ಕೊಟ್ಟು ನೀ ಸಲಹಿದಿಯೋ ೬೨

ಇಷ್ಟು ರಾಮರ ಪೂಜೆ ತಟ್ಟನೆ ಮಾಡಿ । ಶ್ರೇಷ್ಠ
ಮುನಿಗಳಲ್ಲಿ ಬಂದರಾಗ ।
ಹುಟ್ಟಿದ ಮಗಳನ್ನು ನೋಡಿ ಸಂತೋಷದಿ । ಕಷ್ಟ
ಸುಖಗಳನ್ನು ಕೇಳಿದನು ೬೩

ಅಪ್ಪಯ್ಯ ನೀಪೇಳಿದಂತಹ ಕಥಿಯ । ನಾನು ತಪ್ಪದೆ
ಪೂಜೆಯ ಮಾಡಿದೆನು ।
ಒಪ್ಪಿರ ಶ್ರೀ ರಾಮರು ಕಪ್ಪ ಕಾಣಿಕೆಯಿಂದ । ಅತ್ಯಂತ
ಐಶ್ವರ್ಯ ನೀಡಿದರು ೬೪

ಸೇರುವರಿ ಹಿಟ್ಟು ಸೇರುವರಿ ಬೆಲ್ಲ । ಸೇರುವರಿ ತುಪ್ಪ ಸೇರಿಸುತ ।
ಐದು ಉಂಡೆ ಮಾಡಿ ರಾಮರಿಗರ್ಪಿಸಿ । ನೇಮದಿ
ಪ್ರಸಾದವ ತೊಗೊಂಡರು ೬೫

ರಾಮರಾಮ ನಿಮಗೊಂದನಿ ಮಾಳ್ಪೆ । ರಾಜ್ಯ ಭೂಮಿ
ಧನಧಾನ್ಯ ಕೊಟ್ಟೆ ।
ಆ ಮಹಾಭಕ್ತಿ ಸಂತಾನ ನಯನ ಪಾದ ।
ಪ್ರೇಮದಿ ಕೊಟ್ಟು ನೀ ಸಲಹಿದಿಯೋ ೬೬

ತಂದಿ ಮಕ್ಕಳ ಸಹಿತ ಬಂದರು ಊರಿಗೆ । ದುಂದುಭಿ
ವಾದ್ಯವು ಮೊಳಗಿದವು।

ಅಂದಣ ಪಲ್ಲಕ್ಕಿ ಯಿಂದ ಕಿರೆದೊಯ್ದರು । ಮಂದಿ
ಮಕ್ಕಳ ಸಹಿತ ಚೆಂದದಿಂದ ೬೭

ಮುತ್ತು ಮಾಣಿಕ್ಯದಿಂದ ಕಟ್ಟಿದ ತೋರಣ ।
ಉಪ್ಪರಿಗೆ ಉಪವನಗಳಿಂದ ।
ಅತ್ಯಂತ ಐಶ್ವರ್ಯ ರಾಮನ ದಯದಿಂದ ।
ಒಪ್ಪಿದ ಕೇಶವ ಭಟ್ಟನಾಗ ೬೮
ಬಾಳೆ ಹೊಂಬಾಳೆ ರಸದಾಳೆ ಅಡಿಕೆ ಮಾವು ।
ಮ್ಯಾಲೆ ತೋರಣವನ್ನು ಕಟ್ಟಿದರು।
ಹಾಲು ಮೊಸರು ತುಪ್ಪ ಬಾಳೆಹಣ್ಣುಗಳಿಂದ ।
ಸಾಲುಗದ್ದಿಗಿ ಮ್ಯಾಲೆ ಇರಿಸಿದರು ೬೯

ಕುಂದಣದಿಂದಲಿ ಹಂದರ ಹಾಕಿ । ತಂದು
ಮಂಟೊವನ್ನು ಶೃಂಗರಿಸಿ ।
ಗಂಧ ಪುಷ್ಪ ತಾಂಬೂಲಗಳನ್ನು । ತಂದು ತಂದು
ತಟ್ಟೆಲಿ ಇರಿಸಿದರು ೭೦

ವೇದ ಬ್ರಾಂಬರು ತಾವು ಅಯೋಧ್ಯಪತಿಯನ್ನು ।
ಮಧ್ಯ ಮಂಟಪದಲ್ಲಿ ಕುಳ್ಳಿರಿಸಿ।
ಎದ್ದು ನಿಂತು ವೇದೋಕ್ತಮಂತ್ರಗಳಿಂದ ।
ವೇದೋಕ್ತಾಧಿ ಪೋಜೆಯ ಮಾಡಿದರು ೭೧

ಭಾರತಿ ಪತಿ ಸಹಿತ ಭೂಸುತಿಯಿಂದ । ಶ್ರೀ ರಾಮರ
ಪೂಜೆಯ ಮಾಡಿದರು।
ಚಾರು ಮಲ್ಲಿಗಿ ತುಳಸಿ ಹಾರಗಳ್ಹಾಕಿ । ಶೃಂಗಾರವ
ಮಾಡಿ ನೋಡಿದರು ೭೨

ಮಂಡಿಗಿ ಫೇಣಿ ದುಂಡು ಗುಳ್ಳೋರಿಗಿ ।
ಸಂಡಿಗಿ ಹಪ್ಪಳ ಅಂಬೋಡಿಗಳು ।
ಚಂದ ಚಂದದಿ ಭಕ್ಷ್ಯ ತಂದು ರಾಮರಿಗಿಟ್ಟು ।
ವಂದಿಸಿ ಕೈ ಮುಗಿದು ಬೇಡಿದರು ೭೩

ಸೇರುವರಿ ಹಿಟ್ಟು ಸೇರುವರಿ ತುಪ್ಪ । ಸೇರುವರಿ
ಬೆಲ್ಲ ಸೇರಿಸುತ ।
ಐದು ಉಂಡಿಯ ಮಾಡಿ ರಾಮರಿಗರ್ಪಿಸಿ ।
ಚಾರು ಪ್ರಸಾದವ ತೆಕ್ಕೊಡರು ೨೪

ರಾಮರಾಮನಿನಗೊಂದನಿ ಮಾಳ್ಪೆ । ರಾಜ್ಯ ಭೂಮಿ
ಧನಧಾನ್ಯ ಕೊಟ್ಟಿ ।
ಆ ಮಹಾಭಕ್ತಿ ಸಂತಾನ ನಯನ ಪಾದ । ಪ್ರೇಮದಿ
ಕೊಟ್ಟು ನೀ ಸಲಹಿ ಎಂದು ೨೫

ಭಕ್ತಿಯಿಂದಲಿ ಮಂಗಳಾರುತಿಯ ಬೆಳಗಿ ।
ಮಂತ್ರಾಕ್ಷತೆಗಳನೆ ಹಾಕಿದರು ।
ಅತ್ಯಂತ ಹರುಷದಿ ಸ್ತೋತ್ರವ ಮಾಡಲು ।
ಪ್ರತ್ಯಕನಾದ ಪಟ್ಟಾಭಿರಾಮ ೨೬

ಸಣ್ಣ ನಾರಾಯಣ ಭಟ್ಟನಿಂದ ಹರಿಯ ।
ಕಣ್ಣಾರ ಜನರು ನೋಡಿದರು ।
ಘನ್ನ ಮಹಿಮನಾದ ಕೇಶವ ಭಟ್ಟನು ।
ಧನ್ಯನೆಂದೆನಿಸಿದ ಜಗದೊಳಗೆ ೨೭

ರಾಮ ಕಥಿಯನು ನೇಮದಿ ಕೇಳಲು ।
ಪ್ರೇಮದಿ ಭಾಗ್ಯ ಸಂತಾನವೀವ ।
ಕಾಣದವನಿಗೆ ಕಣ್ಣು ಕಾಣಿಸಿಕೊಂಬುದು ।
ಏನು ಬೇಡಿದ್ದೆಲ್ಲ ಕೊಡುತಿಹನು ೨೮

ರಾಮಕಥಿಗಳೆಂಬೊ ದೊರೆಯಾ ಮುತ್ತುಗಳನು ।
ಹಾರವ ಕಟ್ಟಿ ನಾ ಹರುಷದಿಂದ।
ಚಾರು ಮಹಿಮ ಸೀತಾರಾಮನ್ನ ಕೊರಳೊಳು । ಹಾರವ
ಕಟ್ಟಿನಾ ಹಾಕಿದೆನು ೨೯

ತಪ್ಪುಗಳಿದ್ದರೆ ಒಪ್ಪಿಕೊಂಡು ನಮ್ಮಪ್ಪ ।
ಸಂರಕ್ಷಣಿ ಮಾಡಲೆಂದು ।
ನೆತ್ತಿಯ ಮೇಲೆರಡು ಎತ್ತಿ ಕರಗಳನ್ನು । ಭಕ್ತಿಲಿ
ಮುಕುಂದನ್ನ ಬೇಡುವೆನು ೮೦

ಮುದ್ದುಮೋಹನ ಅಯೋಧ್ಯ ಪತಿ ।
ರಾಮಭದ್ರನ ಕಥಿಗಳ ಪೇಳಿದರೆ ।
ಮಧ್ವಾಂತರ್ಗತ ಸಿರಿ ನರಸಿಂಹ ವಿಠ್ಠಲನು ।
ವಿದ್ಯಾಬುದ್ಧಿ ಕೊಟ್ಟು ಸಲಹುವನು ೮೧

ಮಂಗಳ ಶ್ರೀ ರಾಮಚಂದ್ರನಿಗೆ । ಜಯ ಮಂಗಳ
ಸೀತಾಪತಿ ರಾಮನಿಗೆ ।
ಮಂಗಳ ಆಶ್ರಿತ ಪಾಲನಿಗೆ । ಮಂಗಳವು ರಘುರಾಮನಿಗೆ ೮೨

೩

## ಸೌಗಂಧಿಕಾ ಪುಷ್ಪ

ಗಜಮುಖದಾತನಾ । ಭಜನೆಯಮಾಡುತಾ ।
ಅಜನಪುತ್ರನ ಪುತ್ರಿ
ಎನ್ನ ಪರಾಧವ ಮನ್ನಿಸೊನೀನೆ ಘನ್ನ ಮಹಿಮನೆ ನೀನೇ
ಎನ್ನನೆ ಪಾಲಿಸೊ । ಒಂದಿಷ್ಟುಬೇಡುವೆನು ।
ಶ್ರೇಷ್ಠಾದ ಪದಗಳನು
ಕೊಟ್ಟುಸಲಹೋ ತಂದೆ ನರಸಿಂಹವಿಠಲನ ದಯದಿ ।
ಸುಗಂಧಿಯ
ಮಹಿಮೆಯ । ಛಂದದಿ ಪಾಲಿಸೊನೀನೇ ।

### ವಚನ

ಇಂತು ಕೈ ಮುಗಿದು ಸಂತೋಷದಿಂದಲಿ । ಕುಂತಿಸುತನ
ಮಹಿಮೆಯನು ಪೇಳುವೆನು । ಮತ್ತೇನೆಂದರೆ

## ಧನಿ

ಬಲ್ಲೆ ಬಲ್ಲೆನೋ ನಿನ್ನ ಮಹರಾಯಾ । ಬಲ್ಲಿದರ ಪ್ರೀಯಾ
ಶ್ರೀಮದಾನಂದ ದೇವ । ವರಪುತ್ರಗಾತ್ರ । ಜಾನಕೀಗೆ ಪೇಳಿದ
ರಾಮಚರಿತ್ರ । ಮಾಡೆನ್ನ ಪವಿತ್ರ । ಸುಜನರ ಮಿತ್ರ ೧

ಭಾಮಾ ಪತಿಯಸೇವಕನೀ । ಕುರುಕುಲಾಂತಕನೀ
ಶಕುನಿ ದುಃಶಾಸನ
ದುರ್ಯೋಧನ ದುರ್ಜನ ಪಾವಕನೀ ।
ಮೂರ್ಜಗಕೆ ಪ್ರೇರಕನೀ ೨

ಮುದ್ದು ನರಸಿಂಹ ವಿಠಲನ ಪ್ರೀಯಾ । ಅದ್ವೈತ
ಮತಗೆದ್ದ ಮಹರಾಯಾ
ಪಿಡಿ ಎನ್ನ ಕೈಯಾ । ಶುದ್ಧಜನ ಗೇಯಾ ೩

## ವಚನ

ಒಂದುದಿನ ದ್ರೌಪದಿಯು । ಅಂಗಳದೊಳು
ನಿಂತಿರಲು । ಅಂಬರ
ದಿಂದೊಂದು ಪುಷ್ಪ ವುದುರಿತು ।
ಭಂಗಾರದಾಕಿಂತ । ಯಿಂಬಾಗಿ
ತೋರುವುದು । ಕಂಗಳಿ ಗೊತ್ತಿದಳೆ ತಾನು ।
ಇಂಥ ಪುಷ್ಪವು ಇನ್ನಿಲ್ಲಿ
ಬಂದಿತುಯೆಂದು । ಬಾಡಿಲ್ಲ ಪುಷ್ಪವು ।
ಪೊಡಷದಳವದಕೆ
ಮಾಡಿದನಿ ಇದರ ಸೃಷ್ಟಿಯನು ಈಗ ತಾ ಬ್ರಹ್ಮನು ।
ಇಂಥ ಪುಷ್ಪವು
ನನಗಿನ್ನೆಂತು ದೊರಕುವುದೆಂದು । ಚಿಂತೆ ಮಾಡುತಾ
ನಿಂತಳು । ದ್ರೌಪದಿಯು
ಕುಂತಿಸುತನಲ್ಲಿಗೆ ಹೋಗಿ ಬರುತೇನೆಂದು । ಅಂತರಾತ್ಮಕ
ನರಸಿಂಹ ವಿಠಲನ ನೆನೆಸಿದಳು ।

## ಧ್ವನಿ

ಬಂದಾಳು ದ್ರೌಪದಿ । ಮಹಾ ಪತಿವ್ರತಿ ।
ಬಂದು ಭೀಮನಿಗೆ ವಂದಿಸಿ ಬೇಡಿದಳು ಪ

ಪತಿಪಾದಕ್ಕೆರಗುತ್ತ । ಅತಿ ಮೋಹತೋರುತ್ತ । ಹಿತದಿ
ಮಾತಾಡುತ್ತ ಮಿತದಿಂದ ಬೇಡುತ್ತಾ ೧

ಶೂರರೆ ನೀವು ಕುಬೇರನ ವನಕ್ಹೋಗಿ ।
ಚಾರುಪುಷ್ಪವ ತರೋ ಧೀರರೆ ನೀವೆಂದು ೨

ತಂದೆ ಶ್ರೀ ನರಸಿಂಹ ವಿಠಲನು ಪೇಳಿದನು । ಸುಗಂಧಿಯ
ಪುಷ್ಪವ ತಂದು ಕೊಡಬೇಕೆಂದು ೩

## ವಚನ

ಇಂತೆಂದು ಪೇಳಲು ಕಾಂತೆಯಾ ನುಡಿಕೇಳಿ ।
ಸಂತೋಷದಿಂದಾ ।
ಮಾತಾಡಿದನು । ಕುಂತಿಸುತನು ನಿನ್ನ ।
ಚಿಂತೆಯ ಬಿಡಿಸುವನು ।
ಛಂದದಲಿ ಮಾತನಾಡಿದನು ಮತ್ತೇನೆಂದರೇ

## ಧನಿ

ಚಿಂತಿಸುವುದ್ಯಾಕಿನ್ನು ಕಾಂತೆಕೇಳೆನೀ । ಕುಂತಿಸುತನಾನಿನ್ನ
ಚಿಂತೆಯ ಬಿಡಿಸುವೆನು ಪ

ಮಡದಿ ನಿನ್ನಾ ಮುಖದಿಂದ ನುಡಿದ ಮಾತುಗಳೂ ।
ನೀ ನುಡಿದ ಮಾತುಗಳೂ
ಕಡುವೇಗದಿಂದ ಮಾಳ್ಪೆ ಭಿಡೆಯು ಯಾಕ್ಹೇಳೂ ೧

ಛಂದಾದಿಂದಲಿ ಸುಗಂಧಾ ಪುಷ್ಪವನೂ ।
ಸುಗಂಧಾ ಪುಷ್ಪವನೂ ।
ತಂದೂ ಕೊಡುವೆನು ನಾ ನಿಂತು ನೀ ಕೇಳು ೨

ಮೂರು ಲೋಕದ ಜನ । ಸೂರೆ ಮಾಡಿದರೂ ।
ವಂಚಕನ ಎದುರಿಸಿ ತರುವೆ ಪುಷ್ಪವನು ೩

ನರಸಿಂಹ ವಿಠಲನ್ನ । ಸ್ಮರಿಸಿಕೋ ನೀಯನ್ನಾ ।
ಹರುಷದಿ ಪುಷ್ಪವನು ತರಿಸಿ ಕೊಡುವೆನು ೪

## ವಚನ

ಹೆಗಲಮೇಲೆ ಗದೆಯನಿರಿಸಿ । ಶೂರರೆದೆವಡೆವಂತೆ ।
ಭುಜವಚಪ್ಪರಿಸಿ
ಎಗರಿ ಏರಿದನು ಆರ್ಭಟಿಸಿ । ಭೂಮಿ
ಸಿಡಿದ್ಹೋಗುವಂತೆಹೆಜ್ಜೆ
ಯಿರಿಸಿ ಘುಡು ಘುಡಿಸಿ ಭೀಮ ಬರುತಿರಲು ।
ನಡುಮಾರ್ಗದಲಿ ಕಂಡ ಮಾರುತಿಯನೂ

## ಧನಿ

ನೀವ್ಯಾರೈ ಮಾರುತಿರಾಯಾ । ಕುಬೇರನಾವನಕೆ ಪೋಗುವೆನಾ ಪ

ದುಷ್ಟತನದಿ ದಾರಿ ಕಟ್ಟಿದರೆ ನೀನು । ಮುಟ್ಟಿಯಮನ
ಪುರಕಟ್ಟುವೆ ನಿನ್ನನು ೧

ಕ್ರೂರತನದಿ ದಾರಿಯ ಕೊಡದಿರೆ
ಧೀರ ನಿನ್ನನು ಯಮಪುರಕೆ ಕಳಿಸುವೆ ೨

ನರಸಿಂಹ ವಿಠಲನ್ನ ಸ್ಮರಿಸಿಕೊಂಡು ನೀನು ।
ಹರುಷದಿದಾರಿಯ ಕೊಟ್ಟುಕಳಿಸೈಯಾ ೩

## ವಚನ

ಅಟ್ಟಹಾಸದಿ ಭೀಮ ಸಿಟ್ಟಿನಿಂದಲಿನೋಡಿ । ಘುಡು ಘುಡಿಸುತಾ
ಭೀಮ ನುಡಿದ ನೀ ಮಾತು । ಬಿಡು ಬಿಡೂ
ಬಿಡು ನಿನ್ನ ಬಿಂಕವನು
ಹುಡುಗನೇ ಕಡುಬ್ಯಾಗದಿಂದೊಂದು ನುಡಿಯ
ಪೇಳುವೆ ನಾನು । ಮತ್ತಾನು
ಮುದುಕನು । ಎತ್ತಲಾರೆನು ಭಾರ । ಎತ್ತಿ ನೀ
ಭಾರವನು ಅತ್ತತ್ತ ಇಡು
ಯೆನಲು । ಮೆತ್ತಗಾದನು ಭೀಮ । ಮಾತನಾಡಿದನು
ಮಾರುತಿರಾಯನು

## ಆರ್ಯಾ

ಅಂಜನಾವರ ಪುತ್ರನಾನು । ದಿವ್ಯ
ಸಂಜೀವನವನು ತಂದೆ ನಾನು ।
ಧುರಂಧರ ರಾಯ ಸೇವಕನು । ಕಪಿರಾಯನೇ ನಾನು ।
ಇಲ್ಲಿ ಮುಂದ್ಯಾರು ಪೇಳೆಲೆ ನೀನು ೧

ವಾಯು ಪುತ್ರ ಭೀಮನು ನಾನು । ಮಹಾತಾಯಿ ಕುಂತಿಯ
ಉದರದೆ ಜನಿಸಿಹೆನು । ಮಹಾರಾಯ ಕೇಶವನ ಸೇವಕನೂ
ಕಪಿರಾಯನೇಪೇಳಯ್ಯ ನೀನು ೨

## ವಚನ

ಇಬ್ಬರೂ ಸಹೋದರರುನಾವೆಂದು । ಅಲ್ಲಿ ಹಬ್ಬಿತು
ಸುಖವು ನಮಗೆಂದ ।
ವುಬ್ಬುಬ್ಬಿ ಅಪ್ಪಲೂ ಬಂದ । ಮುಖವ
ಮುದ್ದಿಸುತ ಮಾತು ಹೀಗೆಂದ ೩

ಅಂಜ ಬ್ಯಾಡ ವೃತಮ್ಮ ನೀನು ।
ನಿನ್ನಿಂದೆ ಇರುತಿಹೆನು ನಾನು
ಬಂದ ಬಂದಾ ಕಾರ್ಯವನ್ನೂ । ಬಹು ಭೇಂದದಿಂದಲಿ
ಮಾಡೊ ನೀನೂ ೪

ಬಲ್ಲಿದಾ ಭೀಮನೆ ನೀನು । ನಿಂದೆಲ್ಲ ಸುದ್ದಿಯ ಬಲ್ಲೆನಾನು
ಚೆಲ್ವನರಸಿಂಹ ವಿಠಲನು । ನಿಂತೆಲ್ಲ ಕಾರ್ಯ ಮಾಡುವನು ೫

## ವಚನ

ಇಬ್ಬರು ಸಹೋದರರು ಹಬ್ಬಿತು ಸುಖವು । ಕಬ್ಬಿನಾ ಮೇಲೆ
ಜೇನಿಟ್ಟಂತಾಯಿತು । ತಮ್ಮ ಭೀಮನೆ
ಕೇಳೊ ನಮ್ಮಗಾನಂದವೂ ।
ಸುಮ್ಮನೇ ಇಲ್ಲಿ ನಿಂತಂತಾಯ್ತು । ನಮ್ಮ ಧರ್ಮಜಗೆ ಪೇಳೂ
ಈ ವಾರ್ತೆಯನು । ಸುಮ್ಮನೇ ಹೋಗೆಂದು ಅಪ್ಪಣೆಯ ನೀಡಲು
ಅಣ್ಣನಾ ಪಾದಕ್ಕೆ ಎರಗಿದನು ಭೀಮನು, ಎನ್ನ ಅಪರಾಧ
ಕ್ಷಮಿಸಬೇಕೆನುತಲಿ, ಮನ್ನಣೆಯ ಕೊಂಡು
ನಡೆದನೂ ಕುಬೇರನ ವನಕೇ

## ಧನಿ

ಬಂದ ಬಂದಾ ಭೀಮಸೇನ । ಗದೆಯಿಂದಲಿ
ಕೊಂದಾ ಮಹಸೈನ್ಯ ।
ಕಾವುಲಿದ್ದವರನೆ ಕಡಿದು । ಅಲ್ಲಿ ಓಡಾಡುವರನೆ
ಬಡಿದಾ । ಬಂದ
ಬಂದಾವರನೆ ಕೊಂದು, ಅಲ್ಲಲ್ಲಿ ಚೆಲ್ಲಾಡಿದಾ । ನರಸಿಂಹ
ವಿಠಲನ ದಾಸಾ । ಈ ಪರಿಮಾಡಿದ ವಿಲಾಸಾ ।

## ವಚನ

ಮಲ್ಲೀಗಿ ವನವೆಲ್ಲಾ ಚೆಲ್ಲಾಡಿ ಹೋಯಿತು । ಕ್ಯಾದೀಗಿ
ವನವೆಲ್ಲಾ ಬಾಡಿ
ಕೊಂಡಾವು । ಹಣ್ಣು ಹಂಪಲುಗಳೆಲ್ಲಿ ಮಣ್ಣಾಗಿ
ಹೋದವೂ । ನೋಡಲು
ವನವೆಲ್ಲಾ ಕಾಡಾಗಿ ಹೋಯಿತೂ । ನಿಂತ ಜನರೆಲ್ಲ
ಬಹು ತಾಪಬಟ್ಟರೂ
ನೋಡಿದಾ ಜನರೆಲ್ಲಾ ಓಡೋಡಿ ಹೋದರೂ । ಮಾಡಿದರು
ಕುಬೇರಗೆ ಬಂದು ವಂದನೆಯನ್ನು ।

## ಆರ್‍ಯಾ

ಕೇಳೈರಾಜನೆ ಪೇಳುವ ಮಾತನು ಕೇಳುವನಲ್ಲಾ ।
ಖೂಳನು ಒಬ್ಬಾನು
ಬಂದಿಹಾನೂ ಪೇಳುವ ಮಾತನೂ ಕೇಳುವನಲ್ಲಾ
ಹಾಳಾಯ್ತು ನಿನ್ನ ವನವೆಲ್ಲಾ ೧

ಎಷ್ಟು ಪೇಳಲಿ ಆತನ ದುಷ್ಟತನವನ್ನು । ಕುಟ್ಟಿಕುಟ್ಟಿಜನ
ಕೊಲ್ಲುವನೂ
ಬೆಟ್ಟದಂತಿಹನೂ । ಹೊಟ್ಟಿಬಾಕನೂ । ಜಗಜಟ್ಟಿ ಅವನೂ ।
ಜಗಮಲ್ಲಾ ೨

## ವಚನ

ಇಂತು ಪರಿಪೇಳಲೂ । ಸಂತಾಪಟ್ಟನೂ ।
ಚಿಂತೆ ಮಾಡಿದನಾಗ ನಿಂತು
ಕುಬೇರನೂ । ಕುಂತಿಸುತ ಬಂದಿಹನು ।
ಎಂತು ಮಾಡಲಿ ಎಂದಾ ।
ಸಂತೈಸಿ ಆತನಾ ಕರೆತರುವೆನೆನುತಾ । ಹೋದನು ಕುಬೇರನು

## ಧನಿ

ಬಂದ ಬಂದಾ ಕುಬೇರನು । ಛಂದಾದಿಂದಲಿ ತಾ ಧೀರನು ಪ

ಮಂದೀ ಮಕ್ಕಳನೆಲ್ಲಾ ಕರಸೀದಾ ಅಲ್ಲಿ । ದುಂದು
ಭಿವಾದ್ಯಗಳಿರಿ ಸೀದಾ ಅ.ಪ

ಅಂದಾಣಗಳನು ಶೃಂಗರಿಸೀದಾ । ಪೀತಾಂಬರಗಳ
ತಂದು ಉಡಿಸೀದಾ
ಗಂಧ ಪುಷ್ಪಗಳು ಶೃಂಗರಿಸೀದಾ । ಅಲ್ಲಿ ಮಂಡಿಗೆ
ಫೇಣಿಗಳ ಉಣಿಸೀದಾ ೧

ಹಾರ ಪದಕವನ್ನು ಕೊಟ್ಟನೆ ಉಡುಗೊರಿ ।
ತಾಂಬೂಲ ಮುಂದಿಟ್ಟನು
ಚಾರು ಫಲಗಳನ್ನು ಕೊಟ್ಟಾನೂ ।
ಧರ್ಮರಾಯರಿಗೆಂದು ದಿಟ್ಟನೂ ೨

ಬಂದಾ ಕಾರ್ಯಗಳೇನೆಂದಾನೂ । ನೀವು ತಂದ
ಸುದ್ದಿಗಳು ಹೇಳೆಂದಾನು
ಛಂದಾದಿಂದಲಿ ಎನ್ನ ಮುಂದದನು ಪೇಳಿ ।
ಬಂದು ಮಾಡಿ ಕೊಡುವೇನೂ ೩

ನರಸಿಂಹ ವಿಠಲಾನಾ ತಂಗಿಯೂ । ಪ್ರಾಣದರಿಸಿ
ಎನಗೆ ಅರ್ಧಾಂಗಿಯೂ
ಛಂದಾದಿಂದಲಿ ಸುಗಂಧಿಯ ಪುಷ್ಪವ ।
ತಂದು ಕೊಡಲು ನಾವು ಬಂದೇವೂ ೪

## ವಚನ

ಇಷ್ಟು ಕಷ್ಟಗಳ್ಯಾಕೆ । ಶ್ರೇಷ್ಠರೆ ನಿಮಗಿಲ್ಲಿ । ಅಷ್ಟು ಬಾಗ್ಯವು
ನಿಂದು ಕೊಟ್ಟು ಬಿಡುವೇನು ನಿಮಗೆ, ತಟ್ಟೆ ತಟ್ಟಿಲಿ ಪುಷ್ಪಗಳ

ತುಂಬಿ ಇಟ್ಟನೂ । ತುಂಬಿ ದಷ್ಟನೂ ।
ನೋಡಿ ಆನಂದ ಗೊಂಡನು
ಆಗಾ । ಸಿಟ್ಟಾಗ ಬ್ಯಾಡಿ । ಇಷ್ಟು ಕಾರ್ಯವೂ । ಥಟ್ಟಾನೆ
ಅಪ್ಪಣೆಯ ಕೊಟ್ಟು ಕಳಿಸಿದನೂ । ಕಟ್ಟಿಕೊಂಡನು ಅದಷ್ಟು
ಪುಷ್ಪಗಳನ್ನು । ಥಟ್ಟಾನೆ ನಡೆದು ಪೋದನು ಭೀಮನೂ

## ಧನಿ

ಬಂದ ಬಂದಾ ಭೀಮನೂ ಪೇಳಿದನು । ತಮ್ಮಂದಿರನೆ
ನೋಡಿ ಹಿಗ್ಗಿದಾನು । ಮುಂದೆ ಮಡದಿಯ
ನೋಡಿದನೂ । ತೊಡಿಮ್ಯಾಲಿಟ್ಟನೂ
ಸುಗಂಧ ಪುಷ್ಪದ ಮುಡಿಗಡ ಮುಡಿಸಿದನು, ಮುಂದೆ ಮುಖವ
ನೋಡಿ ಹಿಗ್ಗಿದನು \ ನರಸಿಂಹ ವಿಠಲನ ಸ್ಮರಿಸುತಿಹರು ಸುರರು
ಪುಷ್ಪದ ಮಳೆ ಕರೆದರು, ಪುರಜನರೆಲ್ಲ ಬೆರಗಾಗಿಹರು,
ಕಂಡು ಭೀಮನ ಕೊಂಡಾಡಿದರು.

## ವಚನ

ಇಷ್ಟು ಕಾರ್ಯಗಳು ಯುಧಿಷ್ಠಿರ ನೋಡಿದನು,
ಶ್ರೇಷ್ಠ ತಮ್ಮನ ತೊಡಿಯ
ಮೇಲಿಟ್ಟು ಮುದ್ದಾಡಿದನು, ನೆಟ್ಟನೇ ಮೈಸವರಿ
ಅಪ್ಪಿದನು ಬಿಗದು,

ಇಷ್ಟು ಕಾರ್ಯಮಾಡಿ ಕಷ್ಟ ಪಟ್ಟಿಹೆ ತಮ್ಮ
ಸೃಷ್ಟಿಮ್ಯಾಲೆ ನೀ ಜಗಜಟ್ಟಿ
ನೀನಾಗಿಹೆ, ಕೊಟ್ಟ ವರಗಳ ತಾನು । ಥಟ್ಟನೇ
ಶಿರದಮ್ಯಾಲೆ ಇಟ್ಟ ವರಗಳನ್ನು.

## ಮಂಗಳ

ಮಂಗಳಂ ಭೀಮದ್ರೌಪದಿಗೆ । ಜಯ ಮಂಗಳಂ
ಕೃಷ್ಣ ಮೂರುತಿಗೇ ಪ

ಮಂಗಳ ಪಾಂಡು ತನಯಗೆ । ಸುಗಂಧಿಯ
ಪುಷ್ಪವ ತಂದವರೀಗೆ
ಮಂಗಳಂ ಮಚ್ಚ ಕೂರ್ಮವರಹನಿಗೆ, ಮಂಗಳ ನರಸಿಂಹ
ವಾಮನಗೇ । ಕುಬೇರನ ವನಕ್ಹೋಗಿ ಚಾರುಪುಷ್ಪವ ತಂದವಗೇ
ಧೀರ ಭಾರಿ ಭಾರ್ಗವ ರಾಮ ಕೃಷ್ಣನಿಗೇ ಧೀರ ಬೌದ್ಧಾವತಾರ
ಕಲ್ಕಿಗೇ । ಮಂಗಳಂ ನರಸಿಂಹ ವಿಠಲರಾಯಗೆ,
ಸುಗಂಧಿಯ ಪುಷ್ಪವ ತಂದವಗೇ, ಮಂದಗಮನಿಯಾದ
ದ್ರೌಪದಿ ದೇವಿಗೆ. ಮಂಗಳ ರುಕ್ಮಿಣಿ ಅರಸು ಕೃಷ್ಣನಿಗೇ

## ಫಲಸ್ತುತಿ

ಉತ್ತಮರು ನಿತ್ಯ ಈ ಕಥಿಯ ನಿತ್ಯ ಪೇಳಿದರೆ ಮತ್ತೆ
ಸಂತಾನ ಸಂಪತ್ತುಗಳನುಭವಿಸಿ । ಸತ್ಯಮೂರುತಿ
ನರಸಿಂಹ ವಿಠಲನು ಅತ್ಯಂತ ಹರುಷವನು ಕೊಟ್ಟು
ಸಲಹುವನು.

ಸಂಪೂರ್ಣಂ

೪

## ಸಕ್ಕೂಬಾಯಿ ಹಾಡು

ಗಜಮುಖನಿನ್ನ ನಮಿಪೆ ಪಾಹೀ ಪ

ಸುಜನರ ಪರಿಪಾಲಾ । ಅಜನುತಗಾತ್ರ । ಭಜಿಸುವೆ ಚರಿತ್ರಾ ಅ.ಪ.

ದಂತಿ ವಾಹನಾನಾ । ದಂತವಿಕಾನನಾ ।
ಕಂತು ಹರನಾ । ಸುತನೇ ಪಾಹೀ ೧

ಮೂಷಕವಾಹನಾ । ದೋಷವಿದೂರನಾ
ತೋಷಿಸಿ ಭಜಿಸುವನಾ । ಹರಸುತನಾ ೨

ಪರಿಪರಿಭೂಷಿತಾ । ಸುರನರ ಸೇವಿತಾ
ನರಸಿಂಹವಿಠಲನಾ । ಪ್ರೀತಿಪಾತ್ರನಾ ೩

## ವಚನ

ಪುಂಡರೀಕವರದಾ । ಪಾಂಡುರಂಗಾ ನೆನಲು
ಹಿಂಡು ಪಾಪಗಳೆಲ್ಲ । ತುಂಡಾಗಿ ಪೋಗುವುದೂ
ಮಂಡೆಬಾಗಿಸಿರುಕುಮಾಯಿ ಗಂಡನ ಮಹಿಮೆಗಳನೂ
ಕೊಂಡಾಡುತಲೀ ಪಂಡರಿನಾಥನ್ನಾ
ಕಂಡವರಿಗುಂಟೆ ಯಮದಂಡದಾ ಭಯವೂ

## ಧ್ವನಿ

ವಿಠಲನ್ನ ಪಾದವಾ ಮುಟ್ಟಿ ಭಜಿಸುವೆನಾ । ವಿ
ಶಿಷ್ಟ ಜನರ ಮನ ಇಷ್ಟಾರ್ಥ ಕೊಡುವನಾ ಪ

ಭೀಮಾತೀರದಿ ಬಲುನೇಮಾದಿನಿಂತನು ಭಾಮೇ
ರುಕುಮಾಯಿಗೆ । ಪ್ರೇಮದಾ ಪ್ರಿಯನೇ ೧

ಪಂಢಾರಪುರದಲ್ಲಿ । ಕಂಡ್ಯಾಗೆ ನಿಂತನು
ಪುಂಡರೀಕ ವರದನಾ । ಪಂಢರಿನಾಥನಾ ೨

ಇಟ್ಟೀ ಕಲ್ಲಿನ ಮೇಲೆ ದಿಟ್ಟಾಗಿ ನಿಂತನೂ
ಶ್ರೇಷ್ಠಾ ಶ್ರೀ ನರಸಿಂಹ ವಿಠಲರಾಯನಾ ೩

## ಧ್ವನಿ

ಒಂದು ದೇಶದಿ ಕಂದನಾ ಸತೀ ಒಂದು ಅತ್ತಿಯು
ನಿಂದಿಸುತ ಬಹು ಮಂದಿಯೊಳಗೇ ನಿಂದ್ಯಳಾಗೀ
ಇದ್ದಳಾಕೀ ಪ

ಕುಟ್ಟಿಬೀಸುತ । ಕಟ್ಟಿಗೊಯ್ಯುತಾ ।
ಮುಟ್ಟಿ ಎಂಜಲು ತೆಗೆಯುತಾ
ಕಷ್ಟ ಪಡುವಳು । ಅತ್ತಿ ಕೈಯೊಲು । ಇಷ್ಟದಿಂದಾ
ಹೊತ್ತು ಹೊತ್ತಿಗೆ ಸೊಸಿಗೆ ಒಂದು ತುತ್ತೂ ನೀಡದೆ ।
ಅತ್ತಿಯಲ್ಲದೆ । ಮೃತ್ಯುವಾಗೀ । ಇದ್ದಳಾಕೀ ೧

ನೋಡಿದಾ ಜನರೆಲ್ಲ ಆಕೆಯ । ಮಾಡಬೇಡ ಹೀಗೆ ಎನಲು
ಕೇಳದಲೆ ಬಲು ಖೋಡಿ ಅತ್ತೆ । ತಾಡನೀಗಳ ಮಾಡುತಿಹಳೂ ೨

ಸುತನ ಬಯ್ಯುತ । ಸೊಸೆಯ ಕಡೆಯುತಾ । ಅತಿಶಯದಿ
ಬಹು ಘೋರ ಪಡಿಸುತಾ । ಪತಿಯ ವಡನೆ ಕಲಹಮಾಡೀ
ಇದ್ದಳಾಕೀ ೩

ಗೊಟ್ಟಿಗೇ ಜಲಾ ಬೇಕುತಾರೆಂದು ಗಟ್ಟಿ ಕೊಡವನು
ಕೊಟ್ಟು ಕಳುಹಲು । ವಿಠಲನ್ನಾ ಧ್ಯಾ । ನಿಸುತಮನದೊಳು
ಬಾವಿಯಲಿ ಬಿಟ್ಟಲಾಕೀ ೪

ಹರದು ಹಗ್ಗವು ಬೀಳಲಾಕೊಡ । ಕಡದು ನಾದಿನಿ
ಪೇಳಲತ್ತಿಗೆ । ವರದ ನರಸಿಂಹ ವಿಠಲನ್ನ ಸ್ಮರಿಸಿದಾಳೂ ೫

## ವಚನ

ಬಂದು ಅತ್ತೆಯು ಆಗ ಬಂಧನವ ಪಡಿಸುತಲೀ
ಒಂದು ಬಿಡದೆ ತನ್ನ ಕಂದನಿಗೆ ಪೇಳಲೂ ಮುಂದೇನು ।
ಗತಿಯಿನ್ನು ಬಿಂದಿಗ್ಹೋಯಿತು ಎನುತಾ । ಚಿಂದಿ ಕೋರಿ
ಗಳೆಲ್ಲಾ ತಂದು ಕೊಟ್ಟಳು ಆಗೆ । ಗಂಗೀಗೆ ಪೋಗೆಂದು
ಗದ್ರಿಸುತ ನುಡಿಯಲು । ಅಂಜುತಲಿ, ಅಳುಕುತಲಿ
ಬಂದು ಒಗೆಯುತಿರಲೂ, ವಿಠಲನ್ನ ಧ್ಯಾನ ಮುಟ್ಟಿ
ಮಾಡುವ ಭಜನೆ । ತಟ್ಟನೇ ತಾಕೇಳಿ, ಬಿಟ್ಟು ಪೋದಳು
ಆಗ ಭಜನೆ ಮಾಡುವುದು ಮತ್ತೇನೆಂದರೇ

## ಧ್ವನಿ

ಪಾಂಡುರಂಗಾ ಸಲಹೋ ಎನ್ನದೇವಾ ।
ಇಂದಿರ ವರದನೆ । ಸುಂದರ ರೂಪನೇ ।
ನಂದ ನಂದನ ಗೋವಿಂದನೇ ಪ

ಅಜಮಿಳಗೊಲಿದನೇ । ಗಜರಾಜವರದನೇ ।
ಭಜನೆಯ ಮಾಡುವೆ ದೇವನೇ ೧

ಹಕ್ಕಿ ವಾಹನನೇ । ಸಕ್ಕುಗೆ ವಲಿದನೇ ।
ಲಕ್ಕುಮಿ ನರಸಿಂಹ ವಿಠಲನೇ ೨

## ವಚನ

ಗಂಡ ಅತ್ತಿಯುನೋಡೀ ಕೆಂಡಕೋಪವು ತಾಳೀ
ಕೊಂಡು ಬಂದೂ ಅವಳಾ ಕಂಭಕ್ಕೆ ಬಂಧಿಸಲೂ
ಪುಂಡರೀಕಾಕ್ಷನೂ ಗಂಡ ನಂದದಿ ಬಂದೂ
ಬಂಧನವ ಬಿಡಿಸೀ । ಪಂಡರಿಗೆ ಪೋಗೆನೇ
ಗಂಡನ್ವಚನವ ಕೇಳಿ ಕೊಂಡು ಪೋದಳು ಆಗ
ಪಾಂಡುರಂಗನು ಮಾಡಿದ್ದು ಮತ್ತೇನೆಂದರೇ

## ಧ್ವನಿ

ರಕ್ಕಸಾಂತಕನೂ ಸಕ್ಕುನ ವೇಶದಿ ಫಕ್ಕ
ನಿಂತನೂ ಕಂಭದಲಿ ಅಕ್ಕರದಿಂದಲಿ ಮಾಡಿ
ಕೆಲಸಕ್ಕೆ ನಕ್ಕರೂ ಸುರರೂ । ಗಗನದಲೀ ಪ

ವಿನತೆಯ ಸುತನಾವನಿತಿಯ ಮಾಡೀ ಘನ
ತರದಲಿ ಕಳುಹಿದನಾಗಾ ಮಮತೆಯಿಂದಲಿ
ಮನಿಯ ಕೆಲಸಕ್ಕೆ ಕಳುಹಿದನಾಗಾ ೧

ಕಟ್ಟಿಹಾಕಿದ ಸತಿಯನು ನೋಡುತಾ ।
ಥಟ್ಟನೆ ಬಂದನು ಪತಿ ಆಗಾ ಸಿಟ್ಟಿನಿಂದಲಿ
ಬಿಚ್ಚುತ ರಜ್ಜನು । ಮುಟ್ಟುತ ಕರದೊಯ್ದನು ಬೇಗಾ ೨

ಚಂಚಲಾಕ್ಷೆಯಾ । ಮಂಚದಲಿ ಕುಳ್ಳಿರಿಸಿ
ಕಂಚುಕವ ವಸ್ತ್ರಗಳುಡಿಸುತಲಿ
ಪಂಚ ಬಾಣನ ಪಿತ ಸಂಚಿಕೆಯಿಂದಲೀ
ಮಂಚವಲಂಕರಿಸಿ ನೋಡಿದನೂ ೩

ಭಕ್ಷ್ಯ ಪಾಯಸಗಳೂ ಆಕ್ಷಣ ತಂದೂ
ಮೋಕ್ಷದಾಯಕನಿಗೆ ನೀಡಿದನು
ಪಕ್ಷಿವಾಹನ ಶ್ರೀ ನರಸಿಂಹ ವಿಠಲನಾ
ಈಕ್ಷಸಿ ಸತಿಯನು ನೋಡಿದನೂ ೪

## ವಚನ

ಇತ್ತಲೀ ಸಕ್ಕೂಬಾಯಿ ರುಕ್ಮನಾ ಕೂಡೀ
ಮೆತ್ತಗೆ ಹಾರಿಯನು ಇಕ್ಕುತಲಿ ಪೋಗೇ
ಪಂಢರೀ ಪುರವನ್ನು ಕಂಡು ಹಿಗ್ಗುತಲೀ
ಪಾಂಡುರಂಗನ ಮುಖವನೋಡಿನೋಡುತಲೀ
ಚಂದ್ರ ಭಾಗಿಲಿ ಸ್ನಾನ ಚಂದದಲಿ ಮಾಡೀಕೊಂಡು
ಬಂದಳು ಪಾಂಡುರಂಗನಿದ್ದಡಿಗೇ । ತಂಡ ತಂಡದಿ
ದಾಸರಿಂಡುಗಳ ನೋಡೀ । ಪುಂಡರಿಕಾಕ್ಷನ್ನ
ಕೊಂಡಾಡಿದರು ಮತ್ತೇನೆಂದರೇ.

## ಧ್ವನಿ

ಇದೇ ಪಂಢರೀಪುರ ಬಾರೆಲೆ ಪೋಗೋಣಾ
ಚಿನ್ನದಾ ಗೋಪುರಾ । ರನ್ನದಾ ಕವಾಟಗಳ
ಚೆನ್ನೆಯರೆಲ್ಲಾಡುವರೂ । ಚಿಂತೇಗಳ ನಾ ವೀಗ
ಬಿಟ್ಟೀಗ ನಿಶ್ಚಿಂತರಾಗಿ ನಾವು ಪೋಗೋಣ ।

ತಂದಿ ತಾಯಿಯಲ್ಲಾ ನೀನೇ ಯೆಲೋ ನಿನ್ನಾ ಕಂಡೆ
ನಿಂದೂ ಎನ್ನಭಾವಿಸೋ । ಬಂಧನ ಬಿಡುಗಡೆ ಮಾಡೆಂದೂ
ನಾವು ಛಂದಾಗಿ ಬೇಡೋಣ ಬಾರೇ
ಬಾಲಿಯರಾದೆ ವೋನಾವೆಂದೂ ರಂಗ
ಪಾಲಿಸೆಂದೂ ನಾವು ಬೇಡೋಣ ಭಕ್ತಾಜನರೆ
ಕೂಡೋಣ ನಾವು । ಭಜನೀಯ ಮಾಡೋಣ ಬಾರೆಲೇ

## ಧ್ವನಿ

ಕಂಡೆ ಕಂಡೆ ಪಂಢರೀಶನಾ । ಶ್ರಿ ಪಾಂಡುರಂಗನಾ ।
ಪುಂಡರೀಕವರದಾ ಪಾಂಡುರಂಗನಾ ।
ಭೀಮಾ ತೀರದ ಕಾಮಿತ ನಿಸ್ಸೀಮ ಮಹಿಮ ವರದ ೧

ಸಾಂದ್ರಗುಣ ಸುಮಾರುತಿ ಸುರೇಂದ್ರವಂದಿತ
ಮಂದಾರ ಗಿರಿಧರ ಚಂದ್ರಾಭಾಗನಿವಾಸ । ಗಂಭೀರ ಮಹಿಮನ
ಇಟ್ಟಿ ಕಲ್ಲನು ಕೊಟ್ಟ ಭಕ್ತರ ಶ್ರೇಷ್ಠ ಪದವಿಯೊಳ್
ಇಷ್ಟಾರ್ಥ ಮಹಿಮನ । ಶ್ರೀ ನರಸಿಂಹ ವಿಠಲರಾಯನ ೨

## ವಚನ

ಪುಂಡರೀ ಕಾಕ್ಷನಾ । ಕಂಡು ಸಕ್ಕೂಬಾಯಿ
ಪೊಂದಲೂ ಮೋಕ್ಷವನು । ಕಂಡ ಜನರೂ ನೋಡೀ
ಕೊಂಡು ಬಂದೂ ಅವಳ ಕೆಂಡದಲಿ ಇಡಲೂ
ಅಂಡಜನ ವಾಕ್ಯವನು ಕೇಳಿ ಲಕುಮಿಯು ತಾನು
ಗಂಡನಾ ಹುಡುಕುತಾ । ಬಂದಳಾಕ್ಷಣದೀ
ಕಂಡ ಚಿತಿಯಾ ಮೇಲೆ ಗಂಗಿ ಉದಕವನೆರೆದೂ
ಗಕ್ಕನೇ ಎದ್ದಳೂ । ಸಕ್ಕೂಬಾಯಿ ತಾನೂ ಅಕ್ಕರದಿಂದಲೀ
ಅಬಚಿವಡಗೂಡೀ । ತನ್ನ ಅತ್ತಿ ಮಾವನ ಮನಿಗೆ
ಬಂದಳಾ ಕ್ಷಣದಿ । ಅತ್ತಲಾಗುವ ಚಮತ್ಕಾರ ಮತ್ತೇನೆಂದರೇ

## ವಚನ

ಮಂಚದೀ ಕುಳಿತಿಹಾ ದಂಪತಿಗಳಾ ನೋಡೀ
ಕೆಂಪಗೆ ಮಾಡುತಾ ಕಣ್ಣುಗಳೂ । ಇಂಪಾಯಿತು
ಬಹು ಶೋಭವುನಿನಗೇ । ಈಕೆ ನೇಮ ಕಳದಿಯೋ
ನೀನೀಗಾ ಪ

ಅತ್ತೆ ಬಂದೂ ಬಲುಕೈಲೆ ಬಡಿಯಲೂ
ಯತ್ತ ಪೋಗಲೀ ಎಂದು ನೋಡುತಲೀ
ತತ್ತರ ಬಿತ್ತರ ವಾಗುತ, ಮಂಚದಿ ಸುತ್ತ
ನೋಡುತಾ । ತಾಕುಳುತಿಹನೂ ೧

ನರಸಿಂಹ ವಿಠಲನಾ ದರುಶನ ವಾಗಲೂ
ಹರುಷದಿ ಬಂದನೂ ಸುತನಾಗಾ
ಸ್ಮರಣೆ ಮಾಡುತ ಪೋಗೆಂದನೂ
ಬೆದರಿಸಿ ನಡುಗಿದನು ಸುತನಾಗಾ ೨

## ವಚನ

ಇತ್ತಲೇ ಅತ್ತಿಯಾಗತಕ್ಕನೇ ಪೋಗೇ
ಸಕ್ಕುಬಾಯಿ ಸುದ್ದಿ ಮತ್ತೆ ಜನರು ಪೇಳೇ ।
ಅತ್ತಿ ಮಾವ ಒಪ್ಪದೇ ಇರಲೂ ಸಕ್ಕುಬಾಯಿ ತಂದು
ಮತ್ತೆ ತೋರಿದರಾಗಾ ಚಿತ್ರ ವೇನೆಂದೆನುತ
ಅತ್ತಪೋದರು ಜನರು । ರಕ್ಕಸಾಂತಕನು ಮಾಡಿದ
ಮತ್ತೇನೆಂದರೇ.

## ಧ್ವನಿ

ಮಾಡಿದ ಹರಿಯಾ ನೋಡಚ್ಚರಿಯಾಗಾ
ಗಾಡಿ ಕಾರಾ ಕೃಷ್ಣ ಮಾಡಿದೀ ಪರಿಯಾ ಪ

ಪತಿತ ಪಾವನ ತನ್ನ ಪತಿಯವಂದನೆ ಮಾಡಿ
ಸತಿಯ ವೇಷವ ಬಿಟ್ಟು ಸ್ವತಃ ನಡೆದನು ೧

ಇತ್ತ ಸಕ್ಕುಬಾಯಿ ಫಕ್ಕನೆ ಬಂದಳೂ
ಅಕ್ಕರದಿಂದ ತನ್ನ ಪತಿಗೆ ಎರಗಿದಳೂ ೨

ಕಂಡ ಸತಿಯ ನೋಡಿ ಕೆಂಡ ಕೋಪವತಾಳಿ
ಮುಡಿಯನೆ ಹಿಡಾಕೊಂಡು ಬಡಿದನು ೩

ಭಾರೀ ವಸ್ತ್ರಗಳೆಲ್ಲಾ ಯಾರಿಗೆ ಕೊಟ್ಟೆ
ಬಾಜಾರಿ ಹೆಂಗಸೆನೀನು ೪

ಮೋದದಿ ನರಸಿಂಹ ವಿಠಲರಾಯನಾ
ಪಾದದಾಣೇ ನಿಮ್ಮ ದಾಗಿನಾ । ನಾ ಕಾಣೇ ೫

## ವಚನ

ಇಂತು ನುಡಿ ಪೇಳಲು ಸಂತಾಪ ಪಡುತಲಿ
ಚಿಂತೆ ಮಾಡುತ ತನ್ನ ಜನನಿಗೆ ಪೇಳಲು ಕಾಂತೆ
ಮಾಡಿದ ಕಾರ್ಯ ಇಂತೆ ಪೇಳೆನಲೂ
ಫಕ್ಕನೆ ಎದ್ದಳು ಅತ್ತಿ ತಾಕೋಪದಲಿ ಸಕ್ಕೂ
ಬಾಯಿಯ ಮುಡಿ ಫಕ್ಕನೆ ಹಿಡಿಕೊಂಡು
ಕುಕ್ಕಿಕೂರುತಲಿ, ಎತ್ತಿ ವಗೆಯುತಲೀ
ರುಕ್ಕುಮಾಯಿಯ ಪತಿಯ ಕೊಂಡಾಡಿದಳು
ಮತ್ತೇನೆಂದರೇ.

## ಧ್ವನಿ

ತಡಿಯಲಾರೆನಯ್ಯ ತಾಂಡವ ಕೃಷ್ಣನೇ
ತಡಿಯ ಲಾರೆನಯ್ಯ ಒಡೆಯ ಶ್ರೀ ಕೃಷ್ಣ
ಜೀಯಾ ಕಡುದಯಾ ಸಾಗರಾ ಕಡೆ
ಹಾಯ್ಸು ನಿನ್ನ ಭಾರಾ ಪ

ಅಜಪಿತ ಕಾಗಿನೆಲೆಯಾದಿಕೇಶವಾನೆ
ತ್ರಿಜಗವಲ್ಲಭ ತಾನು ಭಜಕರ ವಶವಾನೆ ೩

## ೨೧೨

ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪ ಪ

ಮುಂದಕೆ ನಿಮ್ಮ ಮನೆಗೆ ಬಾರನಮ್ಮ ಅ

ಮಗುವು ಬಲ್ಲುದೆ ಇಷ್ಟು ಬೆಣ್ಣೆಯ ಕದ್ದರೆ
ಬಿಗಿಯ ಬಹುದೇ ಶ್ರೀ ಚರಣವನು
ಅಗಣಿತ ಮಹಿಮನ ಅಂಜಿಸಲೇಕಮ್ಮ
ಬಗೆಯ ಬಾರದೆ ನಿಮ್ಮ ಮಕ್ಕಳಂತೆ ೧

ಹಸುಮಗುವನು ಕಂಡು ಮುದ್ದಿಸಲೊಲ್ಲದೆ
ಹುಸಿಗ ಕಳ್ಳನೆಂದು ಕಟ್ಟುವಿರಿ
ವಸುಧೆಯೊಳಗೆ ನಾನೊಬ್ಬಳೆ ಪಡೆದೆನೆ ನಿಮ್ಮ
ಹಸು ಮಗುವಿನಂತೆ ಭಾವಿಸಬಾರದೆ ೨

ಎಷ್ಟು ಸಾರಿಯು ನಾ ಬೇಡವೆಂದರೆ ಕೇಳ
ದುಷ್ಟ ಮಕ್ಕಳ ಕೂಡೆ ಒಡನಾಟವ
ಕಟ್ಟಿದ ನೆಲುವಿನ ಬೆಣ್ಣೆಯನೀವೆನು
ಬಿಟ್ಟು ಕಳುಹಿರಮ್ಮ ಆದಿಕೇಶವನ ೩

## ೨೧೩

ಊರಿಗೆ ಬಂದರೆ ದಾಸಯ್ಯ – ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ ಪ

ಕೈಲಿ ಕೋಲು ಕೊಳಲು ದಾಸಯ್ಯ
ಕಲ್ಲಿಗೆ ವರವಿತ್ತೆ ದಾಸಯ್ಯ
ಮಲ್ಲನ ಮರ್ದಿಸಿ ಮಾವನ ಮಡುಹಿದ
ನೀಲಮೇಘಶ್ಯಾಮ ದಾಸಯ್ಯ ೧

ಕೊರಳೊಳು ವನಮಾಲೆ ದಾಸಯ್ಯ – ಬಲು
ಗಿರಿಯನು ನೆಗಹಿದೆ ದಾಸಯ್ಯ
ಇರುಳು ಹಗಲು ನಿನ್ನ ಕಾಣದೆ ಇರಲಾರೆ
ಮರುಳು ಮಾಡುವಂಥ ದಾಸಯ್ಯ ೨

ಆದಿನಾರಾಯಣ ದಾಸಯ್ಯ
ಮೋದದೊಂದು ಸಾಸಿರ ನಾಮದ ದಾಸಯ್ಯ
ಮೇದಿನಿಯೊಳು ಪುಟ್ಟಿ ಗೋವ್ಗಳ ಕಾಯ್ದ
ಆದಿಕೇಶವರಾಯ ದಾಸಯ್ಯ ೩

## ೨೧೪

ಎಂಥ ಟವಳಿಗಾರನಮ್ಮ ಪ

ನಂದ ಗೋಪ್ಯಮ್ಮ ಕೇಳೆ – ನಿನ್ನ ಮಗ
ಎಂಥ ಟವಳಿಗಾರನಮ್ಮ ಅ

ಹಣವ ಕೊಟ್ಟೇನೆಂದು
ಗುಣದಿಂದ ಎನ್ನ ತಂದ
ಹಣವ ಕೇಳಿದರಲ್ಲಿ – ಹಣವೆ ?
ತಡೆಯಲಾರದ ತಲ್ಲಣವೆ ?
ಕುದುರೆ ಮೇಲಿನ ಪಲ್ಲಣವೆ ?
ಇಲ್ಲ, ಬಾಯಿಗಿಟ್ಟ ಬೊಕ್ಕಣವೆ ? – ಹೋಗೆನುತಾನೆ ೧

## ವಚನ

ಅತ್ತಿ ಮಾವನು ಸಹಿತಾ ಸಕ್ಕೂಬಾಯಿಯುತಾ
ಚಕ್ರಧರನಾ ರೂಪಗಕ್ಕನೆ ಕಂಡರೂ
ಅಪ್ರಮೇಯನ ರೂಪ ನೋಡಿ ಹಿಗ್ಗುತಲೀ
ಸಕ್ಕುಬಾಯಿಯನಾಗಾ ಅಕ್ಕರದಿ ಬಿಗಿದಪ್ಪಿ
ಎತ್ತಿ ಮುದ್ದಾಡಿ ಅತ್ಯಂತ ಹರುಷದಿಂದಿದ್ದರೂ

೫೫

## ಗೊಲ್ಲತಿ ಹಾಡು

ಗೋಕುಲದಿ ಗೋವಿಂದ ತಾನು । ಅನೇಕ ಸತಿಯರ
ಒಡನೆ ವಿಹಾರ ಮಾಡುತಿರಲೂ । ಅವರೊಳಗೊಬ್ಬಳು ಚದುರಿ
ನಾರಿ ತನ್ನ ಸದನದೊಳಗಿರುತಿಹಳು । ಕಂಬು ಕಂದರೆ ಸ್ವರ್ಣ
ಗೊಂಬಿಯಂತ್ತೊಳೆಯುತಲಿ । ಅಂಬುಜಾಸನ
ಮುಖವ ಜಂಭದಿ
ನೋಡಳು, ಮಂದಿರವ ಬಿಟ್ಟು ಹೊರಗೊಂದುದಿನ ಬಾರಳು
ಯಿರಿತಿರಲೊಂದುದಿನ । ಗೋವಿಂದನ
ಪ್ರೇರಣೆಯಿಂದ ಅತ್ತೆಗಿಂತೆಂದಳು

ಪೋಗಿ ಬರುವೆನಪ್ಪಣೆ ನೀಡಮ್ಮಾ । ನೀದಯ ಮಾಡಮ್ಮಾ ಪ

ಬ್ಯಾಗದಿಂದ ಸಾಲೆ ಬೆಣ್ಣೆಯ ಮಾರಿ । ಬೇಗದಿ
ಮನೆಗೆ ನಾ ಸಾಗಿಬರುವೆನೇ ಅ.ಪ

ಎಂದು ಮಥುರೆಯಾ ನೋಡಲಿಲ್ಲೆಂದೂ ।
ಪೋಗುವೆ ನಾನಿಂದೂ
ಇಂದು ಲಾಲಿಸು ಮಾತೆನ್ನದೊಂದು । ಪೋಗುವೆನಾನಿಂದೂ
ಛಂದದಿಂದ ಆನಂದದಿಗೆಳೆತೇರ । ಸಂಗಡ ಮನಿಗೆನಾ
ಬಂದು ಸೇರುವೆನೆ ೧

ಹಾಲು ಮಾರುವ । ಸಾಲವಕೊಡದ, ರೊಕ್ಕವನಾಬಿಡದೆ
ನೀಲವರ್ಣನ ಮುಖವನ್ನು ನಾ ನೋಡದೆ ।
ಬರುವೆನು ನಾತಡದೆ
ಜಾಲವು ಮಾಡದೆ ಬಾಲೆಯರೊಡನೆ ಕೂಡಿ । ಆಲಯಕೆ ನಾ
ಶೀಲದಿ ಬರುವೆ ೨

ಸರಸದಿ ಬಂದೆ ಯಮುನ ತೀರವ ನೋಡಿ ।
ಬರುವೆನು ನಾ ಕೂಡಿ
ತ್ವರಿತದಿಂದಪ್ಪಣೆಯನು ನೀಡಿ । ಕಳುಸಮ್ಮದಯಮಾಡಿ
ನರಸಿಂಹ ವಿಠಲಗೆ । ಅರಿಕೆ ಆಗದಂತೆ ।
ಹರುಷದಿಬಂದುನಾ ಮನಿಗೆ ಸೇರುವೆನೆ ೩

## ವಚನ

ಲಲಿತಾಂಗಿಯರೊಡನೆ ಕಲಿತು ಮಥುರಿಗೆ ಪೋಗಿ । ತ್ವರಿತದಿ
ಬರುವೆ ನಪ್ಪಣೆಯ ನೀಡೆನಲು । ಆದಿಯಲಿ
ಮಾರಿದಕ್ಕದಿಕವಾಗಿರೊಕ್ಕ
ಭೇದವಿಲ್ಲದೆ ತಾರೆ ಬ್ಯಾಗ ಪಾಲಿಸಿಯೆನಲೂ ।
ಮೋದದಿಂದತ್ತಿ ಮತ್ತಿಂತೆಂದಳೂ

ಸಲ್ಲದು ನಿನಗಿದು ನಡುತಿ । ಪೋದರೆ ನೀನು ಕೆಡುತಿ ಪ

ಚೆಲ್ವಗಂಗಳೆ ನಿನ್ನ । ಗಲ್ಲವ ಪಿಡಿದಾವ ।
ಗುಲ್ಲು ಮಾಡದೆ ಮುಂದಕ್ಕೆಲ್ಲೆ ಬಿಡುವವನಲ್ಲಾ ೧

ದಿವ್ಯ ಸಂಗಳೆ ನಿನ್ನಾ । ಥಟ್ಟನೆ ಕಂಡರೆ
ಘಟ್ಯಾಗಿ ಪಿಡಿದು । ನೆಟ್ಟಾಗೆ ಪೋಗುವಾ ೨

ಹಿಂದೆ ಬಂದು ನಿನ್ನಾ ಔಂದಾಗಿ ಹಿಡಿದೂ
ಸುಂದರಾಂಗಿಯೆನಿನ್ನಾ । ಪೊಂದಾದ ಬಿಡನೆ ೩

ತಪ್ಪು ಮಾತುಗಳಲ್ಲಾ । ಸತ್ಯವು ಎನ್ನ ಸೊಲ್ಲಾ
ಅಪ್ಪಿಕೊಂಡು ರತಿ । ಗೊಪ್ಪಿಸಿ ಕೊಂಬೋನು ೪

ನಗೆಮುಖದವಳೆ ನಿನ್ನ । ನರಸಿಂಹವಿಠಲನು
ಬಿಗಿದಪ್ಪಿ ಕೊಂಡುತಾ । ಬಿಗಿಬಿಗಿ ಮಾಡುವ ೫

## ವಚನ

ಬ್ಯಾಡ ಬ್ಯಾಡಲೆ ನಿನ್ನಾ । ಬೇಡಿಕೊಂಬುವೆ ಮುನ್ನಾ
ನೋಡಿದರೆ ಬಿಡನು ಮುನ್ನಾ । ಮೋಹನ್ನಾ । ಯಿನ್ನಿದರ
ಮ್ಯಾಲೆನ್ನ । ಕೇಳದೆ ಪೋಗೆಂತನಲೂ । ಮನ್ನಿಸತ್ತೆಯ,
ಬೇಡಿಕೊಂಡಳಾ ವಿನಯದಲಿ

ಪಾಲಿಸಿರಾಪ್ಪಣೆ ಶೀಲದಿ ಮನ್ನಣೇ ಬ್ಯಾಗದಿ ನಿಮ್ಮಾಣೇ
ಬರುವೆನಾ ಜಾಣೆ ಪ

ಕೃಷ್ಣನುಯನ್ನಾನು, ಮುಟ್ಟಾಲು ಬಂದರೆ
ದುಷ್ಟತನಗಳ । ಕಟ್ಟಿಡುವೆನು ಏಳು ೧

ಪೋಗಾದಿರೇ ಯಾರೇ । ಮುಟ್ಟಾಲು ಬಂದರೆ
ದ್ರುಷ್ಟತನಾಗಳೂ । ಸಾಗಿ ಪೋಗಾದೀರೇ ೨

ಸುಂದರಿನೀತಿಳಿ । ಹಿಂದೆ ಚಂದ್ರಾವಳಿ
ಬಂದಾದ್ದು ನೀ ಕೇಳಿ । ಮುಂಧೋಗದಿರೆ ತಿಳಿ ೩

ಬಲಿಮಿಯೊಳೆನ್ನನು । ಜುಲುಮಿಗೆ ಬಾರನು
ಕಲಹವ ಮಾಳ್ಪೆನು । ವಲಿಯಾದ ಬಾಹ್ಯನು ೪

ಪೃಥುವಿಯೊಳಾಗವ । ಮನ್ಮಥಗೆ ಮೀರಿದನವಾ
ಸತಿಯೆ ನಿನ್ನಾಧವಾ । ಹಿತದಿ ಆಗೋನವಾ ೫

ಜಾಲಕ್ಕೆಯಿರವ್ಪೂ । ದೂರದಲ್ಲಿರು ವ್ಪೋ
ಸಾರ್‍ಯಾಕೆ ಬಾರವು ನೋಡುವೆ ಚರ್ಯವ್ಪೂ ೬

ಗೊಲ್ಲಾನು ಬಂದೆನ್ನಾ । ಗಲ್ಲಾವ ಪಿಡಿಯಲ್ಲಾ
ಯಲ್ಲಾರಂತಲ್ಲೆನಾ । ಬಲ್ಲೀದಾವಳು ನಾ ೭

ನರಸಿಂಹ ವಿಠಲಾ । ಮಾಡುವ್ಪೋನೇ ಕಲ್ಲಾ
ನಿನಗ್ಯಾತಕ್ಕಾ ಛಲಾ । ಬಿಡಲಾರನೇ ನೊಲ್ಲಾ ೮

ಬಾಯಿವಳಗೆ ವ್ಪುರಿ । ತೋರುವನೇ ಹರೀ
ಯೇನೇಳಲೀ ಪರಿ । ಮಾಡುವಿಯಾ ಚರಿ ೯

## ವಚನ

ಇಂತು ಪರಿಪೇಳಲತ್ತಿಯ ಮಾತು ಕೇಳದಲೆ । ಸಂತಸದಿ ನಿಂತು
ನುಡಿದಳು । ಅತ್ತಮ್ಮ ವಡನೆ ಗಡನೆ ನೋಡಿ ಬರುವೆನು ಅತ್ತೆ
ಕೇಡು ಮಾಡಲಿ ಬ್ಯಾಡ । ರೂಢಿಯೊಳಗಿ
ನೋಳಿಂಥಾ । ಮೂಢಳೆಂತೆಂದೆನುತ
ಗಾಢನೆ ಪೋಗಿ ಬಾರನೆಂದು ಪೋದಳಾಗ ಬ್ಯಾಗಾ

ಶೃಂಗಾರವಾದಳು ನಾರಿ । ಗೊಲ್ಲಾತಿ ಸುಂದಾರಿ ಪ

ಶೃಂಗಾರವಾದಳು ಮಂಗಳ ಮುಖಿಯು
ಅಂಗನೆತಾನೆ ಜಡೆಗಳ ಬಿಗಿಯೆ । ಹೊಂದಿದಜಡೆ
ಭಂಗಾರಗಳ್ಹೆಣೆಯೆ
ಮುಂಗುರುಳಲಿ ಚಂದ್ರ ಸೂರ್ಯರು ಹೊಳಿಯೆ
ಅಂಗನೆರಂಗನ ಮುಂಗೈ ಗಿಣಿಯೆ ೧

ವಾಲಿಬುಗುಡಿ ವಾರಿಜಾಕ್ಷಿಯು ಇಟ್ಟು
ತೋರಮುತ್ತಿನ ಮೂಗುತಿಯಿಟ್ಟು । ಚಾರುಕಂಚುಕ
ಬಿಗಿ ಬಿಗಿ ತೊಟ್ಟು

ಹಾರ ಪದಕವು ಕೊರಳೊಳಗಿಟ್ಟು । ಬಾರಿ ಬಾರಿಗೆ
ಪೋಗಳುವುದೆಷ್ಟು ೨

ವಜ್ರದ ಹಸ್ತ ಕಡಗವನಿಟ್ಟು । ಭರ್ಜರಿ ಪೀತಾಂಬರವುಟ್ಟು
ಗೆಜ್ಜೆ ಅಂದಿಗೆ ಪಾದದೊಳಿಟ್ಟು । ಹೆಜ್ಜೆ ಹೆಜ್ಜೆಗೆ ಆ ಶಬ್ದಗಳೆದೊ
ಸಜ್ಜನ ಪ್ರಿಯನಮ್ಮ ನರಸಿಂಹ ವಿಠಲನ ಕೂಡುವೆ ತ್ವರಿತದಿ
ನಡೆಂಬುವಗುಟ್ಟು ३

## ವಚನ

ಹಲವು ಪರಿ ಶೃಂಗರಿಸಿ । ನಿಲುವಕನ್ನಡಿ ನೋಡಿ
ನಳಿನಾಕ್ಷಿ ಕಸ್ತೂರಿ ತಿಲುಕವನುತಾ ತಾ ತೀಡಿ
ಕಮಲಾಕ್ಷಿ ಕಣ್ಣಿಗೆ ಕಪ್ಪುರೇಖೆಯ ಮಾಡಿ
ದರ್ಪಣಕೆ ಸಮವಾದ ಮುಖವನ್ನು ತಾ ನೋಡಿ
ಕರ್ಪೂರ ವೀಳ್ಯವನು ಕೈಯಲ್ಲಿ ತಾ ನೀಡಿ
ವಲಿಯುತಲಿ ಗೋಪಾಲು ಬೆಣ್ಣೆಯನುತಾ ತೆಗೆದು
ವಲಿದು ಪುಟ್ಟಿಯೊಳಿಟ್ಟು । ನಲಿದು ಶಿರದಲ್ಲಿಟ್ಟು
ನಳಿನಾಕ್ಷಿ ನಡೆ ತಂದಳಾ ವಿಧದಿ

ಜಗಜಗಿಸುತ ಬಂದಳು ನಾರಿ । ಬಗಿ ಬಗಿ
ಶೃಂಗಾರದ ವಯ್ಯಾರಿ ಪ

ಅಕ್ರಮಂಡಲ ಧಿಕ್ಕರಿಸುವಳು । ಫಕ್ಕನೆ ಬರೆದೆಕ್ಕಳು ಬೆರಿವಂಥ ೧

ಕಿಲಿ ಕಿಲಿನಗುತ್ತಾ । ಕುಲುಕು ಮಾಡುತ್ತಾ ।
ಲಲಿತಾಂಗಿಯರೊಳು
ಕಲೆತು ಮಾಡುತ್ತಾ । ಸ್ವರ್ಣದ ಬಳ್ಳಿಯೋ । ಸುವರ್ಣದ
ಪುತ್ಥಳಿಯೋ । ವರ ಮನ್ಮಥನ ಮೋಹದಗಿಳಿಯೊ ೨

ಸ್ಮರನ ಚಾಪದಂತೆ ಹುಬ್ಬೆಗರಿಸುತಾ । ಸರಗಳೇತರ ಮ್ಯಾಲೆ
ಕರವನು ಚಾಚುತಾ ३

ರತಿಗೆ ಮೀರೆ ಸರಸ್ವತಿ ಸರಿಬಾರದೆ । ನರಸಿಂಹವಿಠಲನ
ಸರಸಕ್ಕೆ ನೀರೆ ೪

## ವಚನ

ಚಂಚಲಾಕ್ಷಿಯ ಮುಖವು ಮಿಂಚಿನಂತ್ಹೊಳೆಯುತಲಿ
ಪಂಚ ಬಾಣನ ಸಲಗೆ ಮಿಂಚ್ಹಾರಿ ತೋರುತಲಿ ಮ್ಯಾಲೆ
ತಾರಕಿಗಳೊಳು, ಬಾಲಚಂದ್ರಮನಂತೆ । ಬಾಲೇರ
ಒಳಗೆಲ್ಲಾ ಮೇಲಾದ ಸಖಿತಾನು । ಲೀಲೆಯಿಂದಲಿ ಹೆಜ್ಜೆ
ಬಾಲೆ ತಾ ನಿಡವಾಗ । ಮ್ಯಾಲೆ ಮಲ್ಲಿಗೆ ಮೊಗ್ಗು ಸಾಲಾಗಿ
ಉದುರುತಲಿ । ನೀಲ ಕುಂತಳೆ ತಾನು ನಿರಿಗೆಗಲು
ಚಿಮ್ಮುತಲಿ, ಕಾಲುಂಗರದ ಹೆಜ್ಜೆ ಮೇಲಾಗಿ ಇಡುತಲಿ
ಲೀಲೆಯಿಂದಲಿ ಯಮುನಾ ತೀರದಲಿ ಕುಳಿತಿರಲು
ಮತ್ತೇನೆಂದರೆ.

ಬಂದ ಬಂದ ಗೋವಿಂದನು ನಲಿಯುತ ।
ಗಂಡನ ರೂಪದಲಿ
ಇಂದು ವದನಿಯನು ಹೊದಿತಾ ಕುಳಿತ ತಾನಂದದಿ ತಾನಲ್ಲಿ ಪ

ಪುಲ್ಲಲೋಚನ ಗೊಲ್ಲನ ವೇಷಕ್ಕೆ ಚೆಲ್ಲಾಣವನೆ ತೊಟ್ಟು
ಮೆಲ್ಲ ಮೆಲ್ಲನೆ ಬರುತಲಿ ತಾಂಬೂಲ । ಗಲ್ಲದಿತಾನಿಟ್ಟು ೧

ಕಡಲ ಶಯನ ಕಾಲ್ತೊಡುಗೆ ತೊಟ್ಟು \ ಕಡಹಾಲಿಗೆನಿಟ್ಟು
ಮಡದಿಯಳನೆ ಕೂಡುವೊ ತ್ವರದಲಿ ಬಿಗದನು ನಡುಕಟ್ಟು ೨

ಪುರುಷನಂದದಿ ಬುಟ್ಟಿಯ ಪೊತ್ತು । ಸರಸಿಜಾಕ್ಷಿಯನು
ಅರಸಿ ಎಲ್ಲಿಗೆ ಪೋಗಲೆನುತಲಿ । ಅರಚುತ ತಾನಲ್ಲಿ ೩

ಮೋಸಮಾಡುವೆನು ಈ ಸತಿಗೆನುತಲಿ. ಮೀಸೆಯತಿರುವುತಲಿ
ಭಾಸುರರಂಗತಾ, ಲೇಪಿಸಿ ಗಂಧವು ಮುಸಿ ಮುಸಿ ನಗುತ್ತಲಿ ೪

ಇಂದು ವದನಿಯನು । ಪೊಂದಿಕುಳಿತನು
ಆನಂದದಿ ತಾನಲ್ಲಿ
ಎಂದು ಬಾರದಕ್ಕಿಂದ್ಯಾಕೆ ಬಂದೆ । ವೀಳ್ಯವತಾ ಇಲ್ಲಿ ೫

ಸರ್ವವೇಣಿಯನು ಅಪ್ಪಿದ ಖೂಬಲಿ । ಕುಪ್ಪಿಯ ತಾ ತೆಗೆದು
ಮುಪ್ಪುರಾಂತಕನಪ್ಪನು ಅಪ್ಪನು ಒಪ್ಪಿದ ತಾ ನಲಿದು ೬

ಸರಸಿಜಾಕ್ಷತಾ ಮೈಸವರ್‍ಯಾಡಿದನು ಹರುಷದಿತಾನಾಗ
ಪುರುಷನಂತೆ । ತಲೆ ಬಾಗಿಸಿನಿಂತಳು ನರಸಿಂಹ ವಿಠಲಗೆ ೭

## ವಚನ

ಆಗೆ ಪರಮಾತ್ಮ ಆಕೆಯ ಕೂಡಿ ನಲಿಯುತಿರೆ ಆಗ
ಸಖಿಯರು ನೋಡಿ ಬ್ಯಾಗಲೇ ತೆರಳಿದರು । ಗಂಡ ಬಂದನು
ಎಂದು ಕೊಂಡು ಸಖಿಯರೆಲ್ಲ, ಹಿಂಡು ಹಿಂಡಾಗಿ ಮಧುರಿಗೆ
ಪೋದರಾಕ್ಷಣದಿ । ಪುಂಡರೀಕಾಕ್ಷತಾ ಕಂಡು । ತಾ ಸತಿಯಳ
ಮಂಡೆಯನು ಎತ್ತಿ ಮೋಹಿಸುತ ಮುದ್ದಿಸುತ । ಯಾಕೆ ಬಂದೆಲೆ
ಹೆಣ್ಣೆ । ಗೋಪಸ್ತ್ರೀ ಯರೊಡನೆ । ಗೋಕುಲಾ ಪತಿ ತಾನು
ಕಾಕು ಮಾಡ್ಯಾನೆಂದು ಅನೇಕ ವಿಧದಿಂದ ಮೋಹಿಸುತಲಿದ್ದನು

ಬಾರೆ ಬಾರೆ ಮೋಹನಾಂಗಿ । ಸಾರಸುಂದರಾಂಗಿ
ತೋರೆ ತೋರೆ ಸುಖವು ಮೋಹವು ಲಲಿತಾಂಗಿ ಪ

ಎಲ್ಲಿ ಎಲ್ಲಿ ನೋಡಲು । ಮಲ್ಲಿಗೇಯ ಲತೆಯೇ
ಇಲ್ಲಿ ಬಾ ಎನ್ನಲ್ಲಿಗೇ ಮಲ್ಲಿಗೆ ಮುಡಿಸುವೆನೇ ೧

ಕದಳಿ ಕಪಿತ್ಥ ಚಕ್ಕೋತವು ಜೊತೆ । ಮುದದಿ
ಕೇಳಿ ಮಾತ ಮದನಕ್ಕೆ ವಿಹಿತ ೨

ಮಂದ ಮಾರುತ ತಾನು ಬಂದು ಸುಳಿವೋನು
ಬಂದು ಮನದಿ ಬಂಧಿಸಿ । ಭಾದಿಸುವೋನು ೩

ಸುರತ ಸುಖದೊಳೆನ್ನ । ಭರತಿ ಮಾಡೆನ್ನ
ಸರಸ ಸಲ್ಲಾಪವು । ತ್ವರಿತ ತೋರಿನ್ನ ೪

ಭ್ರಮರಗೀತಕೆ ಮನ । ಭ್ರಾಂತಿ ಗೈಯುವುದೇ
ನರಸಿಂಹ ವಿಠಲನ । ಕರುಣೆ ನಿಂಗಿಹುದೇ ೫

ಬಾರೆಲೆ ಬಾರೆಲೆ ಭಾಮಿನಿ ವನದೊಳು । ಲೀಲೆಯ
ತೋರೆಲೆ ಬಾರೆಲೆ ಭಾಮಿನಿ ಪ

ಇಲ್ಲಿಗೆ ಬಾರೆಲೆ ಮಲ್ಲಿಗಿ ಮುಡಿಸುವೆ
ಸಲ್ಲಾಪಕೆಯಿಂದೀಗ ನಿಲ್ಲೆಲೆ ನೀ ೧

ಸಾರಸನೇತ್ರಿಯೆ । ಹಾರವ ಮುಡಿಸುವೆ
ಮಾರನ ಕಲಹವ ತೋರೆಲೆ ನೀ ೨

ನಿನ್ನನು ನೋಡಲು । ಉನ್ನತವಾಗದೆ
ಮುನ್ನನೆ ಎನ್ನನು । ಮಾಜದೆನೀನು ೩

ನಿಂತೀಗ ನೋಡೆ ವಸಂತವು ತೋರುವುದು
ಸಂಪಿಗಿ ಮಾವಿನ ತಂಪಿನೊಳು ೪

ನರಸಿಂಹ ವಿಠಲನ ಸ್ಮರಿಸುವೇನು ಸಖಿಯೆ
ಭರತವು ಮಾಡೆಲ್ಲ ಭಾಮಿನಿ ೫

## ವಚನ

ನೋಡು ನೋಡೆಲೆ ಸಖಿ ಈಡಾದವನದಲ್ಲಿ
ಮಾಡು ಕ್ರೀಡೆಗಳನ್ನು ನೋಡು ಮನಸಾರ
ಬೇಡು ಮನಬೇಕಾದ ಪುಷ್ಪವನ್ನು ಮುಡಿಸುವೆನು
ಜೋಡಿ ಲೋಲ್ಯಾಡುತಲಿ ಆಡುತಲಿ ಕ್ರೀಡೆಯನು
ಚಂಚಲಾಕ್ಷಿಯ ಕೂಡಿ ಪಂಚಬಾಣನ ಪಿತನು

ಮಿಂಚು ಮೇಘಗಳಂತೆ ಮುಂಚೆ ತಾಂಬೂಲವನು
ವಂಚನೆಯಿಂ ಧರಿಯು ಮತ್ತಿಂತೆಂದನು

ಬಹುರಮ್ಯವಾಗಿದೆ । ಬಾಸಖಿಯಿಲ್ಲೇ ಬಾರೆ ಭಾಮಕಿ
ಬಹು ಜಾತಿ ಮೃಗವು ಮಾತನಾಡ್ವುದು ಪ್ರೀತಿಯಲ್ ಸಖಿ ಪ

ತಳಿರುಹಾಸಿಕಿ ತಪಿಸಲಿ । ನಳಿನ ಲೋಚನೆ ಘಳಿರನೆ ಬಾ
ಕಳವಳಿಸುವೆ । ಕಮಲಜಾತಿ ನೀ ೧

ಕಾಂತೆ ಕೇಳೆ ವಸಂತ ಕಾಲದಿ
ಕಂತು ಜನಕನಾ । ಯಿಂತು ಪರಿ ಏಕಾಂತದಿ ೨

ಚದುರೆ ನಿನ್ನಯ ಅಧರ ಅಮೃತವು
ಸುದತಿ ಸುರಿಸಿನ್ನಾ । ಮುದದಿ ನರಸಿಂಹ
ವಿಠಲರಾಯಗೆ ಇನ್ನಾ ೩

## ವಚನ

ಪತಿತ ಪಾವನ ಈ ರೀತಿ ನುಡಿಯಲು ಆಗ
ಮತಿ ವಂತಿ ನುಡಿದಳೂ । ಪತಿಯೆಂದು ತಿಳಿದೂ
ಸತತ ಮೂರುತಿ ಒಡನೆ ಅತಿವಿನೋದಗಳಿಂದಾ
ನುತಿಸಿ ಬೇಡಿದಳು ಸತಿಯು ವಿನಯದೊಳೂ

ಬ್ಯಾಡೋ ಬ್ಯಾಡೋ ಬೇಡಿಕೊಂಬುವೆನೋ ಬೇಡಲೋ ನಿನ್ನಾ
ಬೇಡಿಕೊಂಬುವೆ ಘನ್ನಾ । ರೂಢಿಯೊಳ್ ಜನರಲ್ಲಿ
ನೋಡಿನಗುವರೋ ಪ

ರವಿದಿನ ಕಾಲದಿ ರತಿಯುಸಲ್ಲದು ಎಂದು
ದಿವಿಜರು ಕಂಡರೆದೂರ ಮಾಡುವರೋ ೧

ಸುರರು ದೇವತೆಗಳು ಅವರಾ ಎದುರು
ತರವೆ ನಿನಗೆ ಹೀಂಗೆ ಮನವ್ಯಾಪಾರಗಳು ೨

ಕಾಂತ ಕೇಳೆಲೊ ನಿನ್ನಾ । ನಿಂತು ಬೇಡುವೆ ಘನ್ನಾ
ಕಾಂತ ಶ್ರೀ ನರಸಿಂಹ ವಿಠಲನೆ ಎನ್ನಾ ೩

## ವಚನ

ಸತಿಯೆ ಕೇಳೆಲೆ ನಿನಗೆ । ಹಿತವಲ್ಲವೀಮಾತು
ಸತಿಯೆದುರು ನಿಂತು ಅನೃತ ಪಾಡುವದೆಲ್ಲಾ
ಅತಿ ತ್ವರದಿಂದನೀ । ರತಿಗೆ ಕೂಡೆಂತೆನಲು ವಲ್ಲಭನೇ
ಕೇಳಿನ್ನು ಸಲ್ಲಾಪಕೆದುರಾಗಿ ನಿಲ್ಲುವೆನು ಬ್ಯಾರೆ
ಮಾತಿಲ್ಲ ಎನ್ನಲ್ಲಿ । ಉಲ್ಲಾಸದಿಂದೊಲ್ಲಭನ
ಗಲ್ಲವನೆ ಪಿಡಿದೆಲ್ಲ । ಪೇಳಿದಳ್ ಸಲ್ಲಲಿತಾಂಗಿ

ಹಾವ ಭಾವ ವಿಲಾಸವ ಮಾಡಿ ರತಿಯನು ತಾ ಕೊಟ್ಟು
ಆವ ಜನ್ಮದಿ ಮಾಡಿದ ಸುಕೃತವು ಬಂದಿತು ನಿನಗಿಷ್ಟು
ಕಡು ಬ್ಯಾಗದಲೆ ತ್ವಡಿ ಮ್ಯಾಲಿಟ್ಟು । ಸಡಗರ ತಾ ಬಿಟ್ಟು
ಮುಡಿನ್ಯಾವರಿಸಿ ಮುದ್ದಿಸಿ ಮೋಹಿಸಿ । ಕಡು ಸುಖತಾ ಪಟ್ಟೂ ೧

ಮಂದಹಾಸವು ಮಾಡುತ ನಲಿಯುತ,
ಆನಂದವು ತೋರುತಲಿ
ಇಂದು ವದನೆಯ ಕೂಡುತಲಾ ಬಹು ಛಂದವು ತೋರುತಲಿ ೨

ಗಂಧ ಪುಷ್ಪ ತಾಂಬೂಲಗಳಿಂದೇ ನಲಿಯುತಲಿ
ಮಂದ ಮಾರುತನಿಂದ ಸುಳಿಯುತ ಆನಂದವು ತೋರುತಲಿ ೩

ಇನಯಾನೆಂದು ಮನವಾನಿತ್ತಳು । ವನಜಮುಖಿಬ್ಯಾಗೆ
ಘನ್ನ ಮಹಿಮೆಯನು ತೋರಿದನಾಗ । ವನಜನಾಭತಾನೂ ೪

ಶಂಖ ಚಕ್ರಗದಾ ಪದ್ಮಗಳೂ । ಅಂಕಿತ ರೂಪಗಳೂ
ಪಂಕಜಾಕ್ಷಿಯೆದುರಿಗೆ ನಿಂತ ನಕಳಂಕ ಚರಿತ ತಾನೂ ೫

ಕಡಗ ಕಂಕಣಾ ವಡವಿ ತಾನಿಟ್ಟೂ । ವುಡುಧಾರದ ಕಟ್ಟೊ
ಬೆಡಗಿನ ಹಾರವು ಸಡಗರದಿಂದಲಿ ಕಡುಬ್ಯಾಗದಲಿಟ್ಟೊ ೬

ಸ್ತೋತ್ರ ಮೂರುತಿ ನರಸಿಂಹ ವಿಠಲಾ । ಮಾತ್ರವು ತೋರುತಲಿ
ಪಾತ್ರ ಸತಿಗ್ವಿಚಿತ್ರದಿಂದಲಿ । ನೇತ್ರಕೆಸೆಯುತಲಿ ೭

## ವಚನ

ಅಂಬುಜೋದ್ಭವನು ಪೀತಾಂಬರನೆವುಟ್ಟು
ಗಂಧ ಕಸ್ತೂರಿ ಪುನುಗುಗಳು ಮೈಗಳವಟ್ಟೊ
ಕುಂದಣವು ಕೆತ್ತಿದ ಕಿರೀಟ ಕುಂಡಲಗಳಿಟ್ಟು
ಹೊಂದದಿಂದಲಿ ಕಡಕ ಕಂಕಣಗಳಿಂದಳ ವಟ್ಟು
ಅಂದಿಗಿ ಕಿರುಗೆಜ್ಜಿ ಧಿಂಧಿಮಾಕೆನುತ । ಆ
ಇಂದು ವದನಿಯ ನಯನ ಮುಂದೆ ನಿಂತಿರಲಾಗೆ
ಮಂದ ರೋದ್ಧರನ ಆನಂದ ರೂಪವ ನೋಡಿ ಮತ್ತಿಂತೆಂದಳೂ

ಧನ್ಯಳಾದೆ ನಿನ್ನ ರೂಪವಾ । ಯಿನ್ನೀ ಕಣ್ಣಿಂದಲಿ ಕಂಡೂ
ಯೇಸುಜನ್ಮ ತಪವು ಮಾಡಿದೆ ಪ

ಶ್ರೀಶನಿನ್ನಯ ಮೋಹನ್ನ ಪಾದ ನೋಡಿದೆ ।
ಭಾಸುರಾಂಗ ನಿನ್ನ ದರುಶನ । ಶ್ರೀಶ ಕೇಳನ್ನ
ದೋಷಗಳೆಣಿಸದೆ ಈಸುದಯದಲೆನ್ನ ಸಲಹಿದೇ ೧

ಅಪರಾಧಿಯಲ್ಲಿನೀ ಕೃಪೆಯ ಪಾಲಿಸಿದೀ
ಶ್ರೀ ಪತೀಯೆ ನಿನ್ನಾ ಪಾದ ಅವಲೋಕನ ಮಾಡದಿರೆ ನಾ
ಗೋಕುಲಪತಿ ನಿನ್ನ ದೂಷಿಸಲೀಪರಿ ದೋಷಗಳೆಣಿಸದೆ
ದಾಸಳಸಲಹಿದಿ ೨

ಮಂಗಳಾಂಗಾ ಎನ್ನ ಗರ್ವವಾ । ಭಂಗಮಾಡಿದೀ
ಶೃಂಗಾರದಾ ಪಾದಾ ತೋರಿದೀ ಗಂಗಾಜನಕ
ರಂಗ ಮೋಹನಾ
ಖಗ ವಾಹನಾ । ನರಸಿಂಗ ವಿಠಲ ಹಿಂಗದೇ ನಿನ್ನಯ
ಅಂಗಸಂಗದಿಂದೆ ೩

## ವಚನ

ಹೇಮವಲ್ಲಭನ ಮಹಾಮಹಿಮೆಗಳ ನೋಡೀ
ಭಾಮೆ ಮನದೊಳಗೀತ ಸ್ವಾಮೀ ಯೆನುತಲಿ ತಿಳಿದು
ಮಾಮನೋಹರತಾನು ಮೊದಲಿ ನಂದದಿ ನಿಲಲು
ಶ್ರೀ ಮನೋಹರನ ಮಹಿಮೆಗಳ ಕೊಂಡಾಡುತಲಿದ್ದಳು
ಅರಿಯಾದ ಅಬಲಿಯನು । ಯೀಕ್ಷಣದಲ್ಲಿ ಪೊರಿಯೊ
ನೀ ಮಾಧವನೆ ಪ

ಅರಿಯದೆಲೆ ನಿನ್ನ ಚೆರಿಯ ದೀಪರಿಯ ದೂರಿದ ಆವು
ಮರಿಯದೆಲೆ ಮಾಧವನೆಯೆನ್ನೊಳು । ಪರಿಹರಿಸಿಸಿರಿ
ಧೊರಿಯೆ ಕಾಯೋ ಅ.ಪ

ಯಿಷ್ಟುಜನರ ವಳಗೆ ಮಾಧವನೆನಾ ।
ಶಿಷ್ಟಾ ಳೆಂದೆನಿಸಿದ್ದೆನೋ ಶ್ರೀ
ಕೃಷ್ಣ ನಿನ್ನಯ ಪಾದಗಳನೆ ಮುಟ್ಟಿ । ಭಜಿಸುವೆ ಥಟ್ಟನೀಗಾ
ಯಿಷ್ಟು ಗೋಪಿಯರೊಳಗೆ ಮಾನವ । ಭ್ರಷ್ಟಮಾಡದೆ
ಗುಟ್ಟು ಮಾಡ್ಯೆ ೧

ವ್ಯಾಸಾಂಬರೀಷನೆ । ನಾರದರುಕ್ಮಾಂಗದ ಆ ಪ್ರಹ್ಲಾದನೆ
ಘಾಸಿಯಿಂದಲಿ ಮಡುವಿನಲಿಗಜ ।
ಘೋಷಣೆಯ ಮಾಡುತಿರಲು
ಶ್ರೀಶ ನಿನ್ನ ದಾಸರನೆ ಬಲೆ । ಘಾಸಿಯಿಲ್ಲದ ಪೋಷಿಸಿದಿನೀ ೨

ವಲ್ಲಭ ಬಲ್ಲಿದನೋ । ಇದನರಿತರೆ ಗುಲ್ಲು ಮಾಡದೆ ಬಿಡನು
ಯೆಲ್ಲ ಪಾಲ ಬೆಣ್ಣಗಳಾ ನಾ । ನಿಲ್ಲದೆ ನಿನ್ನಲ್ಲಿ ಸುರಿಸೂವೆ
ಯಲ್ಲ ಗೋಪಿಯರಂತೆ । ಯನ್ನಲ್ಲಿ ಕರುಣವ ನಿಲಸೋನೀ ೩

ಅಗಲಿರಲಾರೆ ನಿನ್ನಾ । ಅರಘಳಿಗಿನ್ನಾ ।
ಸುಗುಣಸುಂದರಮೋಹನ್ನಾ
ಬಗಿ ಬಗಿ ನಿನ್ನ ಬಲಿಗೆ ಸಿಲ್ಕಿದೆ । ಹಗಲು ಯಿರುಳು ಯೆನ್ನಾ
ಬಗೆಯೊಳಿಟ್ಟು । ಮಿಗಿಲು ಗೋಪಿಯರಂತೆಯನ್ನಾ ।
ಭುಗಿಲು ಮಾಡದೆ ಈಗಲೇ ಸಲಹೋ ೪

ಇದ್ದು ಬಂದಿದ್ದಾಳೋ । ಪರಿಚರಣದೊಳು
ಬಿದ್ದುನಮಿಸಿದಳೂ
ಮುದ್ದು ಮೋಹನ ಮೂರುತಿಯನ್ನ । ಸುದ್ದಿಗಳ
ಪ್ರಸಿದ್ಧಿ ಮಾಡದೆ
ಬಿದ್ದೆ ನಿನ್ನ ಬಳಿಯೊಳಿನ್ನಾ । ಮುದ್ದುನರಸಿಂಹ
ವಿಠಲನೆ ಸಲಹೋ ೫

## ವಚನ

ಪದುಮಲೋಚನೆ ಇಂಥ ವಿಧ ವಿಧ ಸ್ತೋತ್ರವ ಮಾಡೆ
ಮದನ ಜನಕನು ತಾನು ಮಾತಾಡಿದಾನಾಗೆ ।
ಮಧುರಿಯಿಂದಲಿ ಈಗ
ಚದುರಿಯರು ಬರುವೋರು ಮುದದಿಂದ
ನೀನೀಗ ಮಂದಿರವಸೇರೆನಲು
ಮದನ ಲೋಚನಿಯು ಮಾತಾಡಿದಳು ಮತ್ತೇನೆಂದರೇ
ಹ್ಯಾಂಗೆ ಪೋಗಲೋ । ಯದುಪ ನಾ ಬಿಟ್ಟು ।
ನಾಗವೇಣಿಯರಾ
ಸಂಗಡಾ, ಭೋಗಶಯನ ಭೋಗ ತೋರಿದ್ಯೊ
ಸಾಗಿ ಪೋಗುವುಧ್ಯಾಂಗೆ ನಾ ಪ

ಯತ್ತ ಪೋದನೆ ಚಿತ್ತಜನಯ್ಯ ಮತ್ತೆ ಮುಖವ ತೋರದೆ
ಅತ್ತ ಇತ್ತ ನೋಡುತಾ । ಮನ ತತ್ತರವ ಗೊಳ್ಳುತಾನಾ ೧

ಕಾಲುಯೇಳದು । ಕಣ್ಣು ಕಾಣದು । ನೀಲ ವರ್ಣನ ನೋಡದೆ
ಸಾಲು ಸಾಲು ಗೆಳೆತೇರು ಬಂದು । ಮ್ಯಾಲೆ ನಿಂತಿಹರಿಗೆ ನಾ ೨

ಪದಕ ಮುತ್ತಿನ ಹಾರ ವಲಿಯುತಾ । ನಲಿಯುತಾ ಬಂದ
ಯದು ಕುಲೇಶನ ಬಿಟ್ಟುನಾ ಕ್ಷಣ । ಬದುಕಲಾರದೆ
ಹೋದೆನೆ ನಾ ೩

ನಮ್ಮ ನರಸಿಂಹ ವಿಠಲನಾ ಮುಖ ।
ಇನ್ನೊಮ್ಮೆ ನೋಡಲಿಲ್ಲದೇ
ಗಮ್ಮನೆ ಮನಿಯೊಳಗೆ ಪೋಗಿ । ಸುಮ್ಮನೆಯಿರಲಾರೆ ನಾ ೪

ಪೋಗಲಾರದೆ ಹೆಜ್ಜೆ ಆಗ ತಾ ನಿಡುತಲಿ
ಭೋಗಿಶಯನನ ಮುಖವು ನೋಡು ನೋಡುತಲಿ ಪ

ಇರುತಿರಲು ಗೆಳತಿಯರು ಕಲೆತು ಬಂದರು ಆಗ
ವನಿತೆ ಮುಖದೊಯ್ಯಾರವನು ನೋಡಿ ನಗುತಿಹಾನೂ ೧

ಎಲೆ ಹೆಣ್ಣೆ ಬೆಣ್ಣೆ ಹಾಲು ಮಾರಲಿಲ್ಲೊಂದೂ
ಆ ಹೆಣ್ಣುಗಳೆಲ್ಲ ಕಂಡು ನುಡಿದಾರೂ ೨

ಅಂದ ಮಾತಿಗೆ ಕೋಪದಿಂದ ಗೊಲ್ಲತಿ ತಾನು
ತಂದ ಬುಟ್ಟಿಯ ಅವರ ಮುಂದೆ ಇಳಿಸಿದಳೂ ೩

ಬೀದಿಯಲಿ ಮಾರಿದಕ್ಕಧಿಕವಾಗಿ ರೊಕ್ಕಾ ।
ಮಾಧವನ ದಯದಿ ಮತ್ತಲ್ಲೆ ತೋರಿದವೂ ೪

ಹಿಂದೆ ಮಾರಿದಕ್ಕಧಿಕವಾಗಿ ರೊಕ್ಕಾ
ತಂದಿಹೇನು ನೋಡಿರೆಂದು ನುಡಿದಾಳೂ ೫

ಮಾರಮಣನಾದ ನರುಸಿಂಹನಾ ಧ್ಯಾನ್ನಾ
ಮಾಡುತಲಿ ಮನದಲ್ಲಿ ಮತ್ತಾಂಗನೇಯಾ ೬

## ವಚನ

ಇನಿತು ಗೆಳೆತೀರ ಸಂಗ ಕಲೆತು ಮನೆಗೆ ಬಂದೂ
ಕಾಣುತ್ತ ಲತ್ತಿಯನು ಕಂಬ ಮರಿಮಾಡಿದಳು
ಹಾಲು ಮಾರಿದ ರೊಕ್ಕ ಹಾಕಿ ಅತ್ತೆಯಾ ಬಳಿಯಾ
ಕಾಲ ಮೇಲೊರಗಿ ಕಂಬಕೆ ನಿಂತವ್ಯಾಳೆಗೆ ।
ಚೆಲ್ವ ಕಂಗಳೆ ಮುಖವುಯೆಲ್ಲ । ಅತ್ತೆಯು ನೋಡಿ
ಮೆಲ್ಲನೆ ಸೊಸಿಒಡನೆ ಮಾತಾಡಿದಳು ಮತ್ತೇನೆಂದರೆ
ಯೇನಾಯಿತೇ ನಿನ್ನ ಧ್ಯಾನಕ್ಕೆ ಯೀಪರಿ । ನಾನಾಗಲೇ ಪೇಳಿದೆ ಪ

ಚೆಲ್ವಗಂಗಳೇ । ಪೋಗಸಲ್ಲದೆಂದೆನುತಾ ।
ಗಲ್ಲಪಿಡಿದು ಪೇಳಿದೇ ಅ.ಪ

ಮತ್ತೆ ನೋಡಲು ನಿನ್ನ । ಚಿತ್ತವಿಕಾರವೂ ।
ಯೆತ್ತೆತ್ತಿ ತೋರುವುದೇ ।
ಚಿತ್ತಜನಯ್ಯನೊಳ್ । ಚಿತ್ತವು ಮುಣುಗಿದೆ ।
ಮತ್ತೇನಾಯಿತು ಪೇಳೆಲೆ ಈಗಲೇ ೧

ಸಲ್ಲಲಿತಾಂಗಿ ನಿನ್ನ ಗಲ್ಲದ ಮ್ಯಾಲೆ । ಸುಳಿ
ಪಲ್ಲಿನ ಘಾಯಾ ವಿದೇ
ಬಲ್ಲಿದ ಮುಡಿಯೊಳು । ಮಲ್ಲೀಗಿ ಮುಡಿಸಿದಾ ।
ವಲ್ಲಭದಾರೀಗಲೇ ನೀ ಪೇಳಲೆ ೨

ವುಟ್ಟನಿರುಗಿ ಸಡಲಿ । ಬೊಟ್ಟು ಕುಚವು ಬಳಲಿ ।
ಕಟ್ಟಿದ ಮುಡಿಸೊಡಲಿ
ದುಷ್ಟಿಸಿ ನೋಡಲು । ಕುಂಕುಮಕದಲಿ । ಯೆಷ್ಟೆಂತ ನಾ
ಪೇಳಲೀ ಯೇನ್ಹೇಳಲೀ ೩

ನಾರೀ ಮಣಿಯನಿನ್ನಾ । ಮಾರೀಯ ನೋಡಲು ।
ವಿಕಾರವೆತೋರುವುದೂ
ಜಾರೆ ಹೆಂಗಸೆ ನಿನ್ನಾ । ಯಾರೇನು ಮಾಡಿದ್ದು ।
ವಿಚಾರವು ಪೇಳೆಲೇ ನೀ ಯೀಗಲೇ ೪

ಕಿರಿಬೆರಳಿಂದಾ । ಗೀರು ಘಾಯವು ಛೆಂದಾ ।
ಮಾರಿಯೊಳು ತೋರುವುದೇ
ನರಸಿಂಹನಾ । ದಯಾಪೂರಿತಳಾದಾ । ಆ ಕಾರವೂ
ತೋರುವುದೇ ಪೇಳಿದೇ ೫

## ವಚನ

ಮಂದಿರದಿ ಮನ ನಿಲದು । ಮನವು ಬ್ಯಾಸರ ವಿಹುದು ।
ಮಾಧವನಾ
ಧ್ಯಾನವನು ಮನವು ಮಾಡುತಲಿಹುದು । ಮದನಾಕ್ಷಿಯೆ ನಿನ್ನ
ಮರುಕ ವೇ ನೆಂದೆನಲಾಗ । ಮುದದಿಂದ ನುಡಿದಳತ್ತಿಯ
ವಡನೆ ಮತ್ತೇನೆಂದರೇ
ಕಾಣೆನಮ್ಮಾ ನಾನೂ । ಜಾಣಗೋಪಾಲನಾ । ಜಾಣೆ
ಕೇಳೆನೀನೂ । ಆಣೆಮಾಡುವೆನೂ ಪ

ಅಲ್ಲೇ ಪೋಗಿಧೂರಾ । ಇಳುಹಲು ಭಾರಾ
ಚೆಲ್ಲಿ ಹಾಲು ಮಸಾರಾ । ಗಲ್ಲವಾಯಿತು ಜ್ಯೋರಾ ೧

ಯೆಲ್ಲಗೆಳತೇರು । ಅಲ್ಲಿ ಕುಳತಾರೂ
ಯಮುನಾ ನದಿ ನೀರೂ । ಆಟ ವಾಡಿದರೂ ೨

ಅಂಗನೀಯರೆಲ್ಲ ಕೂಡಿ । ಗಂಗೆ ಪೂಜ ಮಾಡಿ
ಗಂಧ ಪುಷ್ಪ ನೀಡಿ, ತಂದು ಕೊಟ್ಟರು ನೋಡಿ ೩

ಹಸದು ಬಳಲಿ ಬಂದು । ವಸನ ಜಾರಿತೆಂದೂ
ಬಿಸಲೊಳಗೆ ನಿಂದಾ ನಾ । ನಲುಬಾಡಿತೆಂದೂ ೪

ದಡ್ಡತನವೆಲ್ಲಾ, ದೊಡ್ಡ ಬುಟ್ಟಿಸಲ್ಲಾ
ಕಡ್ಡಿತಾಕಿ ಗಲ್ಲಾ । ಆ ಛಾಯವಾಯಿತಲ್ಲಾ ೫

ಎಷ್ಟು ಹೇಳಲಿ ನಾನು । ಕೃಷ್ಣನ್ನ ಕಾಣೆನೂ
ದಿಟ್ಟ ನರಸಿಂಹಾ ವಿಠಲಾ ಬಲ್ಲನೂ ೬

## ವಚನ

ಅತ್ತೆ ಕೇಳಮ್ಮ ಅಸತ್ಯ ವಾಡುವೊಳಲ್ಲ ।
ಅತ್ತಿಪೋಗದೀವತ್ತು ಪೋದೆನು
ನಾನು । ಹಾದಿಗೊಂಚಲು ತಗಲಿ ಹಾಸಗೆಟ್ಟಿತು
ಮುಖವೂ । ಕ್ಯಾದೀಗಿ
ಲಾಡಿದಾವೆಂದೂ ಬಿಚ್ಚದೆ ಮುಡಿಯೂ । ದಾಹಕ್ಕೆ ತಡಿಯದೆ
ತಾಂಬೂಲವನೆ ಮೆದ್ದಿಹೆನೂ । ಮನಿಯದೇವರ ನಾನು
ಮನದಿ ನೆನೆಯುತಲಿಹೆನೂ । ಇಂತೀ ಸೋಜಿಗದ ಮಾತು
ಕೇಳುತಲತ್ತಿ ಮತ್ತಿಂತೆಂದಳೂ

## ಆರ‍್ಯ

ಪತಿಯ ಕಂಡು ನಿನ್ನತ ಮಾಡುವನೂ । ಜತನ
ಮಾಡಿಕೊಳ್ಳೆ ನೀ ಬೇಗಾ
ಮತಿ ಹೀನಳೆ ಎನ್ನೊಡನೆ ಕೇಳದೀ । ಕಥಿಯ
ಮಾಡಿದೇ ನೀ ನೀಗಾ
ದಿಟ್ಟ ಹೆಂಗಸೆ ನಿನ್ನೆಷ್ಟು ಕೇಳಲು । ಗುಟ್ಟು ಪೇಳದೆ ನೀನಿರುವೆ
ಕ್ರಿಷ್ಣನೊಳಗೆ ಮನವಿಟ್ಟು ಬಾಳಿದರೆ । ಸಿಟ್ಟುಬಾರದೆ ನಿನ್ನ ಪತಿಗೀಗ
ಅಂದ ಮಾತುಗಳ ಕೇಳುತಲತ್ತಿಯ । ಮುಂದೆನಿಂತು
ನುಡಿದಳು ಆಗಾ
ಮರೆತಿರಲಾರೆ ನಾನೇ ರಂಗಯ್ಯನಾ । ಮರತೀರಲಾರೆ ನಾನೇ
ಮದನ ಮೋಹನನಾ । ಮರೆತನೇನೇ ಈ । ದ್ವಾರಕಾನಾಥಾನಾ ಪ

ಮಂದರೋದ್ಧರನಾ । ಸುಂದರಕಾರನಾ ।
ನಂದ ನಂದನನಾ । ಆನಂದ ರೂಪನನಾ ೧

ನರಸಿಂಹ ವಿಠಲಾ । ನರನಮ್ಮವನಲ್ಲಾ
ಸ್ಮರ ಪಿತನಾ ದಿವ್ಯ ಸ್ಮರಣೆಯನ್ನುನಾ ೨

## ವಚನ

ಅತ್ತೆ ಕೇಳಜಪಿತನು । ಮತ್ತೆ ಬಂದನು । ಬುಟ್ಟಿಯ ಪೊತ್ತು
ಪುರುಷನಂದದಿ ತಾನು । ತಟ್ಟುತಲಿ ಬೆನ್ನನು ।
ಮುಟ್ಟಿಕುಳಿತಿಹ್ಯಾನೂ
ಕೊಟ್ಟು ತಾಂಬೂಲವನು, ಘಟ್ಯಾಗಿ ಅಪ್ಪಿದನೂ ।
ಪುರುಷ ಬಂದನು
ಯೆಂದು ಗೆಳೆತೇರೆಲ್ಲರು ಪೋಗೆ । ಸುರಸಿದನು ಕ್ರೀಡೆಯನು
ಶುದ್ಧ ಮೂರುತಿತಾನು ಧರಿಸಿನಿಂತನು ಶಂಖ ಚಕ್ರ ಮೊದಲಾದ
ವರ ಪೀತಾಂಬರ ಕಿರೀಟ ಕುಂಡಲಿನಿಟ್ಟ । ಪರಮ ಪುರುಷನ
ಕಂಡೇನೆಂದಳಾಗಾ

## ಆರ‍್ಯ

ಅತ್ತೆಕೇಳೆ ಅವತ್ತಿಂದಲಿಯೆನ್ನ । ಚಿತ್ತದೊಲ್ಲಭ ನೆಂದೆಣಿಸುವೆನೂ
ಭಕ್ತವತ್ಸಲಾ । ಭಯವಿನಾಶನಾ । ಸತ್ಯವಲ್ಲಭನ್ನ ಸ್ಮರಿಸುವೇನೂ
ಕಂಜ ಲೋಚನೆತಾ ನಂಜದೆ ನುಡಿಯಲು । ಮಂಜುಳ ವಾಣಿತಾ
ಕೇಳಿದಳು । ಪಂಜರದರಗಿಳಿ ಕುಂಜರಗಮನಿಯ, ಮುಂಜರಗು
ಪಿಡಿದು ಪೇಳಿದಳೂ

ಭಕ್ತ ಪರಿಪಾಲನೆ ಮುಕ್ತಿದಾಯಕ ಶೀಲನೆ
ಯುಕ್ತಿಯಿಂದಲಿ ಯನ್ನ ವಲಿಸಿ । ಭಕ್ತಿ ಕೊಟ್ಟು ಪೊರೆದನೆ ಪ

ನಂದ ನಂದನ ವಂದ್ಯನೆ । ಸುಂದರ ಸುಕುಮಾರನೆ
ಇಂದು ವದನನೆ ನಿನಗೆ । ಮುಚ ಕುಂದವರದ ಒಲಿದನೆ ೧

ಎಂಥ ಪುಣ್ಯ ಮಾಡಿದೆ, ಅಂತರಾತ್ಮನ ನೋಡಿದೆ
ಕುಂತಿ ಸುತನ ಸಖನ ಕೂಡಿ । ಯನ್ನೆಂತುರಮಿಸಿ ನೋಡಿದೆ ೨

ಯನ್ನ ದುರ್ಭಾಷೆಯ ಇನ್ನು ಕ್ಷಮಿಸಿ ದೋಷವಾ
ಘನ್ನ ನರಸಿಂಹ ವಿಠಲಾ । ನಿನ್ನ ಪೋಷಿಸಿ ಸಲಹುವಾ ೩

ಆರೂತಿ ಬೆಳಗಿರೆ ನೀರೇ । ಬ್ಯಾಗದಿ ತ್ವರಿತಾದಿ ಹರಿಗೆ
ಸಾರೆ ಸರೋಜ ಲೋಚನ ಹರಿಗೀಗ ಪ

ಶಿಂಧು ಮಥನ ಮಾಡಿ । ಬೇಗದಿ ಬಂದು । ಸುರರೀಗೆ
ಅಮೃತ ನೀಡಿ ವಂದೆ ಭಾವದಿತಂದಾ ಹರಿಗೀಗಾ ೧

ವೃಂದಾ ವನದಿ ಅಹಾ । ಧಿಂಧಿಮಿಕೆನ್ನುತ ನಿಂದಾ
ನಂದಾಗೋಪರನೋಟ । ಮಂದರೋದ್ಧಾರ ಹರಿಗೀಗಾ ೨

ನೂರಾರು ನೋಡುತಲೆಲ್ಲಾ । ವೈಭವ ಶೂರಾರು
ನರಸಿಂಹ ವಿಠಲ್ಲಾ । ಭರದಿಂದಸಲಹೋದೇವಗೆ ೩

೬

## ಚೇಳಿನ ಹಾಡು

ನುಡಿಸೆ ನಾಲಿಗೆಯ ಮ್ಯಾಲೆ, ಶಾರದಿಗುಣ ಶೀಲೆ ಪ

ನುಡಿಸಿ ನಾಲಿಗೆಯ ಮ್ಯಾಲೆ, ಶಾರದೆ ಗುಣಶೀಲೆ
ಕಡು ಹರುಷಾದಿ ಕಥಿ ತಡಿಯಾದೆ ಅ.ಪ

ಏಕದಂತನು ಆದಂಥ ಬಲವಂತ । ಈ ಕಥಿಗಳು
ಅನಂತಾನಂತ
ಮೂಷಕ ವಾಹನ ದೋಷಗಳಿಲ್ಲದೆ । ಶ್ರೀ ಶನ
ಕಥಿ ಸಂತೋಷದಿಂದಲಿ ೧

ವೇದಗಳಭಿಮಾನಿ । ಓದಿಪ ಸುತ್ರೋಣಿ ।
ಆದಿ ಬೊಮ್ಮನರಾಣಿ । ಅನಂತ ಸುಖವಾಣಿ ೨

ಸಕಲ ವಿದ್ಯಾಭಿಮಾನಿ । ಸಜ್ಜನಿ ಸನ್ನಿಧಾನಿ
ವೀಣಾ ಪುಸ್ತಕ ಪಾಣಿ । ವಿದ್ಯಾಪಾಲಿಸುಜಾಣೆ ೩

ಪೊಡವಿ ಗೊಡೆಯ ಸಿರಿ । ನರಸಿಂಹ ವಿಠಲನ
ಕಡು ಹರುಷದಿ ಕಥಿ । ತಡೆಯಾದೆ ಶಾರದೆ ೪

## ವಚನ

ಶಾರದೆಗೆ ನಾನೀಗ ಸಾರಿಸಾರೊಂದಿಶ್ಯಾ ।
ಪಾರಮಹಿಮನ ಕಥಿಯ
ಚಾರುತರದಲಿ ಪೇಳ್ವೆ । ನೀರಜಾಕ್ಷನ ಕಥಿಯ ಪೇಳುವೇನು
ಮತ್ತೇನೆಂದರೆ । ಆಗ ರುಕ್ಮಿಣಿ ಭಿಕಷ್ಮನಲ್ಲಿ ಉದ್ಭವಿಸಿ, ದಿನಾದಿನಾ
ಅಭಿವೃದ್ಧಿ ಆಗು ತಿರಲಾಗ । ಚಿಕ್ಕವ ರುಕ್ಮಿಣಿಗೆ ತಕ್ಕವ
ನಿಲ್ಲೆಂದು । ಚಕ್ರಧರನೇ ಇವಳ ತಕ್ಕವರ ನೆಂತೆನಲು । ರಕ್ಕಸ
ರುಕುಮಾಂಗದನು ಕೇಳಿ । ದಂತವಕ್ತ
ಶಿಶುಪಾಲನ ಕರೆತಂದು ಆಗ
ಮದಿವಿಹಂದರ ಹಾಕಿ ಮದುವಣಿಗನಾ ಮಾಡೆ ।
ಪದಮಲೋಚನ
ತಾನು । ಕಡಿಯದೇ ಓಲೆಯನು ತಾನು ।
ಸದನದೊಳಗೆ ಬರದು'
ಕರೆದು ವಿಪ್ರಗೆ ಕೊಡಲು । ಮುದದಿಂದ
ದ್ವಾರಕಾಪುರಕೆ ಬಂದನು
ಆಗ । ಚದುರ ಗೋಪಾಲನಿಗೆ । ಓಲೆಯನು ಒಪ್ಪಿಸಲು
ಭೋಗ ಶಯನನು ನೋಡಿ ಬ್ಯಾಗ ಬಂದನು ಆಗ । ರುಕ್ಮಿಣಿ
ಅಂಬಿಕಾ ಗುಡಿಗೆ ಬಂದು ಮತ್ತೇನೆಂದರೆ
ನಾರಿ ರುಕ್ಮಿಣಿ ನಡೆದಳು ಸಾರಿ । ಕೋಕಿಲ ಸ್ವರ ವೈಯಾರಿ ಪ

ಯೆರದು ಪೀತಾಂಬರ ನುಟ್ಟು । ಸರಪದಕವಿಟ್ಟು ।
ಕರದಿ ಕಂಕಣದ
ಕೈ ಕಟ್ಟು । ಸರಗಿ ಸರವು ತನ್ನ ಕರದಲಿ ತಿರುಗುತ,
ಪರಮ ಪುರುಷನ ಕೂಡುವ ತ್ವರದಲಿ ೧

ಗಂಧ ಕುಂಕುಮದಾ ಚಂದ । ತಂದಳು ಆನಂದ । ಅಂಬಿಕೆ
ಗುಡಿಗೇ ಚಂದ । ಚಂದದಿ ಅಂಬಿಕೆಯ ಪೂಜಿಸಿ,
ಹಿಂದಿರುಗಲು ಗೋವಿಂದನು ಬಂದ ೨

ಹಿತದಿಂದಲಿ ಕರವಾ ಪಿಡಿದಾ । ರುಕ್ಮಿಣಿಯನು
ಕರದಾ ಸತತಾ ಮೂರುತಿ
ನಾರದವರದ । ಪತಿತ ಪಾವನ ಸಿರಿ ನರಸಿಂಹ ವಿಠಲಾ ತಾ
ರಥದ ವಳಗೆ ಸತಿಪತಿಯರು ಒಂದಾಗಿ ೩

## ವಚನ

ಅಂಗನೇ ರುಕ್ಮಿಣಿಯು ರಂಗನೊಡನೇ
ಪೋಗೆ ಬಂದು ಚಾರಕರು,
ರುಕುಮಾಂಗದಗೆ ಪೇಳಲು । ಬಂದು ರುಕುಮಾಂಗದನು
ದ್ವಾರಕೆಗಾಗ । ಇಂದಿರೇಶಗೆ ಆಗ ತಂದು ರುಕ್ಮಿಣಿ ನಿತ್ತು
ಚಂದದಿಂದಲಿ ಮದುವಿ ಸಂಭ್ರಮದಿ ಮಾಡೆ, ಮುಂದಿನ
ಅಭಿಪ್ರಾಯವನು । ಪೇಳುವೆನು ಮತ್ತೇನೆಂದರೆ.

## ಆರ್ಯ

ಸುಂದರಿ ರುಕ್ಮಿಣೆಯ ಮುಖ ಬಿಂಬವನು । ಬಂದು ಶ್ರೀ ಹರಿ
ತಾ ನೋಡಿದನು, ತುಂಬಿ ಯೌವನ, ಸೂಸುತಲಿ
ಹರಿ । ಬಂದು ನಡೆದನಾ ಚಂದದಲಿ । ನಾರಾಯಣ ತಾ
ಸಾರಿದನಾಕ್ಷಣ । ನಾರಿಯರಿಗೆ ತಾ ಹೀಗೆಂದನು
ಸಾರಿಸಾರಿ ನುಡಿದನು ಬಂದು । ನರಸಿಂಹ ವಿಠಲನ
ವಾಕ್ಯ ಕೇಳುತ । ಅರಸಿಯರೆಲ್ಲರೂ ನಗುತಿಹರು

ಅರಸಿ ರುಕ್ಮಿಣಿಗಲಂಕರಿಸಿರೀ ಎಂದು ಹರುಷದಿ
ಹರಿ ನುಡುದನು ಬಂದು ।

## ವಚನ

ಕಾಮಿನಿ ರುಕ್ಮಿಣಿಯ ನೋಡಿ ಶ್ರೀ ಹರಿ ತಾನು, ಕಾಮವಶನಾಗಿ
ಭಾಮೆಯರಿಗ್ಹೇಳಲು, ಕಾಂತೆಯರೆಲ್ಲರು ಸಂತೋಷದಿಂದಾಗೆ
ಕಮಲಾಕ್ಷಿರುಕ್ಮಿಣೆಯ ಕರತಂದು ಆಗ । ಕಮ್ಮಣ್ಣೆಗಳ
ವತ್ತಿರಿ ಪನ್ನೀರಲೆಂದು । ಕನ್ನಿಕೆಯರು ಆಭರಣ । ಚೆನ್ನಾಗಿ
ರಚಿಸಿದರು ಮತ್ತೇನೆಂದರೇ ।
ಶೃಂಗರಿಸಿದರಾಗ । ರುಕ್ಮಿಣಿಗೆ ಬ್ಯಾಗ ಪ

ಶೃಂಗರಿಸಿದರಾ ಮಂಗಳಾ ಮುಖಿಗೆ । ರಂಗನರ್ಧಾಂಗಿಗೆ ।
ಅಂಗನೇಯರು । ಜಡೆಗಳಾ ಬಿಗಿಯೊ । ಚಂದದಿಂದಲಿ
ಭಂಗಾರಗಳ್ಹೆಣಿಯೇ । ಮುಂಗೂರರಳೆಲಿ ।
ಚಂದ್ರಸೂರ್ಯರು ಹೊಳಿಯೇ । ತಂದು ಕಸ್ತೂರಿ ತಿದ್ದಿದರು
ಹಣಿಗೆ । ರಂಗನ ಮುಂಗ್ಯ ಗಿಣಿಗೆ ೧

ವಾಲಿ ಬುಗುಡಿ ವಾರಿಜಾಕ್ಷಿಗೆಯಿಟ್ಟು । ತೋರಮುತ್ತಿನ
ಮೂಗುತಿಯಿಟ್ಟು । ಹಾರ ಪದಕಗಳು ಕೊರಳೊಳಗೆಷ್ಟು
ಚಾರುವಸ್ತ್ರದ ಕಂಚುಕ ತೊಟ್ಟು । ನಾಗಮುರುಗಿ ವಂಕಿಗಳನಿಟ್ಟು
ನಾರಿಗೆ ಬಾಜೂ ಬಂಧಿಯ ಕಟ್ಟು । ಗೀರು ಬಳೆಗಳನು
ನಾರಿಯರಿಟ್ಟು । ಬಾರಿ ಬಾರಿಗೆ ಪೊಗಳುವರೆಷ್ಟು ೨

ವಜ್ರದ ಹಸ್ತ ಕಡಗವನೇ ಇಟ್ಟು । ಮುದ್ದು ಬೆರಳಿಗೆ
ಮುದ್ರಿಕೆಯಿಟ್ಟು । ಭರ್ಜರಿ ಪೀತಾಂಬರವನೆ ಉಟ್ಟು
ವಜ್ರ ಕೆತ್ತಿದ ವಡ್ಯಾಣವಿಟ್ಟು । ಗೆಜ್ಜೆ ಅಂದಿಗೇ
ಪಾದದೊಳಿಟ್ಟು । ಹೆಜ್ಜೆ ಹೆಜ್ಜೆಗೆ ಆ ಶಬ್ದಗಳೆಷ್ಟು ।
ಸಜ್ಜನ ಪ್ರಿಯನಮ್ಮ ನರಸಿಂಹ ವಿಠಲನ
ಕೂಡುವೋ ತ್ವರದಿ ಎಂಬ ಗುಟ್ಟು ।

ಇಂತೆಂದು ರುಕ್ಮಿಣಿಗೆ ಕಾಂತಿಯರು ಶೃಂಗರಿಸಿ
ಕಂತು ಜನಕನ ಸಂಜ್ಞೆಗಾಗೆ ಮಾಡಿದರು । ಪಂಚ
ಭಕ್ಷ್ಯವು ಪರಮಾನ್ನ ಶಾಲ್ಯಾನ್ನಗಳು । ಶಾಕಪಾಕಗಳನ್ನು
ಮಾಡಿ । ಶೇಷಶಯನ ಕೃಷ್ಣ ಸತಿವಡನೆ ತಾನಾಗೆ
ಸರಸವಾಡುತಲಿ । ಸವಿದುಂಡು ಭೋಜನವಾ
ಹರುಷದಿಂದಲಿ ತನ್ನ ಶಯನ ಮಂದಿರದಲ್ಲಿ
ಕುಳಿತ ಬಗೆ ಮತ್ತೇನೆಂದರೇ ।
ಬಂದು ಕುಳಿತನಾಗೆ । ಶಯನ ಮಂದಿರದಾಗೇ ಪ

ಸುತ್ತನೋಡಲು ಪಚ್ಚದಗ್ವಾಡಿ । ಹತ್ತಾವತಾರವು
ಮುಗುದದೋ ನೋಡಿ
ಮುತ್ತು ಮಾಣಿಕ್ಯದ ಕುಚ್ಚನು ಮಾಡಿ । ದರ್ಪಣದಲಿ
ಅಲಂಕಾರವು ಮಾಡಿ । ಕರ್ಪೂರದಲಿ ದೀವಿಗೆಗಳುಮಾಡಿ
ಅಪ್ರಮೇಯ ಸರ್ವೋತ್ತಮ ಹರಿತಾ ।
ಸರ್ಪಶಯನನಿಗೆ ಅರ್ಪಿಸಲಾಕ್ಷಣ ೧

ಜರತಾರಿ ಲೇಪುಗಳನೇ ತಂದು । ಹಾಕಿದರು
ಮಕ ಮಲ್ಲಿನ ದಿಂಡು
ಜೋಡಿಲಿಯಿಟ್ಟರು ಹೂವಿನ ಚೆಂದಾ । ದೀಪಗಳಾ ಪ್ರಕಾರವು
ಕಂಡು । ಮಾತಾಡುವ ಗಿಳಿ ಕೋಕಿಲ ಹಿಂಡು । ಈ ಪರಿಯಲಿ
ನಾನಾ ಪರಿಮಾಡಿದ । ಶ್ರೀಪತಿ ತನಗೇ ಹಾಕಿದ ಮಂಚಕ್ಕೆ ೨

ಕಸ್ತೂರಿ ಕದಾಪುರಿಗಂಧ । ರತ್ನದ ತಬಕಿ ನೊಳಿರುವುದೇ
ಚಂದ । ಚಿತ್ರವಿಚಿತ್ರವು ಮಾಡಿದರಂದ । ಕರ್ಪೂರದಡಿಕಿ
ಯಾಲಕ್ಕಿ ಲವಂಗ । ಒಪ್ಪಿತಿ ಬಿಳಿತು ಪುಷ್ಪದ ಹಾರ
ಗಳಿಂದ । ಸರ್ಪಶಯನ ಸಿರಿ ನರಸಿಂಹ ವಿಠಲಗೆ
ಅರ್ಪಿಸಲೂ ಆ ದರ್ಪಣ ನೋಡುತ ೩

ಈ ರೀತಿಯಿಂದ ಹರಿಯ ಮಂದಿರವು ಶೃಂಗರಿಸೇ
ಹೇರಳೆ ಕಿತ್ತಳೆ ಖರ್ಜೂರದಾಳಿಂಬು । ಕದಳಿಸೀತ

ದ್ರಾಕ್ಷಿ ನೇರಳೆ ಜಂಬೂ । ನಾರಿ ಕೇಳಂಜೂರ
ಫಲಗಳನೆ ತಂದು । ನಾರಾಯಣನ ಮಂಚದಾಲೊಪ್ಪಿದುವು ।
ಭಾಗೀರತದುಕುವನು ಬ್ಯಾಗೆ ತಂದಿಟ್ಟು । ಕಸ್ತೂರಿ ಕದಾಪು
ಜಾಪರಿ ಗಂಧಾ । ಅತ್ತರೂ ಪನ್ನೀರು ಅತಿ
ಹರುಷದಲ್ಲಾಗೆ । ಸೃಷ್ಟಿ ಗೊಡೆಯನ ಮಂಚದಲ್ಲಿ ಒಪ್ಪಿದಾವೂ ।
ಮರುಗ ಮಲ್ಲಿಗೆ ಜಾಜಿ ಸುರಗಿಶ್ಯಾವಂತಿಗೆ
ಅರಳು ಮಲ್ಲಿಗೆ ದವನ ಸರಗಳು ಕಟ್ಟಿ । ಸರಸಿಜಾಕ್ಷನ
ಮಂಚದಲ್ಲಿ ಒಪಿದವೂ । ಕಂತು ಜನಕನು ನೋಡಿ
ಸಂತೋಷದಿಂದಲಿ । ಕಮಲಾಕ್ಷಿರುಕ್ಮಿಣಿಯ ಕರ
ತನ್ನಿರೆನಲೂ, ಕಾಂತೆಯರೆಲ್ಲರೂ । ಸಂತೋಷದಿಂದಲಿ
ಕಾಂತೆ ರುಕ್ಮಿಣಿ ಒಡನೆ ಮತ್ತಿಂತೆಂದರು

## ಹಾಡು

ನಾರಿ ರುಕ್ಮಿಣಿ ನಡಿ ನಡಿ ಸಾರಿ । ಕಾದಿಹ್ಯಾನೆ ಪೋರ ಪ

ಪುಟ್ಟ ನಿನ್ನ ಪಾದಗಳಿಂದಾ । ದಟ್ಟಡಿನಿಕ್ಕುತಾ ಕಂಚುಕಾ
ಚೆಂದಾ । ಇಟ್ಟಾಭರಣವು । ನೆಟ್ಟನೇತಿರುವುತಾ ।
ಕೃಷ್ಣನಾ ಬಳಿಗೆ, ಥಟ್ಟನೇ ನೀನೂ ೧

ಹಿಂದೊಲಿವೋ ಜಡೆಬಂಗಾರಾ । ಭುಜಂಗನಾಕಾರಾ ।
ಚಂದ್ರ ಹಾರವು । ಮುತ್ತಿನಾಸರ । ಚಂದ್ರನಂತೆ ಮುಖ
ಬಿಂಬ ಹೊಳಿಯುತ್ತ । ಇಂದಿರಾಮುಖಿಗೋವಿಂದನ ಬಳಿಗೆ ೨

ಸಿಂಗಾನಂದದಿ ನಡುವಿನಭಾರಾ । ಅಂಗನೆಯರುತಾ ।
ಶೃಂಗಾರದಿ ಚೆಲುವ ವಯ್ಯಾರಾ । ಚೆಂದ ಚೆಂದದಿನಿನ್ನ
ಮುಂಗ್ಯೆ ತಿರುವುತ । ತಂದೆ ಶ್ರೀ ನರಸಿಂಹ ವಿಠಲನ ಬಳಿಗೆ ೩

## ವಚನ

ಹೀಗೆಂದು ರುಕ್ಮಿಣಿಗೆ ನಾರಿಯರು ಪೇಳಲು
ನಾಗವೇಣಿಯು ತಾನು ನಾಚುತಲಿ ನಡುಗುತಲಿ,
ಸೋಗೆ ನವಿಲಂತೆ ತನ್ನ ಸೋಗುಗಳ ತೋರುತಲಿ
ಭೋಗಿ ಶಯನನ ಬಳಿಗೆ ಬಂದ ಬಗೆಮತ್ತೇನೆಂದರೇ

## ಹಾಡು

ಬಂದಳು ಇಂದುಮುಖಿ । ಗೋವಿಂದನ ಬಳಿಯಲಿ ಪ

ಶ್ರೀಶನವಾಸದಿ । ಲೇಸಾಗಿ ಸೋಸಿಲೆ । ವಾಸುಕಿ ಶಯನನ
ಹಾಸಿಗೆ ಬಳಿಯಲಿ ಅ.ಪ

ಶೃಂಗಾರದಿ ಜಡೆ ಬಂಗಾರ ನಲಿಯುತ
ರಂಗನ ಬಳಿಯಲಿ । ಮುಂಗಾರ ಮಿಂಚಿನಂತೆ ೧

ಪಂಚರತ್ನದ್ವಾಲಿಯು ರಂಜಿಸುತಲಿತಾ ।
ಕಂಜಲೋಜನಾ । ಪಂಜರದರಗಿಳಿ ೨

ಮುತ್ತಿನವಾಲಿಯು । ಜತ್ತಾಗಿ ನಲಿಯುತ
ರತ್ನಗಳ ಕೆತ್ತಿದ ನತ್ತುಗಳ್ವೊಳಿಯುತ ೩

ಗೆಜ್ಜೆಯ ಪಾದದಿಂ ಹೆಜ್ಜೆಯನಿಕ್ಕುತ ಬಂದಳೆ ನೋಡುತ್ತ
ಮೂರ್ಜಗ ಮೋಹಿಸುತ್ತ ೪

ನರಸಿಂಹ ವಿಠಲನ ಸ್ಮರಿಸುತ ಮನದಲಿ
ಅರಸನ ನೋಡುತ ಬಂದಳು ರುಕ್ಮಿಣಿ ೫

## ವಚನ

ಸಖಿ ರುಕ್ಮಿಣಿ ಬರುವ ವೈಯ್ಯಾರವನು ಹರಿತಾನು ।
ವಾರೆ ನೋಟದಲಿ ನೋಡಿ ನಗುತಿಹನೂ । ಹಾರ ಪದಕವು
ಕಿರೀಟ ಕುಂಡಲಿನಿಟ್ಟು । ಸಾಲು ಗೋಲುಗಳಿಟ್ಟು ಶಾಲು
ಜರತಾರಿ ಹೊದ್ದು । ಲೋಲಲೋಚನ ಹರಿಯು ಬ್ಯಾಗದಿಂದಲಿ
ತಾನು । ಬಾಗಿಲು ಮುಚ್ಚಿ ಬಾರೆಂದುಕರೆದಬಗೆ ಮತ್ತೇ ನೆಂದರೇ।
ಬಾರೆನ್ನ ಸಖಿಯೇ । ಪ್ರಾಣನಾಯಕಿಯೇ ಪ

ಥಟ್ಟನೇ ಬಾರೇ ಈ । ಪಟ್ಟಮಂಚವನೇರೇ
ಶಿಟ್ಯಾತಕೇನೀರೆ । ಬಿಟ್ಟರಲಾರೇ ೧

ತೊಡಿಯೊಳೆ ಕುಳ್ಳಿರಿಸಿ । ಮುದ್ದಿಸಿ ಮುಖವರಿಸಿ
ನುಡಿಯೆ ಎನ್ನೊಡನೇ ಮಾತಾಡಲೇ ಸರಸೀ ೨

ಗಂಧ ಪರಿಮಳದಿ । ಆಲಿಂಗನೆ ಚೆಂದಾ
ಇಂದಿರೆ ಮುಖನಿನ್ನಾ । ರಮಿಸೊ ಆನಂದಾ ೩

ಕಂತು ಜನಕ ತಾನು । ಪಿಡಿದಾನು ಕೈಯಾ
ತಂಪೇರಿತು ರುಕ್ಮಿಣಿಯಾ ಮೈಯ್ಯಾ ೪

ನರಸಿಂಹ ವಿಠಲನು । ನಗುತಾಲೇ ನುಡಿದಾ
ಸರಸವಾಡುತಸತಿ । ಶೆರಗನ್ನು ಪಿಡಿದಾ ೫

## ವಚನ

ಬಾರೆಂದು ಶೆರಗನು ಪಿಡಿಯಲು ಆಗ ಹರಿತಾನು ।
ಜಾರಿಬಿದ್ದಿತು ಜರದ, ಶರಗು ಭೂಮಿಯ ಮ್ಯಾಲೆ । ಜೊರ‍್ರನೆ
ಬೆವತು ಹಾರ ಪದಕವು ಸಡಲಿ । ನಾರಿರುಕ್ಮಿಣಿ ತಾನು
ದೂರದಲಿ ನಿಂತಿರಲು । ಮಾರ ಜನಕನು ನೋಡಿ ಮತ್ತಿಂತೆಂದನೂ
ನಾರಿ ನಿನ್ನ ಮಾರಿತೋರೆ । ನೀರಜಾಂಬಕಿ, ಸಾರಿ ಸಾರಿ
ಸರಸವಾಡೆ ವಾರಿಜಾಮುಖಿ ಪ

ಸುತ್ತನೋಡೆ ವಿಚಿತ್ರಗಳನ್ನು । ಮತ್ಸ್ಯಲೋಚನೇ
ಮುಚ್ಚಿದೇ ನಿನ್ನ ನೇತ್ರತೆಗಿ \ ನಕ್ಷತ್ರವದನೇ ೧

ಅಂಗನೇ ಬೆಳದಿಂಗಳಾ ಪೋಲೀಪೋ । ಮಂಗಲಾ ಸಖೀ
ಚೆಂದದಿಂದ ಕಂಗಳು ತೆಗಿಯೋ । ಇಂದಿರಾಮುಖೀ ೨

ನಿನ್ನ ಮಾತಿಲಿನ್ನುಯಿರುವ್ರೋ । ಯನ್ನ ನೋಡಲೇ
ಮನ್ನಿ ಸೆನ್ನಾ ಮಾತನಾಡೆ । ಘನ್ನ ಮಹಿಮಳೇ ೩

ತೋರ ಮುತ್ತಿನ ಹಾರ ಕೊಡುವೆ । ಬಾರೆಯಿಲ್ಲಿ ಸಖೀ
ನೀರೆ ಬಿಟ್ಟಿರಲಾರೆ ಮುಖವ ತೋರೆ ಭಾಮಿನಿ ೪

ನರಸಿಂಹ ವಿಠಲ ಸಾರಿ ಸಾರಿ ನುಡಿದನೂ ।
ಬಾರೆಯೆಂದು ಸರಸವಾಡುತಾ । ಕರಗೆಪಿಡಿದನೂ ೫

ಸರ್ಪವೇಣಿಯ ಕೂಡ ಸರಸವಾಡುತಹರಿಯು
ಅಪ್ರಮೇಯನು ಬಂದು । ಅಪ್ಪಿದನು ಸತಿಯಳನಾ
ಚಿಕ್ಕನೇ ಸಿರಿಯ ಮೈ ತಟ್ಟನೇ ಬೆವರೇರಿ
ಚಿಕ್ಕ ರುಕ್ಮಿಣಿಗೆ ನಡುಗಿಟ್ಟಿತಾ ದೇಹದಲಿ
ಕ್ರಿಷ್ಣ ಮ್ಯಾಲೆ ಉಂಗುಷ್ಟವ್ರೂರುತಲಿ । ಕೃಷ್ಣ ಮೂರುತಿ ನೋಡಿ
ಸಿಟ್ಟಿನಿಂದಲಿ ಮತ್ತಿಂತೆಂದನೂ ।

ಅಂಜಿಕಿನ್ಯಾತಕೆ ಸಖಿಯೇ । ಬಾರೆನ್ನ ನಾಯಕಿಯೇ ಪ

ಘನ್ನ ಅಡವಿ ಅಲ್ಲಾ । ಸಿಂಹವ್ಯಾಘ್ರಗಳಿಲ್ಲಾ । ನಮ್ಮಣ್ಣಿ
ನಾಣೆ ಇಲ್ಲಿ ಬಾ ಬಾರೆಜಾಣೆ ೧

ದುಃಖಿಸಲಿ ನಿನ್ನಾ । ಹೆತ್ತತಾಯಿ ತಂದೆ । ಸತ್ತಸುದ್ದಿಗಳನು
ಯಿತ್ತ ಪೇಳಿದರ್ಯಾರೇ ೨

ಬೆಂಕಿ ಹೊಗೆಯಲ್ಲಿ । ನಿಂತ್ಯಾಕೆ ರುಕ್ಮಿಣಿ । ಕಾಂತ ನಿನ್ನಯ
ಮುಖ ಯಿನ್ನೆಂತು ನೋಡುವನಲ್ಲಾ ೩

ನನಗೆ ನಿನಗೆ ಭೇಟಿ ನರಲೋಕದಲ್ಲಿಲ್ಲಾ
ನರಸಿಂಹ ವಿಠಲ ತಾ ಧರಿಸಿದ ಕೋಪವಾ ೪

ನಡುಗಲಿಕ್ಕೆ ನಿನಗ್ಹಿಡಿಯತೆ ಅದ್ಭುತ
ಹಿಡಿದ ದೆವ್ವಗಳನು । ಪಿಡಿದು ಬಿಡಿಸುವೆನಾ ೫

## ವಚನ

ಇಂತು ಸಂತೈಸಲು ಕಾಂತೆ ಮಾತಾಡಿದರೆ । ಕಂತುಜನಕನು
ಕೋಪ ಬೆಂಕಿಯುಂದದಿ ತಾಳಿ । ಕಾಂತೆ ರುಕ್ಮಿಣಿಒಡನೆ
ನಿಂತು ಮಾತಾಡಿದನೂ । ನಾರಿ ನಿನ್ನ ದೆಶೆಯಿಂದ
ಘೋರಯುದ್ಧವ ಮಾಡಿ । ರಾಯರಾಯರಗೆದ್ದು
ಮಾರಿ ತಂದಂತಾಯ್ತು । ಅಂದ ಚೆಂದದ ಸುಖ
ವೊಂದು ಕಾಣಿಸಲಿಲ್ಲೆ । ಯೆಂದೆಂದಿಗೂ ನಿನ್ನ
ಮಂದಿರಕೆ ಬಾರೆನೆಂತೆಂದು । ಹೋದನು
ಹರಿಯು ಮತ್ತಿಂತೆಂದನೂ
ನಡದಾ ನಡದಾ ಹರಿತಾ ನಡದಾ । ನಡದಾ ಹಿಡಿದಾ
ಛಲವೆನು ಬಿಡದಾ ಪ

ಅಷ್ಟಗಂಧವೂ ಯಾಡ್ಯಾಡಿದನೂ । ಬುಕ್ಕಿಟ್ಟು
ಕಸ್ತೂರಿ ವಗೆದಾಡಿದನೂ
ಅತ್ತರು ಪನ್ನೀರು ಚೆಲ್ಲಿದನೂ । ಹರಿ ನಡದಾನೂ ೧

ದರ್ಪಣಗಳ ನಪ್ಪಳಿಸಿದನು । ಛಪ್ಪರ ಮಂಚ ವೀಡ್ಯಾಡಿದನೂ
ಇಟ್ಟಪಾಲು ಸಕ್ಕರಿ ಚೆಲ್ಲಿದನೂ । ನಡದಾನೂ ೨

ನರಸಿಂಹ ವಿಠಲನುಧರಿಶಿದ । ಅಪಾರಪುಷ್ಪಗಳನು
ಹರಿದನೂ । ಹಾಕಿದ ಬಾಗಿಲ ತೆರದನೂ । ಹರಿ ನಡದಾನೂ ೩

## ವಚನ

ಈ ರೀತಿಯಿಂದ್ಹರಿಯು ಕೋಪದಲಿ ಹೊರಗೆ ಪೋಗೆ
ಹರಿಯು ಹೋದನೆಂದು ಹರದಿ ರುಕ್ಮಿಣಿ ಬಂದು ।
ಹವಳದ ಖಂಬವನನುಸರಿಸಿ ನಿಂತಳು ಆಗ
ಪರಿಯ ಚೇಳನೆ ಮಾಡಿ ಕರಕಮಲ ಕ್ಕೊರಸಿದಾ
ಥರಥರನರ ನಡುಗಿ ಮೈ ಜೋರನೆ ಬೆವರಿ । ಹರದಿ
ರುಕ್ಮಿಣಿ ಹಾಹಾಯೆಂದು ಚೀರುತಲಿ । ಧರಣಿಮ್ಯಾಲೆ
ಮೂರ್ಛಗತಳಾಗಿ ಬೀಳಲು । ನೆರೆದರಾಸತಿಯೇರ
ನಾರಿ ರುಕ್ಮಿಣಿ ವಡನೆ ಎತ್ತಿ ಕುಳ್ಳಿರಿಸಿ ಮೈ ವತ್ತಿ
ಮಂತ್ರಿಸುತಲಿ । ಪರಿಪರಿಯ ವುಪಚರಿಸಿ । ಪನ್ನೀರುಗಳ
ಚೆಲ್ಲುತಲಿ । ತರುಣಿಯರು ಮತ್ತೇನೆಂದರೂ ಯಂದರೆ ।
ಏನಾಯಿತೇ ಸಖಿ ಪೇಳಮ್ಮಾ । ಹರಿಯೇನು ಮಾಡಿದನು
ತಿಳಿಸಮ್ಮಾ ಪ

ಇಂದಿರಾ ಮುಖಿ ಮುಖಾ ಕಂದಿದ ಬಗೆಯೇನೇ ।
ಮಂದರೋದ್ಧರ ಗೋವಿಂದೆ ಏನು ಮಾಡಿದ ೧

ಹೆತ್ತ ತಾಯಿಯಬಿಟ್ಟು । ಹತ್ತು ದಿನವಾಯಿತು ।
ಶ್ರೀ ಕೃಷ್ಣಯ್ಯ ನಿನಗೆ ಇಟ್ಟಕಷ್ಟಗಳನು ೨

ತಂಧೆ ನಾರಸಿಂಹ । ವಿಠಲರಾಯನು ತಂದ
ಕಷ್ಟಗಳನು ಪೇಳಮ್ಮಾ ೩

## ವಚನ

ಇಂತೆಂದು ನಾರಿಯರು ಸಂತೈಸುತಿರಲಾಗ । ಬೆಂಕಿಯಂದದಿ
ಚೇಳ ವಿಷ ಕಂಕಣಕೇರೆ । ಕಾಂತೆ ರುಕ್ಮಣಿ ತಾನು । ಸಂತಾಪ
ಪಡುತಿರಲೂ । ಕಂತು ಜನಕನ ದೂತಕರಿದ ವೀಣೆಯ
ಬಣದ ನಾರದನಿಗೆ ವಂದನೆಯ ಮಾಡಿದಳು ।
ಇಂದಿರಾ ಮುಖಿ

ಕಂಡಿದಾ ಬಗೆ ಏನೆಂದು ಕೇಳಲು ಆಗ । ನಾರದ
ಮುನಿಯೊಡನೆ ಮತ್ತಿಂತೆಂದಳೂ ।

## ಹಾಡು

ಏನ್ಹೇಳಲಿ ನಾರದ ಮುನಿಗೆ ನಾ ಪ

ಇಂದು ಶ್ರೀಹರಿ ಎನ್ನ ಮಂದಿರಕೆ ಬಂದರೆ ಅಂಜಿ
ನಿಂತದರಿಂದ ಬಂದಿತ್ಯೆ ಭಂಗಾ ೧

ಸಿಟ್ಟಿನಿಂದಲಿ ಹರಿ । ಕೆಟ್ಟ ಉಚ್ಚರಿಸಿ ।
ತಟ್ಟನೆ ಹೋದ ಶ್ರೀ ಕೃಷ್ಣ ಮೂರುತಿ ಧೊರಿ ೨

ನರಸಿಂಹ ವಿಠಲನ ಕರತಂದು ತೋರಿದರೆ
ಕೊರಳ ಮುತ್ತಿನ ಹಾರ ಕೊಡುತೇನೆ ನಾನು ೩

## ವಚನ

ನಾರಿ ರುಕ್ಮಿಣಿಯು ನಾರದ ರೊಡನೆ ಹೇಳಲು ।
ಘೋರತಾಪವು
ತಡೆಯಲಾರೆನೋ ಸುರಮುನಿಯೇ । ಮಾರಜನಕನ ತಂದು
ತೋರೋ ಎನಗೆಂದೆನಲು । ನಾರಿ ರುಕ್ಮಿಣಿ ಒಡನೆ ನಾರದನು
ಮತ್ತಿಂತೆಂದನೂ ।

## ಹಾಡು

ನ್ಯಾಯವೇನಮ್ಮಾ ರುಕ್ಮಿಣಿ । ನೀನ್ಹೀಗೆ ಮಾಡ್ದದೂ ।
ಬಾಯೆಂದು ಕರೆದರೆ ಹೋಗದಿರ್ಪುದೂ ಪ

ಕರೆದಾರೆ ಹೋಗಾದ ಬಗೆಯು । ಅರುಹು ಎನ್ನಲ್ಲಿ । ಹರಿಯ
ಒಡನೆ ಈ ಹಟಮಾಡೋದು ಸರಿಯೆ ನಿನಗಿದು ೧

ಕಣ್ಣಿಗಿಂಪಾದವಳು ಎಂದು । ಕರೆದನೇ ಬಂದು ।
ಬಣ್ಣಿಸಿ ಕರೆದರೆ ಪೋಗದೇ । ಸಣ್ಣಕೂಸೇನೇ ೨

ದಿಟ್ಟನಾರಸಿಂಹ ವಿಠಲಗೆಷ್ಟು ಸತಿಯರೇ ।
ಬಿಟ್ಟರೆ ರುಕ್ಮಿಣಿ ನಿನ್ನ ಕೇಳುವ್ರೋರ್‍ಯಾರೇ ೩

## ವಚನ

ಹೀಗೆಂದು ಪೇಳಲು । ಭೂಮಿ ಮ್ಯಾಲೆ
ಮೂರ್ಛಗತಳಾಗಿ ಬೀಳಲು । ದೇವಮುನಿ ನಾರದನು
ನುಡಿದನು ಆಗ । ಭಾವಜನ ಪಿತನ ಕರೆತರುವೆನೆಂದೆನುತ
ಝಾವದಲಿ ನಡೆದ ನಾರಾಯಣನ ಧ್ಯಾನವ ಮಾಡುತಲಿ
ಮತ್ತೇನೆಂದರೇ ।

## ಹಾಡು

ನಾರಾಯಣನೇ । ನಾರಾಯಣನೇ । ನಾರಾಯಣನೇ । ಶ್ರೀಮನ್ ಪ

ಸೋಮನಳಿದು ವೇದವ ತಂದ್ಯೋ । ಆ ಮಹಾ
ಗಿರಿಪೊತ್ತೂ ರಾಮ
ಕಾರ್ಮುಕ ಹಿರಣ್ಯಕ ನಳಿದು । ತರುಳನಕಾಯ್ದೊ ಶ್ರೀಮನ್ ೧

ಕೂಸಿನ ವೇಷದಿ ಆ ಕ್ಷತ್ರಿಯಾರಾ । ನಾಶವು ಮಾಡಿದಿಯೋ ।
ಶೇಷಶಯನನೇ । ವಿಭೀಷಣನ । ನೀ ಕಾಯ್ದು ಶ್ರೀಮನ್ ೨

ಅಷ್ಟವುಸತಿಯರ । ನಾರಿವ್ರತವನು । ತಟ್ಟನೆ ಕೆಡಿಸಿದೆಯೋ
ಪುಟ್ಟ ತೇಜಿಯನೇರಿ । ನರಸಿಂಹವಿಠಲ । ಮೂರುತಿ
ನೀ ಕಾಯ್ದು ಶ್ರೀ ಮನ್ ರಾಮ ೩

## ವಚನ

ಇಂತು ಸ್ತುತಿ ಮಾಡುತ್ತಾ ಬಂದನಾ ನಾರದನು ।
ಸಂತೋಷದಿಂದ ।
ಗಡ ಘಂಟಕಾ ಮುನಿತಾನು । ಕಂಡು ಗೋವಿಂದನು ನಿಂದು
ವಂದನೆ ಮಾಡಿ । ತಂದು ಗದ್ದಿಗೆ ನಿಟ್ಟು । ಇಂದು ನೀವಿಲ್ಲಿಗೇ
ಬಂದ ಕಾರಣನೇನೆಂದು ಕೇಳಲು ಆಗ । ಮಂದರೋದ್ಧರ
ನೊಡನೆ । ನಾರದಮುನಿ ಮತ್ತಿಂತೆಂದನೂ ।

## ಹಾಡು

ಯಾಕೋ ಕೃಷ್ಣನೇ ನಿನಗೆ । ಕೂಕೆ ಬುದ್ಧಿಯೂ । ಕೂಸು
ರುಕ್ಮಿಣಿಗೇ । ಇಂಥಾ ಘಾಸಿ ಮಾಡೋರೆ ಪ

ಛಂದದಿಂದಲಿ । ನಾರದ ಕೇಳೆಲೋ । ಮಂದಿರಕೆ ಬಂದರಾಕಿ,
ಮಾತನಾಡಳು । ಮಾಯಗಾರನೆ ನಿನ್ನಾ । ಮಾಯವನೆಲ್ಲವಾ
ಏನು ಬಲ್ಲಳೋ ರುಕ್ಮಿಣೀ । ಏನು ಅರಿಯಳೋ ೧

ಸಿಟ್ಟಿನಿಂದಲಿ ಕೆಟ್ಟ ಚೇಳನೂರಿದೀ । ಸತ್ತಳಲ್ಲ
ರುಕ್ಮಿಣೀ ಇನ್ನೆಷ್ಟು ಹೇಳಲೋ ೨

ಸತ್ತಳೆಂದರೆ ಎದಿ ಧಕ್ಕನೆಂದಿತೂ । ಕಕ್ಕಬಿಕ್ಕಿ ಆದನಾಗ
ಲಕುಮಿಪತಿ ೩

ಹೆತ್ತ ತಾಯಿಯಬಿಟ್ಟು ಹತ್ತುದಿನ ವಾಗೆ,
ಹುಟ್ಟಲಿಲ್ಲ ಕರುಣವು ಶ್ರೀ ಕೃಷ್ಣನಿನಗೆ ೪

ತಕ್ಕು ನಾರದನ ವಾಕ್ಯವ ಕೇಳುತಾ ಹರಿ
ದುಃಖದಿಂದ ನೇತ್ರಗಳನು ವತ್ತುತ್ತಿದ್ದನೂ ೫

ಹೆಣ್ಣಿನಿಚ್ಚೆಗೇ ಇಷ್ಟು ಕಣ್ಣೇರ್ಯಾಕೋ । ಏನು
ಹದಿನಾರು ಸಾವಿರ ಸತಿಯರಿಪ್ಪಾರು ೬

ಅಷ್ಟರೊಳಗೆ ರುಕ್ಮಿಣಿ ಶ್ರೇಷ್ಠಳಿಹಳೋ ।
ಹೆತ್ತವರ ಬಿಟ್ಟುಯನ್ನ ಮಾಡಿಕೊಂಡಾಳೋ ೭

ಅಷ್ಟು ಕರುಣವು ನಿನಗೆ ಇದ್ದರೀಗಳೆ
ಕೆಟ್ಟ ಚೇಳುನೂರಿಸಿದ ಪರಿಯ ಪೇಳಲ್ಲಾ ೮

ನುಡಿಯಬೇಡವೊ । ನಾರದ । ತಡಿಯಲಾರೆನಾ
ತಡಿಯಲಾರೆ । ಮಡದಿ ರುಕ್ಮಿಣಿ ಮನೆಗೆ ಹೋಗುವೆ ೯

ಹೆಣ್ಣು ಇದ್ದಲ್ಲಿ ಹೋಗೋದು ಬಣ್ಣಗೇಡಿದನು ।
ಸಣ್ಣ ಕೆಲಸ ಮಾಡುವೋದು ಸರಿಯಲ್ಲ ೧೦

ನಾರಿ ರುಕ್ಮಿಣಿಯ ಕಂದು ತೋರೋ ಎನುತಲಿ
ನಾರ ಸಿಂಹ ವಿಠಲ ಸಾರಿಸಾರಿ ನುಡಿದನು ೧೧

## ವಚನ

ಇಂತೆಂದು ನಾರದನಿಗೆ ಪೇಳಲಾ ಹರಿತಾನೂ । ಇನ್ನೆಂತು
ಮಾಡುವುದೆಂದು ಚಿಂತಿಸಿದನು ಲಕ್ಷಿಕಾಂತ ಮನಸಿನಲಿ.
ಅನಂತ ಆನಂದದಲಿ ಕಾಂತೆ ರುಕ್ಮಿಣಿಯ ಕರತಂದು
ತೋರಿದರೀಗಾ । ಕಂಠ ಮುತ್ತಿನ ಹಾರ ಕೊಡುವೆನೆಂತೆ
ನಲು । ಚಿಂತೆಬ್ಯಾಡವೋ ನಿನ್ನ ಕರೆತರುವೆನೆಂತ
ಹೋದನು. ನಗೆ ಸಂತೋಷದಿಂ ಮುನಿಯು । ರಂಭೆ
ರುಕ್ಮಿಣೆಯ ಮಂದಿರಕೆ ಬಂದನು । ಬಂದ ನಾರದನಿಗೆ
ವಂದನೆಯ ಮಾಡಿದಳು । ಮಂದರೋದ್ಧರನು ಏನೆಂದ
ನೆಂದುಕೇಳಿದಳು । ಅವಳು ಮತ್ತೇನೆಂದಳೆಂದರೆ ।

## ಹಾಡು

ಹರಿಏನೆಂದ । ವೇಣುಗೋಪಾಲ । ಆನಂದಿಂದಲಿ ಪೇಳೋ ಪ

ಏನೆಂದ ಏನೆಂದ ಆನಂದ ವಾಕ್ಕುತಾ । ಸಾನಂದ
ದಿಂದಲಿ ಪೇಳೋ ಯನ್ನಯ ಮ್ಯಾಲೆ ಕೋಪಾ
ಉನ್ನತವಾಗಿ ತಾಳಿ । ಇನ್ನಬಾರೆನೆಂತೆಂದನು ಹರಿಯೂ ೧

ನಾರದ ಮುನಿಯೆ ನೀ ಸಾರಿ ಪೇಳಿದ್ಯೆ ಯಲ್ಲೊ
ನಾರಿ ರುಕ್ಮಿಣಿ ಭಾಳಾ ಬಳಾಲುವೋಳೆಂದು ೨

ನರಸಿಂಹ ವಿಠಲನ । ಕರತಾರೆಂದು ಹೋದಿ
ಕರತಾರದಾದಿ । ಅರುಹೋಯನ್ನೋಳು ನೀ ೩

## ವಚನ

ರುಕ್ಮಿಣೀ ಮಾತಿಗೆ ನಕ್ಕುನಾರದನು । ಠಕ್ಕು ಮಾತುಗಳಲ್ಲಿ
ಉಚ್ಚರಿಸಿದನಾಗೆ । ಚಕ್ರಧರತಮ್ಮ ತಕ್ಕ ಸತಿಯೇರು
ಇಹರೂ । ಚಕ್ಕಂದ ವಾಡುತಾ । ನಕ್ಕು ಕೈ ಹೊಡಿಯುತಾ
ಪಟ್ಟ ಮಂಚದಿಮ್ಯಾಲೆ ಕೂತಿಹನು ಹರಿ ತಾನು,
ದೃಷ್ಟಿತೋರದೆ ಕೂತಿಹಾನು, ಹರಿಇಂತೆನಲು
ಪೇಳಲು ಕೇಳಿ ರುಕ್ಮಿಣಿಯು ಮತ್ತಿಂತೆಂದಳೂ

## ಹಾಡು

ಮುನಿ ಕೇಳನ್ನ ಮಾತಾ । ಸಜ್ಜನಪ್ರೀತಾ ಪ

ಮಾನವಿನ್ಯಾತಕೆ । ಶ್ರೀನಿಧಿಯೆಡೆಗೆ । ನಾನೆ ನಡದುಹೋಗಿ
ನಮಿಸಿ ಬೇಡುವೆನೋ ೧

ಹಿಂಡು ಜನರೊಳು । ಮಂಡೆ ಕುಗ್ಗಾಯಿತು ।
ಕೆಂಡ ಕಟ್ಟಿ ಪ್ರಾಣ ಹಿಂಡೂ ದಿನ ಹೂಡೋ ೨

ಪನ್ನಂಗ ಶಯನ ಶ್ರೀ ನರಸಿಂಹ ವಿಠಲನ್ನಾ
ಘಮ್ಮನೇ ಕರತಾರೋ । ಬೊಮ್ಮಾನ ಸುತನೇ ೩

## ವಚನ

ಹೀಗೆ ರುಕ್ಮಿಣಿ ನಾರದರೊಡನೆ ಹೇಳಲೂ ।
ನಾಗವೇಣಿಯ ಕೂಡನಗುತ ಮಾತಾಡಿದನು ।
ನೀನಾಗಿ ಹೋಗುವರೇನೆ ಸಾಗಿ । ಸವತಿಯಮನಿಗೆ ।
ಹೀಗೆ ಪೇಳಲು ಆಗ ಬ್ಯಾಗೆ ರುಕ್ಮಿಣಿ ತಾನು
ಈ ಗಡಗಂಟಕ ನಾರದ ಮುನಿಯೆ ನೀನಿಲ್ಲಿ
ಜಗಳ ಹಚ್ಚಲಿಯಲ್ಲಿ ಬಂದೆಯ । ಯೆಂದೆನುತ
ಕೊಂಡಿ ನಾರದನ್ವಾಕ್ಯ ಕಂಡದ್ದೆಯಲ್ಲಾ । ಮರಗೇರಿ
ಮಾರಿಯಾ ಕರದಂತೆ ಆಯಿತು । ಘೂಳಿಗೆ ಕಿಚ್ಚು
ತೋರಿದಂತಾಯಿತು । ಹೇಳಬಾರದು ನಾನು ಹೇಳಿದೆ
ನೆಂದೆನಲೂ । ತಾಳೆ ತಾಳೆ ನಿನ್ನ ಪತಿಯ ತೋರೂವೆನೆಂದೂ
ಸಾರಿನಡದನು ನಾರದನು ತಾನತ್ತ । ನಾರಿ ರುಕ್ಮಿಣಿಯು
ಸಖಿಒಡನೆ ಮತ್ತಿಂತೆಂದಳೂ ।

## ಹಾಡು

ಪ್ರಾಣಸಖೀ ವೇಣುನಾದನಾ । ಕಾಣಿಸೆಯೀಗಾ । ಕಾಣದೆ
ಪ್ರಾಣವು ನಿಲ್ಲದೆ । ಜಾಣೆ ಬ್ಯಾಗೆ ಹೋಗೆ ನೀ ಪ

ಸೋಲಸಾಸಿರ ನಾರೇರ ಬಿಟ್ಟಿರನೆಂದರೂ । ಚೇಳಿನ
ಬಾಧೆಯುತಾಳದೆ । ಶ್ರೀ ಲೋಲನ ಕರತಾರೆ ನೀ ೧

ಕೃಷ್ಣ ನಿಮ್ಮ ಪಟ್ಟದರಸಿ । ಕಷ್ಟವ ಪಡುವೋಳೋ ।
ತಟ್ಟನೆಸಾರಿಯೆಂದದಿಷ್ಟು । ಕೃಷ್ಣನ ಕರತಾರೆನೀ ೨

ಯಾಕೆ ಮುನಿದೆ ಶ್ರೀಪತಿಯೊಳು । ಲೋಕನಾಥ ಬಾರದೆ
ದೇವಾ । ಸಾಕು ಮಾಡುವನೆ ೩

ಯೆಂತು ಆದರು ಮಾಡಿ ಲಕ್ಷುಮಿ ಕಾಂತನಲ್ಲಿಗೆ
ಸಂತೋಷವಾದಂತೆ ಪೇಳಿ ಶ್ರೀಕಾಂತನ ಕರೆತಾರೆ ನೀ ೪

ಮಾರಜನಕ । ನಾರಿರುಕ್ಮಿಣಿ । ಸಾರಿವಂದಿಪಳೂ
ನಾರಸಿಂಹ ವಿಠಲಗೀಪರಿ । ನಾರಿಕರದು ತಾರೆನೀ ೫

## ವಚನ

ಯೀಪರಿಯಲಿ ನಾನು ಲೋಕನಾಯಕನೊಡನೆ । ಯಾಕೆ
ಮುನಿದೆನು ಯೆನುತಾ । ಆಕಿರುಕ್ಮಿಣಿ ಅನೇಕ ತೆರದಿ
ಬಳಲುತಲಿರಲು । ಆಗ ಸಖಿಯರು ಎಲ್ಲ ಮಾತಾಡಿದರಾ ।
ಯಾಕೆ ಬಳುಲುವಿ ನಿನ್ನ ನಾಥಾನಾ ಕರೆತರುವೇ ।
ಥಟ್ಟನೇ ಅಪ್ಪಣೆಯ ಕೊಟ್ಟರೇ ನೀನೀಗ
ಕೃಷ್ಣ ಮೂರುತಿಯ ಕರೆತಾರುವೆನೆಂದೆನಲೂ, ಸರ್ಪ
ವೇಣಿಯು ತಾನು ಅಳಿಗಪ್ಪಣೆಯ ನೀಡಿದಳು । ದರ್ಪದಿಂದಲಿ
ಸಖೀಯುಬರುತಿರಲು ಆಗಾ । ಕೃಷ್ಣ ಮೂರುತಿಯ
ಸತ್ಯಭಾಮಿಯ ಒಡನೆ ಮತ್ತೇನೆಂದನೂ ।

## ಹಾಡು

ನೋಡೆ ನೋಡೆ ಮಾತಾಡೆಸಖಿ ಪ

ಪಟ್ಟದರಸಿತಾ । ಕಳಿಸಿರ ಭೃತ್ಯಳಾ
ಥಟ್ಟನೇ ಬರುವೋ ದಾರಿಗಳ ಸಖಿ ೧

ಮಾಯಗಾರ ನಿನ್ನ ಮಾಯಗಳೆಲ್ಲವ
ಯಾರು ಬಲ್ಲರೋ ವಾರಿಜನೇತ್ರ ಸಾಕು
ಸಾಕು ಈ ವಾಕ್ಕು ಹರೇ ೨

ಚಿಕ್ಕ ರುಕ್ಮಿಣಿಗೆ ಮೆಚ್ಚಿನಾ ಹೋದರೆ ನಿಮ್ಮಕ್ಕ ಎನ್ನನೂ
ಲೆಕ್ಕಿಸಳೇ । ಸಖೀ ನೋಡೆ ನೋಡೆ ಮಾತಾಡೆ ಸಖೀ ೩

ಚೋರ ಕೃಷ್ಣನೇ ನೀನು ಚೇಳು ಕಚ್ಚಿಸಿ ಬಂದಿ
ಬಾಲೆ ಬಳಲುವೊಳೆ ಶ್ರೀ ಲೋಲನೇನಡಿನಡೀ ೬

ನರಸಿಂಹ ವಿಠಲನ ಕಾಣುತಲೇ । ಕೋಪಧರಿಸಿನಿಂತಳೇ ।
ಕೋಪಧರಿಸಿನಿಂತಳೇ । ಸರಸಿಜಮುಖಿ ೫

## ವಚನ

ಇಂತೆಂದು ಭಾಮೆ ಕಾಂತನಿಗೆ ಹೇಳುತಿರೆ । ಸಂತೋಷ
ದಿಂದಲಾ ಸತಿ ಪತಿಯರು ತಾವೂ । ಹಿತವಾಕ್ಯಗಳನು
ಆಡುತ್ತ ಕುಳಿತಿರಲು । ಮತಿವಂತೆ ರುಕ್ಮಿಣಿಯ ದಾಸಿಯ
ಬಂದೂ ಪತಿತಪಾವನ ಪಾದಕ್ಕೆ ಎರಗಿದಳೂ । ಬಾರಯ್ಯ
ರುಕ್ಮಿಣೀ ಬಳಲುತಿಪಳು । ನೀಲವರ್ಣನೇ ಜಾಲವನು ಮಾಡದೆ
ಚೋರಕೃಷ್ಣನೇ ನೀನು । ಚೇಳು ಕಚ್ಚಿಸಿ ಬಂದಿ । ಯೇಳು
ಯೇಳೆನುತಲಿ । ತೋಳುಗಳ ಪಿಡಿದೆಳೆಯೆ । ನೀಲವರ್ಣನು
ಮಾತಾಡಿದನಾಗೆ । ಮಂದಿರಕೆ ಬಂದರೆ ಮಾತನಾಡಳು ಆಕೆ
ಯೆಂದೆಂದಿಗೂ ಬಾರೆನೆಂದುಎನುತ । ಬಂದು ಪಾದಕೆ ಬಿದ್ದು
ಕರಿಯಲಾ ದಾಸಿಯರು । ಇಂದಿರೇಶನು ತಾನು ಚಂದ
ದಿಂದಲಿ ಆಗ । ಶೃಂಗಾರವಾಗಿ । ಪೀತಾಂಬರವನೆ ಉಟ್ಟು
ಕಂಜಲೋಚನ ತಾನು । ವಿಹಂಗವಾಹನನಾಗಿ । ಅಂಗನೆ
ರುಕ್ಮಿಣಿಯ ಮನಗೆ ಬಂದ ಬಗೆ ಮತ್ತೇನೆಂದರೆ ।

## ಹಾಡು

ನಡದು ಬಂದನು ನಾರಾಯಣನು । ಮಡದಿ ರುಕ್ಮಿಣಿ ಮನಿಗೆ ಪ

ಗಂಧ ಪುಷ್ಪ ಮಂದಾರ ಮಲ್ಲಿಗೀ ಹಾರ । ಇಂದಿರ
ಧರ ಅರವಿಂದ
ಲೋಚನ ಸುಂದರಾ । ವರಮಂದಾರ । ಗಿರಿಧಾರ ।
ನಂದ ನಂದನ
ಮುನಿವೃಂದಸದನ । ಮುಚುಕುಂದವರದತಾ । ವಿಹಂಗವಾಹನ ೧

ನೀಲ ಪಟ್ಟವಾಳಿಯನುಟ್ಟು । ಬೊಟ್ಟು ಮುತ್ತನೆ ಕಟ್ಟಿ
ಕೃಷ್ಣ ಮೂರುತಿ । ನಿಖಿಳವೇದ ಶೀಲಾ । ಯಶೋದಿಯಬಾಲಾ
ಸಾಧು ಸಜ್ಜನಪಾಲಾ । ವರತುಳಸಿಯ ಮಾಲಾ । ಬಾಲರೂಪದಿ
ಬಾಲ ಲೀಲೆಯತೋರಿದೆ । ಲೋಲನಯನ ಕರುಣಾಲ ೨

ಬಂದ ಕರುಣ ಅಪಾರ ಮಹಿಮಹರಿ । ಹಾರ ಪದಕ ಕಿರೀಟ
ಕುಂಡಲಿಧಾರೀ । ವರಪೀತಾಂಬರಧಾರೀ । ಮಾರಜನಕ ಶ್ರೀ
ನರಸಿಂಹ ವಿಠಲ ತಾ । ಧೀರ ಗಂಭೀರ ಶೂರತಾ ೩

## ವಚನ

ಹರಿ ಬರುತಿರಲು ಮಾರ್ಗದಲಿ ಸಖಿಯೇರೂ ।
ಅಂಗಳಾ ತೊಳೆದೂ
ರಂಗ ವಾಲಿಗಳ್ಹಾಕಿ । ಮಂಗಳಾರುತಿಗಳನೇ ತಂದು ಬೆಳಗುತ
ಲಿಹ್ಯಾರು । ಮಂಗಳಾತ್ಮಕನು ಮಂದಿರಕೆ ಬಂದೂ । ಅಂಗಳಾ
ದೊಳಗೆ ಚೆಂದದಲಿ ಬಳಲುತಿಹ । ಮಂಗಳಾ ಮುಖಿಯನೆ
ನೋಡಿದನು ಕರುಣದಲಿ । ನೀಲ ಲೋಚನ ತನ್ನ ಮಂದಿರಕೆ
ಬಂದು । ಶೃಂಗಾರದಾ ಮಂಚದಲ್ಲಿ । ಪವಡಿಸಿದನೂ । ಕೃಷ್ಣನು
ಕಾಣುತಲೆ । ಕಷ್ಟವೆಲ್ಲವೂ ಹೋಗಿ । ಮುತ್ತಿನಾಗದ್ದಿಗಿ
ಬಳಿ ರುಕ್ಮಿಣೀ ತಾನು । ಪಟ್ಟವಾಳಿಯನುಟ್ಟು । ಬೊಟ್ಟುಮುತ್ತನೆ
ಕಟ್ಟಿ । ಕೃಷ್ಣಮೂರ್ತಿಬಳಿಗೆ ಬಂದ ಬಗಿ ಮತ್ತೇನೆಂದರೆ ।

## ಹಾಡು

ಬಂದಳು ಅಂಗನೆ ರಂಗನ ಮಂದಿರಕೆ । ಅಂಬುಜಾಕ್ಷಿನ
ನೋಡುತ ನಗುತಾ ಪ

ಹಂಸಾದಂತೆ ನಡಿಯು । ನುಡಿಯು ಕೋಕಿಲದಂತೆ ।
ನಡುವು ಸಿಂಹದಂತೆ ನಡೆದಳು ಬಾಲೆ ೧

ಬಡನಡು ಬಳು ಕುತ್ತ । ಮುಡಿಯ ನ್ಯಾವಲಿಸುತ್ತ ।
ಮುಡಿದ ಮಲ್ಲಿಗೆಯು, ಅಡಿ ಅಡಿಗುದುರುತ್ತ ೨

ಕುಂಕುಮತಿದ್ದುತ್ತಾ । ವಂಕಿಯ ತಿರುವುತ್ತ
ಬಿಂಕವು ತೋರುತ್ತಾ । ಕಾಂತನ ಬಳಿಗೇ ೩

ಹಾರವು ತಿರುವುತ್ತಾ । ವಯ್ಯರವ ತೋರುತ್ತಾ
ವಾರೆ ನೋಟದಿ ನೋಡುತ್ತ ನಗುತಾ ೪

ಮೆಲ್ಲ ಮೆಲ್ಲನೆ ಹೆಜ್ಜೆ ಹಾಕುತ್ತ । ನಡುಗುತ್ತ
ಫುಲ್ಲ ಲೋಚನ ನರಸಿಂಹವಿಠಲನ ಬಳಿಗೆ ೫

## ವಚನ

ಈ ರೀತಿಯಿಂದ ರುಕ್ಮಿಣಿ ತಾನು ಬಂದೂ । ಶ್ರೀಲೋಲನಾ
ಮಂಚದಲ್ಲೆ ಒಪ್ಪಿರಲಾಗೇ । ನೀಲವರ್ಣನು ತಾನು ಶಾಲು
ಮುಸುಗಿಟ್ಟಿಹ್ಯಾನೂ + ಲೋಲಲೋಚನೆ ವಡನೆ । ಮಾತಾಡಿ
ದಿರಲೂ । ನೀಲಕುಂತಳಿ ತಾನು । ಶಾಲುಗಳಪಿಡಿದು
ಮತ್ತಿಂತೆಂದಳೂ ।

## ಹಾಡು

ಏಕೆನ್ನ ಕಾಂತಾ । ಯೆನ್ನೊಳಿಂತಾ । ಪಂಥ ಅನಂತಾ ಪ

ನಿಂತು ಬೇಡುವೆ ಪಾಲಿಸೋ । ಅನಂತಾ ಶ್ರೀಮಂತಾ ಅ.ಪ

ನಾರಿ ಅಪರಾಧ ಕ್ಷಮಿಸೋ । ವಾರಿಜನೇತ್ರ । ಸಾರಿ
ವಂದಿಸುವೆ ದಯಾತೋರೋಸುಗಾತ್ರಾ ೧

ಸಿಟ್ಟಿನಿಂದಲೇ । ಕಟ್ಟ ವೃಶ್ಚಿಕಾ । ವೂರಿದೋ ಹರಿ
ಆರಿಗೆಯಿಡಾಲಿ ಮೊರೀ । ಕರಸಿದೇ ಹರಿ ೨

ಮಡದಿಯೆಂಬೋ ಕರುಣವಿಲ್ಲದೆ । ಕಡಿಸುವರೇನೋ
ಕಡುದಯಾ ಸಾಗರಾ । ನರಸಿಂಹವಿಠಲನೇ ೩

## ವಚನ

ನಾರಿರುಕ್ಮಿಣಿ ಹರಿಗೆ । ಸಾರಿ ಸಾರಿವಂದಿಸುತಾ । ಅಪಾರ
ಮಹಿಮನೇ ಎನ್ನ । ದೂರ ಪರಿನೋಡುವರೇ ।
ನೀರ ಜೋದ್ಭವ
ಉದ್ಧಾರ ಮಾಡೆನುತೆನಲೂ । ನಾರಿ ರುಕ್ಮಿಣಿ ಒಡನೆ ।
ನಾರಾಯಣನು ಮತ್ತಿಂತೆಂದನೂ ।

## ಹಾಡು

ಸಾಕು ಸಾಕೇ ನಿನ್ನ । ಸರಸವು ರುಕ್ಮಿಣಿ । ನೀತಿ ತಪ್ಪಿದ
ಮ್ಯಾಲೆ ಇನ್ಯಾತರನೆ ಪ

ಇಚ್ಛೆಯಿಂದಲಿ ನಾನು । ಮೆಚ್ಚ ಬಂದರೆ ನೀನೂ
ಮುಚ್ಚಿನೇತ್ರಗಳೂ । ವಿಚಿತ್ರ ಮಾಡಿದಿಯೇ ೧

ಫುಲ್ಲಲೋಚನಿಯೇ । ನೀನಿಲ್ಲಿಗೆ ಬಾಹೊರೆ
ಗೊಲ್ಲರ ಮಗನಾನು । ಇಲ್ಲಿ ಕೆಲಸವೇನು ೨

ತಟ್ಟನೆ ಸಾರೆ ನೀ । ಮುಟ್ಟದೆಯಾರೇ
ಕೆಟ್ಟತಪ್ಪುಗಳನ್ನು । ಹತ್ಯಾವೆನೀರೇ ೩

ಯೆತ್ತಿನೀ ಚಾಮರಾ । ಯೆತ್ತಿನೀ ಬೀಸಿದರೆ
ಒತ್ತು ವರ್‍ಯಾರೇ ನಿನ್ನ । ರಟ್ಟೆಯು ನೊಂದರೆ ೪

ರಂಭೆಯೆ ನೀ ಯೆನ್ನಾ । ಮಂಚವು ಏರಿದರೆ ।
ಕಾಮತ ನರಸಿಂಹ । ವಿಠಲನೋಡುವನೇ ೫

## ವಚನ

ಇಂತೆಂದು ಹರಿತಾನು । ಪಂಥವನು ಆಡಲು ಕಾಂತೆ ರುಕ್ಮಿಣಿ
ತಾನು ಹೀಗೆ ಮಾತಾಡಿದಳೂ । ಕಂತುಜನಕನೆ ಯನಗೆ
ಇಂತು ಪರಿಮಾಡುವರೆ । ಬೆಂಕಿಯಂದದಿ ಚೇಳನೂರಿ
ಸಿದಿರಿಯಿಂತೆಂದು । ಕಾಂತೆ ರುಕ್ಮಿಣಿಯು ಮತ್ತಿಂತೆಂದಳೂ ।

## ಹಾಡು

ಸಾಕು ಸಾಕು ಹರಿಯೇ । ಯಾತಕ್ಕಿಂಥ ಪಂಥ ಧೊರಿಯೇ ಪ

ಲೋಕನಾಥ ಯನ್ನೊಳಗೆ । ಯಾಕೆಕೋಪವಿನ್ನು ಬ್ಯಾಗೆ ಅ.ಪ

ಕಾಂತ ನೀನುಯನ್ನೊಳಗೆ । ಯಿಂತುಪರಿಮಾಳ್ಪರೇ ।
ಬೆಂಕಿ ಯಂಥ ದೇಹವೀಗಾ । ಕಂಪಹುಟ್ಟಿ ಬಾಡಿತ್ತೀಗ ೧

ಯೆಷ್ಟು ಕಷ್ಟ ಪಟ್ಟೆ ನಾನು । ಕೆಟ್ಟ ಚೇಳನೂರಿದೀ ।
ಪಟ್ಟದರಿಸಿ ಯೊಳಗೇ । ಹುಟ್ಟಲಿಲ್ಲ ದಯ ನಿನಗೆ ೨

ನಾನು ಮಾಡಿದಾಪರಾಧ । ನೀನು ಕ್ಷಮಿ ಸದಿದ್ದರೇ ।
ನಾರಸಿಂಹ ವಿಠಲನೇ । ನಾರಿಯಳನೆ ಪಾಲಿಸೋ ೩

## ವಚನ

ಮುದದಿಂದೆ ರುಕ್ಮಿಣಿಯ । ಮನ್ನಿಸಲು ಹರಿ ತಾನು । ಮದನ
ಜನಕನು ತಾನು ಮಾಡಿದಪರಾಧಾ । ಪದುಮಲೋಚನೆ
ನೀನು ವಿಧವಿಧದಲ್ಲಿ ಕರಿಯಲು । ಮೊದಲು ಯನ್ನ ಮಾತಾಡಿಸ
ಲಿಲ್ಲಾ । ಮೊದಲು ಮಾಡಿದ ನಿನ್ನ । ಮದವೆಲ್ಲ
ಹೋಯಿತೂ ಎಂದೂ
ಮದನ ಜನಕನು ತಾನು ಮಾತನಾಡಿದನು । ಮತ್ತೇನೆಂದರೇ ।

## ಹಾಡು

ಸಾಕು ಸಾಕು ನಿನ್ನ । ಸಾವಾಸವು ಯಿನ್ಯಾತಕೆ ರುಕ್ಮಿಣೀಯೇ
ಆತುರದಲಿ । ಬಂದರೆ ಯನ್ನಾ । ಮಾತನಾಡಿಸಲಿಲ್ಲೇ ಪ

ಬಾರೆಂದು ಕರವನ್ನು ಪಿಡಿದರೇ ನೀನೂ । ಮಾರಿತೋರಲಿಲ್ಲೇ ।
ನೀರಜ ಮುಖಿ ನೀನಿ । ಮಾರಿಯತೋರದೆ । ದೂರನಿಂತಿಲ್ಲೇ ೧

ಒಲ್ಲೆನೆಂದು ನಾನಲ್ಲಿಗೆ ಹೋದರೆ । ನಿಲ್ಲದೆ ಕರೆಸಿದೆಯೇ ।
ಪುಲ್ಲಲೋಚನೆ ನೀ । ನಿಲ್ಲಿಗೆ ಕರೆಸಿದೆಲ್ಲ ಪೇಳೆನಗೇ ೨

ಸತಿಯೆಂಬ ಸಲಿಗಲಿ । ಕರವನ್ನು ಹಿಡಿದರೆ ।
ಹಿತವು ತೋರಲಿಲ್ಲೇ ।
ಪತಿತ ಪಾವನ ಶ್ರೀ ನರಸಿಂಹ ವಿಠಲನ । ಸತಿಯು ಸಲ್ಲೆಸಾರೆ ೩

## ವಚನ

ಹರಿಯು ಆಡಿದ ಮಾತು, ಹರದಿ ರುಕ್ಮಿಣಿ ಕೇಳಿ
ಥರ ಥರನೆ ನಡುಗುತಲಿ । ನುಡಿದಳಾ ಹರಿಯೊಡನೆ ।
ಕರುಣಾಕರಯನ್ನ । ಕರುಣಿಸೊ ಎಂದೆನುತಾ ।
ಚರಣದಲಿ ಬಿದ್ದು ಮತ್ತಿಂತೆಂದಳೂ ।

## ಹಾಡು

ಸಾರಿ ಸಾರಿಯೀಪರಿ ನುಡಿಯಲು । ನಿನಗ್ಯಾರು ಪೇಳಿದರೋ
ಕೃಷ್ಣಾ । ನಿನಗ್ಯಾರು ಪೇಳಿದರೋ ಕೃಷ್ಣಾ ಪ

ನಾರಿ ಮಣಿಯೆ ನಿನ್ನ ಗಾರುಡಿಯ ವಯ್ಯಾರವು
ಹೇಳಿಕೆ ನೀರೇ । ವಯ್ಯಾರವು ಹೇಳಿತೆ ನೀರೇ ೧

ಮಾಯಗಾರ ನಿನ್ನ ಮಾಯಗಳೆಲ್ಲ ಯಾರು ಬಲ್ಲರೊ ।
ಕೃಷ್ಣಾ । ಮತ್ಯಾರು ಬಲ್ಲರೋ ಕೃಷ್ಣಾ ೨

ಮಾಯಾ ಮಾಡಿ ಎನ್ನ ಕಳಿಸಿದ ರುಕ್ಮಿಣಿ ।
ಮರುಳೆ ಕರಸಿದಿಯಾಕೆ
ನೀಮರುಳೆ ಕರಸಿದಿ ಯಾಕೆ ೩

ಚೇಳಿನ ಬಾಧೆಯು ತಾಳಲಾರೆ ನಾ । ತಾಳದೆಕರೆ ಸಿದೆನಾ ।
ಯೀ ವ್ಯಾಳದಿ ಕರೆಸಿದೆ ನಿನ್ನಾ ೪

ಒಲ್ಲೆನೆಂದರೆ ವಾಲಿಯ ಬರೆದು । ಯಿದ್ದಲ್ಲಿಗೆ ಕರಸಿದೆಯಾಕೆ
ನೀ ಅಲ್ಲಿಗೆ ಕರೆಸಿದಿಯಾಕೆ ೫

ಕರುಣಾಕರ ಎನ್ನ ಕರುಣಿಸೋ ಯೆನುತಲಿ । ಚರಣಕ್ಕೆ
ಎರಗಿದಳಾಗ । ಸತಿ ಚರಣಕ್ಕೆ ಎರಗಿದಳಾಗಾ ೬

ಪತಿತ ಪಾವನ ತನ್ನ ಸತಿಯನ್ನೆ ಬಿಗಿದಪ್ಪಿ
ಸುಖವನ್ನೆ ಸುರಸಿದಾ
ತಾರತಿ ಸುಖವನ್ನೆ ಬಡಿಸಿಧಾ ೭

ಗಂಧ ಪುಷ್ಪದಿಗೋವಿಂದನರಮಿಶ್ಯಾನಂದ ಪಡೆದಳು ತಾನಾಗ
ಆನಂದ ಪಡೆದಳು ತಾನಾಗಾ ೮

ಭಾಳ ಕಷ್ಟ ನಿನ್ನ ಪಡಿಸಿದೆ ರುಕ್ಮಿಣಿ । ಬಾಡಿತೆ ನಿನ್ನ ಮುಖವೆಂದಾ
ಹರಿ ಬಾಡಿತೆ ನಿನ್ನ ಮುಖವೆಂದಾ ೯

ಅಷ್ಟಾಪರಾಧವ ಮಾಡಿದೆ ಎನ್ನೊಳು ಸಿಟ್ಟಿಡದಿರು ಮನದಲ್ಲಿ
ಹರಿಸಿಟ್ಟಿಡದಿರು ಮನದಲ್ಲಿ ೧೦

ಸರಸ ವಾಡುತ ಸತಿವಡನೆ ಪಡೆದನು
ನರಸಿಂಹವಿಠಲ ತಾನೂ ।
ಆನಂದನರ ಸಿಂಹ ವಿಠಲ ತಾನೂ ೧೧

## ವಚನ

ಯೀರೀತಿಯಿಂದ ಹರಿಯು । ನಾರಿರುಕ್ಮಿಣಿ ಒಡನೆ
ದ್ವಾರಕಾ ಪುರದಲ್ಲಿ ಅಪಾರ ಹರುಷದಲ್ಲಿರಲು । ನಾರೇರ
ಒಡನೇ । ನಲಿದಾಡುವೋ । ಹರಿ ಕಥೆಯಾ ।
ಯಾರು ಪೇಳುವೋರ
ನರಘೋರತಾಪವು ಪರಿಹಾರವಾಗುವೋದೂ । ಬಾಲಕನ
ಪಡದತಿ । ಭೋಗವನ್ನೈದುವರೂ । ಶ್ರೀ ಲೋಲನರಸಿಂಹ
ವಿಠಲನ । ಪದವಿಗಳನೇ ತಾನೇ ಬಾಹೋದು ।

## ಮಂಗಳ

ಮಂಗಳ ಮಾನದ ಹರಿಗೆ । ಅಂಗನೆ ರುಕ್ಮಿಣಿ ದೇವಿಗೆ ಪ

ದಂಪತಿಗಳನಾ । ಮಂಚದಿಕುಳ್ಳಿರಿಸಿ ।
ಮಂಟಪದಾರುತಿ ಬೆಳಗೇ ೧

ಭೀಷ್ಮಕನಾ ಸುತೆಗೇ ।ಹರುಷದಲಾರುತಿ ಬೆಳಗೀ ೨

## ೭

## ಸ್ವರ್ಣಗೌರಿ ಕಥೆ

ಪಾರ್ವತಿ ಪತಿ ನಿನ್ನ ಪಾದಕ್ಕೆರಗುವೆನು
ಪರಮ ಹರುಷದಲಿ ಬೇಡಿಕೊಂಬೆ ಪ

ಧರೆಯೊಳಗೆ ಉತ್ತಮ ಸ್ವರ್ಣಗೌರಿ ಕಥೆಯೆನಗೆ
ಕರುಣದಿಂದಲಿ ಪಾಲಿಸುವುದು ಅ.ಪ

ಸ್ಕಂದ ಮೂರುತಿ ತಾನು ಬಂದು ಪರಮೇಶ್ವರನಿಗೆ
ವಂದಿಸಿ ಕೈ ಮುಗಿದು ಮುಂದೆ ನಿಂತು

ಚೆಂದವಾದ ವ್ರತವು ಇನ್ನೊಂದು ಪೇಳಿರಿ ಎಂದು
ತಂದೆ ಮುಂದೆ ನುಡಿದನಾಗ ೧

ಸುತನ ವಾಕ್ಯವ ಕೇಳಿ ಅತಿ ಹರುಷದಿಂದಲಿ
ನಸುನಗುತ ಶಿವನು ತಾನು ನುಡಿದನಾಗ
ಪೃಥ್ವಿಯೊಳಗೆ ಅತಿ ಶ್ರೇಷ್ಠವಾದ ಕಥೆಯ
ಪೇಳುವೆನು ಕೇಳೆಂದನು ೨

ಶ್ರೇಷ್ಠವಾದ ಸರಸ್ವತಿ ನದಿ ತೀರದಿ ವಿಮಲಾಖ್ಯ
ಪಟ್ಟಣದಿ ದೊಡ್ಡಧೊರಿ ಇರುತಿದ್ದನು
ಜ್ಯೇಷ್ಠ ಹೆಂಡತಿಯಲ್ಲಿ ಇಷ್ಟದಿಂದಿರುತಲಿ । ಕ
ನಿಷ್ಟ ಹೆಂಡತಿಯನ್ನು ಬಿಟ್ಟಿದ್ದನು ೩

ಚಂದ್ರಪ್ರಭುರಾಜ ಒಂದು ದಿನದಿ ಬ್ಯಾಟಿಗೆ ಬಂದನು ।
ಆನಂದಿಯ ತೀರದಲಿ
ಚೆಂದಾದವ್ರತವನ್ನು ಮಂದಿ ಮಕ್ಕಳ ಕೂಡಿ
ಮಾಡುವುದನ್ನು ನೋಡಿದನು ೪

ಮಾನಿನಿಯರೆ ಪೇಳಿ ಏನು ವ್ರತವು ಇದು
ನಾನು ಮಾಡುವೆನು ಹೇಳಿರೆನಗೆ
ಧ್ಯಾನಿಸಿ ಇದರ ವಿಧಾನ ಪೇಳಿದರೆ
ನೇಮದಿಂದಲಿ ಮಾಡುವೆನೆಂದನು ೫

ಕನ್ನೀಕೆಯರು ಮನ್ನಿಸಿರಾಜನಿಗೆ ।
ಸ್ವರ್ಣಗೌರೀ ವ್ರತವನು ಪೇಳಿದರು
ನಿರ್ಮಲ ಚಿತ್ತದಲಿ ಪೂಜೆಯ ಮಾಡಿ
ಸ್ವರ್ಣಗೌರೀದಾರ ಕೊಟ್ಟರಾಗ ೬

ಘನ ಹರುಷದಿಂದಲಿ ಮನೆಗೆ ತಾ ಬಂದು । ಮಹದೇವಿಯ
ಕೂಡಿ ಹರುಷದಿಂದಿರಲು । ಘನವಾದ
ದಾರವನು ನೋಡಿದಳು ೭

ದೃಷ್ಟಿಸಿ ನೋಡಿದಳು । ಸಿಟ್ಟಿಲಿ,ದಾರವನು । ಕಟ್ಟಿದವರಾರು
ನಿನಗೆ ಮತ್ತಲ್ಲಿ
ಥಟ್ಟನೆ ಹರದು ಸುಟ್ಟು ಬಿಡುವೆನೆಂದು । ಥಟ್ಟನೆ
ಗಿಡದ ಮ್ಯಾಲೊಗೆದಳು ೮

ಬಾಡಿದ ಗಿಡವು ಚಿಗುರಿತು ಫಲವಾಯ್ತು
ನೋಡಿದಳೆ ಚಿಕ್ಕ ಹೆಂಡತಿಯ
ದಾರವ ತೆಗೆದು ಕೊಂಡಳು ತಾನು । ಸತ್ಯವಂತಳುಗೌರಿ
ಸಮರಿಲ್ಲವೆನುತಲಿ ೯

ಭಕ್ತಿಯಿಂದಲಿ ಪೂಜೆ ಮಾಡಿದಳು । ಎತ್ತಿ ಮಂಗಳಾರತಿಯ
ಮಂತ್ರಾಕ್ಷತೆಯನ್ನೆ ಹಾಕಿ । ಥಟ್ಟನೆ ದಾರವ ಕಟ್ಟಿಕೊಂಡಾಳು ೧೦

ಕೆಟ್ಟ ಮಾತುಗಳನ್ನು ಕೇಳುತಲಿ ರಾಜನು । ಸಿಟ್ಟಾಗಿ
ಸತಿಯ ಮ್ಯಾಲೆ ಸಿಡಲು
ಬಿದ್ದು 'ಭ್ರಷ್ಟ' 'ಛಿ' ಎಂದು ಘಟ್ಯಾಗಿ ನುಡಿಯಲು
ಕಟ್ಟಿತುದ್ರೋಹವು ಸೆರಗಿನಲ್ಲಿ ೧೧

ಪಟ್ಟದರಸಿಗೆ ನೆಟ್ಟಿತು ಮಾತು । ಬಿಟ್ಟನು ಸತಿಯನು ಬ್ಯಾಗ ।
ಥಟ್ಟನೆ ಚಿಕ್ಕಸತಿಯೊಳಕೂಡಿ । ಅತ್ಯಂತ ಹರುಷದಲಿ ಇದ್ದರಾಗ ೧೨

ಇತ್ತಳಾ ಮಹದೇವಿ । ಹತ್ತಿದಳಡವಿಯನ್ನು । ಕತ್ತಲಾ
ಬೆಳಕನ್ನು ಕಾಣದಂತೆ
ತತ್ತರವಾಗುತ್ತ ಸುತ್ತಲು ನೋಡುತ್ತ ।
ಚಿತ್ತಭ್ರಮಿಸಿದಂತೆ ತಿರುಗುವಳಾ ೧೩

ಅಡವಿ ಅಡವಿ ತಿರುಗುತ್ತ । ಗಿಡಗಳನ್ನು ಕೇಳುತ್ತ ।
ನಡದು ಬಂದಳು
ಋಷಿಗಳಿದ್ದಲ್ಲಿಗೆ । ಕಡೆಹಾಯಿಸೀರೆಂದು ಅಡಿಗಳಿಗೆರಗಲು
'ನಡೆ' 'ನಡೆ' ಎಂದು ಬೈದರಾಗ ೧೪

ತೋಳವೆರಡು ಕಂಡಳು ಕೋಮಲಾಂಗಿ ।
ತಾನು ಕಳವಳಗೊಳ್ಳುತ್ತ
ಅಡವಿಗಜ, ಸಿಂಹ, ವ್ಯಾಘ್ರಗಳನೆ ನೋಡುತ್ತ ।
ಗಡಗಡನಡುಗಿದಳು ಮನದೊಳಗೆ ೧೫

ಕಂಡಲ್ಲಿ ತಿರುಗುತ್ತ । ಕಳವಳಗೊಳ್ಳುತ್ತ । ಕಂಡಳು
ಗಣಪತಿಯ ಕಾಡಿನಲ್ಲಿ
ಚೆಂದಾಗಿ ಹಸಿವೆ ಕೃಪೆಯಿಂದ ಬಳಲುತ್ತ
ಕಂಡಳೊಬ್ಬಳು ನಾಗ ಕನ್ನಿಕೆಯನ್ನು ೧೬

ಪತಿಯದಾರಕ್ಕೆ ಅವಮಾನ ಮಾಡಿದೆನು ।
ಈ ಗತಿಯಾಯಿತೆಂದು ತಿಳಿದಳಾಗ
ತಪ ಮಾಡಿ ಗೌರಿಯ ಕೃಪೆಯ ಪಡೆವೆನೆಂದು ।
ಅತಿ ತೀವ್ರದಿಂದಲಿ ಮಾಡಿದಳು ೧೭

ನಂದಿ ವಾಹನ ನರಸಿ । ಚಂದ್ರಶೇಖರನ ಮಡದಿ ।
ಸ್ವರ್ಣಗೌರಿಯೆ ಮಹತಾಯಿ
ಇಂದು ನನ್ನಪರಾಧ ಕ್ಷಮಿಸ ಬೇಕೆನುತಲಿ ।
ಕಂಗಳ ಮುಚ್ಚಿ ಕೈಮುಗಿದಳು ೧೮

ಸ್ವರ್ಣಗೌರೀದೇವಿ ಕರುಣಿಸಿ ಎನ್ನನು ಕಾಪಾಡೆ ನೀ ಹರಿಣಾಕ್ಷಿ ।
ದಾರಕ್ಕೆ ಮಾಡಿದ ಅಪರಾಧಗಳ ಮನ್ನಿಸೆ ಚರಣದಲಿ
ಬಿದ್ದು ಬೇಡಿದಳು ೧೯

ಅಷ್ಟ ಭುಜಗಳಿಂದ ಅಪ್ಪಿದಳು ಆಕೆಯನು
ಪ್ರತ್ಯಕ್ಷಳಾದಳು ಶ್ರೀ ಗೌರಿಯು
ಕಷ್ಟ ವೆಲ್ಲವು ಕಳೆದು ಅಷ್ಟ ಸೌಭಾಗ್ಯವನು ।
ಕೊಟ್ಟು ಅಂತರ್ಧಾನವಾದಳು ೨೦

ಪಟ್ಟದರಸನ ಕೂಡಿ । ಪಟ್ಟಣಕೆ ಹೋಗಿ ।
ಶ್ರೇಷ್ಠಗೌರಿಯ ಪೂಜೆ ಮಾಡಿದಳು
ಅಕ್ಕ ತಂಗೇರು ಕಟ್ಟಿದಾರವನ್ನು । ಅಷ್ಟಸೌಭಾಗ್ಯವ ಪಡೆದರಾಗ ೨೧

ಹತ್ತಾರು ವರ್ಷ ಮತ್ತೆ ಪೂಜೆಯ ಮಾಡಿ ।
ದಂಪತಿಗಳಿಂದ ಕೂಡಿ
ಹತ್ತಾರು ಎಳೆಗೆ ಮುಡಿಯನೆ ಹಾಕಿ । ಮತ್ತೆ ಕೈಗೆದಾರ ಕಟ್ಟಿದರು ೨೨

ಭಕ್ಷ್ಯ ಪಾಯಸದಿಂದ ಲಕ್ಷ ಭೋಜನ ಆ ಕ್ಷಣ ಮಾಡಿದರು
ಲಕ್ಷ ಕೋಟಿ ದ್ರವ್ಯ ಕೊಟ್ಟು ವಿಪ್ರರಿಗೆ । ಅಕ್ಷಯ
ಫಲವನ್ನು ಹೊಂದಿದರು ೨೩

ಸ್ವರ್ಣಗೌರಿಯ ಪೂಜೆ । ಮಾನವರು ಮಾಡಿದರೆ
ಧನ್ಯರಾಗುವರು ಜಗದೊಳಗೆ ।
ಘನ್ನ ಮಹಿಮಳು ಅವರ ಮನೆಯೊಳಿದ್ದು
ಉನ್ನತ ಐಶ್ವರ್ಯ ಕೊಡುತಿಹಳು ೨೪

ಎಷ್ಟು ಹೇಳಿದರು । ಮತ್ತಷ್ಟು ಇರುವುದು ಈ ಕಥೆಯು
ಶಕ್ತಿಯಿರುವಷ್ಟು ಹೇಳಿದೆನು । ಧಿಟ್ಟ ಶ್ರೀ ನರಸಿಂಹ
ವಿಠಲರಾಯನು ಕೊಟ್ಟು ಸಮರ್ಥನು ತಾ ಸಲಹುವನು ೨೫

೮

## ಶ್ರೀ ಸತ್ಯನಾರಾಯಣ ಕಥಾ

### ಒಂದನೆಯ ಅಧ್ಯಾಯ

ಪಾರ್ವತಿಸುತ ನಿನ್ನ ಪಾದಕ್ಕೆರಗುವೆನು
ಪರಮಾತ್ಮನ ಕಥೆ ಪೇಳಿನ್ನು
ಭುವನದೊಳಗೆ ಪವಿತ್ರವಾದ ಕಥೆ
ಮನದೊಳಗು ಉಚ್ಚರಿಸೆಂದು
ಭಾರತಿಪತಿ ಪಾದಕ್ಕೆರಗಿ । ಲಕ್ಷ್ಮಿನಾರಾಯಣನ ಕಥಿ ಪೇಳ್ವೆ
ಘೋರ ದುರಿತ ಪರಿಹಾರವಾಗಿ । ಅಪಾರ
ಸುಖವ ಕೊಡುವೋದೂ ೧

ವಂದಿಸುವೆನು ಗೋವಿಂದ ಚರಣಕ್ಕೆ ।
ಚಂದದಿ ಕಥಿ ಪೇಳೆನುತ
ಅಂದು ಮುನಿನಾರದನು ಚರಣಕ್ಕೆ ವಂದಿಸಿ
ವರವ ಬೇಡಿದನು ೨

ನೈಮಿಶಾರಣ್ಯದಿ । ಶೌನಕ ಮುನಿಗಳು । ಅನೇಕ
ಪುರಾಣ ಕಥಿಯು
ತತ್ವಸಾರವನ್ನು ವಿಸ್ತಾರ ಮಾಡುತ್ತ । ಭಕ್ತಿಲಿ ಇರುತಿದ್ದರಾಗ ೩

ಒಂದು ದಿವಸದಲ್ಲಿ ಶೌನಕ ಮುನಿಗಳು । ಬಂದು
ಸುತರಿಗೆ ಕೈಮುಗಿದು
ಸುಂದರವಾದ ಗೋವಿಂದನ್ನ ಚರಿತೆಯ ।
ಮತ್ತೊಂದು ನಮಗೆ ಹೇಳಿರೆಂದು ೪

ಸುಜ್ಞಾನರೆ ನಿಮಗಿದು ಯೋಗ್ಯದ ಪ್ರಶ್ನೆ ಇದು ।
ಅನರ್ಘ್ಯವಾದ ಕಥಿಯನ್ನು
ಅನಘ್ಯ ರಹಿತ ಅಪವರ್ಗನ ಮಹಿಮೆಯನು,
ಶ್ಲಾಘ್ಯವಾಗಿ ಹೇಳುವೆನು ೫

ಶಂಖು ಚಕ್ರಗದ ಪದ್ಮಶ್ರೀವತ್ಸ । ಅಂಕಿತವಾಗಿ ಇರುತಿಹನು
ಶಂಕರ ವಂದಿತ ಪಂಕಜಾಕ್ಷನ ಪಾದ ।
ಪಂಕಜಗಳಿಗೊಂದಿಸುತ್ತ ೬

ಒಂದು ದಿವಸ ನಾರದ ಮುನಿಯುತಾನು । ಬಂದನು
ಹರಿಯ ಮಂದಿರಕ್ಕೆ
ಮುಂದೆ ನಿಂತು ತಲೆಬಾಗಿಸಿ ಕೈಮುಗಿದು
ಒಂದು ವರವ ಬೇಡಿದನು ೭

ಮರ್ತ್ಯ ಲೋಕದಲ್ಲಿ ಜನವ್ಯರ್ಥವಾಗಿ । ಸಾರ್ಥಕವಿಲ್ಲದೆ ಕೆಡುತಿಹರು
ಚಿತ್ತೈಸ ಬೇಕೆನಗೊಂದುಪಾಯವು ।
ಪ್ರಾರ್ಥನೆಗಳನೆ ಮಾಡಿದನು ೮

ಯಾಕೊ ನಿನಗೆ ವತ್ಸಬೇಕಾದಷ್ಟುದಯ ।
ಭೂಲೋಕದವರಿ ಗೋಸ್ಕರವಾಗಿ
ವಾಕ್ಯದಿಂದೊಂದು ವ್ರತವ ಪೇಳುವೆನು ।
ವಿವೇಕ ಬುದ್ಧಿಯಲಿ ಕೇಳೆಂದ ೯

ಸಿಂಧುಶಯನ ನಾರದ ಮುನಿಗೆ । ಇಂತೆಂದು ಪೇಳಿದ ತಾನಾಗ
ಚೆಂದದ ವ್ರತವ ಒಂದು ಪೇಳುವೆನು ।
ಒಂದೇ ಭಾವದಿಕೇಳೆಂದನು ೧೦

ಯಾವದೇವನು ಆತ । ಎಂಥ ವ್ರತವುಅದು ।
ಯಾರು ಮಾಡಿದರು ಪೇಳೆಂದ
ದೇವಾಧಿದೇವ ನಿನಗೆ ಕೈ ಮುಗಿವೆನು
ಬ್ಯಾಗದಿಂದಲಿ ಪೇಳೆಂದನು ೧೧

ಸತ್ಯದೇವನ ಪೂಜೆ ವ್ಯರ್ಥಮಾತಲ್ಲ ।
ಸತ್ಯವಾದೆನ್ನ ನಾಮಗಳ
ಮರ್ತ್ಯ ಲೋಕದ ಜನ ನಿತ್ಯ ಪೂಜಿಸಲು ।
ಸಮರ್ಥರಾಗಿ ಬಾಳುವರು ೧೨

ಎನ್ನವ್ರತವನ್ನು ಇನ್ಯಾರು ಮಾಡುವರೊ ।
ಧನ್ಯರಾಗುವರು ಕೇಳೆಂದ
ಮಾನ್ಯರಾಗುವರೋ ಮನುಜರೊಳಗೆ ಅವರು ।
ಸತ್ಯವಿದು ಕೇಳೆಂದ ೧೩

## ಎರಡನೇ ಅಧ್ಯಾಯ

ಮತ್ತೆ ಕಾಶಿಯಲ್ಲಿ ಉತ್ತಮ ಬ್ರಾಹ್ಮಣ । ನಿತ್ಯುಪವಾಸದಿಂದಿರುತ
ಸತ್ಯನಾರಾಯಣ ಮುಪ್ಪಿನವನು ಆಗಿ । ಮತ್ತೆ
ಆತನಲ್ಲಿಗೆ ಬಂದನು ೧

ಬಂದ ಬ್ರಾಹ್ಮಣನಿಗೆ ವಂದಿಸಿ ಕೈ ಮುಗಿದು ।
ತಂದೆ ನೀವ್ಯಾರೆಂದನಾಗಾ
ಕಂದರು, ಮಕ್ಕಳು, ಮಂದಿ ಭಾಳುಂಟು ।
ತಿಂದೆನೆಂದರೆ ಕಾಣೆನೆಂದ ೨

ಸತ್ಯದೇವರ ಪೂಜೆ ಭಕ್ತಿಲಿ ಮಾಡಯ್ಯ ।
ಅತ್ಯಂತ ಐಶ್ವರ್ಯಬಹುದೂ ।
ಭಕ್ತಿಯಿಂದಲಿ ಕೇಳಿ । ಮನೆಗೆ ತಾ ಬಂದು ।
ಅರ್ತಿಲಿ ಪೂಜೆ ಮಾಡಿದನು ೩

ಅಷ್ಟರೊಳಗೆ ಒಬ್ಬ ಕಾಷ್ಠ ವಿಕ್ರೇತನು ಬಂದು ।
ಕಟ್ಟೆಯ ಮೇಲೆ ಕುಳಿತಿಹನು
ಸತ್ಯನಾರಾಯಣನ ಪೂಜೆ ನೋಡಿ ಶ್ರೇಷ್ಟಪ್ರಸಾದ ತಕ್ಕೊಂಡನು ೪

ಮತ್ತೆ ಮರುದಿನ ಕಟ್ಟಗಿ ತನ್ನ । ನೆತ್ತಿಯಮೇಲಿಟ್ಟುಕೊಂಡು
ಶ್ರೇಷ್ಠರ ಕೇರಿಗೆ ಬರಲು । ತಕ್ಕೊಂಡು ।
ಮತ್ತಿಷ್ಟು ದ್ರವ್ಯ ಕೊಟ್ಟರಾಗಾ ೫

ಬಂದ ಮುಡ್ಡಿನಿಂದ ತಂದ ದಿನಿಸುಗಳು ।
ಮಂದಿರದಲ್ಲೆ ಹಾಕಿದನು ।
ಬಂಧು ಬಳಗ ಸಹಿತ ಆನಂದದಿ ಪೂಜೆ ಮಾಡಿದನು ೬

ಗೋಧಿ ಚೂರ್ಣ ಬಾಳೆಹಣ್ಣು ಬೆಲ್ಲ ತುಪ್ಪವಹಾಕಿ ।
ಭಕ್ಷ್ಯವನೆ ಮಾಡಿದರು
ಮಾಧವನ ಪೂಜೆ ಮಾಡಿ ಪ್ರಸಾದವ ।
ವಿನೋದದಲಿ ತಕ್ಕೊಂಡರಾಗ ೭

ಕಾಷ್ಟ ವಿಕ್ರೇತನು ಉತ್ಕೃಷ್ಠ ವ್ರತಮಾಡಿ ।
ಅಷ್ಟ ಭಾಗ್ಯವ ಅನುಭವಿಸಿ
ಶ್ರೇಷ್ಠ ಪದವಿಯನು ಸಾರಿದನೆಂಬಲ್ಲಿಗೆ
ಮತ್ತೆರಡ ಧ್ಯಾಯವಾಯಿತು ೮

## ಮೂರನೇ ಅಧ್ಯಾಯ

ಉಲ್ಕ ಮುಖನೆಂಬೊ ರಾಜನು । ತಾನು
ಸರೋಜಿನಿ ಸತಿಸಹಿತಾಗಿ ।
ಭದ್ರಶೀಲ ನದಿ ತೀರದಿ ಕುಳಿತು । ಸತ್ಯವ್ರತವನು ಮಾಡಿದನು ೧

ಸತ್ಯನಾರಾಯಣನ ಪೂಜೆಯನು ಮಾಡುತ್ತ ।
ಅತ್ಯಂತ ಹರುಷದಿಂದಿರಲು
ಅತ್ತ ಬಂದನು ಆಗ ವರ್ತಕ ಸಾಧು । ಮಹಾತ್ಮ
ಇದೇನೆಂದು ನುಡಿದ ೨

ಸತ್ಯದೇವನ ಪೂಜೆ ಭಕ್ತಿಲಿ ಮಾಡಯ್ಯ ।
ಮಕ್ಕಳು ಮರಿಗಳಾಗುವರು ।
ಅತ್ಯಂತ ಹರುಷ ಭಾಗ್ಯವ ಕೊಟ್ಟು ।
ಮತ್ತೆ ನಮ್ಮನು ಪಾಲಿಸುವುದು ೩

ನುಡಿದ ಮಾತನು ಕೇಳಿ ನಡೆದು ಬಂದನು ಸಾಧು ।
ಮಡದಿಗೆ ಪ್ರಸಾದಕೊಟ್ಟು
ಒಡೆಯನ ಮಾತಿಗೆ ಹರಸಿಕೊಂಡಾಕ್ಷಣ
ಮಡದಿಗರ್ಭವನೆಧರಿಸಿದಳು ೪

ಪಡೆದಳು ಆದಿತ್ಯ ಪುತ್ರಿಯನು ಆಗ ।
ಪರಮಸಂತೋಷದಲಿ ತಾನು ।
ಉಡುಪನಂದದಿ ಮುಖ ಶೋಭಿಸುತಿರಲು ।
ಕರೆದಳು ಕಳಾವತಿ ಎಂದು ೫

ಪುತ್ರಿ ಹುಟ್ಟಿದಳೆಂದು ಸತ್ಯದೇವನ ಪೂಜೆ । ಅರ್ತಿಲಿ
ಮಾಡೋಣ ಎಂದಳು
ಪತ್ನಿಯ ಮಾತನು ಕೇಳಿ ನಕ್ಕು ವಿವಾಹದಿ । ಯಥೇಚ್ಛ
ಮಾಡೋಣ ಎಂತೆಂದ ೬

ಶುಕ್ಲ ಪಕ್ಷ ಚಂದ್ರನಂತೆ ಒಪ್ಪಿರುವ । ಮತ್ತೆ ಮಗಳನ್ನೆ ನೋಡಿ ।
ತಕ್ಕವರ ವಿಚಾರಿಸಿ ತಾರೆಂದು । ಭೃತ್ಯರನ್ನೆ ಕಳುಹಿಸಿದನು ೭

ಬಂದು ಭೃತ್ಯರು ಸುಕಾಂಚನ ನಗರದಿ ।
ಸುಂದರ ವರ ತಂದರಾಗ
ಬಂಧು ಬಳಗ ಸಹಿತ ಮದುವೆಯನ್ನೆ ಮಾಡಿ
ಆನಂದದೊಳೆ ವ್ರತವ ಮರೆತನು ೮

ಸುಂದರ ಅಳಿಯನನ್ನು ಕೂಡಿಕೊಂಡು ಸಾಧು ।
ಬಂದನು ವ್ಯಾಪಾರಕ್ಕೆಂದು
ಬಂಗಾರ ಬೆಳ್ಳಿ ತುಂಬಿದಕೊಂಡು ಹಡಗಲ್ಲಿ ।
ಸಿಂಧು ನದಿಯ ತೀರದಲ್ಲೆ ೯

ಮುತ್ತರತ್ನ ವ್ಯಾಪಾರ ಮಾಡಲು ರತ್ನಸಾರ
ಪುರಕೆ ಬಂದ
ಅರ್ತಿಯಲಿ ಮಾವ ಅಳಿಯಂದಿರಾಗ ।
ಚಿತ್ರಶಾಲೆಯಲ್ಲಿ ಮಲಗಿದರು ೧೦

ನಾರಾಯಣಮೂರ್ತಿ ತಾನೊಂದು ಚಮತ್ಕಾರ ಮಾಡಿದಾಕ್ಷಣದಿ
ಅತ್ತ ರಾಜನ ಮನೆ ಚೋರಿಯಮಾಡಿ । ಭೃತ್ಯರನು ಕಳಿಸಿದನು ೧೧

ಬಂದು ಭೃತ್ಯರು ಕಳ್ಳರೆಂದೆತ್ತಿ ಕೊಂಡು । ಬಂಧನವ
ಮಾಡಿ ಹುಡುಕುತಲಿ
ತಂದ ವಸ್ತು ಅವರ ಮುಂದೆ ಹಾಕಿ । ಮುಂದೋಡಿ
ಮಾಯವಾದರಾಗ ೧೨

ನಿದ್ದಿ ಬಂದವರನ್ನ ಒದ್ದೊಡೆದು ಎಬ್ಬಿಸಿ । ಕದ್ದ
ಕಳ್ಳರು ನೀವೆಂದೆನುತ
ಜಪ್ಪಿಸಿ ತಂದು ರಾಜನೆದುರಿಗೆ ನಿಲ್ಲಿಸಲು ।
ದಬ್ಬಿದರು ನಿಗಡದೊಳಗೆ ೧೩

ಅತ್ತ ಕಳಾವತಿ ಲೀಲಾವತಿಗೆ ಹತ್ತಿತು ದಾರಿದ್ರ್ಯವಾಗ
ತುತ್ತ ಕಾಣದಲೆ ಕಷ್ಟ ಪಡುತಿದ್ದರಾಗ ೧೪

ಪಕ್ಕ ಮನೆಯಲ್ಲಿ ಹೊಕ್ಕು ಕಳಾವತಿ । ಅತ್ಯಂತ
ಸಂಭ್ರಮ ನೋಡಿ
ಸತ್ಯ ನಾರಾಯಣ ಪೂಜೆ ಕಥಿ ಕೇಳಿ ।
ತಕ್ಕೊಂಡಳಾಗ ಪ್ರಸಾದವನ್ನು ೧೫

ಹೊತ್ತು ಗೊತ್ತು ಇಲ್ಲದೆ ಎತ್ತ ನೀ ಹೋಗಿದ್ದಿ ಎಂದು
ಮತ್ತೆ ಮಗಳನ್ನೆ ಕೇಳಿದಳು ೧೬

ಸತ್ಯದೇವನ ಪೂಜೆ ನೋಡಿ ಪ್ರಸಾದ
ತಕ್ಕೊಂಡು ಬಂದೆನೆಂತೆಂದು ೧೭
ಭಕ್ತಿಯಿಂದಲಿ ಬಾಳೆ ಹಣ್ಣುಗೋಧಿ ಚೂರ್ಣ
ತುಪ್ಪ ಸಕ್ಕರೆ ಹಾಲು ಹಣ್ಣ
ಸತ್ಯದೇವನ ಪೂಜೆ ಮಾಡಿ ಸಂತೋಷದಿ ।
ತಕ್ಕೊಂಡರಾಗ ಪ್ರಸಾದವ ೧೮

ಇತ್ತ ಚಂದ್ರಕೇತು ರಾಜನ ಸ್ವಪ್ನದಿ । ಸತ್ಯ ದೇವನು ಹೇಳಿದನು
ಅತ್ಯಂತ ಶೀಘ್ರದಿ ಅವರನ್ನು ಬಿಡು ಎಂದು
ಅಪ್ಪಣೆ ಮಾಡಿ ಕಳಿಸಿದನು ೧೯

ಅಂದ ಮಾತಿಗೆ ಅವರ ಬಂಧನವ ಬಿಡಿಸಿ ।
ಚಂದಾಗಿ ಶೃಂಗಾರ ಮಾಡಿ
ಒಂದಕ್ಕೆರಡು ದ್ರವ್ಯ ಕೊಟ್ಟು ಕಳಿಸಿದನು ೨೦

## ನಾಲ್ಕನೇ ಅಧ್ಯಾಯ

ಉನ್ನಂತ ನಾವೆಯಲಿ ಹೊನ್ನು ಬಂಗಾರವು ।
ಇಟ್ಟುಕೊಂಡು ಹೋಗುತಿರಲು

ಘನ್ನ ಮೂರುತಿ ತಾನು । ಸನ್ಯಾಸಿವೇಷದಿ ।
ಇನ್ನು ಇದೇನೆಂದು ಕೇಳಿದ ೧

ಸೊಕ್ಕಿನಿಂದಲಿ ಆಸಾಧು ತಸ್ಕರನೆಂದು ।
ಪತ್ರ ಲತೆಗಳೆಂದು ನುಡಿದ
ತಕ್ಕ ಶಿಕ್ಷೆಯ ಮಾಡಿ । ಸೊಕ್ಕು ಮಾರಿಡುವೆನೆಂದು ।
ಅಷ್ಟೆ ಆಗಲಿ ಎಂದು ನುಡಿದ ೨

ಅತ್ತ ಹೋಗಲು ಆ ವರ್ತಕ ನೋಡೆ । ಪತ್ರಲತಗಳಾದವಾಗ ।
ನಿಟ್ಟುಸಿರಿಡುತ । ಘಟ್ಟಿಸಿ ತಲೆಯನು ನಷ್ಟವ ಸಹಿಸೆನೆಂದ ೩

ಸುಂದರಳಿಯನು ಬಂದು ನೋಡಲುಮಾವ ।
ಅಂಥ ವಿಕಾರವಾಗಿದ್ದನು
ತಂದು ನೀರನು ಚೆಲ್ಲಿ । ಎಬ್ಬಿಸಿ ಕುಳ್ಳಿರಿಸಿ ।
ಮುಂದಿನ ಸುದ್ದಿ ಹೇಳೆಂದ ೪

ಸನ್ಯಾಸಿಯಲ್ಲವೋ ಘನ್ನ ಮಹಿಮನು ಆತ ।
ಇನ್ನಾವನಾಪಾದ ಪಿಡಿಯೋಣ
ಚೆನ್ನಾಗಿ ಹುಡುಕಲು । ಮನ್ನಿಸಿ ಭಕ್ತರು ।
ಮುನ್ನಂತಾಗಲಿ ಎಂದು ನುಡಿದ ೫

ಬಂದು ನೋಡಲು ಆಗ ಬೆಳ್ಳಿ ಬಂಗಾರವು ।
ತುಂಬಿದ ಹಡಗನೋಡಿ
ಆನಂದದಿಂದಲಿ ಕೈ ಮುಗಿದು ಹರಿಗೆ ।
ಬಂದರು ತಮ್ಮೂರಿಗಾಗ ೬

ಮತ್ತೆ ನಿಮ್ಮಳಿಯರು ಬಂದರು ಎನುತಲಿ ।
ಭೃತ್ಯರು ಬಂದು ಹೇಳಿದರು
ಸತ್ಯದೇವರ ಪೂಜೆ ಮಾಡುತ್ತಿರಲು ಬಿಟ್ಟು ।
ತಕ್ಕೊಳ್ಳದೆ ಬಂದಳು ಪ್ರಸಾದವ ೭

ನಡದು ಬಂದಳು ತನ್ನ ಪತಿಯ ನೋಡುವೆನೆಂದು ।
ಸಡಗರದಿಂದೋಡಿ ಬರಲು
ನಡುನೀರೊಳಗೆ ಹಡಗು ಮುಳಗ್ಹೋಯಿತು ।
ನಡುಗಿದರು ಜನರೆಲ್ಲ ನೋಡಿ ೮

ಮತ್ತೆ ಕಳಾವತಿ ದುಃಖಸಾಗರದಲ್ಲಿ ।
ಅತ್ಯಂತ ಮಗ್ನವಾಗಿರಲು ।
ಒತ್ತೊತ್ತಿ ಅಳುತ । ಘಟ್ಟಿಸಿ ಕೊಂಡೆದಿ
ಮುರ್ಛಿತಳಾದಳು ತಾನಲ್ಲಿ ೯

ವಾಯುದೇವರು ತಮ್ಮ ವಾಣಿಯ ನುಡಿದರು ।
ಮಾಯಾದೇವನ ಮಾಯವೆಂದು
ತಾಯಿ ನೀ ಪ್ರಸಾದ ಮರೆತ ಕಾರಣ ನಿನ್ನ
ರಾಯ ನೀಪರಿ ಆದನೆಂದು ೧೦

ಹೋಗಿ ಪ್ರಸಾದ ಆಗ ತೆಗೆದುಕೊಂಡು । ಬ್ಯಾಗ
ಪತಿಯ ನೋಡುವೆನೆಂದು
ಯೋಗಿ ವರದನ ದಯದಿಂದಲಾ ಪತಿಯು । ಬೇಗ
ಎದುರಿಗೆ ಬಂದು ನಿಂತನು ೧೧

ನಿಂತ ಪತಿಯ ನೋಡಿ ಸಂತೋಷದಿಂದಲಿ ।
ದಂಪತಿಗಳು ಹರುಷದಿಂದಾ
ಗುಂಪು ಗುಂಪಾಗಿ ಮನೆಗೆ ಬಂದು ಆಗ ।
ಅನಂತರ ಸೌಖ್ಯ ಪಟ್ಟರು ೧೨

ಮನೆಯತೊಳೆದು ಹಸಿ ತಳಿರು ತೋರಣ ಕಟ್ಟಿ । ಘನವಾದ
ಮಂಟಪವ ಮಾಡಿ
ವನಜನಾಭನ ತಂದು ಕುಳ್ಳಿರಿಸಿ ತೋರಣ ಕಟ್ಟಿ । ಘನವಾದ
ಫಲ-ಪುಷ್ಪನಿಟ್ಟು ೧೩

ಚೂತಫಲವು ರಂಭ ಫಲ ಕಿತ್ತಳೆಯು ದ್ರಾಕ್ಷಫಲ ನಾರೀಫಲವು
ಅನೇಕ ಫಲಪುಷ್ಪ ತಂದಿರಿಸಿ ಲೋಕನಾಥನ ಪೂಜೆಗಾಗಿ ೧೪

ಸತ್ಯ ಸಂಕಲ್ಪ ಶ್ರೀ ಸತ್ಯನಾರಾಯಣ ಲಕ್ಷ್ಮೀಸಹಿತ ಕುಳ್ಳಿರಿಸಿ
ಶಾಸ್ತ್ರೋಕ್ತದಿಂದಲಿ ಪೂಜೆಯ ಮಾಡಿ ।
ಅಷ್ಟೋತ್ತರವನ್ನೆ ಮಾಡಿದರು ೧೫

ಗೋಧಿಚೂರ್ಣ, ಬಾಳೆ ಹಣ್ಣು, ಸಕ್ಕರೆ ತುಪ್ಪ
ಬೇಗ ಹಾಲುಗಳನ್ನೆ ಹಾಕಿ
ಆಗ ಸಮನಾದ ಭಕ್ಷ್ಯಗಳನೆ ಮಾಡಿ । ಬೇಗ ತಂದಿಟ್ಟರು ಅಲ್ಲಿ ೧೬

ಪಂಚಭಕ್ಷ್ಯಗಳು ಪರಮಾನ್ನ ಶಾಕಗಳು । ಮುಂಚೆ
ತಂದಿಟ್ಟರು ಆಗ
ಪಂಚಬಾಣನ ಪಿತ ನಾರಾಯಣಗೆ । ಮುಂಚೆ
ನೈವೇದ್ಯವನು ಮಾಡಿದರು ೧೭

ಹತ್ತು ತೆಂಗಿನಕಾಯಿ ಮತ್ತೆ ತಂದೊಡೆದರು ।
ಎತ್ತಿದರು ಮಂಗಳಾರತಿಯ
ಸತ್ಯನಾರಾಯಣನು ಅತ್ಯಂತ ಹರುಷದಿ ಪ್ರತ್ಯಕ್ಷನಾದ ಅವರಿಗೆ ೧೮

ಬಂಧು ಬಳಗ ಸಹಿತ ಚೆಂದದಿ ಪೂಜಿಸಿ ।
ದುಂದುಭಿ ವಾದ್ಯಗಳಿಂದಾ
ನಿಂದು ಕೈ ಮುಗಿದು ತಿಂದರು ಪ್ರಸಾದ ।
ಆನಂದ ಭರಿತರಾದರಾಗ ೧೯

ಸತ್ಯ ನಾರಾಯಣ ಪೂಜೆಯನು ಮಾಡಿ ।
ಸಮಸ್ತ ಸುಖ ಅನುಭವಿಸಿ
ಸತ್ಯ ದೇವನಪುರ ಸೇರಿದರೆಂಬಲ್ಲಿ ಹತ್ತಿತು ನಾಲ್ಕು ಅಧ್ಯಾಯ ೨೦

## ಐದನೆಯ ಅಧ್ಯಾಯ

ತುಂಗಧ್ವಜನೆಂಬ ರಾಜನು । ಒಂದು ದಿನ
ಚಂದದಿ ಬ್ಯಾಟೆಗೆ ಹೊರಟ
ಒಂದು ದೇಶದಲ್ಲಿ ಒಂದು ವನದಲ್ಲಿ । ಮಂದಿ
ಬಹಳನೆ ನೋಡಿದನು ೧

ಮತ್ತೆ ಗೋಪಾಲರು ಹತ್ತು ಜನರು ಕೂಡಿ । ಸತ್ಯದೇವನ
ಪೂಜಿಸುತಿರಲು
ಮತ್ತೆ ತಮ್ಮ ರಾಜನು ಬಂದನು ಎನುತ । ಭಕ್ತಿಂದ
ಪ್ರಸಾದ ಕೊಟ್ಟರು ೨

ಗತಿಹೀನರೊಡನೆ । ಮತವುನಮಗೇಕೆಂದು ।
ಮತಿಹೀನರಾಜನು ತಿಳಿದು
ಸತತಾನ ಪ್ರಸಾದ ಬಿಟ್ಟು ಹೋಗಲು । ಆತನ
ಶತಮಕ್ಕಳು ಮಾಯವಾದರು ೩

ಏನು ಕಾರಣದಿಂದ ಹೀನಸ್ಥಿತಿಗೆ ಬಂದೆ ।
ಧ್ಯಾನಿಸಿ ಮನದಲ್ಲಿರಾಜ
ಧೇನು ಪಾಲಕರ ಪ್ರಸಾದವು । ಬಿಟ್ಟು ಬಂದೆನು । ಹಾನಿ
ಬಂದಿತು ಎನಗೆಂದ ೪

ಮತ್ತವರಲ್ಲಿಗೆ ಬಂದನು ರಾಜನು । ತಪ್ಪಾಯಿತೆಂದು ನುಡಿದನು
ಸತ್ಯದೇವನ ಪ್ರಸಾದವ ತಕ್ಕೊಂಡು । ಸತ್ತ ಮಕ್ಕಳು ಬದುಕಿದರು ೫

ಸತ್ಯನಾರಾಯಣ ಪೂಜೆಯ ರಾಜನು ಅತ್ಯಂತ ಭಕ್ತಿಲಿ ಮಾಡಿ
ಮತ್ತೆ ಸಂಪತ್ತು ಸೌಭಾಗ್ಯವನ್ನನುಭವಿಸಿ । ಸತ್ಯ
ಪುರವನು ಸೇರಿದನು ೬

ಸತ್ಯನಾರಾಯಣನ ಪೂಜೆಯಮಾಡಿ । ಮತ್ತೆ ಪ್ರಸಾದವು
ತೆಗೆದು ಕೊಂಡರೆ

ಮಕ್ಕಳು ಮರಿಗಳು–ಧನಧಾನ್ಯ ಸಂಪತ್ತು । ಸತ್ಯದೇವನು
ಕೊಟ್ಟುಸಲಹುವನು ೮

ಮಂಗಳವು ಮತ್ಸ್ಯ ಕೂರ್ಮವರಹಗೆ । ಮಂಗಳ
ನರಸಿಂಹ ವಾಮನನಿಗೆ
ಮಂಗಳ ರಾಮ ಕೃಷ್ಣಬೌದ್ಧ । ಮಂಗಳ ಕಲ್ಕಿಗೆ
ಎಂಬಲ್ಲಿ ಐದು ಅಧ್ಯಯವು ೯

ಇಷ್ಟು ಕಥೆಯ ಮನವಿಟ್ಟು ಕೇಳಿ । ಮತ್ತೆ ಪೂಜೆಯ ಮಾಡಿ
ಶ್ರೇಷ್ಠವಾದ ಪ್ರಸಾದ ತಕ್ಕೊಂಡರೆ । ನರಸಿಂಹ
ವಿಠಲರಾಯ ಸಲಹುವನು ೧೦

ಇತಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ
ಶ್ರೀ ಲಕ್ಷ್ಮೀನರಸಿಂಹ ಪ್ರಿಯತಾಂ । ಪ್ರೀತೋಭವತು ೧೧

೯

## ಶ್ರೀಕೃಷ್ಣಬಾಲ ಲೀಲೆ

ಭೂದೇವಿ ತಾನು ಭೂಭಾರಮನು ತಡಿಯದೆ ।
ವೇದ ಮಖದಿಂದ ಸಹಿತಾಗಿ ।
ಒಂದು ಕ್ಷೀರಾಬ್ಧಿಯಲಿ ಮಾಧವನ ಮೊರೆಯು ಹೊಕ್ಕಾರು ೧

ಸುರರ ಮೊರೆಯನ್ನು ಕೇಳಿ ಪರಮ ಪುರಷೋತ್ತಮನು
ತಾನು ಹರದಿ ದೇವಕಿ
ಉದರದಲಿ ತಾನಾಗ ಸೆರೆಯ ಮನೆಯಲ್ಲಿ ಜನಿಸಿದನು ೨

ತಂದೆ ವಸುದೇವನು ನಂದಗೋಪನ ಮನೆಗೆ । ತಂದು
ಶಿಶುವನ್ನು ಬಿಡಲಾಗ
ನಂದಗೋಪಾನು ತನ್ನ ಕಂದನೆಂತೆಂದು ಸಲಹಿದನು ೩

ಅತುರದಲಿ ಬಂದ । ಪೂತನಿಯನು ಕೊಂದು ಆಟದಲಿ
ಶಕಟನನ್ನು ಅಳುಹಿದನು
ಗೋಪಿಯ ಮಲೆಯ ಪ್ರೀತಿಲಿ ಉಂಡು ಬೆಳೆದನು ೪

ಅಂಬೆಗಾಲಿಕ್ಕುತ ಅಂಗಾಳದೊಳಾಡುತ್ತ । ಚಂದ್ರನ್ನ
ನೋಡಿ ನಲಿಯುತ್ತ
ನಲಿಯುತ್ತಲಾಗೋಪ ಮಂಗಳ ಮುಖವು ತೋರುತ್ತ ೫

ಮಣ್ಣು ಮೆಲ್ಲುವರೇನೂ ಸಣ್ಣ ಕೃಷ್ಣನೆ ನೀನು । ಚಿನ್ನನೆ
ಬಾಯಿ ತೆಗಿಯೆಂದ್ಲು
ತೆಗೆದು ನೋಡಿದಳು ಬಾಲ ಬಾಯಿ ಮಹಿಮೆಗಳು ೬

ಹರಿಯ ವದನದೊಳು ಹದಿನಾಲ್ಕು ಲೋಕವ ನೋಡಿ ।
ಭಯದಿಂದ ಗೋಪಿ ನುಡಿದಳು
ನುಡಿದು ತಾ ನೋಡಿದಳು ಬಾಲನ ಬಾಯಿ ಮಹಿಮೆಗಳು ೭

ನೀಲದಂಗಿಯ ತೊಟ್ಟು ತೋಳು ಬಾವುಲೆನಿಟ್ಟು । ಬಾಲನ
ನೋಡಿ ಹಿಗ್ಗುವಳು ।
ಅಲ್ಲಿನ್ನು ಆ ಬಾಲ ಶ್ರೀಲೋಲನೆಂದು ತಿಳಿದಳು । ೮

ಹಸಿರು ಅಂಗಿಯ ತೊಟ್ಟು ಕುಸುರು ಗೆಜ್ಜೆಯನ್ನಿಟ್ಟು
ಮೊಸರು ಕಡೆಯುವಲ್ಲಿ
ಬಂದು ಗೋಪಿಯನು ಹಸಿವಿ ಹಸಿವಿ ಎಂದು ನುಡಿದನು ೯

ಕಣ್ಣುತಿಕ್ಕುತಲಿ ಬಾಲ ಉಣ್ಣುವೆ ಎನುತಲಿ । ಸಣ್ಣ
ಬೆರಳುಗಳ ಚೀಪುತಲಿ ।
ಚೀಪುತಲಿ ನಿಂತಿರುವೊ ಚಿನ್ನನ ನೋಡಿ ಹಿಗ್ಗುವಳು । ೧೦

ಕಾಡದಿರು ಕಂಧಯ್ಯ ಕಡೆದು ಬರುವೆನು ದಧಿಯ ।
ಬೇಡಿದರೆ ಬೆಣ್ಣೆ ನೀಡುವೆನು
ವಲ್ಲದಲೆ ಆ ಬಾಲ ಕಾಡಿ ಕೈಯಿಂದ ಇಳಿಯನು ೧೧

ಕ್ಷೀರ ಕುಡಿಸುವೆ ಬಾರೊ ಬಾಲ ಚಕ್ರವರ್ತಿ । ಎನುತ ನಾರಿ
ಒಳಗೆ ನಡೆದಳು
ಅಲ್ಲಿನ್ನು ಆ ಬಾಲ ತೋರಿದನು । ತನ್ನ ಮಹಿಮೆಯನು ೧೨

ಒಡೆದು ಗಡಿಗೆಯನೆಲ್ಲ ಕುಡಿದು ದಧಿ ಕ್ಷೀರವನೆಲ್ಲ ।
ಕಡಗೋಲು ಪಿಡಿದು ನಡೆದನು
ಬಂಧು ಗೋಪಿಯು ನೋಡೆ ಹುಡುಗನಾ ದುಡುಕುತನಗಳು ೧೩

ಎಷ್ಟು ಹೇಳಲಿ ನಾನು ಕೃಷ್ಣನ ಮಹಿಮೆಯನ್ನ । ದುಷ್ಟತನಗಳನ್ನು
ಬಿಡಿಸುವೆನು
ಬಿಡಿಸಿ ಕಂಬಕ್ಕೆ ಅವನ ಕಟ್ಟುವೆನೆನುತ ನಡೆದಳು ೧೪

ಮಗುವಿನ ಹಿಂದೆ ಮೂರ್ಜಗವು ತಿರುಗಲು । ಸಿಗುವ
ಬಗೆಯನೆ ಗೋಪಿ ಕಾಣದಲೆ
ಕಾಣದಲೆ ನಿಂತಳು ಮಗುವಿನ ಮಹಿಮೆ ನೋಡುತಲಿ ೧೫

ಮಾತೆ ಬಳಲಿದಲೆಂದು ಸೋತು ನಿಂತನು ದೇವ ।
ಅತುರದಿ ಗೋಪಿ ಬಂದಳು
ಬಂದು ತಾನಾಗ ಶ್ರೀನಾಥನ ಹಿಡಿದು ತಂದಳು ೧೬

ದುರುಳತನಗಳು ಬೇಡ ತರುಣಕೃಷ್ಣನೆ ಎನುತ । ಒರಳಿಗೆ
ಗೋಪಿ ಕಟ್ಟಿದಳು
ಕಟ್ಟಲು ಆ ಬಾಲ ಒರಳೆಳಕೊಂಡು ನಡೆದನು ೧೭

ಲೋಕನಾಯಕನ ಉಲೂಕ ಕೆಣಕಲು ವೃಕ್ಷ । ಬೇಗಾ
ಕಿತ್ತು ಭೂಮಿಯಲಿ
ಬೀಳಿ ಬಾಲಕರಾಗಿ ಲೋಕವನೆ ಕುರಿತು ತೆರಳಿದರು ೧೮

ಅಂದುಗೀಪಾದದಲಿ ಬಂದು ನಿಂತಾನು ।
ಗೋವಿಂದನಾ ಗೋಪ ಕಾಣುತಲಿ
ಎತ್ತಿ ಮುದ್ದಾಡುತಲಿ ತಂದೆ ಬಾರೆಂದು ಕರೆದನು ೧೯

ಕೋಟಿ ಸೂರ್ಯರ ಕಾಂತಿ । ಮುಖದ ಮೇಲಿನ
ತಿಲುಕ ಹೊಳೆಯುತಲಿ
ಹೊಳೆಯುತಲಿ ಅವನ ನೋಟಕದಕೆ ಜನರು ಮೋಹಿಸುತ್ತ ೨೦

ಶೃಂಗಾರವಾಗುತ್ತ ಪೊಂಗೊಳಲು ಊದುತ್ತ । ಅಂಗಳದೊಳಗೆ
ಕುಣಿಯುತ್ತ
ಕುಣಿಯುತತ್ತಲಾ ಗೋಪ ಹೆಂಗಳೆಯರೆಲ್ಲ ನೋಡುತ್ತ ೨೧

ಕಣ್ಣು ಮುಚ್ಚೋಡುವನೆ ಹೆಣ್ಣುಗಳ ಮುಟ್ಟುವನೆ । ಬೆಣ್ಣೆಗಳ
ಕದ್ದು ತಿಂಬುವನೆ
ಅಲ್ಲಿ ಗೋಪಿಯ ಮುಂದೆ ಚಿನ್ನ ನಾನೆಂದು ತೋರುವೆನೆ ೨೨

ಅಮ್ಮ ಗೋಪಿಯ ಕೇಳೆ ನಿನ್ನ ಸುಕುಮಾರನು । ನಮ್ಮ ದಧಿ
ಬಾಂಢವನು ಒಡೆದನು
ಒಡೆದು ಬಾಲಕರಿಗೆ ಗುಮ್ಮಬಂತೆಂದು ಪೇಳುವನು ೨೩

ಕಣ್ಣುಮುಚ್ಚೋಡುವೆನೆ ಚಿನ್ನಕೋಲಾಡುವನೆ । ಅಣ್ಣ
ಬಾರೆಂದು ಕರಿಯುವನೆ
ಕರೆದ ಬಾಲಕರಿಗೆ ಬೆಣ್ಣ ಮುದ್ದೆಗಳು ನೀಡುವನೆ ೨೪

ಅತ್ತಿಮಾವನ ಎದುರೆ ಅಪ್ಪಿಕೊಂಬುವನೆಂಬ । ಚಿಕ್ಕವಗೆ
ಈ ಬುದ್ದಿ ತರವೇನೆ
ತರವೇನೆ ಆ ದೊರಿ ಮಕ್ಕಳೆಂಬ ಬಿಗುವೇನೆ ೨೫

ಹರವಿ ಹಾಲನೆ ಕುಡಿದು ಹರಿವ ಹಾವನೆ ಹಿಡಿವ
ಕರುಗಳ ಬಿಟ್ಟು ಓಡುವಾ
ಓಡುವ ಗೋಪಿ ತರವೇನೆ ನಿನ್ನ ತರಳಗೆ ೨೬

ಸಿಟ್ಟಿನಿಂದಲಿ ಗೋಪಿ ಕೃಷ್ಣನ ಹಿಡಿತರಲು ಬೆಟ್ಟು
ಬಾಯೊಳಗೆ ಮಲ್ಲುತ್ತ
ಮೆಲ್ಲುತ್ತ ತಾನಲ್ಲಿ ಪುಟ್ಟ ಮಗುವಾಗಿ ನಿಲ್ಲುವನೆ ೨೭

ವಾರಿಗಿ ಸತಿಯರ ಬಾರೆಂದು ಕರಿಯಲು ।
ಜಾರತನಗಳು ತರವೇನೆ
ತರವೇನೆ ನಿನ್ನ ಸುಕುಮಾರ ಪೋರನಲ್ಲೆಂಬದಿದುಯೇನೇ ೨೮

ಕೃಷ್ಣಯ್ಯ ನಿನ್ನ ದೂರು ಎಷ್ಟು ಕೇಳಲಿ ನಾನು । ದುಷ್ಟ
ಗೋಪಿಯರ ಮನೆಗ್ಯಾಕೊ
ಮನೆಗ್ಯಾಕೊ ಪೋಗಿ ಮಾನಿನಿಯರನೇಕೆ ತಡುವಿದಿಯೊ ೨೯

ಸಾರದಿರು ಕಂದಯ್ಯ ಚೋರ ಗೋಪಿಯರ ಮನೆಗಳಿಗೆ ।
ದೂರು ಮಾಡುವರು ಗೋಪಿಯರು
ಬಾಲ ಕೃಷ್ಣಯ್ಯನ ಜಾರನೆಂತೆಂದು ದೂರುವರು ೩೦

ಬೆಟ್ಟಿನಿಂದಲಿ ದೊಡ್ಡ ಬೆಟ್ಟವನೆ ಎತ್ತಿದ । ಕೃಷ್ಣ ಬಾರೆಂದು
ಕರೆದಳು
ಕರೆದು ಉಣಿಸಿದಕು ಸಕ್ಕರೆ ಕ್ಷೀರ ಅನ್ನವನು ೩೧

ಗಾಳಿರೂಪದಿ ಬಂದ ಕಾಳರಕ್ಕಸನಳಿದ ।
ಬಾಲಕೃಷ್ಣನ್ನ ಬಾರೆಸುತ
ಬಾರೆಸುತ ಗೋಪಿ ಲಾಲಿಸಿ ಮಗನ ಕರೆದಳು ೩೨

ಕಿಚ್ಚುನುಂಗಿದ ದೇವ ಅಚ್ಯುತ ನಿನಗೆಣ್ಣೆ । ಹಚ್ಚಿ
ಎರೆಯುವೆನು ಬಾರೆಸುತ
ಬಾರೆನುತಲಾ ಗೋಪಿ ಬಚ್ಚಲಿಗೆ ಮಗನ ಕರೆದಳು ೩೩

ವೃತ್ರಾಸುರನ ಕೊಂದ ಅಚ್ಯುತಾನಂದ । ಶ್ರೀವತ್ಸ
ಕೌಸ್ತುಭ ಒಲಿಯುತ್ತ
ಒಲಿಯುತ್ತ ಬಂದನು ಸಕ್ಕರಿಪಾಲು ಕೊಡು ಎನುತ ೩೪

ಧೇನುಬಕನ ಕೊಂದು ದಾಸವಾಂತಕ ದೇವ ।
ಹೀನಗೋಪೇರ ಮನಿಗ್ಯಾಕೊ
ಮನಿಗ್ಯಾಕೊ ನೀ ಪೋಗಿ ಮಾನಿನಿಯರನೇ
ಕೂಡತೊಡಗಿದಿಯೊ ೩೫

ಕಾಳಕಿಚ್ಚಿನ ನುಂಗಿ ಘೂಳಿಯ ಅಳಿದ । ಶ್ರೀ ಲೋಲಗೆ ತೆಗೆದಳು
ತೆಗೆದು ತೊಟ್ಟಿಲೊಳಿಟ್ಟು ಲಾಲಿಯ ಪಾಡಿ ತೂಗಿದಳು ೩೬

ಆಕಳ ಕಾಯುವನೆ ಆ ಕೊಳಲನೂದವನೆ ।
ಲೋಕವನ್ನೆಲ್ಲ ಭ್ರಮಿಸುವನೆ
ಭ್ರಮಿಸುತ್ತ ಆ ದೇವ ಅನೇಕ ವಿಧದಿಂದ ಅಡುವನೆ ೩೭

ಕಾತ್ಯಾಯನಿ ವ್ರತವು ಕಾಂತೆರೆಲ್ಲರು ಮಾಡೆ ।
ಕಂತುಪಿತನು ಅಲ್ಲಿ ಬಂದನು
ಬಂದು ತಾ ನೋಡಿದನು ಕಾಂತೇರ ವ್ರತದ ಮಹಿಮೆಯನು ೩೮

ಉಟ್ಟಸೀರಿಗಳ ಬಿಚ್ಚಿಟ್ಟು ಗೋಪಿರು ತಾವು । ಕೃಷ್ಣನ
ಧ್ಯಾನ ಮಾಡುತಲಿ
ಮಾಡುತಲಿ ನೀರಾಟ ತಟ್ಟನೆ ಆಡೆ ನಡೆದರು ೩೯

ಬಿಟ್ಟ ಸೀರಿಗಳ ಕಟ್ಟಿಕೊಂಡು ಮರವ । ತಟ್ಟನೆ ಹತ್ತಿ ಕುಳಿತಾನು
ಬಂದ ಗೋಪಿಯರೆಲ್ಲ ಬಟ್ಟಿಕಾಣದಲೆ ಹೋದರು ೪೦

ನಾರಿರೆಲ್ಲರು ತಮ್ಮ ಸೀರಿ ಕಾಣದೆ ಇರಲು ।
ಚೋರಕೃಷ್ಣನ್ನ ಕಂಡರು
ಪರಿಪರಿ ಸ್ತುತಿಸಲು ನಾರೇರ ವಸ್ತ್ರ ನೀಡಿದನು ೪೧

ವೃಂದಾವನದಿ ಗೋವಿಂದ ಕೊಳಲನೂವೆ ।
ಮಂದ ಗಮನೆರ ಮನಸ್ಸೆಲ್ಲ
ಮನವು ನಿಲ್ಲದೆ ಆಗ ಮಂದಿರವ ಬಿಟ್ಟು ನಡೆದರು ೪೨

ಶಿಷ್ಟ ಬಾಲಕನು ಸ್ವರವೆತ್ತಿ ಕೂದಲು ಆಗ ।
ತಟ್ಟಿತು ಗೋಪ ಸ್ತ್ರೀಯರಿಗೆ
ಆ ಮದನ ಬಾಣಾಗಿ ನೆಟ್ಟಿತು ಅವರ ಹೃದಯಕ್ಕೆ ೪೩

ಪಟ್ಟದರಸನ ಕೂಡ ಚಕ್ಕಂದವಾಡುತ್ತ । ಪಟ್ಟೆ ಮಂಚದ
ಮೇಲೆ ಕುಳಿತಿರಲು
ಈ ಸ್ವರವು ಕೇಳುತಲಿ ತಟ್ಟನೆ ಬಿಟ್ಟು ನಡೆದರು ೪೪

ಮಂದಗಮನೆರೆಲ್ಲ ಮಂದಿರವ ಬಿಟ್ಟರು । ಕಂದ
ನಂಬ್ಬಲವ ಮರೆತರು
ಆನಂದ ಸ್ವರಗಳು ಕೇಳಿ ಚಂದ್ರ ಮುಖಿಯರು ನಡೆದರು ೪೫

ಮಾರ ಜನಕನ ಕೊಳಲ ಸ್ವರವನು ಕೇಳುತ್ತ ।
ಸೀರೆಗಳ ಬಿಚ್ಚಿ ನಡೆದರು
ನೀರುಗಳ ಎರಿಯುತ್ತ ಕಾಲು ಜಾರುತ ನಡೆದರು ೪೬

ಬಿಟ್ಟುಕರುಗಳ ಕಣ್ಣಿ ಪಟ್ಟದರಸಗೆ ಕಟ್ಟಿ । ಥಟ್ಟನೆ
ಹೊರಗೆ ತೆರಳಿದರು
ಮನೆಪಾಲು ಬೆಣ್ಣಗಳು ಬೆಕ್ಕಿಗೆ ಇಟ್ಟು ನಡೆದರು ೪೭

ಎಣ್ಣಿಹಚ್ಚಿದ ಮೈಯ ಉಣ್ಣುಕೆರುವೊ ಕೈಯ ।
ಬೆಣ್ಣೆಭಾಂಡವನು ಹಿಡಕೊಂಡು
ಹಿಡಕೊಂಡು ಬಂದರು ಚೆನ್ನಿಗ ಕೃಷ್ಣನೆದುರಿಗೆ ೪೮

ಮಕ್ಕಳನೆ ಬಿಟ್ಟು ಮರ್ಕಟಗಳನೆತ್ತಿ । ಬೆಕ್ಕಿಗೆ ಹಾಲು ಎರಿಯುತ್ತ
ಎರಿಯುತ್ತ ಬಂದರು ಚಕ್ರಧರನ ಧ್ವನಿ ಕೇಳಿ ೪೯

ಬಂದನಾರಿಯರನು ಚುಂಬನದಿ ರಮಿಸುತ್ತ । ಧಿಮಿ
ಧಿಮಿಕೆಂದು ಕುಣಿಯುತ್ತ
ಕುಣಿಯುತ್ತ ಅಂಬರದ ಗಂಧರ್ವರೆಲ್ಲ ಪಾಡುತ್ತ ೫೦

ನಾರಿಯರ ಹೆಗಲ ಮೇಲೆ ಕೈ ಹಾಕಿ । ಸಾಲು
ಸಾಲಾಗಿ ಕುಣಿಯುತ್ತ
ಕುಣಿಯುತ್ತ ಗೋಪಿಯರ ನೀಲ ಮುಂಗುರುಳ ತಿದ್ದುತ್ತ ೫೧

ಒಂದೊಂದು ಸತಿಯರಿಗೆ ಒಂದೊಂದು ರೂಪದಲಿ
ಮಂಥರೋದ್ಧರನು ರಮಿಸುತ್ತ
ರಮಿಸುತ್ತ ಗೋಪಿಯರ ಆನಂದಸಾಗರದಿ ತೇಲುತ್ತ ೫೨

ಕಾಳಸರ್ಪನ ತುಳಿದು ಕಾಡ ಕಿಚ್ಚಿನೆ ನುಂಗಿ ।
ಘೂಳಿಯ ಸೀಳಿ ಬಂದನೆ
ಬಂದು ಬಕನ ಕೊಂದು ತಾಳದವನ ಕೆಡುಹಿದನೆ ೫೩

ಖರನ ಪ್ರಾಣವ ತಿಂದ ವೃತ್ರಾಸುರನ ಕೊಂದ । ಭರದಿ
ಗೊವ್ಗಳ ಕಾಯ್ದನೆ
ಕಾಯ್ದು ಗೋಪಾಲಕರ ಪರಿಪರಿ ಆಟ ಆಡಿದನೆ ೫೪

ಮುನಿಸತಿಯರು ತಂದ ಘನಪದಾರ್ಥವನುಂಡ । ವನಜ
ಮುಖಿಯರಿಗೆ ಒಲಿದನೆ
ಒಲಿದು ತಾ ನೀಡಿದನೆ ಘನಭಕ್ತಿಸಾರ ನೀಡಿದನೆ ೫೫

ಇಂದ್ರ ಕೀಲದಿ ಅಮರೇಂದ್ರ ನನ್ನವನುಂಡು ।
ಮಂದಗಿರಿಯನ್ನೆತ್ತಿ ಸಲಹಿದನು
ಮಳೆಕರೆದ ಆ ದೇವೇಂದ್ರನ್ನ ಅಷ್ಟಗರ್ವ ಮುರಿದನು ೫೬

ಚಿಕ್ಕ ಕೃಷ್ಣನ ಕರಿಯೆ ಅಕ್ರೂರ ಬರಲಾಗ ।
ಗಕ್ಕನೆ ರಥವನ್ನೇರಿದನು
ಏರಿ ಅಣ್ಣನ ಸಹಿತ ಚಕ್ರಧರನಾಗ ನಡೆದನು ೫೭

ಭಕ್ತ ಅಕ್ರೂರನಿಗೆ ಭಕ್ತವತ್ಸಲ ತಾನು ।
ಮೆಚ್ಚಿತೋರಿದನೆ ವೈಕುಂಠ
ವೈಕುಂಠ ಜಲದಲ್ಲಿ ಅಚ್ಯುತಾನಂದ ಹರಿತಾನು ೫೮

ಅಗಸನ ಅಳಿದು ಅನೆಯಕೊಂದನು । ವನಿತೆ ಕುಬ್ಜೆಗೆ ಒಲಿದನೆ
ಒಲಿದು ಮಧುರೆಗೆ ಬಂದು ಘನ ಮಲ್ಲರನು ಅಳಿದನೆ ೫೯

ಮಾವನಳಿದು ಮಾತೆಯ ಸೆರೆಬಿಡಿಸಿ । ಮಾನಿನಿಯರನ್ನ
ಮದುವ್ಯಾದ
ನರಸಿಂಹ ವಿಠ್ಠಲನು ಮಹಾಮಹಿಮೆಗಳ ತೋರಿದನು ೬೦

## ೧೦

## ಮಂಗಳಗೌರೀ ಹಾಡು

ಮೂಷಕ ವಾಹನನೆ । ದೋಷವಿದೂರನೆ ।
ಲೇಸಾದ ಕಥೆಯ ಪಾಲಿಸು ಎನಗೆ ।
ದೋಷವಿಲ್ಲದೆ ನಾಗ ಭೂಷಣನ ಕಥೆಯನ್ನು
ಭಾಷೆಯಿಂದಲಿ ನುಡಿಸಿ ಪಾಲಿಸುವುದೆನ್ನ ೧

ಮುನ್ನ ಕರ್ಣಾಟಕದಿ ಸ್ವರ್ಣದೇವನು ಹರನ । ಪೂಜಿಸಿ
ಕಾಲವ ಕಳೆಯುತಿರಲು
ಮರ್ಮವನು ತಿಳಿಯದೆ । ಅರಮನೆ ಒಳಗೆ ತಾ ।
ಹರನು ಭಿಕ್ಷೆ ಎನುತ ಬಂದು ನಿಂತ ೨

ಭಿಕ್ಷುಕನಾಗಮನವನು । ಆಕ್ಷಣದಿ ಕಂಡಳು । ತಕ್ಷಣದಿ
ತಂದು ಭಿಕ್ಷವ ನೀಡಲು

ಲಕ್ಷಣವಾದ ಪುತ್ರರು ನಿನಗಿಲ್ಲೆಂದು ಆಕ್ಷಣದಿ
ತಿರುಗಿ ಹೋದನಾಭಿಕ್ಷುಕ ೩

ಆಡಿದ ಮಾತಿಗೆ ಬಾಡಿತು ಮುಖವು । ಮಾಡಿದರು
ಹರನ ಸೇವೆಯನಾಗಲೆ
ನೋಡಿ ಅವರ ಮನವು ನೀಡಿದನು ವರವು । ರೂಢಿವಳಗೆ
ಅತಿ ಆಶ್ಚರ್ಯವು ೪

ಮತ್ತೆ ನೀಡಿದನಾಗ ಹದಿನಾರು ವರ್ಷದ । ಪುತ್ರನ್ನ
ಕೊಟ್ಟು ಕಳುಹಿದನಾಗಲೆ
ಇತ್ತ ಬಂದಳು ಹೆತ್ತಾಳು ಕುಮಾರನ್ನ ।
ಅರ್ತಿಯಿಂದಲಿ ಬೆಳೆಯುತಿದ್ದ ೫

ಮಾತಾಪಿತರ ನೋಡಿ । ಮನಹರುಷದಿಂದಲಿ ।
ಮಾತುಳನ ಕರೆಸಿ ಕೊಟ್ಟರಾಗಲೆ
ಆತರಳನ ಕೊಂಡೊಯ್ದು ಕಾಶಿಯಾತ್ರೆಯ ಮಾಡಿಸಿ
ಕೊಂಡು ಬನ್ನಿರೆಂದ ೬

ಅಂದ ಮಾತನ । ಒಡಗೊಂಡು ಬಂದರು ಆಗ ।
ಮಂಡೋಪುರಿಯೆಂಬ
ತೋಟದಲ್ಲಿ । ಮಂಡೂರಾಯನ ಮಗಳು । ಹಿಂಡು ಗೆಳತೇರ
ಕೂಡಿಕೊಂಡು ಬಂದಳು ಆ ತೋಟದಲ್ಲಿ ೭

ಆಡುತ್ತಾಡುತ್ತ । ಬೈದಾಡಿಕೊಂಡಳಾಗ ।
ನೋಡು ಮಂಗಳ ಗೌರಿ
ದಯವೆಂದಳು । ನೋಡು ಮಾತುಳನೆ । ನೋಡು
ಮಾತುಳನೆ ಹೆಣ್ಣಾಡಿದ ಮಾತನು
ಮಾಡು ಎನಗೆ ಮದಿವಿ ಎಂದಾಡಿದನು ೮

ರಾಜನ ಕೊಮಾರಿಗೆ । ಆಗ ದಿಬ್ಬಣದವರು । ಬ್ಯಾಗ
ಬಂದಿಳಿದರಾ ತೋಟದಲ್ಲಿ
ರೋಗಿಯಾದವನ ಬಿಟ್ಟು । ಇವನ ಕರೆದೊಯ್ಯಲು ಬ್ಯಾಗ
ಧಾರೆಗಳ ನೆರೆದರಾಗಾ ೯

ಥಟ್ಟನೆ ಎದ್ದಳು ಕುಷ್ಟಕನ ನೋಡಲು । ಮುಟ್ಟಲಾರೆ
ಇವನ ಪತಿಯಲ್ಲವೆನುತಲಿ
ಕೊಟ್ಟುವೀಳ್ಯವ ಕಾಶಿಯ ಜನರಿಗೆ
ಪಟ್ಟದರಸನ ಕೈಯ ಹಿಡಿದದಳಾಗ ೧೦

ಮಾತಾ ಪಿತರುನೋಡಿ ಮನ ಹರುಷದಿಂದಲಿ ।
ನೋತ ನೋವಿಯು ಇಲ್ಲದೆ
ನಾಥನು ಹ್ಯಾಗೆ ಉಳಿದನು । ಪ್ರೀತಿಯಿಂದಲಿ ನಮಗ್ಹೇಳೆಂದರು ೧೧

ಒಂದು ನೋಂಪಿಯುಕಾಣೆ । ಒಂದು ವ್ರತವು ಕಾಣೆ ।
ಮಂಗಳಗೌರಿಯ
ದಯವೆಂದಳು । ತಂದೆ ಶ್ರೀ ನರಸಿಂಹರಾಯನ ಪಾದ
ಭಜಿಸಿ ಪತಿಯ ಪಡೆದೆನೆಂದಳೂ ೧೧

## ೧೧

## ಜಲಕ್ರೀಡೆ ಹಾಡು

ಸಾರಸದಳ ನಯನ ಸರಸೀಜಾಸನ ಪ್ರೀತಿಮಾತೆ ಪ

ಕರುಣದಿ ನೆಲಸು ಎನ್ನಲ್ಲಿ ನೀನು । ವರ್ಣಿಸಿಪೇಳ್ವೆನು
ಇದುನಾನು ।
ಶರಣಾಗತ ಜನರನ್ನು । ಕರುಣಾದಿ ನೀನು ೧

ಸಾನುರಾಗ ನುಡಿಸು ಎನ್ನಲ್ಲಿ ನೀನು । ನಾನು ಯತಿಗಳ
ಅರಿಯೇನು । ಮಾನಿನಿ ಇದ್ದಕ್ಕಿನ್ನೇನೂ । ಜ್ಞಾನಮಾರ್ಗ
ಭೋದಿಸು ನೀನು ೨

ಒಡೆಯ ಶ್ರೀ ನರಸಿಂಹ ವಿಠ್ಠಲನ್ನಾ । ಅಡಿಗೆರಗಿ
ಪೇಳುವೆ ಮುನ್ನ । ಬಿಡದೆ ಸಲಹು ನೀ ಎನ್ನಾ ।
ಕರುಣಾದಿ ಮುನ್ನ ೩

## ವಚನ

ಕೇಳಿ ಜನರೆಲ್ಲ ಪೇಳುವೆನು । ಶ್ರೀ ಲೋಲ ।
ಗೋಪಾಳಿಯರಾಳಿದ ಕಥಿಯಾಃ ಬಾಲಲೀಲೆಗಾಳ
ತೋರ್ದ ಮತಿಯ । ಕಾಳರಕ್ಕಸರ ಮುರಿದ
ಸತ್ಕಥೆಯ । ಬಾಲರೂಪದ ಕೃಷ್ಣ । ಗೋಕುಲದಿ ।
ಗೋಪನಾಲಯದಲ್ಲಿ । ಲೀಲೆಯಿಂದಲಿ ಆಡುತಿರುವಾ
ಮೆರೆವ ॥ ಕರಿಪುರದದೊರಿತಾನು ಕರಮುಗಿದು
ಮುನಿವರೆಗೆ । ತ್ವರಿತದಲಿ ಮಾತನಾಡಿದನು ಅಗ ।
ದ್ವಾರಾವತಿ ಕ್ರಿಷ್ಣನು ತಾನು । ಯಾವ ಚರಿತೆಯಿಂದಲಿ
ಆಡುತಿದ್ದನು ಚಂದದಿಂದಲೀ ದಶಿಮಸ್ಕಂದದಲಿ
ಪೇಳೆನುತ । ವಂದಿಸಲು ಮುನಿವರನು ಮುಂದಿನಾ
ಕಥಿ ಪೇಳಲಾರಂಭಿಸಿದನು ಇದನ್ನು । ಕೇಳು ಒಂದು ದಿನ
ಗೋಪಿಯರೆಲ್ಲ । ನೂರ ಒಂದು ಸಾವಿರ ಜನರು
ಕೂಡಿ ಗೋವಿಂದಸೋಲಿಸಲು ಮನವು ಮಾಡಿ ಬಂದು
ಯಮುನಿಯಾ ದಡದಲ್ಲಿ ನಿಂದ । ಆ ಶೃಂಗಾರವ ನೋಡಿ
ಹೀಗೆಂದರೂ ಸ್ತ್ರೀಯರು

ನೋಡಿದ್ಯಾ ಸಖಿ ಕೂಡಿ ಆಡುವ ವನಗಳಾ । ರೂಢಿವಳ
ಗಿನ್ನೀಡುಯಿಲ್ಲಾ । ನೋಡೋ ಸ್ಥಳಗಳಾ ಪ

ಸಾರಂಗ । ಮಾತಂಗ । ನೋಡಿದ್ಯಾ । ಶಿಸ್ತೀಲಿ ಆಡುವಾ
ಕಸ್ತೂರಿ ಮೃಗಗಳೂ ಜತ್ತಿಲಿ ಸ್ವರ ವೆತ್ತಿ ಕೂಗುವೋವು
ಗಿಳಿಗಳು । ಥಳಥಳಿಸುವ ಮಯೂರ ಪಿಕಗಳು
ಜಳಪಿಸಿ ಹಾಡುವಾ ಕೋಕಿಲ ಸ್ವರಗಳು
ಕೇತಕೀ ಕ್ಯಾದಿಗಿ ಕಮಲಕುಸುಮ ನೋಡಿದ್ಯಾ
ನೂತನ ವಾಗಿರುವ ಪಾರಿಜಾತವ ನೋಡಿದ್ಯಾ

ಮರುಗ ಮಲ್ಲಿಗೆ ಜಾಜೀ ಮಲ್ಲಿಗೀ । ಇರುವಂತಿಗೀ ದವನ
ಸುರಗಿ ಸಂಪಿಗೆಯಿಂದ । ತೋರ್‍ವದೀವನ ।
ಭ್ರಮರಗೀತಗಳಿಂದ ಕೂಡಿ ಆಡುವ ಸ್ಥಳವಿದು
ಪರಮ ಪುರುಷ ನರಸಿಂಹ ವಿಠಲರಾಯನ
ಪಾದಘೋಳಿಗಳಿಂದ ಶೋಭೀತವಾಗಿದೀವನ

ಮಂಗಳ ಮಾಧವನ । ಶೃಂಗಾರನೋಡೇ । ಕಂಗಳಿಗ್ವರುಷವು
ಹಿಂಗದೆ ತೋರ್ಪುದು ಪ

ಕದಳೀ ಕಜೂರ । ಮಾದಳನಿಂಬೆ । ಕಿತ್ತಳಿ ಪನಸುಗಳ
ಚಿತ್ರವೇನೆಂಬೆ । ಮಂದಾರ ಮಲ್ಲಿಗೀ ।
ಸುವಾಸನೆಯ ಕ್ಯಾದಿಗೀ ಗಂಧಗಾಳಿಗಳಿಂದಿರುವೋವನ
ರಂಜಿತ ವನ ದೋಳ್ । ಅಂಜೂರ ದ್ರಾಕ್ಷಿಗಳು । ರಂಭಾದಿ
ಫಲಗಳ ಚಂದದಿ ತೋರ್ವುದು । ಅಗುರ ಚಂದನ
ಹ್ಯಾಗಿಹ್ಯಾದೀವನ ಭೋಗೇಶನೀದಿನ । ಹ್ಯಾಗಿನ್ನ
ವೋಲಿವೋನೆ ॥೪॥ ನರಸಿಂಹ ವಿಠ್ಠಲಾನ । ಸ್ಮರಿಸೂತ
ಲನುದಿನ । ಸರಸೀಜ ಮುಖಿಯೇರು ಹರುಷದಿ ನುಡಿದರು ॥
ಪರಿಪರಿ ವೃಕ್ಷವು । ತರತರ ಪಕ್ಷಿಯು । ಹರದೇರು
ನೋಡಾಶ್ಚರ್‍ಯದಲಿ । ಪರಮ ಪುರುಷನ ಕೂಡುವಾತುರದಲಿ
ಹರದೇರು ವ್ರತಗಳಾಚರಿಸಿದರು ॥ ಕಂತುಪಿತನು
ಇದರಂತರಾತಿಳಿದು । ಸಂತೋಷದೀ ಶ್ರೀಕಾಂತನೂ ತಾ ।
ಕಾಂತೇರ ಮನದಭೀಲಾಷವು ಸಲಿಸಲಿ । ನಿಂತನು
ನೀರಾಟದಾ ಬದಿಯ ॥ ಪರಮ ಪುರುಷತಾ ।
ಮರದಲಿಕುಳಿತಿಹಾ । ಹರದೇರ ಚೆರಿಯವ ನೋಡುತಲಿ ।
ವರದ ಶ್ರೀ ನರಸಿಂಹ ವಿಠಲರಾಯನು । ಮರದಲಿ
ಮರಯಾಗಿರುತಿಹಾನೂ ॥

## ವಚನ

ಹರಿವೋಜಲಗಳ ನೋಡೇವರ ಮೋಹನಾಂಗಿನಿ ॥
ನವರತ್ನ ಖಚಿತ ಸೋಪಾನಗಳಿಂದ । ಮತ್ಸ್ಯ ಮಂಡೂಕಾದಿ ।

ಮೊಸಳಿ ಕೂರ್ಮಗಳು । ಸ್ವಚ್ಛಜಲ ಕುಕ್ಕುಟವು ಸ್ವೇಚ್ಛ
ಆಡುವುದು । ಪಚ್ಚನೀಲಗಳ ಅಚ್ಚಯಮುನಿಯಾ
ನೀರ ॥ ಅಚ್ಯುತಾನಂತ ಹರಿ ಮೆಚ್ಚುವೋಜಲವೋ
ಜಲಜಂತುಗಳಿಂದ ಜಳಜಳಿಸುವೋ ಜಲವೋ ।
ನಳಿನಾಕ್ಷಿನೋಡೆ ಈ ಮಳಲ ಶೃಂಗಾರವೋ
ತೆತ್ತಿಸಾಕೋಟಿ ದೇವತ್ಯಾರೆಲ್ಲ ಅತ್ಯಂತ ಹರುಷದಲಿ
ಆಡುವೋ ಸ್ಥಳವೋ ॥ ಕನ್ನಿಕೆಯರೇ ಕೇಳಿ ಧನ್ಯರಾದವೇ
ನಾವು । ಈ ನದಿಯಲೀ ಸ್ನಾನವನ್ನೆ ಮಾಡಲು
ಇಂತುಪರಿ ಶೋಭಿಸುವ ಯಮುನ ತೀರವ ನೋಡಿ ।
ಕಾಂತೆಯರ ಭ್ರಮಗೊಳಿತು । ಸಂತೋಷದಿಂದ
ಉಡುಪ ಮುಖಿಯರು ತಾವು । ಉಡುವ ವಸ್ತ್ರಾಬಿಟ್ಟು
ನಡುನೀರಿನೊಳಗೆ ನಡೆತಂದರಾಕ್ಷಣದಿ । ಉಕ್ಕೇರಿ
ಬಂದ ಮದಸೊಕ್ಕಿದಾ ಗಜದಂತೆ ಅರ್ಕವದನೆಯರು
ಆಡುತಲಿದ್ದರು ।

ಕಮಲಾಕ್ಷಿಯರಾಡಿದ ಆಟ । ಕಾಂತಿಯರೆಲ್ಲರೂ ಪ

ಕಾಳೀಯ ಮಡುವನು ಕಲಕುತ ತುಳಕುತ ಅ.ಪ

ಕೀರ ವಾಣಿಯರೆಲ್ಲರೂ । ಕರಿಯ ಮರಿಗಳಂತೆ ।
ಸರಿದಾಡಿ ತೋರುತ್ತ । ಹರದಿಯೇರು । ಶರಧಿಯೊಳು ೧

ನವಯೌವನಾದವರು ನಾರಿಯಾರೆಲ್ಲರೂ । ನರಸಿಂಹ
ವಿಠಲನೆದುರಾ ಕಮಲಾಕ್ಷಿಯೇರಾಡಿದರಾಟ ೨

## ವಚನ

ಮಾನಿನೀಯೇರು ತಾವು । ಮದಗಜಾದಂದದಲಿ । ಮೈ
ಮರೆತು ಆಟಗಳನಾಡುತಿರಲಿ । ಆಗೆ ಮರದಾಮೇಲ್
ಕೂತಿಹ । ಮಹಾಮಹಿಮ ತಾನೆದ್ದು । ಹರದೀಯೇರ
ವಸ್ತ್ರವನು ಎಲ್ಲವನು ತಾಕದ್ದು । ಮೆಲ್ಲನೇ

ಮರಸೇರಿ ಕೂತಿಹಾನು ಹರಿತಾನು । ಫುಲ್ಲಾಕ್ಷಿಯೇರಾಟ
ವಾಡುತಲಿಹರೋ ಸ್ತ್ರೀಯರು ॥
ಸಾರಸಾಕ್ಷಿಯೇರು ನೀರಾಟವಾಡುವ್ರೋರು । ಹಾರಪದಕಾ
ವಂಕಿ ದ್ವಾರ್ಯ ಹೊಳೆಯುತ್ತಾ ಪ

ಸಿಂಗನಂದದಿ ನಡುವಂಗ ಬಳುಕುತ್ತಾ । ಅಂಗನೀಯರು
ಬ್ಯಾಗ । ರಂಗನೆದುರಾಗಿ ೧

ನಗೆ ಮುಖಾದಿಂದಲೇ । ನಲಿಯುತ್ತಲೇಬಾಲೆಯೇರ
ಹಗಲು ಸೂರ್ಯನಂತೆ । ಮಿನುಗುವಾ ಕಾಂತೆಯೇರ ೨

ಲಕ್ಷ್ಮೀದೇವಿಗೆ ಸಮಸಾಕ್ಷ್ಯ ಹೋಲುವರು
ಪಕ್ಷಿವಾಹನನಲ್ಲೇ ಲಕ್ಷ ಇಡದಾಲೇ ೩

ಕಲಶಕುಚ ಬಾಲೆಯರ । ಕೀಲಾಲದ ವ್ಹಾಣಿರ ।
ಕಾಲನಯ್ಯನ್ನ ಮುಂದೆ । ಕಾಂತೆಯೇರ ಹಿಂದೇ ೪

ಬಟ್ಟೆ ಬಿಟ್ಟು ದೂರ । ತೋರುತ ವೈಯಾರ ।
ದಿಟ್ಟ ನಾರಸಿಂಹ । ವಿಠಲಾನೆದೂರ ೫

## ವಚನ

ಕೇಳು ಪರೀಕ್ಷಿತನೇ । ಪೇಳುವೆನು ಗೋಪಾಳಿಯರ ಆ
ವೇಳ್ಯಾದಲಿ । ಸೌಳಸಾಸಿರ ಜನರೆಲ್ಲ ಕೂಡಿ । ಭಾಳ
ಸಂತೊಷದಿಂದಾಟವನಾಡಿ । ಮಡದಿಯರು
ಬಂದಾಗ । ಮುಡಿವರಿಸ ಬೇಕೆಂದು । ದಡದಮ್ಯಾಲೆ ।
ನೋಡಲೆ ವಸ್ತ್ರಗಳ ಕಾಣದಿಹರೋ ಸ್ತ್ರೀಯರು ।
ಯೇನಿದು ಎನ್ನಾ ನೀಯಾತಕೆ ತಡೆದಿಯೇ । ಏನಿದು
ಆಶ್ವರ್ಯ । ಯಾರದು ಈ ಚರ್ಯ । ಮಾಡಿದರೀ ಪರಿಯ
ನೋಡಲಾಶ್ಚರ್ಯ ಪ

ಲೆಕ್ಕವಿಲ್ಲದೆ ವಸ್ತ್ರ ಇಕ್ಕೊ ಇಟ್ಟವಲ್ಲೇ ಅಕ್ಕ ನೀ
ನೋಡೆ ಇಲ್ಲೆದಿಕ್ಕು ತೋರದಲ್ಲೆ ೧

ಸುಳಿಗಾಳಿಗಳಿಂದ ಬಳಲುತೀಹುದು ದೇಹ
ಸುರಿವೋದು ಮೈ ನೀರ । ತಿಳಿವೋದಿನ್ಯಾರ ೨

ನಿಂತೆವಲ್ಲ ಯಾರು । ಪೊರೆಯುವೋರಿಲ್ಲ ನಾರಸಿಂಹನೆ ।
ಬಲ್ಲ । ನಾರೇರ ದುಃಖವೆಲ್ಲ ।
ಏನು ಮಾಡೋಣ ನೀರೆ ಮಾನಕಿನ್ನು ಬಂತು ಸೂರೆ ।
ಮಾನಿನಿ ಉಪಾಯ ತೋರೆ ಮಾನದೋಳು ಮಾತು ದಾರೆ
ವಬ್ಬರನ್ನು ನೋಡಲಿಲ್ಲ ಕೊಬ್ಬಿನಿಂದಾಡಿ ದೇವಲ್ಲೆ
ಹಬ್ಬಿದ ಶೀರಿಗಳೆಲ್ಲೇ । ಅಬ್ಬರ ತೋರುವುದರಲ್ಲೇ ೧

ನೀರೊಳಗೆ ಪೋದವೇನೋ । ಮಾರುತೀಶ ಒಯ್ದನೇನೋ ।
ಮಾಯವಾಗಿ ಪೋದವೇನೋ ಮಾನಗೇಡು ಬಂದಿತೇನೋ ೨

ಯಾರಿಗ್ಹೇಳೋಣ ದೂರು । ಯಾರು ನಮ್ಮ ರಕ್ಷಿಪೋರು ।
ನಾರಸಿಂಹ ನೀನೆ ಬಾರೋ । ಸಾರಸೌಖ್ಯವನ್ನೇ ತೋರೋ ೩

ಯಾರಿಗ್ಹೇಳೋಣ ನಾವು ಘೋರ ದುಃಖವ ಸಖಿ ಪ

ಬಂದವಾರುಯಾರು ಇಲ್ಲೆ ಬಂದು ಕಾಣಲಿಲ್ಲವಲ್ಲೆ ಮಂದ
ಗಮನೆ । ಮುಂದೆಯೇನೇ ಮಂದಿರಾಕ್ಕೆ ಪೋಗೋದು ೧

ಏನು ಮೋಸವಾದೀತಲ್ಲ । ಶ್ರೀನಿವಾಸ ತಾನೇ ಬಲ್ಲ ।
ಮಾನಹೀನವಾಯಿತಲ್ಲ । ಏನುಮಾಡುವ ಆಹಾ ೨

ಇಷ್ಟು ಜನರೋಳು ಮಾನ । ಭ್ರಷ್ಟರಾದ ಮ್ಯಾಲೆ ಇನ್ನು ।
ಸುಟ್ಟ ಜೀವ ಯಾತಕನ್ನು ಬಿಟ್ಟು ಪೋಗುವ ಆಹಾ ೩

ಹಿಂದೆಯಾರ ಮರಿಯಾದಿ ಇಂದೆ ಹೀನ ಮಾಡಿದೇವ್ಹೋ
ಇಂದಿರೇಶ ಇಂದು ನಮಗೆ ತಂದನಲ್ಲವೇ ಸಖಿ ।
ಬಾರದಿತ್ತೀಗ ಬಂದೆವು ಯಾರಮುಖವ ನೋಡಿದೇವು ।
ನಾರಸಿಂಹ ವಿಠ್ಠಲ ತಾನೇ ಪಾರುಗಾಣಿಪ ಆಹಾ ೪

## ವಚನ

ಬಾಲಿಯೇರು ಈ ರೀತಿಯಿಂ । ಆಲಾಪವನೇ ಮಾಡಿ ।
ಬ್ಯಾಗ ಶ್ರೀಲತಾಂಗಿಯರೆಲ್ಲ ಕೂಡಿ । ಇಂಥ ಕಾಲ
ಬಂತೀಗ ನೋಡಿ । ಇರಲಿ ಆಲಯಕೆ ಹೇಗೆ ಪೋಗುವುದು
ಹ್ಯಾಂಗೆನುತ । ಸೀರೆಗಳ ನೆನೆನೆನೆದು ಹಲಬುತುಹ್ಯಾರ
ಕಾಲದಲ್ಲಿ ಅಲ್ಲಿ ।
ವಸ್ತ್ರಾಗಳ ಸಖಿ ಯಾರೀಗ ಒಯ್ದಿ ಹ್ಯಾರೆ ಪ

ತಾರಕಿಗಳ ಜರತಾರಿಯ ಶೀರಿಯ । ನೀರಜಾಂಭಕಿ
ಪೇಳೆನ್ನ । ಸರಸಿಜಮುಖಿಸಖಿ ಎಳಿಗೆ ಸಾವಿರ ೧

ವರಹ । ಗಿಳಿಯ ಪೀತಾಂಬರ ನಳಿನ ಮುಖಿಯೇ
ಪೇಳೆನ್ನ । ಗಿಳಿಯ ಪೀತಾಂಬರ ನಳಿನ ಮುಖಿಯೇ
ಪೇಳೆನೀ ಸರಸಿಜಮುಖಿಸಖಿ ೨

ಸಾಸಿರವರಹಾದ ಕಾಶಿಯ ಸೀರೆಯ
ಮೋಸವಾಯಿತೇ ಸೀರೆಯು
ಕೇಳೆ ನೀ ಸರಸಿಜಮುಖಿಸಖಿ ೩

ಹಸುರುತಾವುತೀಸೀರಿ । ಹೊಸದಾದ ಕುಪ್ಪಸ । ಕುಸುಮ
ಗಂಧಿಯೇ ಪೇಳೆ ನೀ । ಸರಸಿಜಮುಖಿಸಖಿ ೪

ನರಸಿಂಹವಿಠ್ಠಲ ಅರಸುತಾನೇ ಬಲ್ಲ ಸರಸಿಜಮುಖಿ ಸಖಿ ೫

## ವಚನ

ಬಿಸುಜಾಕ್ಷಿಯೇರು ಈ ರೀತಿಯಂ । ವಶವಲ್ಲದಲೇ
ಚಿಂತಿಸುತಾ । ಚೆಲ್ವ ಕುಸುಮಗಂಧಿಯರೆಲ್ಲ ಕೂಡಿ । ತಾವು
ಅತಿಭಯದಿಂದೇ ಮಾತನಾಡಿ । ನಸುನಗುತ ಮರದ
ಮ್ಯಾಲೆ ಕೂತಿಹಾನು ಹರಿ ತಾನು । ಕುಸುಮ
ಗಂಧಿಯರ್ । ನೋಡದಲೇ ಉಸುರು ತಿಹರು ।
ಸ್ತ್ರೀಯರು ।

ಅತ್ತಿಮಾವ ಬಲೆಗತ್ತಿನವರು ಯಿನ್ನೆತ್ತಪೋಗೋಣೆ
ಹತ್ತಿಲ್ಲಿದ್ದ ಜನ ಸುತ್ತುಗಟ್ಟು ತಲಿಹತ್ತಿ ಬಡಿಯರೇನೆ ಪ

ಪತಿಯು ಕಂಡರೆನ್ನ ಹತಮಾಡುವ್ರೋನೇನೆ ಗತಿಯು
ಪೇಳೆನೀನೆ । ಮತಿಹೀನನು ಮೈದುನನು
ಮನೆಯಳ ಗತಿಯಿನ್ನು ಏನೇ ೧

ಅರಳುಮಲ್ಲಿಗೆಯಂತೆ । ಸರಳಿನ ಶೀರೆಯು । ಮರುಳು
ಗೈಯ್ದುದಲ್ಲೇ । ದುರುಳೆ ಅತ್ತಿಗೀ । ನಾದುನೀ
ಮನೆಯೊಳು ಕೊರಳು ಕೊಯ್ವರಲ್ಲೆ ೨

ಮುತ್ತಿನಾಶೀರೆಯು । ಕುತ್ತಣೀಕುಪ್ಪಸ । ಇವತ್ತು
ತಂದರಲ್ಲೆ । ಸತ್ಯವು ಕೇಳಿರುವ । ಹತ್ತುಸಾವಿರ
ಬೆಲಿ ವ್ಯರ್ಥವಾಯಿತಲ್ಲೇ ೩

ಕಂದರಗಲೀ ನಾವು ಬಂದೇವು ಇಲ್ಲಿಗೇ
ಮುಂದೇನುಗತಿಯಿಲ್ಲ ತಂದೆ ಶ್ರೀನರಸಿಂಹ
ವಿಠ್ಠಲರಾಯ ನೊಂದೇ ತಾನೇಬಲ್ಲ ೪

ಕುಸುಮಗಂಧಿಯೇರು । ಈ ರೀತಿಯಿಂ ವ್ಯಸನಬಡುತಿರಲು ।
ಆಗ । ವಸನರಹಿತರಾಗಲೂ । ಬಿಸಜಾಕ್ಷನ ಹೂರತಿನ್ಯಾ
ರಿಲ್ಲವೆಂದು । ಆ ಸಖಿಂಯೇರು ಕೂಡಿ ಯೋಚಿಸುವ್ರೊ

## ವಚನ

ಗೋಪಿಯೇರು ಈ ರೀತಿಯಿಂ । ಗೋಪಾಲನನ್ನೇ
ಕುರಿತೂ । ಆಗ ಕೋಪದಿಂದ ನುಡಿಯೇ ಕೆಲವು
ಗೋಪಿಯರೆಲ್ಲ । ನುಡಿಯಬ್ಯಾಡಿರೋ ಇಂಥ
ಬಿಡಿಯ ಮಾತುಗಳನು । ಹಿಡದುದನ್ನು
ಅವನು ಬಿಡುವವನಲ್ಲ । ಬಿಡದೆ ಚರಣ
ಗಳನ್ನು । ಬೇಡವೋನೆಂದು । ನುಡಿದು ನುಡಿದು
ಬೇಡುತ್ತಿದ್ದರು । ಸ್ತ್ರೀಯರೂ

ಪಾಲಿಸೆನ್ನಯಾ । ಪಾಂಡವಾ ಪ್ರಿಯ ಪ

ಬಾಲೆರೊಳಗವಮಾನ । ಮಾಡಿನೀ ನೋಡಿ ಅ.ಪ.

ಅತ್ತಿ ಬೈಯ್ಯುವೋಳೋ ಹೊತ್ತು ಹೋಯಿತೇಳು ।
ಬೆತ್ತಲೀರ್ವೆಕೇಳು ಮತ್ತೆನೀರೋಳು ೧

ಬಿದ್ದೇವೋ ನಿನ್ನ । ಮುದ್ದು ಪಾದಕಿನ್ನ । ಎದ್ದು
ಬಂದು ಘನ್ನ । ಉದ್ಧರೀ ನೆನ್ನ ೨

ದಿಟ್ಟ ನಾರಸಿಂಹ ವಿಠ್ಠಲೇಶ ಇನ್ನ ತಟ್ಟನ್ವೋಸ್ತ್ರವನ್ನ
ಕೊಟ್ಟು ರಕ್ಷಿಸೆನ್ನ ೩

ತೋರೋ ನೀ ಮುರಾರಿ ಸಿರಿ । ವಾರಿಜಾಂಬಕಾ
ಸಾರಿ ಬೇಡಿಕೊಂಬೆವೀಗೆ । ನೀರಜಾಂಬಕಾ ಪ

ಮುತ್ತಿನಂದ ದೇಹದಿಂದ । ಪೊತ್ತುಗಿರಿಯ ಬೆನ್ನಿನಿಂದಾ
ಸುತ್ತಿಲ್ಯದ ಭೂಮಿತಂದಾ । ಮತ್ತೆ ಹಿರಣ್ಯಾನಕೊಂದ ೧

ಪುಟ್ಟಬ್ರಾಹ್ಮಣನಾಗಿ ಬಂದು । ಹುಟ್ಟಿ ಕ್ಷತ್ರಿಯೇರಕೊಂದು ।
ಕಟ್ಟಿ ಸೇತು ಸತಿಯ ತಂದು । ಕೃಷ್ಣನೇ ದಾಯಾದಿಯಂದು । ೨

ಮುಪ್ಪುರರ ಸತಿಯರ ವ್ರತವ । ತಪ್ಪದೇ ಕೆಡಸೀದಿ
ಹತ್ತಿಮೆರೆವ ನಾರಸಿಂಹ । ವಿಠ್ಠಲರಾಯನೇ ಎಂದು ೩

## ವಚನ

ನೀಲವೇಣಿಯರ । ಯೀರಿತಿಯ । ಆಲಾಪವನು ಕೇಳಿ
ಬ್ಯಾಗಶ್ರೀ ಲತಾಂಗಿಯೇರೆಲ್ಲ । ಬಳಲಿದಾರೆಂದೆನುತ ।
ನೀಲವರನು ತಾ ನಸುನಗುತ ಮಾತಾಡಿದ
ನಾ ಕಾಲದಲ್ಲಿ ಅಲ್ಲಿ ॥
ಯೇನ್ಹೇಳಲೀ ನಿಮಗೀಗ । ಯೇಗೋಪಿಯರೆ ಬ್ಯಾಗಾ ।
ನಿರ್ವಾಣದಿಂದ । ನೀರೊಳಗೇನು ಚಂದ । ಸರ್ವ
ದೇವುತೆಗಳ । ಮರಿಯಾದಿ ಮಾಡಿದಿರೇನ್ಹೇಳಲಿ ೧

ಜಲದೊಳಗಾಡಿ । ಜಲಭಯಾ ನೋಡಿ । ಭರದಿ
ಅವಮಾನ ಮಾಡಿದಿರೇನೇಳಲಿ ೨

ನಿಂತು ಕೈಮುಗಿಯಲು । ಯಂತವ ಗುಣಗಳ
ಶಾಂತ ಶ್ರೀ ನರಸಿಂಹಾ । ವಿಠಲ ಸಂತೈಸುವೋನೆ ೩

## ವಚನ

ಇಂದು ಮುಖಿಯರೇ ಕೇಳಿ । ಹಿಂದಿನಾಪರಾಧಗಳ ।
ವಂದ ನೆಣಿಸದೆ ನಾನು \ ವಂದಿಸಿದಿರೋ ವಸ್ತ್ರವನು
ತಂದು ಕೊಡುವೇನು ಎನಲು । ಇಂದಿರೇಶ ವಾಕ್ಯ
ಕೇಳುತಲೆ ಹೀಗೆಂದರೂ ಸ್ತ್ರೀಯರೂ ।
ಚೆಂದವೇನೆಲೊ ನಿನ್ನಾ । ಇಂದು ವಚನವನ್ನಾ ।
ಮಂದರೋದ್ಧರ । ಹೀಗೆಂದು ನುಡಿವೊದು ಪ

ನಿರ್ವಾಣದಲಿನಿಂತ ।ಆ ನೀರಜಾಕ್ಷಿಯರು । ಸಾರಿ
ವಂದಿಪುಧ್ಯಾಂಗೊ । ಮಾರಸುಂದರಾ ೧

ಸರಸಿಜಾಕ್ಷನೆಯೆಂಥಾ । ಧರಿಸೋರೆ ಪಂಥಾ
ಹರುಷದಿಂದಲಿ ವಸ್ತ್ರಾ ಕೊಡುಲಕ್ಷ್ಮಿಕಾಂತಾ
ಮೊರೆಹೊಕ್ಕ ಜನರನ್ನೇ । ಪೊರೆಯಬೇಕಲ್ಲೋ
ನರಸಿಂಹ ವಿಠಲಾ । ನಿನ್ನೊರತ್ಯಾರಿನ್ನಿಲ್ಲೋ ೨

ಮಂದಗಮನೇರ ವಾಕ್ಯ ಚೆಂದದಿಂದಾ ಕೇಳಿ ।
ಮಂದಹಾಸದಿ । ಗೋವಿಂದ ನುಡಿದಾ । ಜಲಜಾಕ್ಷಿ
ಯೇರೆ ಕೇಳಿ । ಜಲದೊಳಗೆ ನೀವಿನ್ನು ಕಲಹಂಸ
ಕಲಹಂಸಗಮನೆಯರು । ಬರೆಮ್ಮೈಗಳಿಂದಾ
ಇಳಿದು ಅಪರಾಧವನು । ತಂದು ಕೊಡುವೆನೆಂದೆನಲು
ಮಂದರೋದ್ಧರನ ವಚನವನೇ ಕೇಳುತಾ
ಹಿಂಗೆಂದರೂ ಸ್ತ್ರೀಯರೂ ।

ಯಿನ್ಹ್ಯಾಗೆ ಮಾಡೋಣವೇ ಸಖಾನಾವಿನ್ಹ್ಯಾಗೆ ಮಾಡೋಣವೇ ಪ

ಅಂಬರವಿಲ್ಲದೆ । ದಿಗಂಬರವೇಷದಿ
ಅಂಬುಜೊದ್ಭವಗೀಗ । ವಂದಿಸೂವಧ್ಹ್ಯಾಂಗೆ ನಾವ್ ೧

ಯಿಂದು ವದನೆಯರೇ ಕೇಳಿ । ಹಿಂದೆ ಮುಂದೆ ಮಾಡುತ್ತ
ಒಂದು ಕೈಯಿಂದೆ ಹರಿಗೆ । ವಂದಿಸಿನಾ
ವಿನ್ಹ್ಯಾಂಗೆ ಮಾಡೋಣವೇ ೨

ಕೆಲವು ಸಖಿಯರು ತಾವು । ಜಲದೊಳಗೆ ನಿಂತರು
ಬಲದ ಹಸ್ತದಿಂದ । ಹರಿಗೆ ವಂದಿಸಿದರು ೩

ಪಕ್ಷಿವಾಹನಾ ಅಕ್ಷಿಗೇ । ತಾವೀಕ್ಷಿಸದಂದಾದಿ ಮಾಡಿ
ವೃಕ್ಷದಾಕುಕ್ಷಿಯೋಳ್ । ಕಮಲಾಕ್ಷಿಯೇರು ನಿಂತರೂ ೪

ವಾಮ ಹಸ್ತಗಳಿಂದೆ । ಬಾವನೀಯರು ಮುಚ್ಚುತಾ
ಮಾನನೀಯರು ಶ್ರೀ ನರಸಿಂಹ ವಿಠಲಾಗೆ ವಂದಿಸಿದಾರು ೫

## ವಚನ

ನಳಿನಾಕ್ಷಿಯೇರುತಾವು । ನಾಚುತಲಿ ನಡುಗುತಲಿ ।
ಜಲಜಾಕ್ಷಿನ ಮುಂದೆ । ತಲೆಯುತಗ್ಗುತಲಿ । ಕೆಲವರು
ನಿಂತು । ಕೆಲವರು ಕೂತು । ಕೆಲವರು ಹಿಂದು ಮುಂದಾಗಿ
ವಂದಿಸಲು । ಮಾನಿನೀಯರೆ ಕೇಳಿ । ಮಹಾಪರಾಧವನು
ಮಾಡಿದಿರಿ ನೀವಿನ್ನು । ಪೇಳಲಿನ್ನೇನು । ಮೊದಲು
ಜಲದೊಳಗೆ ನಿರ್ವಾಣದಲ್ಲಿ । ನಿಂತು ಮುಳುಗಿದಿರಿ
ಮತ್ತೊಂದು ಕರದಿಂದಲೊಂದಿಸಿದರೆನಗೆ ।
ಮತ್ತೊಂದು ಮನೆ ಬಿಟ್ಟು ಇತ್ತಿತ್ತ ಬಂದನೆನ್ನಾ ।
ಹತ್ತಿಲೇ ನಿಂತೆರಡು ಎತ್ತಿ ಕರಗಳನು । ಮತ್ತೆ
ಮುಗಿಯಲು ವಸ್ತ್ರಯಿತ್ತೆ ಕೊಡುವೆನೆನಲು ।
ಚಿತ್ತ ಜಾಕ್ಷನ ವಚನವ ಕೇಳುತಲಿ । ಮತ್ತೇನೆಂದರೂ
ಸ್ತ್ರೀಯರು ॥

ವಂದಿಸಿ ಬೇಡಿದರು । ವಸ್ತ್ರಗಳ । ವಂದಿಸಿ ಬೇಡಿದರು ।
ವಂದಿಸಿ ಬೇಡಿದರಾನಂದದಿಂದ ಸುಂದರಾಗೆ ।
ಚಂದದಿಂದೆ ಕರಗಳ ನಿಂತು ಮುಗಿಯುತಾಲೆ ಪ

ಚಂಚಲಾಕ್ಷಿಯರ ಮುಖ । ಮಿಂಚಿನಂತೆ ಹೊಳೆಯುತ್ತಾ ।
ಕಂಚುಕಾ ವಸ್ತ್ರಗಳನು । ಮುಂಚಿಕೊಡು ಹರಿಯಂದು ೧

ನೆತ್ತಿಯ ಮ್ಯಾಲೆರಡು ಕರ । ವತ್ತಿ ಮುಗಿಯುತಾಲೆ ।
ಚಿತ್ತಜಾಪಿತನೆ ನಿನ್ನಾ । ಚಿತ್ತಪೂರೈಸೋಯೆಂದು ೨

ಕಂತುಪಿತ ನಾರಸಿಂಹ ವಿಠಲನ ಎದುರಿಗೆ ।
ಕಾಂತೆಯರು ಕರಗಳ ನಿಂತು ಮುಗಿಯುತಾಲೇ ೩

## ವಚನ

ರಾಜಶೇಖರ ಕೇಳು । ರಮಣಿಯರು ಅವ್ಯಾ ಕ್ಯಾ ।
ಶಿರದಲ್ಲಿ ಕರಜೋಡಿಸಿದ್ದಾರೋ ಆಗ । ಹರದಿಯರು
ಶಿರ ಬಾಗಿಸಿಹ್ಯಾರೋ । ಎರಡು ಕರಗಳನೇ ಮುಗಿದು
ಬೇಡುವರೋ । ಹರದೇರು ಬಂದಾಗ ಹರಿಯೆದುರು
ನಿಂದು ಸ್ಮರಿಸುತಲಿ ವಂದಿಸಲು । ಕರುಣಾಳು ಹರಿ
ವೊಲಿದನಾಗ ಬೇಗ
ಒಲಿದನೊಲಿದನಾಗ ವಾರಿಧಿ ಶಯನ । ಲಲನೆಯರೊಡನೆ
ತನ್ನ ಛಲಜರುಗಿಸಿಕೊಂಡು ಪ

ಪಕ್ಷಿವಾಹನ ತಾನು ವೃಕ್ಷದಿಂದಿಳಿದು । ಅಪೇಕ್ಷ
ಸತಿಯರ । ಮನವನ್ನು ತಿಳಿದು ತರುಣಿಯರ ೧

ವಸ್ತ್ರವ ಕರುಣಿಕೊಟ್ಟು । ಶರಣಾಗತರಲ್ಲೇ
ಮನವನ್ನು ಇಟ್ಟು ಮಂದರೋದ್ಧರ ೨

ಗೋವಿಂದ ನಲಿಯುತ್ತಾ ಆನಂದದೀ ಸತಿಯರ । ಮುಖವ
ನೋಡುತಾ । ವಾಸುಕೀಶಯನ ಸಂತೋಷತೋರುತ್ತಾ ೩

ಸುವಾಸಿನಿಯರೊಡನೆ । ವಿಳಾಸಮಾಡುತ್ತಾ ನರಸಿಂಹ
ವಿಠಲ ತನ್ನರಸಿಯಾರೊಡನೆ । ಸರಸ ಸಲ್ಲಾಪವ
ಮಾಡುತಲಿ ಹಾನ ೪

## ವಚನ

ಮಂದರೋದ್ಧರ ತಾನು । ಮಾನಿನೀಯರಿಗಾಗ ।
ಚಂದದಿಂದ ವಸ್ತ್ರಗಳ ನೀಡುತಲಿ । ವಿನ್ಯಾಸದಿಂದಾಟ
ಗಳನಾಡುತಲಿ । ಚೆಲ್ವ ಮಂದಗಮಂನೆಯರ ಕೂಡುತಲಿ ।
ರೂಪದಲ್ಲಿ । ಇಂದಿರೇಶನು ತಾನು । ಚಂದದಿಂದಾಡುತಿರುವಾ ।

ರವವ । ಕೇಳಿ ಅಂಬರದಲ್ಲಿ ಸುರರೆಲ್ಲ । ಬ್ಯಾಗ
ಬಂದು ನೋಡುತಲಿದ್ದರೆಲ್ಲ । ಚೆಲ್ವನಂದು ಜನ
ಕೊಂಡಾಡ್ವರಲ್ಲಿ । ತ್ವರದಿ ಗೋವಿಂದನಾ ಶಿರದಲ್ಲಿ ।
ಮಲ್ಲಿಗೆಯ ಮಳೆ ಕರೆದು । ತರುಣಿಯರು ಕೊಂಡಾಡುತ
ಲಿದ್ದರು ಸುರರು । ಸ್ತ್ರೀಯರು ।

ಯೇನುಪುಣ್ಯವಂತರೋ ಮಾನಿನೀಯರೋ ಶ್ರೀನಿವಾಸ
ಪಾದಗಳನು ಧ್ಯಾನ ಮಾಳ್ಪರೋ ಪ

ಹಗಲು ಇರಳು ಹರಿಯ ದಿವ್ಯ । ಬಗಲೊಳಿರ್ಪರೋ
ಯೀ ಹಗಲುಯ್ಯಾಲೆ ಹೆಗಲ ನ್ಹಾಕಿಅಗಲ ದಿರ್ದ್ಪೋರೋ ೧

ಇಚ್ಛೆಯಿಂದೇ ತಪವು ಗೈಯಲು ಮೆಚ್ಚದಿರ್ಪನೋ ।
ಯೀಹುಚ್ಚನಂತೆ ಗೋಪಿಯರಿಗೆ ಯತೇಚ್ಛೆವ ಒಲಿದನೋ ೨

ಸ್ತೋತ್ರ ॥ ಮೂರುತಿಯವಲಿಸಿ । ಪಾತ್ರರಾದರೋ ।
ಯೇ ಪಾರ್ಥಸಾರಥಿದಯದಿ ಪುರಷಾರ್ಥ ಪಡೆದರೋ ೩

ಶೃಂಗಾರದಿ ರಂಗ ನೋಡನೇ ಅಂಗನೇಯರೋ ।
ಮಂಗಳಾಂಗದವರಿಗೆ ಸಂಗ । ಹಿಂಗದೀರ್ಪರೋ ೪

ನಾರಸಿಂಹ ರಾಯನೇ । ಯೀ ಸಲ್ಲಾಪದಿ
ವಿಹಾರ ಮಾಳ್ಪನೋ ೫

## ವಚನ

ಸುರರು ಈ ರೀತಿಯಂ । ಸ್ತ್ರೀಯರನೇ ಕೊಂಡಾಡಿ । ಸುರಿಸಿದರು
ಪುಷ್ಪ ಮಳೆಗಳನೊ ಆಗ । ಮರೆಸಿದರು ಭೇರಿ ಶಬ್ದಗಳನೂ
ಹರುಷದಿಂದಲೀ ಆಗ । ಹರಿತಾನು ಸತಿಯರಿಗೆ । ಅರಸ
ನಪ್ಪಣೆಯ ನೀಡಿದನು । ಸರಸಿಜಾಕ್ಷಿಯರು ಮನೆಗೆ ಬಂದು
ಶೇರಿದರೊ ಸ್ತ್ರಿಯರೋ ॥

ಬಂದು ಶೇರಿದರೂ । ಸುಂದರ ಸ್ತ್ರೀಯರೂ ।
ಮಂದಗಮನಿಯರು । ಮಾನೇರು ನೀ ಪ

ಚೆಂದದಿಂದಲೀ ತಮ್ಮ । ಮಂದಿರದೊಳು ।
ಗೋವಿಂದನ ದಯದಿ ಆನಂದದಿ ೧

ಪಂಕಜಾಕ್ಷಿಯರು ಪಾದ । ಕಿಂಕಿಣಿಗುಟ್ಟುತ ।
ಕಾಂತಿಯರ್‍ಗೆಜ್ಜೆಯಾ ಮೆಟ್ಟುತಾ ।
ವಂಕಿ ಕಂಕಣ ಬಳೆಯು ಝಂಕಾರ ಮಾಡುತ್ತಾ ।
ಅಕಳಂಕ ಚರಿತನ ಕೊಂಡಾಡುತ್ತಾ ಅಂಗಜನಯ್ಯನ ೨

ಅಮಿತಸದ್ಗುಣನ । ತುಂಗ ಪರಾಕ್ರಮರಂಗನ । ಅಂಗನೇಯರು
ಅಲಿಂಗನೇ ಮಾಡಿಕೊಂಡು । ರಂಗನಪ್ಪಣೆ ಕೈಕೊಂಡರೂ ೩

ಸಾರಸಾಕ್ಷನ ದಯಪೂರಿತರಾಗಿ ವಸ್ತ್ರಾನಾರೇರು
ಆಲಂಕಾರವಾದರೊ । ನರಸಿಂಹವಿಠಲನ ।
ಸ್ಮರಿಸುತ ಮನದೊಳು ।
ಅರಸೇರು ಮನೆ ಬಂದು ಶೇರಿದರು ೪

ಮಂಗಳಾರತಿಯ ಬೆಳಗೆ । ಮಂಗಳಾಂಗ ದೇವಗೆ ।
ಪೊಂಗೊಳದಿಂದೆಂಗಳೇರ । ಅಂಗಳದೊಳಗಾಡುವಾಗ ಪ

ಕಾಳಿಯ ಪೆಡಿಯ ತುಳಿದೂ । ಘೂಳಿಯನು ಶೀಳಿದವಗೇ ।
ಕಾಳ್ಗಿಚ್ಚನೇ ನುಂಗಿ ಗೋಪಾಲ । ಬಾಲೆಯೆರಾನಾಳಿದವಗೆ ೧

ಬಂಡಿಯಾದಾ ಚಂಡ ದೈತ್ಯನ । ತುಂಡುಮಾಡಿ ಶೀಳಿದವಗೆ ।
ಹಿಂಡು ದೈತ್ಯರ ಗಂಡನಾದಾ । ಪುಂಡರೀಕ ಪುರುಷಗೆ ೨

ದುಷ್ಟ ಕಂಸಾ । ನಟ್ಟುಳಿಯಾ । ಮೆಟ್ಟಿ ಆಳ್ದ ಕೃಷ್ಣಂಗೇ
ಶ್ರೇಷ್ಠನಾದಾ ನಾರಸಿಂಹ ವಿಠಲ ರಾಯಗೇ ಬೇಗ ೩

೧

ನರಸಿಂಹಾ ಲಕ್ಷ್ಮೀನರಸಿಂಹ ಪ

ನಮಿಸುವೆ ಲಕ್ಷ್ಮೀನರಸಿಂಹ ಅಹಾ ಕನಕಕಶ್ಯಪನಳಿದು
ಜನಕೆ ಸುಖವನಿತ್ತು ಘನಪುರುಷನೆ ಕ್ಷಣ ಕ್ಷಣ ನಮಿಸುವೆ ಅ.ಪ

ಪುಟ್ಟ ಪ್ರಹ್ಲಾದನ ಮೊರೆಯ । ಕೇಳಿ
ಅಟ್ಟಹಾಸದಿ ಕಂಭಸಿಡಿದೂ । ಬಲು
ಸಿಟ್ಟಿನಿಂದಲಿ ಹಲ್ಲು ಕಡಿದೂ । ಅಹಾ
ಕಟ್ಟುಗ್ರತನದ ಕೆಟ್ಟ ಹಿರಣ್ಯನ
ಹೊಟ್ಟೆಯ ಬಗೆದಂಥ ಶ್ರೇಷ್ಠಮಹಿಮನೆ ೧

ಕಂಡು ಹಿಡಿದು ಅವನ ರೆಟ್ಟೆ । ಎಳೆತಂದೂ
ತೊಡೆಯ ಮೇಲಿಟ್ಟೆ । ಬಹು
ಕೆಂಡ ಕೋಪದಿ ಅವನ ಹೊಟ್ಟೆಯಸೀಳಿದ
ಸೊಂಡೂರು ಪುರಮಧ್ಯ ಗುಂಡಿ ನರಸಿಂಹನ
ಕಂಡೆ ಈ ದಿನ ೨

ಸೂರಿಗಳರಸ ಒಡೆಯಾ । ಮೇಲೆ
ಸುರಸೋದರರೊಳುಮೆರೆಯ । ಆಹಾ
ಕ್ರೂರ ದೈತ್ಯನ ಕೊರಳಹರಿದ ಅ–
ಪಾರ ಮಹಿಮಸಿರಿ ಸಿಂಹವಿಠಲ ೩

೨

ನಾರಸಿಂಹ ನಿನ್ನ ಭಜಿಸುವೆನು ಶ್ರೀ ಮಾರಜನಕನೆ
ಸೂರಿಗಳರಸ ಬಳ್ಳಾರಿಲಿ ಮೆರೆವಂಥ
ನಾರಸಿಂಹ ನಿನ್ನ ಭಜಿಸುವೆ ಪ

ಹಗಲು ಇರಳು ನಿನ್ನ ಸ್ಮರಣೆ ಎನೆಗೆ ಮರೆಸ ಬೇಡವೋ
ಹಗರಣ ಮಾಡಿಸಿ ಎನಗೆ ನಿನ್ನ ಸ್ಮರಣೆ ಮಾಡಿಸೋ ೨

ರಮಾ ವಲ್ಲಭ ವಿಠಲ ನಿನ್ನ ನಾಮ ನಿರಂತರ
ನುಡಿಸೋ ಯನೆಗೆ ಸ್ವಾಮಿ ನಿರಂತರ ನುಡಿಸೋ ೩

೩

ತಂದೆ ಶ್ರೀನಿವಾಸ ನೀನು ಬಂದು ಕಾಯೊ ಎನ್ನ
ಸ್ವಾಮಿ ನಿಂತು ಕಾಯೋ ಎನ್ನ ಪ.

ಇಂದಿರೆ ರಮಣನೆ ಬಂಧನ ಬಿಡಿಸೆನ್ನ ತಂದೆ ಗೋವಿಂದ ಅ.ಪ.

ಖಗವಾಹನ ದೇವಾ ಸ್ವಾಮಿ ನಗೆಮೊಗದೊಡೆಯನೆ
ನಾಗಶಯನನೆ ಯೋಗಿಗಳರಸನೆ
ಬೇಗದಿ ಬಂದು ಕಾಯೋ ಎನ್ನನು ೧

ಶೇಷಾಚಲ ನಿವಾಸ ಸ್ವಾಮಿ ಆಸೆಯ ಬಿಡಿಸೆನ್ನಾ
ವಾಸುದೇವ ನಿನ್ನ ಲೇಸು ಕರುಣವ ತೋರಿ
ನಿನ್ನ ದಾಸರ ಸಂಗದೊಳು ಇರಿಸೋ ಎನ್ನ ೨

ರಾಮ ರಾಮ ಎಂಬೋ ನಿನ್ನ ನಾಮನೇಮದಿ
ನುಡಿಸೆನೆಗೆ ರಮಾವಲ್ಲಭವಿಠಲ
ಭಾಮೆಯರರಸನೆ ಪ್ರೇಮವ ತೋರೋ ೩

೪

ಬಂದಾನೋ ಧಯಾನಿದಿ ಬಂದಾನೋ ಪ.

ಬಂದಾನೊ ನಿನ್ನ ದರುಶನ ಮಾಡಿಸಿ ಆನಂದ ಪಡಿಸಿ
ಆನಂದ ಭಾಗ್ಯ ಸುರಿಸಿದೀ ಹರಿಯೆ ಅ.ಪ.

ನೀನು ಬಿಡದೆ ಎನ್ನನು ಕರೆಸಿ
ನಿನ್ನ ಭಕ್ತರ ಸಂಘದೊಳು ಬೆರೆಸಿ
ನಿನ್ನ ದ್ವಾರದೆದುರಿಗೆ ಸ್ಥಳವ ಕೊಡಿಸಿ
ನಿನ್ನ ಪುಷ್ಕರಣಿ ಪ್ರೋಕ್ಷಣೆ ಮಾಡಿಸಿ
ವರಹದೇವರ ದರುಶನ ಮಾಡಿಸಿ 	೧

ನಿನ್ನ ಧರ್ಮ ದರ್ಶನ ಎನಗೆ ಕೊಡಿಸಿ
ನಿನ್ನ ಪುಷ್ಕರಣಿ ಸ್ನಾನವ ಮಾಡಿಸಿ
ನಿನ್ನ ಭಕ್ತರ ಮಠದಿ ಊಟವ ಮಾಡಿಸಿ
ನಿನ್ನ ಕಲ್ಯಾಣೋತ್ಸವ ತೋರಿಸಿ ಆನಂದಪಡಿಸಿ 	೨

ನಿನ್ನ ವಸಂತೋತ್ಸವ ಎನಗೆ ತೋರಿಸಿ
ನಿನ್ನ ಉತ್ಸವದೊಳೆನ್ನ ದಣಿಸಿ
ನಿನ್ನ ಏಕಾಂತ ಸೇವೆ ಎನ್ನಿಂದ ಮಾಡಿಸಿ
ರಮಾವಲ್ಲಭವಿಠಲನ ಮನದಲಿ ನಿಲಿಸಿ ನಲಿಸಿ 	೩

೫೫

ಬಾರಯ್ಯ ಎನ್ನ ಹೃದಯ ಮಂದಿರಕ್ಕೆ
ತೋರೈಯ್ಯ ಚರಣವ ಕ್ಷೀರಾಬ್ಧಿಶಯನಾ 	ಪ.

ಒಂದೂ ಅರಿಯದ ಮಂದಮತಿಯ
ಬಂದೂ ನೀ ಕಾಯೋ ಸಿಂಧುಶಯನನೇ 	೧

ವಾರಿಧಿ ತಂದೆ ಕ್ಷೀರಾಬ್ಧಿ ಶಯನಾ
ಪಾರು ಕಾಣಿಸಯ್ಯ । ಮಾರಾನಾಪಿತನೇ 	೨

ಶೇಷಾದ್ರಿ ವಾಸಾ ವಾಸುಕೀಶಯನಾ
ರಮಾವಲ್ಲಭ ವಿಠಲ ಪೊರೆಯನ್ನ 	೩

೬

ಮುರಳಿಧರನು ಕೊಳಲನೂದುವ ಸೊಬಗ
ನೋಡಿದ್ಯಾ ಮನವೇ ಪ.

ನಾರಿಯರ ಮನವಾ ಸೆಳೆದು ಊದುತಲಿರುವನು ಅ.ಪ.

ಇಂದು ಈ ಗೋವಿನ ಆನಂದವ ನೋಡಿದ್ಯಾ
ಇಂದಿರೇಶನ ಪಾದಾಮೃತ ಸವಿಯುತಿರುವುದು ೧

ಕಾಮಧೇನು ಕಲ್ಪವೃಕ್ಷದ ಕಾಯ ಜನಕನ
ಕೊಳಲ ಧ್ವನಿಯು ಕೇಳುತಲಿರುವುದು ೨

ರಮಾವಲ್ಲಭ ವಿಠಲನು ಮುರಳಿಸ್ವರದಿಂದ
ಮಾರ ಜನಕ ರಾಗದಿಂದ ಊದುತಲಿರುವನು ೩

೭

ಹರಿ ಕುಣಿದ ನಮ್ಮ ಹರಿ ಕುಣಿದ
ಹರಿ ಕುಣಿದ ನಮ್ಮ ಹರಿ ಕುಣಿದ
ಹರಿ ಕುಣಿದ ನಮ್ಮ ಕೃಷ್ಣ ಕುಣಿದ ಪ.

ಹರಿದಾಸುರಗಳ ನೆರೆದಿಹ ಸಭೆಯಲಿ
ಭಜನೆಯ ಸಮಯದಿ ಹರಿ ಕುಣಿದ ಅ.ಪ.

ಅತಿಭಕ್ತಿಯಿಂದ ಪತಿತ ಪಾವನನ ಪೂಜೆ
ಅತಿ ಸಂತೋಷದಿ ಮಾಡುವ ಸಮಯದಿ ೧

ವೇದಮಂತ್ರದಿಂದಾ ವೇದಘೋಷದಲ್ಲಿ
ವೇದ ವ್ಯಾಸರೆಂಬೋ ನಾಮದಿಂದಿರುವ ೨

ಅಂದಿಗೆ ಕಿರುಗೆಜ್ಜೆ ಚಂದದಿ ಪೊಳೆಯುತಾ
ಗೋವಿಂದ ದಾಸರ ಮಂದಿರದೊಳಗೆ ೩

ಪುರಂದರ ದಾಸರ ಆರಾಧನೆ ದಿನ ಪುರದೊಳಗೆಲ್ಲಾ
ಮೆರವಣಿಗೆ ದಿನ ಯತಿಗಳೀರ್ವರು ಪೂಜಿಸಿ ೪

ವರದ ಅತಿ ಸಂಭ್ರಮದಿ ಗತಿ ಕೊಡುವವ ಬಂದ
ರಮಾವಲ್ಲಭವಿಠಲನ ಪೂಜೆಯ ಸಮಯದಿ ೫

## ೮

ಹರುಷ ಪಡಿಸಿದನೋ ಸರಸಿಜನಾಭ ಪ.

ಉರುಗಾದ್ರಿವಾಸನೆ ಹರುಷಪಡಿಸಿದೆ
ಉಡುಪಿಯ ಕೃಷ್ಣನೇ ಅ.ಪ.

ಏನು ಕಾರಣವನ್ನು ತೋರಿದ್ಯೊ ಶ್ರೀನಿವಾಸನೆ
ನಿನ್ನ ಮಹಿಮೆಯ ಪೊಗಳಲು ನಾ ಶಕ್ತಳಲ್ಲಾ ಭಕ್ತವತ್ಸಲಾ ೧

ನಿನ್ನ ನೋಡಿ ಧನ್ಯಳಾದೆನೊ ಸನ್ನುತಾಂಗನೇ
ಎನ್ನ ಮೇಲೆ ಕರುಣವ ತೋರಿ ನಿನ್ನ ದರುಶನವಿತ್ತ್ಯೋ ದೇವಾ ೨

ಏನು ಬೇಡಲಿ ನಿನ್ನ ಅಧೀನಳೋ ನಾನು ನೀನು
ಮಾಡಿಸೊ ದ್ವಂದ್ವಕಾರ್ಯ
ನಿನ್ನದೆಂಬ ಸೊಲ್ಲ ಪಾಲಿಸು ೩

ನಿನ್ನ ನಾಮದ ಸ್ಮರಣೆಯನ್ನು ಮರಿಯದೆ ನುಡಿಸೆನೆಗೆ
ನಿನ್ನ ದಾಸರ ದಾಸರ ಸಂಗಕೊಟ್ಟು ಚರಣವ ತೋರೋ
ಕರುಣಾನಿಧಿಯೇ ೪

ನಿನ್ನ ಪಾದದ ಧ್ಯಾನವು ನಿರಂತರವಿರಲೆನಗೆ
ನಿನ್ನ ಕಡೆಯಾಕಣ್ಣಲಿ ನೋಡೊ ರಮಾವಲ್ಲಭವಿಠಲನೆ ಕರುಣದಿ ೫

೯

ಏನು ಭಾಗ್ಯವೋ ತಾಯೆ ಲಕುಮಿ ನಿನ್ನದೂ
ಸಾನು ರಾಗದಿ ಹರಿಯ ಸೇವಿಸುತಲಿರುವಿ ಪ.

ಕಂಕಣವು ನೀನಾಗಿ ಹರಿಗೆ ಭುಜಕೀರ್ತಿ ನೀನಾಗಿ
ಶಂಕುಚಕ್ರ ಗದಾ ಪದ್ಮ ನೀನಾಗಿ ಶಂಕೆ ಇಲ್ಲದೆ
ಕಿಂಕರಳು ನೀನಾಗಿ ಹರಿಸೇವೆಗೆ
ಪಂಕಜಾನಾಭನ್ನ ಸೇವಿಸುತಲಿರುವಿ ೧

ಅಕ್ಷರಳು ನೀನಾಗಿ ಹರಿಯ ವಕ್ಷಸ್ಥಳವನೇ ಸೇರಿ
ಈ ಕ್ಷಿಸುತ ಹರಿಯ ಪರಮ ಸಂತೋಷದಿಂದ
ಲಕ್ಷ ಕೋಟಿ ಕೋಟಿ ಬ್ರಹ್ಮಾಂಡರೂಪದಲ್ಲಿರುವ
ಪಕ್ಷಿವಾಹನನ ನೋಡಿ ವೆರಗಾಗುತಲಿರುವಿ ೨

ರಾಮನಾ ಸತಿಯಾಗಿ ಪ್ರೇಮದಿಂದಲಿ ಈಗ
ಕಾಮನಯ್ಯನ ಕಾರುಣ್ಯದಿಂದ
ರಮಾವಲ್ಲಭವಿಠಲನ ತೊಡೆಯ ಮೇಲೆ ಕುಳಿತು
ಸ್ವಾಮಿಗೆ ಸತಿಯಾಗಿ ಸೇವಿಸುತಲಿರುವಿ ೩

೧೦

ಬಂದಳು ನೋಡೆ ಇಂದಿರ ದೇವಿ ಪ.

ಬಂದಳು ನೋಡೆ ಗೋವಿಂದನ ಸತಿಯು
ಸುಂದರ ಪಾದದಿಂದ ಒಂದೊಂದು ಹೆಜ್ಜೆಯನಿಡುತಾ ಅ.ಪ.

ಉಲ್ಲಾಸದಿಂದಲೀ ಚೆಲ್ವೆ ಬಂದಳೀಗ ೧

ವಜ್ರದಂತೆ ಕಾಂತಿ ಪ್ರಜ್ವಲಿಸುತ್ತಲೀ
ಗೆಜ್ಜೆಪಾದದಿಂದ್ದೆಜ್ಜೆಯನಿಡುತಲೀಗ ೨

ಮಾರನಮಾತೆಯು ಮುಂಗುರುಳನೇ ತಿದ್ದಿ
ಮುಡಿಯ ಮೇಲಿನ ಮಲ್ಲಿಗೆ ಉದುರುತ್ತ ೩

ಕಡಗ ಕಂಕಣವು ಬೆಡಗಿನಿಂದಾಲಿಟ್ಟು
ನಡಮುಡಿಮೇಲೆ ಅಡಿಯನಿಡುತಲೀಗ ೪

ಕುಕ್ಷಿಯೊಳೀರೇಳು ಜಗವಪೊತ್ತುವನಾ
ವಕ್ಷಸ್ಥಳದ ಲಕ್ಷ್ಮಿ ಬಂದಾಳೀಗ ೫

ಹರಿಯ ಮಂದಿರಕ್ಕೆ ಸರಸದಿಂದಲೀಗ
ಓರೆನೋಟದಿಂದ ಮುಗುಳು ನಗೆಯ ನಗುತ ೬

ಚಂದದಿಂದಲೀಗ ಬಂದು ಕುಳಿತುಕೊಂಡು
ಮಂದ ಭಾಗ್ಯಳಿಗಾನಂದವ ಕೊಡುವಳು ೭

ಇಂದಿರೆ ದೇವನ್ನ ಬಂಧನವಾ ಬಿಡಿಸಿ
ತಂದೆಗೋವಿಂದನ್ನ ಕಂಡು ತೋರೆ ತಾಯಿ ೮

ರಮಾವಲ್ಲಭವಿಠಲನ ಸ್ಮರಣೆಯು
ನಿರುತ ಮಾಡುವಂಥ ವರವ ಕೊಡು ತಾಯೆ ೯

## ೧೧

ಸಂತೆಯ ಬಿದನೂರು ಹನುಮಂತ
ಎನ್ನ ಅಂತರಂಗದಲಿ ಹರಿಯ ತೋರು ಹನುಮಂತ ಪ.

ಎನ್ನ ಮೇಲೆ ಪಂಥ ಬೇಡ ನಿಂತು ಬೇಡುವೆ ಹನುಮಂತ ಅ.ಪ.

ಅಂಜನಾದೇವಿಯ ಕುಮಾರ ಅಂಜಿಸುವ ಈ ಘೋರ ಸಂಸಾರ
ಅಂಜಿಕೆಯ ಬಿಡಿಸೆನ್ನ ಕಾಯೊ ಬಲು ಧೀರ ಸುಗುಣ ಗಂಭೀರ
ಸಂಜೀವನನ ಕಂಡ ಶೂರ ಅಂಜನಾದೇವಿಯ ಕುಮಾರ ೧

ಕುಂತಿಯಾ ಸುತನಾಗಿ ನೀ ಜನಿಸಿ ಬಂದೇ
ಪಂಥದಲಿ ಕೀಚಕನ ಸೋಲಿಸಿ ನಿಂತು
ಕಂತುಪಿತನಿಗೆ ದುರ್ಯೋದನನ ಶಿರವ ಒಪ್ಪಿಸಿದೆ ೨

ಮದ್ದಿಗೇಹ ಭಟ್ಟರಲಿ ನೀ ಜನಿಸೀ
ಮಧ್ವಮತವನೆ ಉದ್ಧರಿಸಿ ನೀ ಬದರಿಯಲಿ ನಿಂದಿ
ಮುದ್ದು ಕೃಷ್ಣನ ಪೂಜಿಸಿ ಉಡುಪಿಲಿ ಸ್ಥಾಪಿಸಿ ೩

ಸಂತೆಬಿದನೂರಿನಲಿ ನಿಂತು ಬಂದ ಜನಕೆ ಆನಂದ ಪಡಿಸಿ
ಸಂತೋಷದಿಂದ ವರಗಳ ಬೇಡಿದವರಿಗೆ ನೀಡುತ್ತ
ಕಂತುಪಿತನ ಧ್ಯಾನದಲಿ ಅನವರತ ಸೇವಿಸುತ ೪

ರಾಮ ಸೇವೆ ನೀ ಸಂಭ್ರಮದಲಿ ಮಾಡಿ
ರಾಮರ ಧ್ಯಾನ ಮಾಡುತ ಪೂಜಿಸುತಿರುವಿ
ರಮಾವಲ್ಲಭವಿಠಲನ ಧ್ಯಾನದಿ ಪಟ್ಟಕೆ ಬರಲಿರುವಿ ೫

## ೧೨

ಯಂತ್ರೋದ್ಧಾರಕ ಪ್ರಾಣರಾಯ ಎನ್ನ ಚಿಂತೆ ಹರಿಸೋ ಪ.

ಅಂತರಂಗದಿ ಹರಿಯ ಧ್ಯಾನವ ಮಾಡಿಸೋ ಅ.ಪ.

ನಿನ್ನ ನೋಡಿ ಧನ್ಯಳಾದೆನೊ ಹೊನ್ನು ಹನುಮನೆ
ಎನ್ನ ಪಾಪ ಹರಿಸಿ ಕಾಯೊ ಘನ್ನ ಹನುಮನೆ ೧

ಒಂದು ಅರಿಯದ ಮಂದಮತಿಯಳ ಬಂದು ಕಾಯೋ
ಬಂಧನವ ಬಿಡಿಸಿ ಕಾಯೋ ಸುಂದರಾಂಗನೆ ೨

ತುಂಗಾತೀರದಿ ನಿಂತಿರುವಿ ಮಂಗಳಾಂಗನೆ
ಮಂಗಳ ರಾಮನ ಧ್ಯಾನವ ಮಾಡಿಸು ಎನಗೆ ೩

ಹಂಪಿಯಲಿ ನಿಂತಿರುವಿ ಸೊಂಪಿನಿಂದಲಿ
ಸಂಪಿಗೆ ನೆರಳಲಿ ನೋಡಿದಿ ರಾಮರ ಧ್ಯಾನ ಮಾಡುತ ೪

ರಾಮ ದೂತನೆ ಎನ್ನ ಮೊರೆಯ ಲಾಲಿಸಿ
ರಮಾವಲ್ಲಭವಿಠಲನ ಪಾದ ಬೇಗ ತೋರಿಸೊ ೫

## ೧೩

ವೃಂದಾವನದೊಡೆಯ ಸ್ವಾಮಿ ಮಂತ್ರಾಲಯನಿಲಯ
ಚಂದದಿ ಬಂದು ದರುಶನವಿತ್ತರು ಸ್ವಾಮಿ ಯತಿರಾಯ ಪ.

ಮೂಢಮತಿಯು ನಾನು ಎನ್ನಗಾಢ ನಿದ್ರೆಯಲಿ
ಮಾಡುತ ಪೂಜೆಯ ಎನಗಾನಂದ ಪಡಿಸಿದನು ೧

ಗುರುನಾರದ ದಿನದಿ ಸ್ವಾಮಿ ಹರಿದಾಸರ ಗೃಹದಿ
ಕರುಣ ತೋರಿ ದರುಶನವಿತ್ತು ಎನಗಾನಂದ ಪಡಿಸಿದರು ೨

ಕರಿರಾಜವರದಾ ಗುರುರಾಜರಿಗೊಲಿದು
ಪರಮಭಕ್ತರ ಮಂದಿರದಿ ಎನಗಾನಂದ ಪಡಿಸಿದರು ೩

ತುಂಗಾತೀರದಲಿ ತಾವು ಚಂದದಿ ನಿಂತು
ಮಂಗಳ ರಾಮನ ಪೂಜೆಯ ಮಾಡಿ
ಎನಗಾನಂದ ಪಡಿಸಿದರು ೪

ರಾಮ ಪೂಜೆಯ ಮಾಡಿ ರಾಮಧ್ಯಾನದಿ ನಿರಂತರ
ರಮಾವಲ್ಲಭವಿಠಲ ಭಜಿಸುವ ಪ್ರಿಯರಿವರು ೫

೧

ಆನೆ ಬಂದಿತಮ್ಮಾ ಮರಿ ಆನೆ ಬಂದಿತಮ್ಮಾ ಪ

ಕಿಂಕರರಿಗೆ ಬಂದ ಸಂಕಟಕಳೆವಾ ಶ್ರೀ
ವೆಂಕಟರಮಣನೆಂಬಾನೆ ಅ.ಪ.

ಸಿರಿಯಿಲ್ಲದರಿಲಾರೆನೆಂದಾತುರದಲಿ ಧರೆಗಿಳಿದಾನೇ
ಪಥದೊಳಗೆಲ್ಲ ಹುಡುಕ್ಯಾನೆ । ವಲ್ಮೀಕ ದೊಳು ಅಡಗ್ಯಾನೇ ೧

ಭಕ್ತರ ಸಲಹಲುಹೋಮನ ಮಾಡ್ಯಾನೇ ಬಕುಳೆಮಾತಿಗೆ
ಕಂದ ನಾಗ್ಯಾನೇ ನೆತ್ತಿಯ ಒಡ ಕೊಂಡು ನಿಂತಾನೇ ಬಹುವಿಧ
ಯೋಚನೆ ಮಾಡ್ಯಾನೇ ೨

ಬೇಟೆನಾಡಲು ಹೊರಟ್ಯಾನೆ ದಿಟ್ಟಕುದುರೆಯನೇರ್ಯಾನೇ
ಪಟುತರ ಶ್ರೀಹರಿ ನಡೆದಾನೇ ಮುಂದೆ ಮದಗಜ
ಒಂದನು ಕಂಡ್ಯಾನೇ ೩

ಶನೆ ಬೆನ್ನಟ್ಟಿಕೊಂಡು ನಡೆದಾನೇ ಎಲ್ಲೆಲ್ಲಿಯು
ಕಾಣದೆ ಹೋದಾನೇ ಬಿಸಿಲಲ್ಲಿ ಬಳಲುತ ದಣಿದ್ಯಾನೇ ಅಲ್ಲಿ
ಪದ್ಮಾವತಿಯಳ ಕಂಡಾನೇ ೪

ಮನದಲ್ಲಿ ಹರುಷಿತನಾದಾನೇ ಮಾತನಾಡಲು
ಮುಂದೆ ನಡೆದಾನೇ ಕಲ್ಲುಹಳೆಸುವುದ ಕಂಡಾನೇ ತಡ ಮಾಡದೆ
ಹಿಂದೆ ಸರಿದಾನೇ ೫

ಬಕುಳೆ ಮಾತೆಯ ಕರೆದಾನೇ ಸಕಲವೃತ್ತಾಂತವ ತಿಳಿಸ್ಯಾನೇ
ಬೇಗದಿ ಹೋಗಿ ಬಾರೆಂದಾನೇ ಮೌನದಿಂದಲಿ ಮಲಗ್ಯಾನೇ ೬

## ೨

ನಮಿಸುವೇಂ ಜಗದಂಬೆ ನಿನ್ನಂ ಮುದದಿಂ
ದೃಢದಿಂ ಮನವಾರೆ ನಾಂ ಪ

ಉದಯಾದ್ರಿಯೊಳುದಿಸಿದ ನಾರ್ಕೈ ಮನಿದೆ
ಬಂದೇಂ ಬಳಿಸಂದೇಂ ಪದುಳದಿ ನಿಂದೇಂ ಅ.ಪ

ಮೂಡಿದ ಕತ್ತಲೆಯೋಡಿಸಿ ಭರದಿಂ
ನೋಡೆಚಿರಂ, ನಾಡೆಜಗಂ ಬೆಳಗಲಿ ಬೆಳಕಿಂ ೧

ಭಾಮಿನಿಯರು ಸದ್ಭಾವನೆಯಿಂದಲಿ
ದೇವಿಯ ಸಂಸೇವಿಸಿವೊಲ್ ತಾ ವರವಂ ೨

ಶೇಷಗಿರೀಶನ ದಾಸರು ನಾವೆನೆ
ಭಾಷಾನಿಧಿಯಂ ಬಲಗೊಂಡಾಂ ಬೇಡುತ ನಲವಿಂ ೩

## ೩

ಪೊರೆಯಮ್ಮ ವಾಣಿ ತರುಣಿ ವಿಧಿರಾಣಿ ರಮಣಿ ಪ.

ಸರಸ್ವತಿ ನಿನ್ನನೇ ನೆರೆ ಭಜಿಸುತ್ತಿಹ
ಅರಿಯದೀ ತರಳರಂ ಕರುಣದೊಳೀಕ್ಷಿಸು ೧

ದೇವಿ ನಿನ್ನಿಂದ ಲೇ ಜೀವಕೋಟಿಗಳಿಂತು
ಜೀವಿಪುದಾರೆಯೆ ದೇವಿ ಸಂಜೀವಿನಿ ೨

ಜ್ಞಾನಾಧಿದೇವತೆ ಆನಂದಪ್ರದಾತೆ
ಮುನಿಜನ ಸಂಸ್ತುತೆ ವನಜಜದಯಿತೇ ೩

ಸದಯ ನೀಂ ದಯೆಗೈಯೆ ಸದಸದ್ವಿಚಾರಮಂ
ಹೃದಯ ಸಂಶುದ್ಧಿಯಂ ಪದುಳಮಂ ಧೈರ್ಯಮಂ ೪

ದೇಶಸೇವೆಗೆಂದು ಆಶಿಪರೊಳಿಂದು
ಶೇಷಗಿರೀಶನ ದಾಸರೆನಿಸೆಂದು ೫

೪

ಭಾರತಿ ಪೊರೆಯೆಮ್ಮನು ಕಾರುಣ್ಯಮೂರುತಿ
ಸಾರಸಭವಸತಿ ತೋರಿಸು ಸನ್ಮತಿ ಪ.

ವೀಣಾಪುಸ್ತಕಧಾರಿಣಿ ಪನ್ನಗವೇಣಿ
ವಾಣಿ ಗೀರ್ವಾಣಿ ಜನನೀ
ಜಾಣೆ ಬ್ರಹ್ಮನ ರಾಣಿ ಸುಶ್ರೋಣಿ ಕಲ್ಯಾಣಿ ೧

ನಾರದಮುನಿ ಸನ್ನುತೆ ಸಾರಸನೇತ್ರೇ
ಚಾರುಚರಿತೇ ಸುರಸುತೆ
ಮಾರನಯ್ಯನ ಚರಿತೆ ಸಾರುವಂತೆಸಗು ಮಾತೆ ೨

ನಾಲಿಗೆಯೊಳು ನೆಲಸುತ ನಲಿನಲಿಯುತ
ಮೇಲಹಕೃತಿ ನುಡಿಸುತ
ಪಾಲಿಸು ಶ್ರೀಗಿರಿಲೋಲನ ಸೊಸೆ ನಿರುತ ೩

೫

ವಂದಿಸುವೆವಿಂದು ಮುದದೆ ಶಾರದೆ ಪ.

ವಂದಾರುಮಂದಾರೆ ಎಂದೆಂದಿಗೆಮ್ಮೊಳಿರೆ
ಸಂದೇಹವಿಲ್ಲದಂತೇ ಸುಸ್ವಾಂತೀ ೧

ಮತ್ತೇರಿ ತಲೆಕೆಟ್ಟು ಕತ್ತಲೆಯೊಳು ಬಿದ್ದು
ತತ್ತರಗೊಳ್ವೆವಲ್ಲೇ ಕೋಮಲೆ ೨

ಹಾಲಹಲದಂಥ ಆಲಸ್ಯದಿಂದ ಬೀಗಿ
ಕಾಲೆತ್ತದಂತೊರಗಿರ್ಪೆನೇ ನೊಂದೆನೇ ೩

ಕಂದನ ನುಡಿ ಕೇಳು ಒಂದಿಷ್ಟು ದಯೆ ತಾಳು
ಕುಂದುಗಳೆನಿಸದೇ ಪೊರೆ ಶ್ರೀಕರೇ ೪

ವರಶೇಷಗಿರೀಶನ ಚರಿತಂಗಳನುದಿನ
ಸ್ಮರಿಸಿಕೊಂಡಾಡುವಂತೆ ಮಾಡೆನುತೇ ವಂದಿಸುವೆ ೫

೬

ವಾಣಿಯೆ ಪುಸ್ತಕಪಾಣಿಯೆ ಮಂಗಳ
ವಾಣಿಯೆ ಬ್ರಹ್ಮನ ರಾಣಿಯೆ ವಂದಿಪೆ ಪ.

ವೇದವಿದಿತೇ ತವ ಪಾದವ ಸ್ಮರಿಸುವ
ಸಾಧನೆಯೆಲ್ಲವ ಮೋದದಿ ಪಾಲಿಸು ೧

ಎನ್ನ ನಾಲಿಗೆಯಲ್ಲಿ ಚೆನ್ನಾಗಿ ನೆಲೆಗೊಂಡು
ಅನ್ಯತ ಬಾರದೋಲ್ ಘನ್ನೆ ನೀನಾಡಿಸು ೨

ಪರಮಪಾವನ ಶೇಷಗಿರಿ ವಾಸನ ನಿಜ
ಶರಣರ ಕಥೆ ಪೇಳ್ವ ಪರಿಜ್ಞಾನವಿತ್ತು ನೀಂ ೩

೭

ವಾರಿಜಾಸನ ರಾಣಿ ಮಂಜುಳವಾಣಿ ಪುಸ್ತಕ
ಧಾರಿಣೀ ಭವಘೋರ ದುಃಖ ನಿವಾರಿಣಿ ಪ.

ಧಾರಿಣಿಯೊಳು ಕಾಣೆ ನಿನಗೆಣೆಯಾರ ನಾನೆಲೆ
ಗೀರ್ವಾಣಿ ಪಾಲಿಸು ಗುಣಮಣಿ ಅ.ಪ

ಕಾಳಿದಾಸನೆ ಮುಖ್ಯ ಕವಿತಾಲೋಲರೆಲ್ಲರು ಧರೆಯೊಳು
ಜಯಶೀಲರೆನ್ನಿಸಿ ಮೆರೆಯಲು
ಲೋಲಲೋಚನೆ ನಿನ್ನ ಕೃಪೆಯದಲ್ಲೇ ನುಡಿಭರದೊಳು
ಬಂದು ತೋರುವುದೆನ್ನೊಳು ೧

ಪುಸಿಯು ಬಾರದ ತೆರದೊಳೆಮ್ಮಯ ರಸನೆಯಲ್ಲಿರು ಸಂತತಂ
ರಸವ ತೋರುತೆ ಸಂತತಂ
ಎಸೆವ ಶೇಷಗಿರಿಶನಂಘ್ರಿಯ ಭಜಿಸಿ ಬದುಕೆಂದೆನ್ನುತೆ
ವರವ ಪಾಲಿಸು ಸುಪ್ರಿತೆ ೨

## ೮

ಶಾರದೇಂದು ಸನ್ನಿಭಾನನೇ ಸರಸಿಜಲೋಚನೆ ಪ.

ಶಾರದೇ ಸುವಿಶಾರದೇ ದಯೆಬಾರದೇ ನತಕಾಮದೆ
ಭೂರಿಹರ್ಷದೆ ಬೀರಿ ನಲ್ಮೆಯಾಪಾರ ಸೌಖ್ಯವ ತೋರು ಕೀರ್ತಿಯ ೧

ವಾಣಿ ವೀಣಾಪಾಣಿ ಮಂಜುಳವಾಣಿ ಪುಸ್ತಕಧಾರಿಣಿ
ವೇಣುನಾದ ವಿನೋದಿನಿ ಸುಜ್ಞಾನದಾಯಿನಿ ಪಾಹಿ ಜನನೀ ೨

ಮಾತೆ ಮಂಗಳ ಗೀತೆ ಕವಿಸುಪ್ರೀತೆ ಪದ್ಮಜದಯಿತೆ
ಖ್ಯಾತೆ ಶೇಷಗಿರೀಶ ಭಕ್ತಿಪ್ರದಾತೆ ಸದ್ಗುಣಪೂತೆ ಮಹಿತೆ ೩

## ೯

ಶ್ರೀವಾಣಿ ಕಲ್ಯಾಣಿ ಬ್ರಹ್ಮಾಣಿ ಗೀರ್ವಾಣಿ
ಕೈವಲ್ಯಮಾರ್ಗ ಪ್ರದರ್ಶಿನೀ ಕವಿಜೀವಿನೀ ಮಜ್ಜನನೀ ಪ.

ಕಾಮಿನೀ ಗುಣಭರಣೀ ಕಮನೀಯ ಸುಶ್ರೋಣಿ
ರಾಮಾಣೀಯಕ ಪಲ್ಲವಪಾಣಿ ಕೋಮಲ ಶುಕವಾಣಿ ೧

ಮಂಗಳಂ ವಿಧಿರಮಣೀ ಜಯ ಮಂಗಳಂ ಘನಕರುಣಿ
ಸಂಗೀತ ಶಾಸ್ತ್ರ ವಿಲಾಸಿನೀ ಪರಿಪಾಹಿಮಾಂ ಜನನೀ ೨

ಭುವನೈಕ ಮೋಹಿನಿ ತರುಣಿ ಭಾಷಾಭಿಮಾನಿನಿ ರಮಣಿ
ಶೇಷಶೈಲವಾಸ ಕೀರ್ತನಾಮೋದದಾಯಿನಿ ಜನನಿ ೩

## ೧೦

ಶ್ರೀ ಸರಸ್ವತೀ ತಾ ಸುಮತೀ ಭವತೀ ಭಾರತಿ ಪ.

ವಾಣೀ ವೀಣಾಪುಸ್ತಕಪಾಣಿ ಪಂಕಜಾಂಘ್ರಿಯುಗೇ
ಫಣಿವೇಣಿ ಮಂಜುಳವಾಣಿ
ಏಣಾಂಕವದನೆ ಶುಭಗುಣಶ್ರೇಣಿಗೀರ್ವಾಣಿ ಜನನಿ ೧

ನೀರೇ ನಿಗಮಾಗಮ ವಿಚಾರೆ ಘೋರಭವಭಯ
ದೂರೆ ಶುಭ್ರಾಂಬರೆಧಾರೇ
ಸಾರಸಭವ ಹೃತ್ಸರಸವಿಹಾರೇ ಧೀರೇ ಚತುರೆ
ಕರಪಲ್ಲವ ಚತುರೇ ೨

ವರದೇ ರಸನದೆ ನಿಂತವಸರದೇ
ಸರಸದಿನುಡಿ ನಿಜಗುಣದಿ ಸೂನೃತೆ ವ್ರತದಿ
ವರಶೇಷಾದ್ರಿನಿಕೇತನನಂಘ್ರಿಯ ಮರೆಯದೆ ಭಜಿಸುವೆ
ತೆರದಿಂ ಕುಡುವರಮಂ ೩

## ೧೧

ಸರಸಿಜಭವಸತಿ ಕರುಣಿಸು ಸನ್ಮತಿ
ಹರಿ ಸ್ಮರಣಾಭಿರತಿ
ಪರಮ ಕೃಪಾಕರೆ ವರದಾಭಯಕರೆ
ನೀನಹುದೌ ಸುಕರೆ ಪ.

ಸತ್ಯವೆನಗಿದು ಉತ್ತಮಾಂಗವು ಭಕ್ತಿಯೆ ಫಾಲಸ್ಥಲವು
ಉತ್ತಮೋತ್ತಮ ವಿನಯಮೆಂಬುದೇ ನಾಶಿಕವದು ನಿಜವು ೧

ಜ್ಞಾನವಿವೇಕ ಸುಲೋಚನ ಮಾಗಿರೆ ಆನನ ವಿದರೋಳ್
ತಾನಾಗಿರೆ ವೇದವೆ ವದನವು ಮಾನಸಕತಿ ಸುಖವು ೨

ಬಗೆಗೊಳ್ಳುವ ನಿನ್ನೀ ಬಗೆಬಗೆ ರೂಪವ ಬಗೆಬಗೆದಾನೆವೇಂ
ಸೊಗಸಿತೆ ನಿನ್ನೀ ಬಗೆ ಸೇವೆಗೆ ನಿನ್ನಣುಗರ ವರಿಸೆನುವೇ ೩

ದೇಶಸೇವೆಯೊಳಾಶಿಸುತಿರುವೆಮಗಾಶ್ರಯತರು ನೀನೇ
ಭಾಷಾಮಾನಿನಿ ಬಲಗೊಂಬೆನು ನಿನ್ನನೆ ಶೇಷಗಿರೀವರನಾಣೆ ೪

## ಲಕ್ಷ್ಮೀ ಸ್ತುತಿಗಳು

### ೧೨

ಆರೋಗಿಸು ತಾಯೇ ಮೋದದಿ
ಕ್ಷೀರಾಂಬುಧಿ ತನಯೆ ಪ.

ಸಾರಸನಯನೆ ಮದವಾರಣಗಮನೆ
ಸಾರಿ ಚೀಡುವೆ ಸರಾಗದೊಳೀಕ್ಷಿಸು ಅ.ಪ.

ಉಪ್ಪು ಉಪ್ಪಿನಕಾಯಿಕೋಸುಂಬರಿ ಹಪ್ಪಳ ಸಂಡಿಗೆಯ
ತಪ್ಪದೆ ತಂದೊಪ್ಪಿಸುತಿಹೆ ಎನ್ನಪ್ಪನೊಡನೊಪ್ಪದಿ ಮಂಡಿಸಿ ೧

ಚಕ್ಕುಲಿ ಕರಜಿಕಾಯಿ ಅತಿರಸ ಸಕ್ಕರೆ ಹೋಳಿಗೆಯಂ
ಅಕ್ರೂರವರದನ ಅರಸಿಯೆ ನೀನಿಂದಕ್ಕರೆಯಿಂದವಲೋಕಿಸಿ
ನಲಿಯುತ ೨

ಕ್ಷೀರ ದಧಿ ನವನೀತ ಘೃತ ಮಧುಸಾರವೆನಿಪ ಪರಮಾನ್ನ
ಕ್ಷೀರಶರಧಿಸುತೆ ನೀ ನೀರಸ ಸಹಿತಾಪಾರ ಕೃಪಾಪಾಯದೊಳೀಕ್ಷಿಸಿ ೩

ಮಾದಲ ದಾಡಿಮವು ಮಾವು ನೇರಳೆ ಹಲಸು ಕಿತ್ತಳೆ
ಮೋದದಿ ಮಾಗಿದ ಕದಳೀ ಚಕ್ಕೋತವ ದ್ರಾಕ್ಷಿಯ
ಸವಿನೋಡುತೆ ನಲಿದು ೪

ನಿಗಮಾಗಮ ವಿನುತೇ ನಮಿಸುವೆ ನಗಧರ ಸುಪ್ರೀತೆ
ಖಗಪತಿವಾಹನ ಶೇಷಗಿರೀಶನ ಬಗೆ ಬಗೆ
ಗುಣಗಳ ಬಗೆಗೊಳಿಸುತ್ತಲಿ ೫

## ೧೩

ಏಳು ಪೀಠಕೇ ನಳಿನದಳಾಂಬಕೇ ಜಗನ್ನುತೆ ಪ.

ಬಾಲೇಂದುನಿಭ ಫಾಲ ಶ್ರಿತಪರಿಪಾಲೇ ಕೋಮಲೇ ಅ.ಪ

ಸಿಂಧುನಂದನೆ ಇಂದುಸೋದರಿ
ಕುಂದರದನೆ ಮಂದಗಾಮಿನೀ
ವಂದಿತಾಮರ ವೃಂದಾರ ವೃಂದಾನಂದಪ್ರದೇ ೧

ತೋರಮುತ್ತಿನ ಚಾರುಪೀಠಕೆ
ಸಾರಿಬಾ ವರ ಸಾರಸಾನನೇ
ನಾರೀಮಣಿಯರೆ ಸಾರಿಕರುವರು ಮೀರಿದಾನಂದದಿಂದ ೨

ಶೇಷಶೈಲ ನಿವಾಸಿನೀ ನತ
ಪೋಷಿಣೀ ಜಯಶ್ರೀ ರಮಾಮಣಿ
ಯಾಸಾ ಸಾರಸನೇತ್ರೇ ಕಮಲಾವಾಸೇ ದಯೆತೋರಿಸೇ ೩

## ೧೪

ಕರೆದು ತನ್ನಿ ಭರದಿಬನ್ನಿ ಸಿರಿಯನಿದಿರ್ವಂದು ನೀವು
ಸಿರಿಯನಿದಿರ್ವಂದು ಭರದಿ ಕರೆದುತನ್ನಿ ಮೋದದಿ ಪ.

ಕೋಟಿಸೂರ್ಯಚಂದ್ರರೆನಿತುಂ ಸಾಟಿಯಲ್ಲವೆನಿಸುವ
ನೋಟಮಾತ್ರದಿಂದ ಜಗವ ನಾಟ್ಯರಂಗ ವೆನಿಸುವ ೧

ಕಡಲ ತನಯೆ ಎನಿಸೆ ಮತ್ತೆ ಕಡಲಮಧ್ಯದಲ್ಲಿ ನೆಲಸಿ
ಕಡಲಶಯನನ ಮಡದಿಯಾಗಿ ಬಿಡದೆ ನಮ್ಮ ಪೊರೆವಳ ೨

ಶೇಷಶೈಲವಾಸನುರದಿ ವಾಸವಾಗಿ ಶರಣರ
ಆಸೆಯನ್ನು ನಲಿಸುತಿರುವ ಭಾಸುರಾನನೆ ಲಕ್ಷ್ಮಿಯ ೩

## ೧೫

ಕಲಶಾಬ್ಧಿಜಾತೆ ಸೀತೆಗಾರತಿಯನು ಬೆಳಗಿರೆ
ಲಲನಾಮಣಿಯ ಸಾರಿ ನುತಿಸಿ ನಲಿದು ಪಾಡಿರೆ ಪ.

ಸರಸಿಜಾಸನಾದಿ ವಿನುತೆ ಸುರವರಾರ್ಚಿತೆ
ಶರದಿಂದುಹಾಸೆ ಧರಣಿಜಾತೆ ಕರುಣಿಸೆನ್ನುತೆ ೧

ಕಮಲನಯನೆ ಕಮಲವದನೆ ಕಮಲವಾಸಿನಿ
ವಿಮಲಚರಣೆ ರಮಾರಮಣಿ ಮಧುರಭಾಷಿಣಿ ೨

ಶೇಷಶೈಲವಾಸದಯಿತೆ ವಿಶ್ವಸನ್ನುತೆ
ಪೋಷಿಸೆಮ್ಮ ಪ್ರಾಣದಾತೆ ಸೀತೆಯೆನ್ನುತ ೩

## ೧೬

ಕಾಯೌ ಶ್ರೀ ರಮಾದೇವಿಯೆ ಸದಾ
ತೋಯಜಾಂಬಕಿಯೇ ಭಯವ ಬಿಡಿಸಿ ಭರದಿಂದ ೧

ಕ್ಷೀರಾಂಬೋನಿಧಿ ತನಯೇ ತಾಯೇ
ಮಾರನಯ್ಯನರಸಿ ಕರುಣಾವೆರಸಿ ನಲವಿಂದ ೨

ಶ್ರೀ ಶೇಷಾದ್ರೀಶ ಮನೋಲ್ಲಸಿತೆ ಕಾಂತೇ
ವಾಸವಾದಿ ವಿನುತೇ ಮಹಿತೇ ವರದಾತೇ ತಾಯೆ ೩

## ೧೭

ಜಯತು ಜಯತು ಜಯತು ಪ.

ಜಯತು ಜನಕಜಾತೆಯೆ
ಜಯ ಭಜಕಜನ ಧಾತ್ರಿಯೆ
ಜಯ ಜಡಭವ ನಮಿತ ಮೂರ್ತಿಯೆ
ಜಯ ಜಗನ್ಮಾತೆಯೆ ೧

ಪದ್ಮಸಂಭವೆ ಪದ್ಮಗಂಧಿನಿ
ಪದ್ಮಮಾಲಿನಿ ಪದ್ಮಿನೀ
ಪದ್ಮಲೋಚನೆ ಪದ್ಮವಾಸಿನಿ
ಪದ್ಮನಾಭ ಕುಟುಂಬಿನಿ ೨

ದೋಷರಹಿತ ಶ್ರೀ
ಶೇಷ ಶೈಲನಿವಾಸ ಮನೋಲ್ಲಾಸಿನಿ
ಪೋಷಿಸೆನ್ನ ನಿ
ರ್ದೋಷಿ ಯೆನ್ನಿಸು ನಿತ್ಯನಿರ್ಮಲ ರೂಪಿಣಿ ೩

## ೧೮

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಹೃದಯವೆಂಬೀ ದಿವ್ಯ ಪದ್ಮಪೀಠದ ಮೇಲೆ
ಪದ್ಮಾಕ್ಷಿ ಪದ್ಮೆಯನು ಕುಳ್ಳಿರಿಸಿ
ಸದಮಲ ಭಾವದಿಂ ಮಧುಕೈಟಭಾಂತಕನ
ಹೃದಯೇಶ್ವರಿಯ ಸೇವೆಗೈವೆ ೧

ಜ್ಞಾನವೆಂಬುವ ದಿವ್ಯ ಜ್ಯೋತಿಯಂ ಮುಂದಿರಿಸಿ
ಧ್ಯಾನವೆಂಬುವ ನಿಲುವುಗನ್ನಡಿಯ ನಿಲಿಸಿ
ದಾನವಾಂತಕ ರಾಮಚಂದ್ರಮನ ಧ್ಯಾನಿಸುತ
ಜಾನಕಿಯ ಬಲಗೊಂಬೆ ಭರದಿ ೨

ವರದಾತೆ ಭೂಜಾತೆ ಸುವಿನೀತೆ ಸುವ್ರತೆ
ವರಶೇಷಗಿರಿವಾಸದಯಿತೆ ಮಹಿತೇ
ಸೆರಗೊಡ್ಡಿ ಬೇಡುವೆನು ಕರಪಿಡಿದು ಸಲಹೆಂದು
ನೆರೆನಂಬಿ ನೆನೆನೆನೆದು ನಲಿವೆನಿಂದು ೬

## ೧೬

ಧನ್ಯತೆಯಾಂತೆನಿಂದು ದೇವಿಯಕಂಡು
ಮಾನ್ಯತೆ ಪಡೆವೆನೆಂದು ಪ.

ಚಿನ್ಮಯರೂಪನ ಚೆನ್ನೆ ಲಕ್ಷ್ಮಿಯ ಸಂ
ಪನ್ನ ಮೂರ್ತಿಯ ಕಂಡಿನ್ನೆನಗೆಣೆಯಾರೆನೆ ಅ.ಪ.

ನಾಗವೇಣಿಯರೆಲ್ಲರು ಪಾಡುತ ಶಿರ
ಬಾಗಿ ವಂದಿಸುತಿರಲು
ರಾಗದಿಂ ನಲವೇರೆ ಭೋಗಭಾಗ್ಯವನೀವ
ಯೋಗೇಶ್ವರಿಯ ದಯಾಸಾಗರಿಯ ಕಂಡು ೧

ಐದೆಯರತಿಮುದದಿ ವೈದೇಹಿಯೆ ಯೆಮ್ಮ
ಆದರ್ಶ ಮಹಿಳೆಯೆಂದು
ಆದಿಶಕ್ತಿಯೇ ಈ ಶ್ರೀದೇವಿ ನಿಜವೆಂದು
ಆದರಿಸುತ್ತಿರಲಾಮೋದವಾಂತುದರಿಂ ೨

ಅರಿದಾವುದೆಮಗಿಳೆಯೊಳು ಶೇಷಗಿರೀಶನ
ಅರಸಿಯೆಮ್ಮವಳಾದಳು
ಸಿರಿಮೆರೆಯುತಲಿರೆ ಪರದೈವ ಮುಂದಿರೆ
ದುರಿತರೋಗವು ದೂರ ಸರಿದುದು ಮನವಾರ ೩

## ೨೦

ನಮಿಸುವೇಂ ಜಗನ್ಮಾತೆ ನಿನ್ನಂ ಭರದಿಂ
ದ ಮುದದಿಂದ ಮನವಾರೆ ನಾಂ ಪ.

ಕಾಮಜನಕನ ಪ್ರೇಮದ ರಾಣಿಯೆ
ಭೂಮಿಸುತೇ ಶ್ರೀಮಹಿತೆ ಕೋಮಲಗಾತ್ರೆ ೧

ಗಾನವಿನೋದಿನಿ ದಾನವಭಂಜಿನಿ
ಶ್ರೀನಾರಿ ಮೈದೋರಿ ಪೊರೆ ದಯೆತೋರಿ ೨

ದೋಷರಹಿತ ಶ್ರೀ ಶೇಷಗಿರೀಶನ
ದಾಸರ ಸಂತೋಷದಿ ನೀಂ ಪೋಷಿಪುದೆನ್ನುತೆ ೩

## ೨೧

ನಲಿದೈತಾರೆಂಬೆ ಹೇ ಜಗದಂಬೆ ನಾಂ ಬೇಡಿಕೊಂಬೆ ಪ.

ಒಲಿದೈತರೆ ನೀ ನಲವೇರುತ ನಾ
ನಲಿದಾರಾಧಿಪೆ ಎನ್ನೊಲಿದಂಬೇ ಅ.ಪ.

ಸಿಂಧುನಂದನೆ ಅರವಿಂದನಯನೆ ಇಂದುಸೋದರಿ
ಸಿಂಧುರಗಮನೆ ಸುಗುಣಾಭರಣೆ
ವಂದಿಪೆ ಶರದಿಂದುವದನೆ ಸುರ ವಂದಿತಚರಣೆ ೧

ಅಂದಿಗೆ ಕಾಲುಂಗುರ ಘಲಿರೆನೆ
ಇಂದಿರೆ ತವಪದದ್ವಂದ್ವವ ತೋರಿ
ವಂದಿಸುವೆನ್ನೀಮಂದಿರ ಮಧ್ಯದಿ
ಎಂದೆಂದಿಗು ನೆಲೆಸಿರು ನಂದಿನೀ ಜನನೀ ೨

ಕ್ಷೀರಾಂಬುಧಿ ತನಯೆ ಸೌಭಾಗ್ಯದ ನಿಧಿಯೆ
ಕ್ಷೀರಾಬ್ಧಿಶಯನನ ಜಾಯೆ

ಸಾರಸನಿಲಯೆ ವಂದಿಪೆ ತಾಯೆ
ಬಾರೆಂದು ಕೈಪಿಡಿದೆಮ್ಮನು ಕಾಯಿ ೩

ಸರಸಿಜಾಸನೆ ಸ್ಮರಮುಖ ಜನನಿಯೆ
ಸುರನರಪೂಜಿತೆ ನಾರದ ಗೇಯೆ
ಸಾರಗುಣಭರಿತೆ ಸರಸಿಜಪಾಣಿಯೆ
ಶ್ರೀರಮಣೀ ಪರಿಪಾಲಿಸು ಜನನಿ ೪

ಸೆರಗೊಡ್ಡಿ ಬೇಡುವೆ ಶ್ರೀನಾರೀ ನಿನ್ನೆಡೆ ಸಾರೀ
ಪರತರ ಸುಖ ಸಂಪದವನು ಕೋರೀ
ಕರುಣಾಲಹರೀ ಕೈಪಿಡಿದೆಮ್ಮ
ಪೊರೆ ಮೈದೋರಿ ೫

ಪರಿಪರಿ ವಿಧದಾ ಸಿರಿಸಂಪತ್ತಿಯೋಳ್
ಗುರುದೈವಂಗಳ ಸೇವಾವೃತ್ತಿಯೋಳಿರೆ
ಕರುಣಿಸು ದೃಢತರ ಭಕ್ತಿಯನೆಮಗೀಗಳ್
ವರಶೇಷಗಿರೀಶನ ಮಡದಿಯೆ ಮುದದೋಳ್ ೬

## ೨೨

ಪದ್ಮಾಲಯೆ ಪೊರೆಯೆ ಸದಯೆ ಪ.

ಪದ್ಮಸಂಭವೆ ಬೇಡುವೆ ಕೊಂಡಾಡುವೆ ನಿನ್ನ ಪಾಡುವೆ ಅ.ಪ.

ಮನಸಿಜನಯ್ಯನ ಮೋಹದ ರಾಣಿಯೆ
ಮುನಿಸಿಂತೇತಕೆ ಭೂಸುತೆ ಮುನಿಸನ್ನುತೆ ಕರುಣಾನ್ವಿತೆ ೧

ಜೋಡಿಸಿ ಕರಮಂ ಪಾಡುತ ನಿನ್ನಂ
ಬೇಡುವ ಕಂದನ ಪಾಲಿಸೆ ಮೊರೆಲಾಲಿಸೆ ದಯೆತೋರಿಸೆ ೨

ಸುರನರವಂದಿತ ಚರಣಸರೋಜದಿ
ಶರಣೆನ್ನುವ ಕಂದನಂ ವರಿಸೀ ದಿನದಿನಮೆಂದೆನು ೩

ಮಾತೆಯೆ ಮುಳಿದೊಡೆ ಪೋತನ ಪೊರೆವಾ
ದಾತರುಮಿರ್ಪರೆ ನೀನುಡಿ ಗತಿ ನಿನ್ನಡಿ ಅಣುಗರ ಕೈಪಿಡಿ ೪

ಪರಮಪಾವನ ಶೇಷಗಿರೀಶನ
ಕರುಣಾರೂಪಿಣಿ ಭಾಮಿನೀ ಶುಭದಾಯಿನೀ ಜಯನಂದಿನೀ ೫

## ೨೩

ಪರಮದಯಾಕರೆ ಪೊರೆಯೆನ್ನನು ಜನನಿ ಪ.

ಪಂಕಜಾಕ್ಷಿ ಪಂಕಜಾಸ್ಯೆ ಪಂಕಜಾಶ್ರಯೆ
ಪಂಕಜೋದ್ಭವಾದಿಜನನಿ ಪಂಕಜಾಲಯೇ ೧

ಪಾಕಶಾಸನಾದಿವಿನುತೆ ಲೋಕವಿಶ್ರುತೇ
ಶೋಕಹರಣೆ ಸಾಕುಯೆಮ್ಮ ಕೋಕಿಲರವೇ ೨

ಸಿಂಧುನಂದನೆ ಇಂದು ಸೋದರಿ ಮಂದಹಾಸಿನಿ
ಕುಂದರದನೆ ವಂದಿಸುವೆನು ಮಂದಗಾಮಿನೀ ೩

ಪೊಡವಿಯಣುಗಿ ಪೊಡಮಡುವೆ ನಿನ್ನಡಿಯೊಳೀಪರಿ
ಕಡುನೇಹದೆ ಪಿಡಿದುಕರವ ಬಿಡದಿರೌ ಸಿರಿ ೪

ದೋಷರಹಿತ ಶೇಷಗಿರಿಯ ವಾಸನರಸಿಯೆ
ಶೇಷಭೂಷಣ ನಮಿತಚರಣೆ ಪೋಷಿಸೌ ಜಯೆ ೫

## ೨೪

ಪಾಲಿಸೆನ್ನನು ಜಾನಕೀ ಅರವಿಂದ ನಾಯಕಿ ಪ.

ಫಾಲಲೋಚನನುತೆ ತ್ರೈಲೊಕ್ಯ ವಿಖ್ಯಾತೆ
ಬಾಲಾರ್ಕದ್ಯುತಿ ಭಾಸುರಾನನೆ
ನೀಲಾಳಕೆ ನಿತ್ಯನಿರ್ಮಲೆ ಅ.ಪ.

ಜನನಿಯಲ್ಲವೆ ನೀನು ತನುಭವರೊಳು
ಇನಿತು ನಿರ್ದಯವೇನು
ಮನಕೆ ತಾರಲು ನೀನಾಕ್ಷಣದೊಳೇ ದೀನನಂ
ಅನಘ ಸಂಪದವಿತ್ತು ಮೆರೆಯಿಪ
ಘನತೆಯಾಂತವಳಲ್ಲವೇನು ೧

ಬಾಗುತೆ ಶಿರವಿಳೆಗೆ ಬೇಡುವ ಬಗೆ
ಕೂಗು ಬೀಳದೆ ಕಿವಿಗೆ
ಭಾಗವತಾರ್ಚಿತೆ ಭಾರ್ಗವೀ ನಾಮಖ್ಯಾತೆ
ಬೇಗೆಯೆಲ್ಲವ ಪರಿದು ಯೆನ್ನ
ರಾಗದಿಂದಲಿ ನೋಡು ಭರದಲಿ ೨

ನೀನಲ್ಲದನ್ಯರಂ ಕಾಣೆನು ಹಿತರಂ
ಮಾನಿತ ಗುಣಯುತರಂ
ಆನತರಾಗುವ ಸೂನೃತವ್ರತಿಗಳಿ
ಗಾನಂದವಿತ್ತು ಪೊರೆವ
ದಾನಿ ಶೇಷಗಿರೀಶರಮಣಿ ೩

## ೨೫

ಪಾಲಿಸೇ ಪದ್ಮಾಲಯೇ ಪಾಲಿಸೆ ಪ.

ಪಾಲಿಸು ನಿನ್ನನೆ ಓಲೈಸಿತಿರುವೀ
ಬಾಲೆಯರಭಿಮತ ಪಾಲಿಸುತೊಲವಿಂ ಅ.ಪ.

ಅಂಬುಜನಾಭನ ರಾಣಿ ನಿನ್ನ ನಂಬಿದೆ ಪಲ್ಲವರಾಣಿ ಚನ್ನೆ
ಕಂಬುಕಂಧರೆ ಫಣಿವೇಣಿ ಎನ್ನ ಬೆಂಬಿಡದಿರು ಕಲ್ಯಾಣಿ ಜನನೀ
ಜಂಭಾರಿ ಪೂಜಿತೆ ಶಂಬರಾರಿಯಮಾತೆ
ಶಂಭುವಂದಿತ ಪಾದಾಂಬುಜಕ್ಕೆರಗುವೆ ೧

ತತ್ವವಿಚಾರವನರಿಯೆ ವರಸತ್ವಗುಣದ ನೆಲೆ ತಿಳಿಯೆ
ಘನ ಸತ್ಯವ್ರತ ಪಿಡಿದರಿಂಯೆ ತಾಯೇ
ಮತ್ತೇಭಗಾಮಿನಿ ಮರೆಹೊಕ್ಕೆ ನಿನ್ನನೇ
ನಿತ್ಯಸತ್ಯದಿ ನಿನ್ನ ಭಜಿಸುವೆ ಜನನೀ ೨

ಘೋರ ಋಣದ ಭಾದೆ ಕಳೆದು ಎನ್ನ
ಪಾರುಗಾಣಿಸು ಮೋದವಡೆದು ಮುನ್ನ
ದುರಿತವಿದೆನ್ನನು ಬಿಡದು ತಾಯೆ ವರಶೇಷಗಿರಿ
ದೊರೆಯರಸಿ ನಿನ್ನಡಿತಾವರೆಗೆನ್ನನಾರಡಿಯೆನಿಸೆಂದು ಬೇಡುವೆ ೩

## ೨೬

ಪೂಜೆ ಮಾಡುವ ಬನ್ನಿರೆ ರಾಜೀವ ನಯನೆಯ
ಪೂಜೆ ಮಾಡುವ ಬನ್ನಿರೆ ಪ.

ಪೂಜೆ ಮಾಡುವ ಬನ್ನಿ ಮೂಜಗದಂಬೆಯ
ರಾಜರಾಜೇಶ್ವರಿಯ ಪದರಾಜೀವಗಳಿಗೆರಗಿ ವಿನಯದಿ ಅ.ಪ.

ಸನ್ನುತಾಂಗಿಯರೆಲ್ಲರೂ ಬನ್ನಿರೆ ಸಂ
ಪನ್ನ ಗುಣಯುತರು ಚಿನ್ನದ ಕಲಶದೋಳ್ ತುಂಬಿದ

ಪನ್ನೀರಿಂ ಸೆನ್ನಿಯಂ ತೊಳೆದು ಸಿರಿಪದ
ವನ್ನು ಸಂಸ್ಮರಿಸಿ ಹರಿಯನು ೧

ಪ್ರೇಮಗೌರವವೆಂಬ ಹೇಮಾಂಬರವ
ಭಾಮಿನಿಗಳವಡಿಸುವ
ಭಾವರಾಗದ ಕುಂಕುಮ ತಿದ್ದಿಫಾಲದೆ
ದೇವಿ ಪಾಲಿಪುವುದೆಮ್ಮನೆನ್ನುತ
ಭಾವನಾಯೋಗದೊಳ್ ನಲಿಯುತ ೨

ಗುರುಗಳಾಣತಿಯಂದದಿ ಶ್ರೀಪಾದದಿ
ಶರಣು ಬೇಡಿರೆ ಮೋದದಿ
ವರಶೇಷಗಿರೀಶನ ಕರುಣಾರೂಪಿಣಿಯೆನಿಪ
ಪರಮ ಮಂಗಳೆಗೆರಗಿ ಸಂತಸ
ಭರಿತ ಮಾನಸರಾಗಿ ಸಂತತೆ ೩

## ೨೭

ಬಿಜಯಂಗೈವುದು ತ್ರಿಜಗನ್ಮಾತೆಯೆ ದ್ವಿಜರಾಜಾನನೆಯೇ
ಅಜರಾಜಾತ್ಮಜಸುತನರಸಿಯೇ ಶ್ರೀ ಜಾನಕಿಯೇ ಪ.

ಪವನಜ ಗರುಡರ ಬಗೆಯಿಂ ನಿನ್ನಂ ಸೇವಿಸಲಾನರಿಯೆ
ಕವಿಕುಲ ಚೂಡಾಮಣಿಯೋಲ್ ನಿನ್ನನು ಭಾವಿಸಲೆನಗಳವೇ ೧

ನೆಲದೊಳು ನಿನ್ನೀ ನೆಲೆಯಂ ತಿಳಿಯಲ್ ಬಲುಮೆಯದಾರೊಳು ಪೇಳ್
ಚಲದಿಂ ಪೇಳ್ವರು ಕೆಲವರು ನಿನ್ನಂ ಚಂಚಲೆಯನುವೋಲ್ ೨

ಎಂತಾದರು ಸುಸ್ವಾಂತದಿ ನಿನ್ನೀ ಸಂತಾನದೊಳನಿಶಂ
ಶಾಂತ್ಯೌದಾರ್ಯ ಗುಣಾನ್ವಿತೆ ನೀ ಮೆರೆ ಸಂತತಮುಂ ನಲವಿಂ ೩

ಎಣಿಸಲ್ಕರಿಯದ ಋಣತಾಪದೊಳಕಟಾ ಹೆಣಗಾಡುತಲಿರುವೀ
ಅಣುಗರ ನೋಡಿ ಕ್ಷಣದೊಳೂ ನಿನ್ನ ಘನತೆ ತೋರಿಸು ದೇವಿ ೪

ತಳುವುದಿದೇತಕೆ ನಳಿನದಳಂಬಕೆ ಗಳಿಲನೆ ಬಾರೆಂಬೆ
ಜಲಜಲೋಚನ ಶೇಷಗಿರೀಶನ ಲಲನಾಮಣಿ ಜಗದಂಬೆ ೫

## ೨೮

ಭಕ್ತ ಮಂದಾರಿಣಿ ಭವಭಯನಿವಾರಿಣಿ
ಭಕ್ತಿಮುಕ್ತಿ ಪ್ರದಾಯಿನಿ ತ್ರಿಭುವನೈಕ ಜನನಿ ಪ.

ಭುವನತ್ರಯಮೋಹಿನಿ ಭಾನುಕೋಟಿಪ್ರಕಾಶಿನಿ
ಭೂರಿಭೂಭುಜ ಸೌಭಾಗ್ಯದಾಯಿನಿ ಪಾಹಿಮಾಂ ಜನನಿ ಅ.ಪ.

ಸಾಮಜಾಧಿಪಗಾಮಿನಿ ಕಾಮಿತಾರ್ಥಪ್ರದಾಯಿನಿ
ರಾಮಣೀಯ ಸ್ವರೂಪಿಣಿ ಕಾಮಜನನಿ ಕಲುಷವಿಭಂಜಿನಿ ೧

ಕನಕವಸನೆ ಕವಿಮನೊಲ್ಲಾಸಿನಿ ಸುಮನಸವರ
ಪರಿತೋಷಿಣಿ ಕೋಮಲತರ ಕೋಕಿಲ ಮೃದುಭಾಷಿಣಿ ೨

ಕಮಲ ಬಾಂಧವ ವಂಶ ಸಂಭವ
ರಾಮಚಂದ್ರ ಸುಪ್ರೇಮಾಕಾಂಕ್ಷಿಣಿ ೩

ವನಜ ಸಂಭವ ಸನ್ನುತೆ ಕನಕಭೂಷಣ ಭೂಷಿತೆ
ಅನಿಲನಂದನ ಸೇವಿತೇ ಘನಕರುಣಾರಸಾನ್ವಿತೇ ೪

ಅನಘ ಸದ್ಗುಣಭೂಷಿತೆ ಅನಿಮಿಷಾಧಿಪ ಪೂಜಿತೆ
ಜನಕ ಭೂಪತಿ ಪೋಷಿತೇ ಘನಶೇಷಾದ್ರೀಶ ದಯಿತೆ ೫

## ೨೯

ಮಂಗಳಂ ಶ್ರೀ ಲಕ್ಷ್ಮೀದೇವಿಗೆ ಜಯ
ಮಂಗಳಂ ಪಕ್ಷಿವಾಹನರಾಣಿಗೆ ಪ.

ಮಂಗಳಂ ಮಂತ್ರಮೂರುತಿಗೆ ಶುಭ
ಮಂಗಳಂ ಪರತಂತ್ರರೂಪಿಣಿಗೆ ಅ.ಪ.

ಭಾರ್ಗವಿಗೆ ಭಾಗ್ಯದಾಯಿನಿಗೆ
ಭಾಗವತರ ಪೂಜೆ ಕೈಗೊಂಬಳಿಗೆ
ನಾಗವೇಣಿಗೆ ವರನಾಗಪೂಜಿತೆಗೆ ವರ
ಭೋಗಿಭೂಷಣಸುತೆ ಯೋಗೇಶ್ವರಿಗೆ ೧

ಸೀತೆಗೆ ಮಂಗಳಗೀತೆಗೆ ಭುವಿ
ಜಾತೆಗೆ ಮಂಗಳಂ ಪವನಜಸೇವಿತೆಗೆ
ಮಾತೆಗೆ ಸದ್ಗುಣ ಪೂತೆಗೆ ವರಪ್ರ
ದಾತೆಗೆ ನಿತ್ಯನಿರ್ಮಲೆಗೆ ೨

ವರಶೇಷಗಿರಿವರನ ಉರದಲ್ಲಿ ನೆಲೆಗೊಂಡು
ಶರಣಾಗತರಂ ಪರಿಭಾವಿಸಿ
ಪರತರ ಸುಖಸೌಭಾಗ್ಯವ ಕರುಣಿಸಿ
ಪೊರೆವ ಕಾರುಣ್ಯಮೂರುತಿಗೆ ೩

## ೩೦

ಮಂಗಳ ಪಾಡಿರೆ ಭಾವೆಯರೇ
ರಂಗನ ರಮಣಿಯ ಭಾವಿಸಿರೇ ಪ

ಅಂಗಜಜನನಿಯ ಕೃಪೆಯಿ ಸ–
ತ್ಸಂಗತಿ ಪಡೆದೆವು ನಿಶ್ಚಯಂ ಅ.ಪ

ಭೋಗವತೀಪತಿಶಾಯಿಯೊಳು ಅನು
ರಾಗಗೊಂಡಿಹ ದೇವಿಯಿವಳ್
ಭಾಗ್ಯಲಕ್ಷ್ಮಿಯ ಪಾದದೊಳು
ಬಾಗುತ ಶಿರವನು ರಾಗದೊಳು ೧

ವೇದಸಾರದ ವಾಕ್ಯದಲಿ
ಮಾಧವಿಯಂ ಸ್ತುತಿ ಮಾಡುತಲಿ
ಭೇದವೆಣಿಸದೆ ಸಲಹೆನ್ನುತಲಿ
ಮಾಧವನಂ ಕೊಂಡಾಡುತಲಿ ೨

ತಾಪತ್ರಯಗಳ ಪರಿಹರಿಸಿ
ಆಪತ್ತುಗಳಿಂದುದ್ಧರಿಸಿ
ಕಾಪಾಡುವಳಿವಳೆಂದೆನಿಸಿ
ಶ್ರೀಪದ್ಮಿನಿಯನು ಸಂಸ್ಮರಿಸಿ ೩

ಶರಣಾಗತ ಸಂರಕ್ಷಕಿಗೆ
ವರಶೇಷಗಿರಿನಿಲಯನಿಗೆ
ಕರುಣಾರೂಪಿಣಿ ಪದ್ಮಿನಿಗೆ
ಕರಗಳ ಮುಗಿಯುತೆ ಮಾಧವಿಗೆ ೪

## ೩೧

ರಂಗನಾಯಕಿಗಾರತೀ ಅಂಗನೆಯರು ಬೆಳಗಿರೆ
ಅಂಗಜನಜನನಿಗೆ ಮಂಗಳಗಾತ್ರೆಗೆ ಮಂಗಳವೆನ್ನಿರೆ ಪ.

ಪ್ರೇಮಮಯ ಸ್ವರೂಪೆಗೆ ರಾಮಣೀಯಕ ಮೂರ್ತಿಗೆ
ಪ್ರೇಮತಳೆದಾಮೋದದಿಂ ಕಾಮಿತವೀಯೆನುತಾ ನಮಿಸುತ ೧

ಮಾತೆಯೇ ಪರದೈವವು ನೀತಿತಾನಿದು ಸತ್ಯವು
ವಾತಾತ್ಮಜ ಸಂಸೇವಿತೆ ಸೀತೆಯ ಜಗನ್ಮಾತೆಯೆನ್ನುತ ೨

ಕಾಂತ ಶೇಷಗಿರೀಶನ ಅಂತರಂಗದ ದಯೆಯೆನೆ
ಇಂತೆಮ್ಮ ಸುಸ್ವಾಂತರ್ಕಳೆಂದಂತೆಸಗುವಂತ ಶ್ರೀಕಾಂತೆಯೆ ತಾನೆನೆ ೩

## ೩೨

ರಾಜಿಸುವೀ ಪೀಠಕೀಗ ದಯಮಾಡು
ರಾಜಮುಖೀ ಬೇಗ ಪ.

ಚಿತ್ರವಿಚಿತ್ರಮಾಗಿ ಮೆರೆವ ರತ್ನಖಚಿತ ಮಂಟಪದಿ
ಕೆತ್ತನೆಯ ಹಸೆಯಮೇಲೆ ರತ್ನಗಂಬಳಿಯ ಹಾಸಿ ೧

ಪರಿಪರಿಯ ರಾಗದಿಂದ ತರುಣಿಯರು ನಿನ್ನ ಪಾಡಿ
ಕರೆಯುತಿಹರೋಳ್ ಕರುಣೆಯಿರಿಸಿ ಅರಸನೊಡನೆ ಸರಸದಿಂದ ೨

ಪಂಕಜಾಕ್ಷಿ ನಿನ್ನ ಚರಣಕಿಂಕರರ ಮೊರೆಯ ಕೇಳಿ
ಕನಕಪೀಠದಲ್ಲಿ ಕುಳಿತು ಕಾಂಕ್ಷಿತಾರ್ಥವಿತ್ತು ಸಲಹು ೩

ಪರಮಪುರುಷ ಶೇಷಶೈಲವರದನರಸಿ ನಿನ್ನ ಗುಣವೆ
ಸ್ಮರಿಸಿ ಸ್ಮರಿಸಿ ಕರೆಯುತಿರುವ ತರಳೆಯರಂ ಪೊರೆಯೆ ತಾಯೆ ೪

## ೩೩

ವಂದಿಸುವೆನೆಲೆ ತಾಯೆ ವಂದಿತಾಮರೆಯೆ ಪ.

ಶ್ರೀಕಲಶಾಬ್ಧಿಕನ್ಯೆ ಸುರಕುಲಮಾನ್ಯೆ
ಶ್ರೀಕರ ಗುಣಪೂರ್ಣೆ ಶೋಕಾಪಹರಣೆ
ಲೋಕನಾಯಕೆ ಧನ್ಯೆ
ಪಾಕಶಾಸನಸುತೆ ಪವನಜಸೇವಿತೆ
ಸಾಕೇತನಿಲಯೆ ಸರಾಗದಿ ರಕ್ಷಿಸು ೧

ಆನತನುತ ಗೀರ್ವಾಣಿ ಅಂಬುಜಪಾಣಿ
ಮಾನಿನೀಮಣಿ ಕಲ್ಯಾಣಿ ಭಯವಾರಿಣಿ
ಭಾವಜಾತ ಜನನೀ
ಭಾಗವತಾರ್ಚಿತೆ ಭಕ್ತಾಭಯಪ್ರದಾತೆ
ಬಾಗುತೆ ಶಿರ ನಿನಗೇಗಳುಂ ಮನವಾರೆ ೨

ಅರಿಯೆನು ನಿನಗೆಣೆಯಾರ ಕಾಣೆನು ಹಿತರ
ಚರಣವ ನಂಬಿದೆ ಮನವಾರ ಪಿಡಿಯೆನ್ನ ಕರವ
ಕರುಣದಿ ನೋಡೆನ್ನಿರವ
ಪರಮಪಾವನ ಶೇಷಗಿರೀಶನ
ಕರುಣಾರೂಪಿಣಿ ಜಗತ್ಕಾರಿಣಿ ೩

## ೩೪

ವೈದೇಹಿ ಪಾಲಿಸೆನ್ನಂ ನಂಬಿದೆ ನಿನ್ನಂ ಪ.

ವೇದವಿದಿತೇ ತವಪಾದವ ಸ್ಮರಿಸುವ
ಸಾಧುಭಾವವನಿತ್ತು ಪರಮಾದರದಿ ಪಿಡಿಯೆನ್ನ ಕರವ ಅ.ಪ.

ಕಾಮಿತಾರ್ಥವ ನೀಡುವಳೆಂಬುವ ಬಿರುದಾಂಕಿತೆಯಾಗಿರುವ
ಕಾಮಜನನೀ ನಿನ್ನ ನಾಮ ಮಂತ್ರಗಳನ್ನು
ನೇಮನಿಷ್ಠೆಯೋಳ್ ಜಪಿಸುವಂದದಿ ಸು
ಪ್ರೇಮದಿಂದಲಿ ವಿಮಲಮತಿಕೊಡು ೧

ಜ್ಞಾನಿಗಳಿಂದ ಜನಕನಂದನೆಯೆನಿಸಿ
ಜಾನಕಿನಾಮವ ಧರಿಸಿ
ದಾನವಕುಲವೆಂಬ ಕಾನನಂಗಳಿಗಂತು ಹವ್ಯ
ವಾಹನನೆನಿಪ ರಾಮನ ಕೈಯಪಿಡಿದ ಪರಮಪಾವನೆ ೨

ಶಮದಮಾದಿಗಳಿಂದ ಮೆರೆಯುತಲಿರ್ಪ
ಕ್ಷಮೆಗೆ ನೀ ನೆಲೆಯೆಂದು
ಯಮಿಕುಲವರ್ಯರು ನಮಿಸಿ ಸ್ತುತಿಸುತ್ತಿಹರು
ವಿಮಲ ಶೇಷಾದ್ರಿನಾಥನ ರಮಣಿ ನಿನ್ನಡಿ ಮಣಿದು ಬೇಡುವೆ ೩

## ೩೫

ಶ್ರೀರಮಣೀಮಣಿ ಬಾರೌ ಶ್ರೀಕರಮಣಿಪೀಠಕೆ ಪ.

ಸಾರಸದಳನಯನೆ ಸುಗುಣಾಭರಣೆ
ಸಾರಸಭವವಂದಿತಚರಣೆ
ಕ್ಷೀರಸಾಗರನಂದನೇ ವರ
ಕಾರುಣ್ಯಾಮೃತಪೂರಿತ ವದನೆ ೧

ಪವನಾತ್ಮಜಸಂಸೇವಿತಾಂಘ್ರಿಯುಗಳೇ
ಪಾಲಿತಾಮರ ಜಾಲೇ
ಪಾವನಗುಣಶೀಲೇ ಶಶಾಂಕನಿಭಫಾಲೇ
ಪಾಲಿಸುನೀಂ ಪಂಕಜಸುಮಮಾಲೆ ೨

ಕೇಶವಹೃದಯನಿವಾಸಿನೀ ಪದ್ಮಾಸಿನೀ
ಕ್ಲೇಶ ನಿವಾರಿಣಿ ಭುವನೈಕ ಜನನಿ
ಈಶವಿನುತ ಶೇಷಗಿರೀಶ ಮನರಂಜನಿ
ಕಾಂಕ್ಷಿತಾರ್ಥ ಪ್ರದಾಯಿನಿ ೩

## ೩೬

ಸಾರಸಾಕ್ಷಿ ಬಾ ಬಾ ಬೇಗ ಸಾರಿ ನೀಂ ಪ.

ಭೇರಿತಮ್ಮಟಾದಿ ಭಾರಿವಾದ್ಯಂಗಳು
ಭೋರ್ಗರೆಯುತ್ತಿರಲು ನಾರಿ ನಿನ್ನ ಕಾಣಲು ಅ.ಪ.

ಭಾವಜಾದಿ ಜನನೀ ಭಾರ್ಗವೀ ಕಲ್ಯಾಣಿ
ದೇವದೇವನ ರಾಣೀ ಶ್ರೀಮತೀ ಪದ್ಮಿನೀ ೧

ಕ್ಷೀರವಾರಿಧಿಜಾತೆ ಮಾರವೈರಿವಿನುತೆ
ವಾರಿಜಾಸನ ಮಾತೆ ಸಾರಿ ಬಾ ಸುಪ್ರೀತೇ ೨

ಶೇಷಶೈಲನಿಲಯೆ ವಾಸವಾದಿಗೇಯೆ
ವಾಸುದೇವಜಾಯೇ ವಸುಮತೀ ತನಯೇ ೩

## ೩೭

ಸಿರಿಯು ಬರುವ ಸೊಬಗ ನೋಡಿರೆ ಭರದಿ ಬನ್ನಿರೆ
ಶಿರವಬಾಗಿ ಚರಣಕೆರಗಿ ವರವಬೇಡಿರೆ ಪ.

ಕಾಲೊಳಂದಿಗೆ ಗೆಜ್ಜೆ ಪಿಲ್ಲಿ ಘಲಿರುಘಲಿರೆನೆ
ಬಾಲೆಯರ ಬಳಿಗೆ ಬರುವಳೊಲಿದಳೆಂಬೆನೇ ೧

ಮಾತೆಗೆನಿತೋ ಪ್ರೀತಿಯೆಮ್ಮೊಳಗೈತಂದಳೀದಿನಂ
ಪೂತುದರರೆ ಪೂರ್ವಪುಣ್ಯ ತರವಿದೆಂಬೆನಾಂ ೨

ಪರಮಪುರುಷ ಶೇಷಶೈಲವರದನರಸಿಯಿಂ–
ದರರೆ ಒಲಿದಳೆಮಗೆ ಧರೆಯೊಳರಿದುದಿನ್ನದೇನ್ ೩

## ೩೮

ಕ್ಷೀರವಾರಿಧಿಜಾತೆ ಚಾರುಸುಂದರಗಾತ್ರೆ ಪ

ಮಾರಜನಕದಯಿತೇ ಸಾರಸಾನನೆ ಮದ
ವಾರಣಗಮನೆ ನಿನ್ನ ತರುಣಿಯರೆಲ್ಲರು ಕರೆ
ವೋರು ವರಮಣಿ ಪೀಠಕೆ
ಬಾರೆಯ ಹಸೆಗೇ ಕರೆ ೧

ಇಂದಿರಾದೇವಿ ಬಾ ಇಂದುಸೋದರಿ ಬಾ
ಕುಂದಣದ ಹಸೆಗೇ
ಮಂದವಾಸವ ತೋರಿ ಬಂದೆಮ್ಮ ಮನೆಯೊಳು
ಎಂದೆಂದಗು ಬಿಡದಾನಂದವತೋರೆಂದು ೨

ರೂಢಿಗೊಡೆಯ ಗರುಢಾರೂಢನೆಂದೆಸಿದ
ಗಾಡಿಕಾರನ ಕೃಷ್ಣನಾ ಮಡದಿರನ್ನೆಯೆ ನಿನ್ನ
ಪೊಡಮಟ್ಟು ಬೇಡುವ ದೃಢ ಭಕ್ತರ ಕೈ
ಬಿಡದಾದರಿಸುತ್ತ ಬಾರೆಂದು ಹಸೆಗೆ ೩

ಸುರವರಪೂಜಿತ ಚರಣಸರೋಜವ
ನಿರುತ ಸೇವಿಪ ವರವ
ಕರುಣೆಸೆಂದೆನುತಾನು ಕರಮುಗಿದೆರೆವೆನು
ವರಶೇಷಗಿರಿವಾಸನರಸಿನೀಂ ನಲವಿಂದ ಬಾರೆಂದು ೪

## ಶ್ರೀಹರಿ ಸಂಕೀರ್ತನೆಗಳು

### ೩೯

ಅಪ್ರಮೇಯ ಎನ್ನ ಪಾಲಿಸೈ
ಅಪ್ಪ ನಿನ್ನ ಪದವ ನಂಬಿರ್ಪೆ ಪಾಲಿಸೈ ಪ

ಸರ್ಪಶಯನ ಕಂದರ್ಪಜನಕ ಕೃಪೆಯ ತೋರಿಸೀಗ ಎನ್ನ
ತಪ್ಪುಗಳನು ಒಪ್ಪಿಸಿರುವೆ ಒಪ್ಪಿಕೊಂಡು ಮನ್ನಿಸೆನ್ನ ಅ.ಪ

ಕರಿಯ ಬಾಧೆಯನ್ನು ಹರಿಸಿದೆ
ತರುಣಿಗಂದು ಕರುಣದಿಂದ ವರವ ನೀಡಿದೆ
ಕರೆಯೆ ಕಂಬದಿಂದ ಬಂದು
ದುರುಳ ದೈತ್ಯನನ್ನು ಕೊಂದು
ತರಳನನ್ನು ಪೊರೆದೆಯೆಂದು
ಶರಣು ಹೊಕ್ಕೆ ದೀನಬಂಧು ೧

ರಾಜೇಂದ್ರ ಪುರವರಾಧಿಪ
ರಾಜ ರಾಜ ಮಾಜದೆನ್ನ ಮೊರೆಯ ಕೇಳುತ
ಸುಜನಪಾಲ ನಿನ್ನ ಪದವ
ಭಜನೆಗೈವೆ ವಿಮಲಮತಿಯ

ಭುಜಗಶಯನ ಕರುಣಿಸೆಂದೆ
ಭಜಕ ರಕ್ಷಕ ರಾಘವೇಂದ್ರ ೨

## ೪೦

ಇನ್ನೇನಿನ್ನೇನಿನ್ನು ಯನಗಿನ್ನೇನಿನ್ನೇನಿನ್ನು ಪ.

ಚನ್ನಕೇಶವನಿವನನ್ನು ಹೃದಯದೊಳ್
ಚೆನ್ನಾಗಿ ನೆಲಸಿರಲಿನ್ನೇನ ಬೇಡುವೆ ೧

ಭುವಿಜಾತೆಯೆನ್ನ ಮಾತೆ – ಭುವಿನಾಥನೆನ್ನ ತಾತ
ಇವರೆನ್ನೊಳಿರುತಿರೆ ಭವಕ್ಲೇಶ ಪರಿದಿರೆ ೨

ಅಂಡಜವಾಹನಾಖಂಡಲಾರ್ಚಿತನ
ಪುಂಡರೀಕಾಕ್ಷನ ಕಂಡು ಕೊಂಡಾಡಿದೆ ೩

ಧರೆಯೊಳಧಿಕ ಶೇಷಗಿರಿಯೊಳು ನೆಲಸಿರ್ಪ
ವರದ ಶ್ರೀನರಹರಿ ವರದನೆನ್ನೊಳಿರೆ ೪

## ೪೧

ಇಷ್ಟೇಕೆ ನಿರ್ದಯ ಶ್ರೀಹರಿಯೇ ಸೃಷ್ಟೀಪತಿಯೆ ಪ.

ಮುಟ್ಟಿ ಭಜಿಪರ ನಿಟ್ಟಿಸಿ ನೋಡದೆ
ನಿಷ್ಠುರವಾಗಿಹುದಿಷ್ಟವೆ ನಿನಗಿದು ಅ.ಪ.

ಕಣ್ಣೆವೆ ಮುಚ್ಚದೆ ನೋಡುವುದೇನೋ ನಾನಿನ್ನ
ಸಣ್ಣ ಮಾತುಗಳಾಡಿದೆನೇನೊ
ಬೆನ್ನೊಳಗಿಹ ಗಿರಿಯನ್ನು ತೆಗೆ
ದೆನ್ನ ತಲೆಯ ಮೇಲಿನ್ನೊಗೆಯದಿರು ೧

ಕೋರೆಯ ತೋರುತ ಕೊಸರುವುದೇಕೋ ಶ್ರೀಹರಿ ನೀ
ನೀರೀತಿ ಮಾಡುವ ಬಗೆಯಿನ್ನೇಕೋ
ನೀರಜಭವಪಿತ ನೀನೇನಗ್ಯೆದರು
ಸೇರಿದೆ ನಿನ್ನನು ಸಾರೆನದಾರನು ೨

ಕೆಂಗಣ್ಣ ಕಿಡಿಯುಗುಳುತ ಹೂಂಕರಿಸಿ ನೋಡಲಂಜುವ
ಸಿಂಗನ್ನ ಪೋಲುವ ಮುಖ ಧರಿಸಿ
ಕಂಗೆಡೆ ಭಯದಿ ಜಗಂಗಳ ನಡುಗಿಪ
ನುಂಗಲು ಬರುವಾಸಿಂಗನ ಬಗೆ ಸಾಕೋ ೩

ಮುನ್ನಾ ಶುಕ್ರನ ಕಣ್ಣನು ತಿವಿದಾ ಪುಲ್ಲಿನತುದಿಯಿಂ
ಎನ್ನೀ ಕಣ್ಣನ್ನು ತಿವಿಯದಿರಣ್ಣಾ
ನಿನ್ನೀಕರದೊಳಿಹ ಘನ ಕೊಡಲಿಗೆ ನೀ
ನಿನ್ನಾರನು ಗುರಿಗ್ಯೆಯದಿರೆಂಬೆನು ೪

ಶಿಲೆಯಾಗಿದ್ದವಳ ಕಲುಷವ ಕಳೆದು ಪಾವನೆಯೆನಿಸಿದೆ
ಕಾಳಿಂಗನ ಫಣೆಯೊಳು ಕುಣಿಕುಣಿದೇ
ಭಳಿರೆನೆ ಬಾಲ ಗೋಕುಲ ಬಾಲೆಯರೆಲ್ಲರ
ಜಾಲವಿದ್ಯೆಯಿಂ ಮರುಳುಗೊಳಿಸಿದೆ ೫

ತರುಣಿಯರ ಮನ ಕಲಕಲು ಬೇಡ್ವೆ ಕೈಮುಗಿವೇ
ತುರುಗವನೇರುತ ತರುಬಲು ಬೇಡ್ವೆ
ಧರೆಯೊಳು ನೀನೆತ್ತಿದ ಪರಿಪರಿ ರೂಪವ
ಸ್ಮರಿಸಿ ಸ್ಮರಿಸಿ ಮನಬೆರಗಾಗಿದೆ ಹರಿ ೬

ಶರಣಾಭರಣನೇ ನೀನೆಂದು ಮನದೆಂದು
ಮರೆಬೇಡುವೆನ್ಯೆ ಬಳಿಸಂದು
ಬಿರುದನು ನೆನೆದು ಮರೆಯಲಿಬೇಡ್ವೆ
ವರಶೇಷಗಿರಿ ದೊರೆನೀನಿಂದು ೭

## ೪೨

ಇವನ್ಯಾರೆ ಇವನ್ಯಾರೆ ಧರೆಯೊಳು ಮೆರೆ
ಯುವ ಹೊಸಪರಿ ರೂಪದಿ ಪ.

ಶಂಖಚಕ್ರ ನಾಮಾಂಕಿತಮಾಗಿಹ
ಸಂಕರ್ಷಣ ರೂಪದಿ ಮೆರೆಯುವ ೧

ರವಿಶಶಿ ಬಿಂಬಗಳ್ ಎಡಬಲದೋಳ್
ನವವಿಧದಿಂದಲಿ ಮೆರೆಯುವ ೨

ನಾಡಿನೊಳೀಪರಿ ಗೂಢರೂಪದಿ
ನಾಡಿನ ಭಕ್ತರು ಬೇಡಿದುದೀಯುವ ೩

ಎಣಿಸಿ ಗುಣಿಸಲ್ ತಣಿಯದ ಮಹಿಮನ
ಮಣಿಸುವೆನು ಶೇಷಗಿರೀವರನಿವನ ೪

## ೪೩

ಎಲ್ಲಿಗೆ ಪೋದಪೆ ಮಲ್ಲಿಮರ್ಧನ ಕೃಷ್ಣ
ಗೊಲ್ಲಗೋಪಾಲನೀ ಬಲ್ಲೆನಾನಿದನು ಪ.

ದೇವಕಿಯುದರದಿ ಜನಿಸಿ ಯಶೋದೆಯ
ಕುವರನೆಂದೆನಿಸಿ ಮೆರೆದಂಥ ಸಾಹಸಿ ೧

ಮಧುರೆಯೊಳುದಿಸಿ ನಂದವ್ರಜದಿ ಗೋವ್ಗಳ ಕಾಯ್ದು
ಮದಿಸಿದಸುರರ ಸದೆವಡೆದ ಧೀರ ೨

ಮಾತೆಯ ಮನಕಂದು ಪ್ರೀತಿಪಡಿಸಲೆಂದು
ಮಾತುಲನನೆ ಕೊಂದು ತಾತಗೆ ನೆಲವಿತ್ತ ೩

ರುಕ್ಮನ ಭಂಗಿಸಿ ರುಕ್ಮಿಣಿಯನುವರಿಸಿ
ವಿಕ್ರಮ ತೋರಿದ ಚಕ್ರಧರ ಕೃಷ್ಣ ೪

ತರುಣಿಯ ಮಾನಕಾಯ್ದು ನರಗೆ ಸಾರಥಿಯಾಗಿ
ಧರೆಯಭಾರವೆಲ್ಲ ಪರಿದುಬಂದ ಮಲ್ಲ ೫

ವರಶೇಷಗಿರಿದೊರೆ ನಿನಗೆ ನಾ ಹೊರೆಯೆ
ಕರಿ ಧ್ರುವರನೆ ಪೊರೆದ ವರದನೆಂಬುದ ಮರೆಯೆ ೬

೪೪

ಏತಕಿನಿತು ಕೋಪವಾಂತು ಭೀತಿಗೊಳಿಸುವೆ
ರೀತಿಯೇನಿದನಾಥ ನಾಥ ನೀತಿಯೆನಿಪುದೆ ಪ.

ಪರಮದಯಾಕರನು ನೀನೆನುತೊರೆವುದಾಗಮ
ಪರಿಯ ನೋಡಲು, ಕರುಣೆ ನಿನ್ನೊಳಿರುವುದರಿಯೆ ನಾ ೧

ಪಾಲನೂಡಿದ ನಾರಿಗಂದು ಕಾಲನೆನಿಸಿದೆ
ಕಾಲಕಾಲ ಶೂಲಿವಿನುತ ನೀಲವರ್ಣನೆ ೨

ವರವನೀವ ವರದನೆಂದೇ ಹಿರಿಯರೊರೆವರು
ಚರಣತಲದಿ ಶಿರವನಿಟ್ಟರು ತೆರೆಯೆ ಕಣ್ಗಳಂ ೩

ಅಡಿಯ ಪಿಡಿದು ಬೇಡಿಕೊಂಬೆ ಪೊಡವಿಗೊಡೆಯನೆ
ಬಿಡದೆ ಕೈಯಪಿಡಿದು ಸಲಹೊ ಒಡೆಯ ಬೇಗನೆ ೪

ಶೇಷಶೈಲ ಶಿಖರಧಾಮ ಯದುಕುಲೋತ್ತಮ
ಶೇಷಶಯನ ಸಲಹು ನಮ್ಮ ಸತ್ಯವಿಕ್ರಮ ೫

## ೪೫

ಏತಕೀಪಂಥ ಜಾನಕೀಕಾಂತ
ಭೂತಲನಾಥ ಶಾಂತಸುಸ್ವಾಂತ ಪ.

ಸೋಮಸಮಾನನೆ ತಾಮರಸೇಕ್ಷಣ
ಶ್ರೀಮಾನಿನೀ ಮನೋಮೋಹನ ಸುಂದರ ೧

ಅಂಗಜತಾತ ಮಂಗಳಗಾತ್ರ
ಗಂಗೆಯಪೆತ್ತ ಉತ್ತುಂಗಮಹಿತ ೨

ಮಂದರೋದ್ಧಾರಿ ತಂದೆ ಕಂಸಾರಿ
ಬಂದುಮೈದೋರಿ ಪೊರೆಯೆನ್ನ ಶೌರಿ ೩

ವರಶೇಷಗಿರಿದೊರೆ ಶರಣರ ಈ ಮೊರೆ
ಕರಗಿಸಲಾರದೆ ಏನಿದು ಕಲ್ಲೆದೆ ೪

## ೪೬

ಏನಗೈದೊಡೇನು ನಿನ್ನ ಬಿಡೆನು ನಾನೆಲೈ
ಉದಧಿಶಯನ ಕೇಳೆಲೈ ಈ ಹದನ ಲಾಲಿಸೈ ಪ.

ಎತ್ತ ಪೋದಡತ್ತ ನಿನ್ನ ಬೆನ್ನ ಹತ್ತುವೆ ನಿನ್ನ
ಸುತ್ತಿ ಕಾಡುವೇ ನೀನೆತ್ತ ಪೋಗುವೆ ೧

ಜಲಧಿಯಲ್ಲಿ ವಾಸಗೈದೆ ಬೇಸರಿಲ್ಲದೆ
ಗಿರಿಯಪೊತ್ತೆ ಬೆದರದೆ ನಾರಬೇರತಿಂದೆ
ಮೋದದೆ ನೀ ಏನಗೈದೆ ೨

ಘೋರ ರೂಪಕಲಸದೆ ಕೆನ್ನೀರ ನೀಂಟಿದೆ
ಕರುಳಮಾಲೆ ಧರಿಸಿದೆ ಕಪಟರೂಪ ತಾಳಿದೆ ೩

ನಲಿದು ತಾಯ ತಲೆಯ ಕಡಿದು ಬಲಿದನೆನಿಸಿದೆ
ಜಲಧಿಯನ್ನೆ ಕಟ್ಟಿದೆ ಛಲದಿ ದ್ವಿಜನ ಕೆಡಹಿದೆ ೪

ಜಾರಚೋರನೆನಿಸಿ ಜಗವಗಾರುಗೊಳಿಸಿದೆ
ನಾರಿಯರ ವ್ರತವ ಕೆಡಿಸಿದೆ ಕ್ರೂರನಾಗಿ
ಕುದುರೆಯೇರಿದೆ ಇನ್ನೇನು ೫

ಇಷ್ಟು ಪಾಡುಪಟ್ಟ ನಿನ್ನ ಬಿಟ್ಟು ಪೋದೆನೆ
ದಿಟ್ಟತನಕೆ ಭೀತಿಪಟ್ಟೆನೇ ನಿನ್ನ ಪಿಡಿಯದಿರ್ಪನೆ ೬

ಮೋಸಗಾರ ಶೇಷಶೈಲವಾಸನಹುದೆಲೈ
ವಾಸಿಪಂಥವೇನೆಲೈ ಮೀಸಲಾಗಿ ಭಜಿಪೆ ನೋಡಲೈ ೭

## ೪೭

ಏನಿದ್ದರೇನಯ್ಯ ಜ್ಞಾನವಿಲ್ಲದಿರೆ
ಶ್ರೀನಾಥನಂ ನೆನೆಯದಿಹ ಹೀನಮಾನವಗೇ ಪ.

ಗುರುವ ಸೇವಿಸಲಿಲ್ಲ ಹರಿಯ ಧ್ಯಾನಿಸಲಿಲ್ಲ
ಹಿರಿಯರಾಣತಿಯಂತೆ ಚರಿಸಲಿಲ್ಲ
ವರಪುರಾಣಗಳ ಚರಿತವಾಲಿಸಲಿಲ್ಲ
ಅರಿತವರ ಸಂಗತಿಯೊಳ್ವೆರಯಲಿಲ್ಲವಲ್ಲಾ ೧

ಹರಿದಿನವ್ರತಾಚರಣೆಯಾಚರಿಸಲಿಲ್ಲ
ಹರಿಮಹಿಮೆಯನೊಮ್ಮೆ ಕೇಳಲಿಲ್ಲ
ಹರಿಕತೆಯ ಭಕ್ತಿಯೊಳು ಪ್ರಕಟಮಾಡಿಸಲಿಲ್ಲ
ಪರಿಪರಿಯ ಭೋಗದಿಂ ಮರುಳಾದೆನಲ್ಲ ೨

ಅಂಧನಿಗುಂ ಮದಾಂಧನೇಕೇಳು
ಗಂಧವಿಲ್ಲದಾ ಅಗರಿನಂದವೇಂ ಪೇಳು
ಬಂದೇ ದಾನವಿರದ ಧನವೇಕೆ ಪೇಳು
ತಿಂದುಂಡು ಮಲಗುವಾನರಜನ್ಮ ಹಾಳು ೩

ಕರ ಚರಣ ಮೊದಲಾದ ಕರಣಂಗಳಂ ಪಡೆದು
ಪರರಿಗುಪಚಾರ ಸ್ಮರಣೆ ತೊರೆದು
ದುರುಳತನದಲಿ ಬರಿದೆ ಮರುಳನಂತಲೆವವಗೆ
ಹರಿಪದವ ಪೊಂದುವಾ ಪರಿಯುಂಟೆ ಪೇಳು ೪

ನಾನು ನನ್ನದಿದೆಂಬಭಿಮಾನವನು ಬಿಟ್ಟೇಳು
ಜ್ಞಾನಿಗಳ ಪರಿಚರ್ಯೆಯಿಂ ತಿಳಿದುಬಾಳು
ಸೂನೃತವ್ರತಿ ಶೇಷಗಿರಿವರನ ಮೊರೆಬೀಳು
ಆನಂದ ಸಾಮ್ರಾಜ್ಯ ನಿನಗಹುದು ಕೇಳು ೫

## ೪೮

ಕಂದನ ಕೈಪಿಡಿ ಶೌರೀ ವಂದಿಪೆ ಕಂಸಾರಿ ಪ.

ಸರಸಿಜಭವಸನ್ನುತ ಶೌರಿ
ಸುರ ನರವಂದಿತ ಚರಣವ ಕೋರಿ
ಪರಿಪರಿ ಬೇಡುವೆ ನಿನ್ನೆಡೆ ಸಾರಿ
ಅರಿಯದ ಕಂದನ ಪೊರೆ ದಯೆತೋರಿ
ಅರಿಯೆನದಾರನು ಮರೆಯೆನು ನಿನ್ನನು
ಕರುಣಾಕರನೆಂಬೀ ಬಿರುದುಳಿಸಿನ್ನು ೧

ಮನ್ಮಥಪಿತ ಬಾ ಸುಂದರಕಾಯ
ಮನ್ನಿಸು ಎನ್ನಪರಾಧವ ಜೀಯ

ಚಿನ್ಮಯರೂಪನೆ ಚೆನ್ನಿಗರಾಯ
ಅನ್ಯರ ನೆರೆಯೆನು ನೀ ಕೇಳಯ್ಯ
ಎನ್ನೊಳಗೀಪರಿ ಛಲವೇಕಯ್ಯ
ಇನ್ನಾದರು ಕೈಪಿಡಿ ದಮ್ಮಯ್ಯ ೨

ಮಂದರಗಿರಿಧರ ಗೋವಿಂದನೆ ಬಾ
ನಂದಕುಮಾರನೆ ತಡೆಯದೆ ನೀ ಬಾ
ನಂದಿನಿಗೊಲಿದಾನಂದವ ಕೊಡು ಬಾ
ವೃಂದಾವನ ವಿಹಾರನೇ ಬಾ ಬಾ
ಇಂದಿರೆಯರಸನೆ ಶೇಷಗಿರೀಶನೆ
ಇಂದೆನಗೊಲಿದೈ ತಂದೆಯೆ ಭಳಿರೆನೆ ೩

## ೪೯

ಕನಸಿನಲಿ ಕಂಡೆನು ಹರಿಯ ಇಂದು
ವನಜದಳಾಂಬಕ ದೊರೆಯ ಪ.

ಕನಸಿನಲೆ ಕಂಡೆನು ಮನಸಿಜನಯ್ಯನ
ದನುಜಸಂಕುಲವನೆಲ್ಲವ ಕ್ಷಣದಿಸವರಿದ ಕಡುಗಲಿರಾಮನ ಅ.ಪ.

ವರ ರನ್ನಹಾರ ಕಿರೀಟ ಕೋಟಿತರಣಿಸನ್ನಿಭಸಂಕಾಶ
ಹಾಟಿಕಾಂಬರವಿಭೂಷ ಕೌಸ್ತುಭ ಶ್ರೀವತ್ಸ ಲಾಂಛಿತವಕ್ಷ ।
ಕೊರಳೊಳು ಧರಿಸಿರ್ಪ ವರರತ್ನ ಹಾರಂಗಳ್ । ತರುಣಿ
ಶ್ರೀ ತುಳಸೀ ವನಮಾಲೆಯಿಂದೊಲಿಯಲ್ । ಪರಮ
ಮಂಗಳಮೂರ್ತಿವರದ ಹಸ್ತವನೆತ್ತಿ । ಶರಣಜನ ಮೋಹಿಪ
ಪರಿಮೆರೆವ ನವಶಕ್ತಿ । ದುರುಳ ರಕ್ಕಸರ ಬೇರಸವರಿದ
ಪಾರಕೀರ್ತಿ । ಅರಿತೆನಾ ತರಳ ಪ್ರಹ್ಲಾದನಂ
ಪೊರೆದ ಕರುಣಾಮೂರ್ತಿ ೧

ವೇದಪಾರಾಯಣಗೈವ ವರದ್ವಾದಶನಾಮದಿ ಮೆರೆವ
ಮಾಧವನ ಸದ್ಗುಣಗಣವ ಶ್ರುತಿಸಂವಾದ
ಕೀರ್ತನದಿಂ ಮೈಮರೆವ ।
ಸಾಧುಸಜ್ಜನವೃಂದ ಭಕ್ತಿಭಾವದಿ ಕೈಕಟ್ಟಿ । ಶ್ರೀಧರಾಚ್ಯುತ
ನಮೋ ನಮವೆಂದು । ಪಾದ ಸಮ್ಮುಖದಿ ನಿಂದು ಭಜಿಪರ
ಪರಮಾದರದೆನೋಡಿ । ಶ್ರೀದೇವಿ ಕೆಲದೊಳ್ ನೆಲಸಿರಲ್
ಮನದಿ ಸಂತಸವು ಮೂಡಿ । ಸಾದರದಿ ಕರೆದಾದರಿಸಿ
ಕಾಂಕ್ಷಿತಾರ್ಥವನೀಡಿ । ಮೋದಗೊಳ್ಳುತಿಹ
ಶ್ರೀಧರನ ಕಂಡು ಮೈಮರೆದೆನೇನಿವನ ನೋಡಿ ೨

ಕನಕಖಚಿತ ರತ್ನಮಂಟಪದ ಮಧ್ಯೆ । ಮಿನುಗುವ ಮಣಿಪೀಠದಿ
ವೈದೇಹಿ । ವನಜಾಕ್ಷಿ ಕುಳಿತಿರಲು ಕೆಲದೊಳ್ ಮರುತಾತ್ಮಜ ।
[ನುನಮಿಸ] (ರ)ಲು ಪರಮಸಂಭ್ರಮದಿ ಸೋದರರು ಸಂಸೇವಿಸೆ ।
[ವನ] ತರಣಿಸುತ ಸಪರಿವಾರ ಸಂಭ್ರಮಿಸೆ, ಶರಣ ವಿಭೀಷ । ಣನು
ಜಯಘೋಷವೆಬ್ಬಿಸೆ ವರವಸಿಷ್ಠಾದ್ಯೆಖಿಲ । ಮುನಿವರ
ರಾಶೀರ್ವಚಿಸೆ ಸರಸವಚನವೆರಸಿ ರಘುವರ
ನಸುನಗುತಿರೆ ವರಶೇಷಗಿರಿ
ವರನೆ ತಾನೆಂದು ತೋರೆ ೩

## ೫೦

ಕರುಣಿಸು ಕಾರುಣ್ಯನಿಧಿಯೇ ನಿನ್ನ
ಚರಣವ ನಂಬಿದೆ ಶ್ರೀಪತಿಯೇ ಪ.

ಕರುಣಿಸು ವರಗುಣಾಭರಣಸೇವಕ ಭಯ
ಹರಣನೆ ಸುವಂದ್ಯಚರಣನೆ ರಘುವರ ಅ.ಪ.

ಸರಸಿಜಭವಮುಖ್ಯ ಸುರರು ನಿನ್ನ
ಚರಣವೇಗತಿಯೆಂದಿಹರು
ಸರಸಿಜೊದ್ಭವೆ ನಿನ್ನ ಉರದಲ್ಲಿ ನೆಲೆಸಿರೆ
ಪರಮಮಂಗಳಮೂರ್ತಿ ಪೊರೆಯೆನ್ನ ಕೈಪಿಡಿದೆತ್ತಿ ೧

ಅಂಗಜಜನಕನೆ ನಿನ್ನ
ಪಾದಂಗಳ ನಂಬಿರುವೆನ್ನಾ
ಕಂಗಳಿಗಾನಂದ ಪೊಂಗುವಂದದಿ ಶ್ರೀ
ರಂಗನೆ ದಯಾಪಾಂಗನೆ ಮೈದೋರು ೨

ವರಶೇಷಗಿರಿವಾಸ ನಿನ್ನ ನಿಜ
ಶರಣರ ದಾಸ್ಯದೊಳಿರಿಸೆನ್ನ
ಕರವೆತ್ತಿ ಮುಗಿವೆನು ಭರಿಸೆನ್ನ ದೊರೆ ನೀನು
ದುರಿತ ಕೋಟಿಗಳನ್ನು ಪರಿಹರಿಸೆಂಬೆನು ೩

## ೫೧

ಕಾಯವ ನೆರೆನಂಬಿ ಕೆಡದಿರು ಮಾಯೆಯ ತಿಳಿದೇಳು ಪ.

ನ್ಯಾಯವನರಿಯದೆ ನೀ ಮಾಯಾಮೋಹವೆ
ಹೇಯಕಾರ್ಯರಿದೊಳಪಾಯದಿ ನರಳುವ ಅ.ಪ.

ತನುಮನಕನಕವಿದು ನಿತ್ಯದಿ ತನದಾಗಿಹುದೆಂದು
ಹೊನ್ನು ಮಣ್ಣು ಹೆಣ್ಣೆಂಬೀ ಮೂರರ ಬಣ್ಣದೆ ಬಗೆಗೆಟ್ಟು
ಕಣ್ಣು ಕಾಣದೆ ಮುಂಬರುತಿಹ ಭಿನ್ನವನೆಣಿಸದೆಯೆ
ಸಣ್ಣತನದಿ ಜೀವನ ವ್ಯರ್ಥವೆನಿಸುವ ೧

ಸುಜನರ ಸಂಗತಿ ತ್ಯಜಿಸಿ ಮದದಲಿ ಕುಜನರ ಕೂಟವ ಬಯಸಿ
ಋಜುಮಾರ್ಗವ ತೊರೆದು ಕಾಲವ ಅಜಗರನಂದದಿ ಕಳೆದು
ಗಜಪತಿ ವರದನ ಪದಪಂಕಜ ಮಹಿಮೆಯ
ನಿಜವರಿಯದೆ ದುರ್ಜೀವನವೆನಿಸುವ ೨

ನೀರಗುಳ್ಳೆಯ ತೆರದಿ ಕರಗುವ ಸಾರವಿಲ್ಲದ ಭವದಿ
ಮೂರುದಿನದ ಬಾಳೆಂದು ನೆನೆಯದೆ ಹಾರಾಡುವರೇ ನಿಂದು
ಮಾರಪಿತನ ಪದಸಾರಸವನು ನೆನೆ [ನೆನೆದು]
ನೀರ ಶೇಷಗಿರಿವರನೆ ಗತಿಯೆನೆ ೩

## ೫೨

ಕೈಯ ತೋರೋ ರಂಗ ಕೈಯ ತೋರೋ ಪ.

ಕೈಯ ತೋರೋ ಕರುಣೆಗಳರಸನೆ ಅ.ಪ.

ಶರಧಿ ಮಥನದಿ ದೇವಾಸುರರಿಗೆ ಮೋಹಿನಿಯೋಲ್
ಸುರರಿಗೆ ಸುಧೆಯಿತ್ತು ಸುರರಿಗಾಸರೆಯನಿತ್ತಾ ೧

ಹರನ ಕರದಲಿ ವಿಧಿಶಿರಕಚ್ಚಿ ಕಾಡುತಿರೆ
ಶಿರಮಂ ಸದ್ಗತಿವೊಂದಿಸಿ ಹರನಂ ನಲವಡಿಸಿದ ೨

ಹರನ ವರದಿ ಭಸ್ಮಾಸುರ ಗರ್ವಿತನಾಗಿ [ಆ]
ಹರನಂ ಬೆನ್ನಟ್ಟಿ ಬರೆ ದುರುಳನ ದಂಡಿಸಿದಾ ೩

ತರಳಧ್ರುವ ತಾಯ ಬಿರುನುಡಿಗೆ ಮನನೊಂದು
ಶರಣೆನೆ ಮೈದೋರಿ ತರಳನ ಮೈದಡಹಿದ ೪

ಕಂದ ಪ್ರಹ್ಲಾದನ ತಂದೆಯುಗ್ರದಿ ಜಡಿಯೆ
ಕಂಬದಿಂ ಬಂದು ಖಳನ ಕರುಳನು ಕಿತ್ತೆಸೆದಾ ೫

ಮೊಸಳೆ ಬಾಯೊಳು ಸಿಕ್ಕಿ ಬಸವಳಿದು ಬಾಯ್ಬಿಡುತಿರೆ
ಎಸೆದ ಚಕ್ರದಿ ಸೀಳಿ ನಕ್ರನ ಕರಿಯನುದ್ಧರಿಸಿದ ೬

ಸೊಕ್ಕಿನಿಂ ಬಂದಾ ರುಕ್ಮನ ಗೆಲಿದು ಗೋವಿಂದ
ಚಕ್ರಧರ ರುಕ್ಮಿಣಿಯ ಕೈಪಿಡಿದ ೭

ತರುಣಿಯಭಿಮಾನವ ನೆರೆಕಾಯ್ದು ನರನಿಗೆ
ವರಸಾರಥಿಯಾಗಿ ತೇರನೆ ನಡೆಸಿದ ೮

ವರಶೇಷಗಿರಿಯಲ್ಲಿ ಸ್ಥಿರವಾಗಿ ಶರಣರ
ಕರೆದಾದರಿಸಿ ವರಗಳ ಕೊಡುತಿಪ್ಪ ೯

## ೫೩

ಜಯ ಜಯ ದ್ವಾರಕಾವಾಸ ಜಯ ಮುನಿಮಾನಸಹಂಸ ಪ.

ಜಯ ಕಂಸಾಸುರವಿಧ್ವಂಸ ಯದುಕುಲಾವತಂಸ ಅ.ಪ.

ಜಯ ವಸುದೇವಕುಮಾರ ಜಯ ವೃಂದಾವನವಿಹಾರ
ಜಯಗೋಪೀಜನಜಾರ ಜಯ ಕೌಸ್ತುಭಮಣಿ ಹಾರ ೧

ಜಯಜಯ ಸನ್ನುತಕಾಯ ಜಯಸುರಮುನಿಗೇಯ
ಜಯ ಸಾಗರನಿಲಯ ಜಯ ಶುಭಗುಣವಲಯ ೨

ಜಯಜಯ ದೈತ್ಯವಿನಾಶ ಜಯ ನುತಶೇಷಗಿರೀಶ
ಜಯಜಯ ಮಂಜುಳಭಾಷ ಜಯ ಪಾಂಡವಪರಿತೋಷ ೩

## ೫೪

ಜಯಜಯ ನಂದಕುಮಾರ ಜಯ ವೃಂದಾವನ ವಿಹಾರ ಪ

ನಾರಾಯಣ ನಾರಾಯಣ ಜಯ ಗೋವಿಂದ ಹರೆ ಅ.ಪ

ವಾಗೀಶಾರ್ಚಿತಪಾದ ಯೋಗೀಧ್ಯಾನವಿನೋದ
ನಾರಾಯಣ ನಾರಾಯಣ ಜಯಗೋವಿಂದ ಹರೆ ೧

ಲೀಲಾಮಾನುಷರೂಪ ಶ್ರೀಲೋಲಾ ಜಿತಕೋಪ
ನಾರಾಯಣ ನಾರಾಯಣ ಜಯಗೋವಿಂದ ಹರೆ ೨

ಶ್ರೀ ಶೇಷಾಚಲವಾಸ ಶ್ರೀಶ ಜಯ ಸರ್ವೇಶ
ನಾರಾಯಣ ನಾರಾಯಣ ಜಯಗೋವಿಂದ ಹರೆ ೩

## ೫೫

ಜಯಜಾನಕೀರಮಣ ಜಯಕೌಸ್ತುಭಾಭರಣ ಪ

ಜಯ ಪಾವನಚರಣ ಜಯ ಕೌಸಲ್ಯಾನಂದವರ್ಧನ
ಜಯ ಭಕ್ತಾಭರಣ ಅ.ಪ.

ಜಗದೋದ್ಧರಣ ಅಪಾರಕರುಣಾ ಅಗಜಾರ್ಚಿತ ಚರಣ
ಖಗೇಶಗಮನ ಜಲನಿಧಿಶಯನ ಸುರರಿಪು ಸಂಹನನ ೧

ಸೂನೃತಪಾಲ ಜಾನಕೀಲೋಲ ದೀನಜನಾವಾಲ
ದಾನವಕಾಲಾ ಶ್ರೀವನಮಾಲಾ ಮಾನಿತ ಗುಣಶೀಲಾ ೨

ಶೇಷಗಿರೀಶ ಶ್ರಿತಪರಿಪೋಷ ವಾಸವ ಪರಿತೋಷ
ದೋಷವಿನಾಶ ದಶಶಿರಧ್ವಂಸ ಮುನಿಜನ ಮಾನಸಹಂಸ ೩

## ೫೬

ಜಯಮಂಗಳಂ ಶ್ರೀ ರಘುಕುಲಾಬ್ಧಿಚಂದ್ರ ಭವತು ತೇ
ಶುಭಮಂಗಳಂ ಶ್ರೀರಘುಕುಲಾಬ್ಧಿಚಂದ್ರ ಪ.

ಸುರರಿಪುಶಮನ । ಕ್ಷೀರಶರಧಿಶಯನಾ ಕರಿವರನಮನ
ಮುರಹರ ಶ್ರೀ । ಸುರವೈರಿಭಯಂಕರ ಮಾವರಶ್ರೀ ।
ಸರಸಿಜಾಕ್ಷ ಸಾಧುಪಕ್ಷ ದುರಳಶಿಕ್ಷ ಶ್ರೀಕಟಾಕ್ಷ ೧

ಭವನುತ ಚರಣ ಭಾರ್ಗವಮದ ಹರಣ
ಭುವಿರ ಜಾರಮಣ ಭಯಹರ । ಪವನಾತ್ಮಜ
ಸಂಸೇವಿತ ಪದಶ್ರೀ । ಕವಿಕುಲಾನ್ವಯಲಲಾಮ
ಕವಿಜನಾಳಿಪೂರ್ಣಕಾಮ ೨

ದಾಸ ಹೃದಯಾವಾಸ । ದಶಶಿರಧ್ವಂಸ ಶಶಿನಿಭಹಾಸ ।
ದಶರಥಸುತ । ಶ್ರೀ ವಸುಮತೀಶ ಕುಲವಿಭೂಷ ।
ಶೇಷಶೈಲ ಶಿಖರಾವಾಸ ಜಯಮಂಗಳಂ ೩

## ೫೭

ಜಯ ಜಯರಾಘವೇಂದ್ರ ಸಜ್ಜನಪಯೋನಿಧಿಚಂದ್ರ
ಜಯದೇವ ಭೂಸುರವೃಂದ ಸುಗುಣಸಾಂದ್ರ ಪ.

ಕೌಸಲ್ಯಾಪ್ರಿಯ ಬಾಲ ಕೌಶಿಕಕ್ರತುಪಾಲ
ದಶಕಂಠ ಕುಲಕಾಲ ದಾನಶೀಲ
ಶಶಿಮೌಳಿಧನುರ್ಭಂಗ ಭುವಿಜಾ ಮನೋಹರಾಂಗ
[ಋಷಿ] ಮನೋಂಬುಜಭೃಂಗ ಕರುಣಾಂತರಂಗ ೧

ಸಾಕೇತ ಪುರಧಾಮ ಪಾಕಾರಿನುತನಾಮ
ಲೋಕಮೋಹನ ಶ್ಯಾಮ ಕೋದಂಡರಾಮ
ಶ್ರೀಕಾಮಿನೀಸದನ ಭೂವೈಕುಂಠ [ಕಾರಣ]
ಶ್ರೀ ಕೌಸ್ತುಭಾ ಭರಣ ಶೇಷಗಿರಿರಮಣ ೨

## ೫೮

ಜಯರಾಮಾ ಜಯರಾಮ ರಘುವಂಶಾಬ್ಧಿ ಸೋಮ ಪ.

ವೈದೇಹಿ ಮನೋಹರ ವೇದವೇದ್ಯ ಶ್ರೀಕರ
ಸಾಧುಜನ ಸುಖಕರ ಮಾಧವ ಮುರಹರ
ಜಯಶೌರೇ ದಿತಿಜಾರೇ ಪರಿಪಾಹಿ ನೃಹರೇ ೧

ನೀರೇರುಹಲೋಚನ ಆನಂದ ಮಯ ಸದನ
ವಾರಾಶಿಬಂಧನ ಅಕ್ಷಯಸುವಚನ
ಸ್ಮರತಾತಾ ವರದಾತಾ ರಮಾಸಮೇತ ೨

ಶೇಷಾದ್ರಿನಿಕೇತನ ಆಶ್ರಿತಪರಿಪಾಲನ
ಕ್ಲೇಶಪಾಶವಿಮೋಚನ ವಾಸವಾರ್ಚಿತಚರಣ
ಶ್ರೀಸತ್ಯಭಾಮಾಧವ ಜಯದೇವಾದ್ಭುತಪ್ರಭಾವ ೩

## ೫೯

ತಾಳು ತಾಳೆಲೊ ಕೋಪ ಜಾಲಮಾಡದೆ ಭೂಪ
ಕೇಳಿಕೊಂಬೆನು ನಿನ್ನ ಕಾಲಪಿಡಿವೆನೊ ಪ.

ಫಾಲಲೋಚನನುತ ಶ್ರೀಲೋಲ ನಿನ್ನನೇ
ಕೇಳಿಕೊಂಬೆನು ಮಾತಕೇಳೋ ಕಾಳುಮಾಡದೆ ಮಾತ ೧

ದುರುಳತನದಲಿ ನಿನ್ನ ತೆರೆದಕಣ್ಣವನೆಂದು ಜರಿದು ಪೇಳಿದೆನೋ
ತಿರುಗಿ ನಾ ನಿನ್ನ ಗಿರಿಯ ಬೆನ್ನೊಳು ಪೊತ್ತು
ಮೆರೆಯುವ ದಡ್ಡನೆಂದೊರೆದ ಕಾರಣದಿಂದ ೨

ಕೋರೆಯೊಳ್ ಕೊರೆದು ಕೊನ್ನಾರಿಗೆಡ್ಡೆಯ ತಿಂದು
ಚೀರಿಕಂಬವನೊಡೆದು ಬಂದು ಈರೇಳು ಲೋಕಂಗ
ಳೀರಡಿ ಮಾಡಿದೆ ಘೋರವಿಕ್ರಮನೆಂದು ದೂರಿದೆನದರಿಂದ ೩

ಹೆತ್ತತಾಯಿಯ ಕೊಂದು ಮತ್ತೆ ಕಪಿಗಳ ಕೂಡಿ
ಸುತ್ತುತ್ತಲಡವಿಯೊಳು ಕತ್ತಲೆಯೊಳು ನಿಂತು ಗೋಪಿಯರ
ಚಿತ್ತವಸೆರೆಗೈದ ಮತ್ತನೆಂದೆನಲಾಗಿ ೪

ಉತ್ತಮಸತಿಯರ ಚಿತ್ತವ ಕಲಕಿದ ಮತ್ತನೆಂದಾಡಿದೆನೋ
ಮತ್ತೆ ಕುದುರೆಯನೇರಿ ಕತ್ತಿಯ ಪಿಡಿದೆತ್ತಿ
ಸುತ್ತುವನಿವನುನ್ಮತ್ತನೆಂದುದರಿಂದ ೫

ಪಿತ್ತವು ತಲೆಗೇರಿ ಮತ್ತೆ ಮತ್ತೆ ನಾನಿನ್ನ
ಒತ್ತೊತ್ತಿಜರಿದೆನೊ ಚಿತ್ತಜಪಿತನೆ ಮತ್ತೊಮ್ಮೆ ಬೇಡುವೆ
ಗತಿನೀನೆ ನಮಗೆಂದು ಪತಿಕರಿಸೆನ್ನಪರಾಧವ ಮನ್ನಿಸಿ ೬

ಇಂದುನಾಂ ಶಿಶುಪಾಲನಂದದೆ ನಿನ್ನನಿಂದಿಸಿ ನಲಿದಾಡಿದೆನೊ
ಕಂದನಿವಗ್ಯೆದ ಕುಂದುಗಳೆಣಿಸದೆ
ತಂದೆ ಸಲಹಯ್ಯ ಶ್ರೀ ಶೇಷಗಿರಿವರ ೭

## ೬೦

ದೇವದೇವನೆ ಓವುದೆಮ್ಮನು ಶ್ರೀವಧೂವರನೇ
ಸಾವಧಾನದಿ ಭಾವಿಸ್ಯೆ ವಸುದೇವ ಕುವರನೇ ಪ.

ನೀಲಮೇಘಶ್ಯಾಮ ರಮಾಲೋಲ ಪಾಲಿಸ್ಯೆ
ಬಾಲಗೋಕುಲಬಾಲ ಶ್ರೀ ವನಮಾಲ ಪಾಲಿಸ್ಯೆ ೧

ಭೋಗಿಶಯನ ಯೋಗಗಮ್ಯ ಸಾಗರಸ್ಥಿತ
ಬಾಗಿ ನಮಿಪೆವು ರಾಗದಿಂ ಪೊರೆ ವಾಗಗೋಚರ ೨

ಘಳಿಲನ್ಯೆತಹುದಿಳೆಯ ರಮಣ ತಳುವ ಬೇಡುವ್ಯೆ
ಎಳೆಯರಾವು ಚಲವನರಿಯೆವು ಒಲವನೆರೆವೆವ್ಯೆ ೩

ದೇಶದೇಳ್ಗೆಯೊಳಾಸೆಯಿಂದಿಹ ದಾಸರೆಂದು ನೀಂ
ಲೇಸ ಪಾಲಿಸು ಆಶೆ ಸಲ್ಲಿಸು ಶೇಷಗಿರೀಶನೇ ೪

## ೬೧

ದೇವಾದಿದೇವನೇ ನಮೋ ನಮೋ
ಪರವಾಸುದೇವನೇ ನಮೋ ನಮೋ ಪ.

ನಿಗಮೋದ್ಧಾರನೇ ನಮೋ ನಮೋ
ನಗಧರನೇ ನಮೋ ನಮೋ
ಜಗದೋದ್ಧಾರ ನಮೋ
ಜಗತ್ಪತಿವರಾಹ ನಮೋ ನಮೋ ೧

ನೃಪಂಚಮುಖಸ್ವರೂಪ ನಮೋ ನಮೋ
ಕಪಟವಟುವಾಮನ ನಮೋ ನಮೋ
ನೃಪತಿ ಕುಲಕುಠಾರ ನಮೋ
ತಪನಕುಲತಿಲಕ ನಮೋ ನಮೋ ೨

ನವನೀತಚೋರ ನಮೋ ನಮೋ
ಭವಬಂಧಮೋಚನ ನಮೋ ನಮೋ
ನವಮೋಹನಾಂಗ ನಮೋ
ವಸುದೇವತನಯ ನಮೋ ನಮೋ ೩

ಬುದ್ಧ ಸ್ವರೂಪ ನಮೋ ನಮೋ
ಸಿದ್ಧಸಂಕಲ್ಪ ನಮೋ ನಮೋ
ಕ್ಷುದ್ರಮ್ಲೇಂಛಹನನ ನಮೋ
ಚಿದ್ವಿಲಾಸ ನಮೋ ನಮೋ ೪

ಸತ್ಯಕಾಮ ವೈಕುಂಠಧಾಮ ನಮೋ ನಮೋ
ನಿತ್ಯತೃಪ್ತ ನಿರ್ಮಲಾತ್ಮ ನಮೋ ನಮೋ
ಕರ್ತೃಶೇಷಗಿರೀಶ ನಮೋ ನಮೋ
ಸತ್ಯಭಾಮಾರಮಾ ನಮೋ ನಮೋ ೫

## ೬೨

ದೇವಾದಿದೇವ ಸದಾ ಮಂಗಳಂ ಪ

ಭಾವಜಾರಿವಿನುತ ಮಹಿತ ದಯಿತಾ ಸಮೇತ ಅ.ಪ

ಶ್ರೀಭೂನೀಳಾ ಸಮೇತ ಸತತ ವಿಭವಯುತ
ತ್ರಿಭುವನ ಸುಖದಾತ ಶುಭಚರಿತ ೧

ರಾಜೇಂದ್ರಪುರಿಧಾಮ ರಘುರಾಮ ಘನಶ್ಯಾಮ
ರಾಜಶೇಖರನುತನಾಮ ಜಗದಭಿರಾಮ ಪಾವನಗುಣಧಾಮ ೨

## ೬೩

ನಮಿಸುವೆನಾಂ ಶ್ರೀ ಹಯವದನಾ ನಿನ್ನ ನಮಿಸುವೆನಾಂ ಪ.

ಕಾಮಜನಕ ಸದಾಶಿವಸನ್ನುತ ಕಾಮಿತ ಶುಭಫಲದಾ ವರದಾ ಅ.ಪ.

ಸಾರಸ ಸಖ ನಿಭ ವದನಾ ಸರಸಿಜನಯನಾ ಶ್ರೀನಾರೀಮಣಿ ಸದನ
ಸಾರಸಭವನುತ ಚರಣ ಮುರಮದ ಹರಣ
ಘೋರತರ ಭವರೋಗ ನಿವಾರಣ ಭೂರಿ ಕರುಣಾರಸ
ಪೂರಿತ ಲೋಚನ ಶರಣಾಗತ ಜನಾರ್ತಿ ಹರಣ
ಚಾರುತರ ಸುಜ್ಞಾನದಾಯಕ ಧೀರ ಗುಣ ಗಂ
ಭೀರ ಸುಮನೋಹರ ಶ್ರೀಹಯವದನಾ ೧

ಕೌಸ್ತುಭ ಮಣಿಹಾರ ಪುಸ್ತಕಧರ ಶ್ರೀಕರ ಶ್ರೀ
ವತ್ಸಾಂಕಿತ ವಕ್ಷ ಸುಂದರ ಪಕ್ಷಿಗಮನ ಪುರು
ಷೋತ್ತಮ ನಮಪೂರ್ಣಕಾಮ
ಭಕ್ತಿವರ್ಧನ ನಿಲಯಾಪ್ರಮೇಯ

ಭಕ್ತಿ ಜ್ಞಾನ ಪ್ರದಾಯಕ ಮುಕ್ತಿ ಮಾರ್ಗ ಪ್ರದರ್ಶಕ
ನಕ್ತಂ ಚರರಾಜತಮೋಮಿಹಿರ ಶ್ರೀಹಯಾಸ್ಯ ೨

ಶ್ರೀಶ ಜನಾರ್ದನ ಛಿದ್ವಿಲಾಸ ಕಮನೀಯವೇಷ
ಶ್ರೀ ಶೇಷಾದ್ರಿ ನಿವಾಸ ದಾಸಜನ ಹೃತ್ಪದ್ಮ ವಿ
ಕಾಸ ಕವಿ ಮನೋಲ್ಲಾಸ ಭಾಸ್ಕರಕೋಟಿ ದ್ಯುತಿಭಾಸ
ಕೇಶವ ನಾರಾಯಣ ಜಯಜಯವೆನ್ನುತ
ಮೀಸಲಾಗಿ ಪಾಡುವೆ ಪೊರೆ ದಾತಾ
ಹಯವದನಾ ನಿನ್ನ ನಮಿಸುವೆನಾ ೩

## ೬೪

ನವನೀರದ ಸುಂದರಶ್ಯಾಮಂ ಕರುಣಾಭರಣಂ ಶರಣಂ ಶರಣಂ ಪ.

ರಜನೀಕರ ಚಾರುಮುಖಾಂಬುರುಹಂ
ರಜನೀಚರ ರಾಜತಮೋಮಿಹಿರಂ
ಅಜನೃಪಾತ್ಮಜ ಬಾಲಕಂ ರಘುನಾಯಕಂ
ಅಜಸುರೇಂದ್ರ ಸುಪೂಜಿತಂ ವರಭುಜಗಭೂಷಣ ಸನ್ನುತಂ ೧

ಪವನಾತ್ಮಜ ಸಂಸೇವಿತ ಚರಣಂ
ಅವನೀಸುತೆ ಮನೋರಮಣಂ
ಕವಿರಾಜ ಸಂಪೂಜಿತಂ ಭೂಸುರವಂದಿತಂ
ಭುವನಮೋಹನವಿಗ್ರಹಂ ಶ್ರೀಮದನುಗ್ರಹಂ ೨

ತರಣಿಕುಲಾಂಬುಧಿ ಚಂದ್ರಂ
ಪರಮೋದಾರ ಗುಣಸಾಂದ್ರಂ
ವರಶೇಷ ಗಿರೀನಿಲಯ ಆನತ ಸುರಸಮುದಾಯಂ
ಕರುಣಾಸಾರಂ ವರದಾಭಯಕರಂ ಘುರಧೀರಂ ಗಂಭೀರಂ ೩

## ೬೫

ನವನೀರದಾಭಗಾತ್ರ ಅವನೀಸುತಾಕಾಂತ ಪ.

ಅಣೋರಣೀಯನೆನಿಸಿ ಅನಂತರೂಪ ಧರಿಸಿ
ಪ್ರಣವ ಸ್ವರೂಪಿ ಮೆರೆವೈ ೧

ಅನಾಥನಾಥ ನೀನೇ ಸನಂದನಾದಿನುತನೇ
ವನಜಾಸನನಂ ಪಡೆದವನೇ ೨

ಮದಾಂಧರಾಗಿ ಕೆಡುವ ಪದಚ್ಯುತರ ಪೊರೆವ
ವ ಧನ್ಯ ನೀನೆಲೆದೇವ ೩

ಬಾರಯ್ಯ ಭಕ್ತಭರಣ ತೋರೀಗ ನಿನ್ನ ಚರಣ
ಬಾರೆನ್ನ ಶೇಷಗಿರಿರಮಣ ೪

## ೬೬

ನಾಮರಸಾಯನಂ ಪಿಬ ಹೇ ಮಾನಸ ಶ್ರೀಹರಿನಾಮ ಪ.

ರಾಮನಾಮ ರಸಾಯನಂ ಸಂಸಾರರೋಗ ನಿವಾರಣಂ
ಸಂಚಿತಪಾಪ ವಿಧ್ವಂಸನಂ ನಾಮಸಂಕೀರ್ತನಂ ೧

ಭಕ್ತಾರ್ತಿವಾರಣಂ ಭವಭಯಾಬ್ಧಿತಾರಣಂ
ಭಕ್ತಿ ಮುಕ್ತಿ ಸಾಧನಂ ನಾಮಸಂಕೀರ್ತನಂ ೨

ಕ್ಲೇಶಪಾಶ ವಿಮೋಚನಂ ಕಲಿಕಲ್ಮಷ ಭಂಜನಂ
ಶೇಷಾದ್ರೀಶ ಸ್ಮರಣಂ ಸರ್ವೋಪದ್ರವಾರಣಂ ೩

## ೬೭

ದಧಿಚೋರ ನೀ ಮಾಯಕಾರ
ಶ್ರೀಮಾನಿನೀವರ ನಂದಕುಮಾರ ಪ.

ರಾಜರಾಜೇಶ್ವರ ರಾಜ್ಯಾಭಿಷೇಕವ
ಮೂಜಗವರಿಯೇ ಸುರರಾಜನಿಂ ಕೈಗೊಂಡ ೧

ಅಂದೆ ತಿಳಿದೆನು ಸಿಂಧುಶಯನ ನೀನು
ಇಂದಿರೆಯೇ ಭೀಷ್ಮಕನಂದನೆಯೆ ತಾನು ೨

ದೇವಾದಿದೇವ ವಸುದೇವನಂದನ ವಾಸುದೇವ
ದೇವಕೀಸುತ ಭಾವಜತಾತ ೩

ನರಲೀಲಾ ವೈಭವ ಧರೆಗೆಲ್ಲಾ ತೋರುವ
ವರಶೇಷಗಿರೀಧವ ಕರುಣಾಳು ಮಾಧವ ೪

## ೬೮

ವರಶರಸಮರೈಕ ಶೂರ ರಾಮ
ಶರಧಿಮದವಿದಾರ ಪ.

ಸದಯ ಹೃದಯ ಪದ್ಮಾವತೀಪ್ರಿಯ
ಪದ್ಮದಳೇಕ್ಷಣ ವೈದೇಹೀರಮಣ ಅ.ಪ.

ಮಂದರಧರ ಗೋವಿಂದ ಸದಾನಂದ
ಮಂದಸ್ಮಿತ ವದನಾರವಿಂದ ೧

ನೀಲಮೇಘ ವರಶ್ಯಾಮಶರೀರ
ಪಾಲಿತ ಭಕ್ತಜನ ಮಂದಾರ ೨

ಕರುಣಾಕರ ರಮಾವರ ಭವದೂರ
ವರಶೇಷಗಿರಿವರ ಶ್ರೀಧರ ೩

೬೯

ವೈಕುಂಠನಾಯಕನೂ ಈ ಮಹಾತ್ಮನು
ವೈಕುಂಠನಾಯಕನು ಪ.

ಪಾಕಶಾಸನುತ, ನಾಕಪಾಲಕ ಸರ್ವಲೋಕನಾಯಕ
ಭಕ್ತರಕ್ಷಕ ಶ್ರೀಕಳತ್ರ ಸುಪವಿತ್ರನೀತನು ಅ.ಪ.

ವೆಂಕಟಗಿರಿಯಿಂದ ಅಂಕನಶೆಟ್ಟಿಪುರಕೆ ಬಿಂಕದಿಂದೈತಂದ
ಪಂಕಜನಯನ ಶ್ರೀ ಶಂಕರನುತಿಪಾತ್ರನು ಬೇಡುವವರ
ಕಾಂಕ್ಷಿತಾರ್ಥವನೀವನು ಭಕ್ತರಮನಶಂಕೆಯ ಕಳೆಯುವನು
ತನ್ನಯಪಾದ ಕಿಂಕರರನು ಕಾಯ್ವನೆಂಬುವ
ಕಂಕಣಕರ ಬದ್ಧನಾಗಿಹ ಪಂಕಜಾಸನ ಜನಕ
ಲಕ್ಷ್ಮೀಕಾಂತ ಸರ್ವಾಂತರ್ಯಾಮಿಯಾಗಿಹ ೧

ಬಂದವರೆಲ್ಲ ತಾವು ಬಂದಂತೆ ಮನನೊಂದು ಹಿಂದಿರುಗಿ
ಪೋಗುವರೆಂಬ ಮಾತಿಲ್ಲ ಬಂದು ಬಂದವರಿಗೆಲ್ಲ
ಬೇಡಿದುದಿತ್ತಾನಂದ ದಿಂದವರೀಯುವ ಕಾಣಿಕೆಗಳ ಚೆಂದದಿಂ
ಕೈಗೊಂಬುವ ಗೋವಿಂದನ ಇಂದಿರೇಶನು ಸಿಂಧುಶಯನನು
ಸುರೇಂದ್ರ ವಂದ್ಯ ಕರೀಂದ್ರಪೂಜಿತ ನಂದ ಕಂದ
ಮುಚುಕುಂದ ವರದನು ೨

ಅಂಗವಿಹೀನರಿಗಂಗವ ಸರಿಗೈದು ಇಂಗದ ಭೋಗಭಾಗ್ಯಂಗಳ
ನೀವನು ಕಂಗೆಟ್ಟಿಹರಕಾಯ್ವನು – ಬೇಡುತ್ತಿಹ ಬಂಜೆಗೆ
ಮಕ್ಕಳನು ನೀಡುವನು ತನ್ನ ನಂಬಿದವರ ಕೈಬಿಡನು

ಸತ್ಯಾತ್ಮನು ಮಂಗಳಾಂಗ ಯದುಪುಂಗವ
ಸದಯಾಪಾಂಗ ಶ್ರೀ ರಂಗ
ತುಂಗವಿಕ್ರಮ ಶೇಷಗಿರಿವರ ೩

## ೭೦

ವೈದೇಹೀರಮಣನೆ ನಮೋ ನಮೋ ಪ.

ವೇದವಿದಿತ ಭೇದರಹಿತ ವಿಶ್ವ ಸಂಸ್ತುತ
ಭದ್ರಾದ್ರೀಶ ಲೀಲಾಮಾನುಷ ಅ.ಪ

ವಾಸವವಂದಿತ ನಮೋ ನಮೋ
ಭಾಸ್ಕರಾನ್ವಯಲಲಾಮ
ಜಯ ರಾಮಚಂದ್ರ ಕೌಶೇಯ ಪೀತವಾಸಶೋಭಿತ ೧

ದುಷ್ಟದಾನವಾಂತಕ ನಮೋ ನಮೋ
ಶಿಷ್ಟರಕ್ಷಕ, ದೃಷ್ಟಿಸೆನ್ನ ಸೃಷ್ಟಿಕರ್ತನೆ
ಇಷ್ಟಾರ್ಥಗಳ ನೀ ಕೊಟ್ಟು ರಕ್ಷಿಸೈ ೨

ಶ್ರೀಶೈಲವರದನೇ ನಮೋ ನಮೋ
ಶೇಷಶಯನ ಕ್ಲೇಶನಾಶನ ಭೇಷಜಾನನ
ಶ್ರೀಶ ಸರ್ವೇಶ ನಿತ್ಯನಿರಂಕುಶ ೩

## ೭೧

ಶರಣು ಶರಣು ಶ್ರೀ ರಾಮಚಂದ್ರನೆ
ಶರಣು ಸುರಮುನಿ ವಂದ್ಯನೆ ಪ.

ಶರಣು ಶ್ರೀ ರಘುಕುಲಾಬ್ಧಿಚಂದ್ರನೆ
ಶರಣು ಸದ್ಗುಣ ಸಾಂದ್ರನೆ ಅ.ಪ

ಕಮಲನಾಭನೆ ಕಮಲನೇತ್ರನೆ
ಕಮಲಸಂಭವೆಯರಸನೆ
ಅಮರವಂದಿತ ವಿಮಲಚರಿತನೆ
ಕುಮುದಸಖಿಸಮಾನ್ಯನೆ ೧

ಅಂಬುಜಾಸನ ಶಂಭುವಂದಿತ
ಶಂಬರಾರಿಯ ಜನಕನೆ
ಕಂಬುಕಂದರ ನಂಬಿ ಭಜಿಸುವೆ
ಬೆಂಬಿಡದಲೆ ಪಾಲಿಸೈ ೨

ಪಕ್ಷಿವಾಹನ ರಕ್ಕಸಾಂತಕ
ಲಕ್ಷ್ಮೀರಮಣ ಶುಭಲಕ್ಷಣ
ಲಕ್ಷ್ಮಣಾಗ್ರಜ ಸತ್ಯವಿಕ್ರಮ
ರಕ್ಷಿಸೈ ಪುರುಷೋತ್ತಮ ೩

ಪರಮಪಾವನ ಶೇಷಗಿರಿಯೊಳು
ನಿರುತ ನೆಲೆಸಿಹ ಶ್ರೀಶಗೆ
ಶರಣ ಜನರ ಸಚ್ಚರಿತೆಯೋದುವ
ವರವ ಪಾಲಿಸು ದೇವನೇ ೪

## ೭೨

ಸಿರಿವರ ಘನ ಕರುಣಾಕರ ಪೊರೆಯೈ ಪ.

ನಿಗಮಚೋರನನ್ನು ಕೊಂದು ನಗವಪೊತ್ತನೆ
ವಿಗಡದೈತ್ಯನನ್ನ ಸೀಳಿ ಜಗವನಾಂತನೇ ೧

ಘುಡುಘುಡಿಸಿ ಕಂಬವನು ಒಡೆದುಬಂದನೆ
ಪಿಡಿದು ಖಳನ ಕರುಳಬಗೆದು ಕೊರಳೊಳಾಂತನೆ ೨

ಇಂದ್ರಗನುಜನಾಗಿ ದಾನವೇಂದ್ರ ಗೊಲಿದು ನೀಂ
ನಿಂದು ಬಾಗಿಲಕಾವ ಗೊಲ್ಲನಂದಮೇನಿದ್ಯೆ ೩

ಹಡೆದತಾಯ ಶಿರವಪಿಡಿದು ಕಡೆದ ಭಾರ್ಗವ
ಮಡದಿಚೋರನನ್ನು ಕೊಂದ ಒಡೆಯ ರಾಘವ ೪

ಮಾವ ಕಂಸನ ಕೊಂದ ವಸುದೇವನಂದನ
ಭಾವಮೈದುನರನ್ನು ಕಾಯ್ದ ದೇವ ಮಾಧವ ೫

ಮತ್ತೆ ತ್ರಿಪುರ ಸತಿಯರ ಚಿತ್ತಕಲಕಿದ
ಉತ್ತಮಾಶ್ವವನ್ನೆ ಹತ್ತಿ ಕಲ್ಕಿಯೆನಿಸಿದ ೬

ಉರಗಶಯನ ಗರುಡಗಮನ ಪರಮಪಾವನ
ವರದ ಶೇಷಶಿಖರಧಾಮ ಶ್ರೀನಿಕೇತನ ೭

## ೭೩

ಶ್ರೀರಮಾ ಮನೋಹರ ನಮೋ ನಮೋ ಪ.

ಸುಜ್ಞಾನಾನಂದ ವಿಮಾನರಂಜನ [ನಮೋ ನಮೋ] ಅ.ಪ

ವಿಧಿಭವಾದಿ ವಂದಿತ ನಮೋ ನಮೋ
ವೇದವಿದಿತ ವಿಶುದ್ಧರೂಪ ವಿಶ್ವವ್ಯಾಪಕ
ವಿದ್ಯಾಧೀಶ ವಿಜ್ಞಾನದಾಯಕ ೧

ಪ್ರಣತಾರ್ತಿಭಂಜನ ನಮೋ ನಮೋ
ದುರಿತಹರಣ ಭಕ್ತಭರಣ ಪರಮಪಾವನ
ವರಶೇಷಾದ್ರೀಶ ವರದವೆಂಕಟ ೨

## ೭೪

ಶ್ರೀ ರಮಣ ಭಯಹರಣ ಭವಾಬ್ಧಿತರಣ
ಸಾರಸಗುಣಭೂರಿ ಕರುಣಾಪೂರಿತೇಕ್ಷಣ ಪ.

ಶರಧಿಶಯನ ಗರುಡಗಮನ
ಶರಣರಕ್ಷಣ ಆರ್ಯಮವಂಶಾರ್ಣವರಾಕಾಸಿತ ಕಿರಣ ೧

ದುರಿತದಮನ ದೀನಭರಣ ಪರಮಪಾವನ
ಸುರಾರಿ ವಿರೋಧಿ ಖರಾರಿ ಪುರಾರಿಪ್ರಿಯ ರಘೋತ್ತಮ ೨

ಅರಿಜನ್ಯೈಕ ತ್ರೈವಿಕ್ರಮ ಅನಘ
ಚರಿತ ರಾಮಚಂದ್ರ ರಂಗಧಾಮಮಂಗಳಂ ೩

ಭವಂತುತೇಸದಾ ಶ್ರೀನಿಧಾ
ಶ್ರೀರಮಣ ಭಯಹರಣ ಭವಾಬ್ಧಿತರಣ ೪

## ೭೫

ಶ್ರೀರಾಮಾ ರಘುಕುಲಸೋಮ ಕಾಮಿತ ಶುಭಫಲದಾಯಕ ಪ.

ರಮಾರಮಣನೆ ಭೀಮ ಪರಾಕ್ರಮ ಸುಂದರ ಅ.ಪ.

ದಾನವಾಂತಕ ಶ್ರೀ ಜಾನಕೀ ನಾಯಕರಾಮ
ದೀನಾನಾಥ ಪರಿತ್ರಾಣ ಪ್ರಪನ್ನ ಜನಪ್ರಾಣ ೧

ವಾಸವಾನುಜ ಜಗದೀಶ ಪರೇಶ ಪರಾತ್ಪರ
ದಾಸಜನಾಶ್ರಯ ಶ್ರೀಶ ಸರ್ವೇಶ ದಯಾಸಾಗರ ೨

ಮಂಗಳಾತ್ಮಕ ಭವಭಂಗ ಶ್ರೀರಂಗನಾಯಕಿ ರಮಣ
ಅಂಗಜಜನಕ ಪಾಂಡುರಂಗ ಕರುಣಾಂತರಂಗ ೩

ನಾಗೇಶಪಾಲಕ ನಾಗೇಶವರತಲ್ಪನೆ ಶ್ರೀ
ನಾಗಾರಿವಾಹನ ವರನಾಗಾದ್ರಿನಿಕೇತನ ರಾಮಾ ೪

## ೭೬

ಶ್ರೀವಧೂ ಮನೋಹರಾ ನಮೋ ನಮೋ ಪ.

ದೇವದೇವ ದೇವರೇ ವಸುದೇವನಂದನ
ಭಾವಾತೀತ ವಿಧಿಭವಾರ್ಚಿತ ಅ.ಪ.

ವಾಸವಾರ್ಚಿತಾಂಘ್ರಿಯುಗ ನಮೋ ನಮೋ
ಶ್ರೀಸಮೇತ ಭೂಸಹಿತ ನೀಳಾಸಮನ್ವಿತ
ಶೇಷಾದ್ರೀಶ ಜಯಲೀಲಾಮಾನುಷ ೧

ರಾಜೇಂದ್ರಪುರೀನಾಥ ನಮೋ ನಮೋ
ರಾಜರಾಜ ದ್ವಿರಾಜತೇಜ, ರಾಮಚಂದ್ರ ಭೂಪತಿ
ಜಯರಾಜೇಂದ್ರ ರಾಜರಾಜ ಪೂಜಿತ ೨

## ೭೭

ಶ್ರೀವರ ಸುಖಕರ ಸುಂದರ ಶ್ಯಾಮ
ಶಿವಸುತ ಶುಭನಾಮ ಮಂಗಳ ಗುಣಧಾಮ ಪ.

ಪಾರಾವಾರತನಯಾರಾಮಾ ಮುರಮದಹರಣ
ಸರೋಜಪತ್ರಾಯತೇಕ್ಷಣ ಮಂಗಳ ಗುಣಧಾಮ ೧

ಭಕ್ತೋದ್ಧಾರಾ ಭುವನಾಧಾರಾ ಭಜಕಜನಮಂದಾರ
[ಶ್ರೀಕರ] ಪರಂಧಾಮ ಮಂಗಳಗುಣಧಾಮ ೨

ವಿಶ್ವಾಧೀಶ ಸುಗುಣಾವೇಶ ಭಾಸ್ಕರಕೋಟಿವಿಭಾಸ
ಶೇಷಾದ್ರೀಶ ಶಶಿಸುಹಾಸ ಚಿದ್ವಿಲಾಸ ಮಂಗಳಗುಣಧಾಮ ೩

೭೮

ಸರಸಿಜಾಲಯವೆಂಬುವ ಸೊಗಸಿನ [ಶಯನಿಸು] ಪ.

ವರರತ್ನ ಮಂಟಪದೊಳು ಉರಗಪತಿಯಂತು ವರತಲ್ಪವಾಗಿರಲು
ಸಿರಿಯೊಡನೆ ನೀಂ ಶಯನಿಸು ಅ.ಪ

ತಪನ ಶಶಿಗಳೆಂಬುವ ಅಪ್ರತಿಮ [ವೆ
ನಿಸ] ದೀಪಗಳು ಪ್ರಜ್ವಲಿಸಲು
ಚಪಲಾಕ್ಷಿ ಶ್ರೀದೇವಿಯುಪಚಾರದಿಂ ನಲಿದು
ಅಪರಿಮಿದಾನಂದದಿಂ ಶಯನಿಸು ೧

ತುಂಬುರು ನಾರದರೆಂಬುವ ವಂದಿಮಾಗಧರ
ತಂಬೂರಿ ಸ್ವರಗಾನಮಂ । ಸಂಭ್ರಮದಿ ಕೇಳುತ್ತ
ಅಂಬುಜೊದ್ಭವತಾಭ । ಅಂಬುಜಾಸನೆಯೊಡವೆರೆಯುತೆ
ನಲಿಯುತ [ಶಯನಿಸು] ೨

ಗರುಡಪವನಜರೆಂಬುವ ನಿನ್ನಂಘ್ರಿ । ಸರಸಿಜವ
ಸೇವಿಸುವ ವರಭಕ್ತರು ಬಂದು । ಕರಮುಗಿದು ನಿಂದಿರಲು
ವರಯೋಗ ನಿದ್ರೆಯಿಂ । ಕರುಣಿ [ಸುತ] ಜಗಕೆ
ನಲಮಂ[ಶಯನಿಸು] ೩

ವರಶೇಷಗಿರಿ ನಿಲಯನೇ ಜಯಜಯತು । ವರದ
ನಾರಾಯಣನೇ । ಕರುಣಾಭರಣ ಲಕ್ಷ್ಮೀನರಹರಿಯೆ
ನಿ । ನ್ನರಸಿಯೊಡನೆ ನೀಂ ಶಯನಿಸು ೪

೭೯

ಸಾಕೇತಾಧಿಪ ಸತ್ವಸ್ವರೂಪ
ಶ್ರೀಕರರೂಪ ಜಿತಕೋಪ ಪ

ಕರಧೃತಚಾಪ ಖಂಡಿತತಾಪ
ಪರಂತಪ ಪಾಹಿ ಕವಿಜನಾಲಾಪ ೧

ಅರಿಜನ ಭೀಕರ ಕರಿವರ ಶ್ರೀಧರ
ವರದಾಭಯಕರ ಪರಮಕೃಪಾಕರ ೨

ಇನಕುಲಮಂಡನ ಭಕ್ತಾರ್ತಿಭಂಜನ
ವನರುಹಲೋಚನ ಭವಬಂಧಮೋಚನ ೩

ಕ್ಷಿತಿನಾಥ ರಾಘವ ಸತತ ಸುವೈಭವ
ನುತಶೇಷಗಿರೀಧವ ವಿಜಿತಮನೋಭವ ೪

## ೮೦

ಹರಿಯ ಕಂಡೆನು ಗಿರಿಯದೊರೆಯ ಕಂಡೆನು ಪ.

ತರಳನನ್ನು ಪೊರೆಯಲೋಸುಗ
ನರಮೃಗಾವತಾರನಾದ ಅ.ಪ.

ತಿರುನಾರಾಯಣಪುರದ ಗಿರಿಯ ಶಿಖರದಿ
ಚರಣತಲದಿ ತಿರುಕಲ್ಯಾಣಿ
ಮೆರೆಯುತಿರಲು ಹರುಷದಿಂದ ಹರಿಯ ೧

ದಾಸರಾದರ ಹೃದಯಾ ವಾಸನೆನಿಸುವ
ವಾಸವಾದಿ ವಿನುತ ಚರಣ
ಭಾಸುರಾಂಗ ದೋಷಹರಣ ಹರಿಯ ೨

ನಾಗವೈರಿಯ ರೂಪನಾಗೆ ಮೆರೆಯುವ
ಯೋಗಪಟ್ಟಿಯಾಂತು ಪರಮ
ಯೋಗನಿಷ್ಠೆಯಲ್ಲಿ ಕುಳಿತ ಹರಿಯ ೩

ದುಷ್ಟದೈತ್ಯರಂ ಕುಟ್ಟಿ ಕೆಡಹಿದ
ಮುಟ್ಟಿಭಜಿಪ ಭಕ್ತರೆಲ್ಲರ
ಕಷ್ಟಕಳೆದು ಇಷ್ಟವೀವ ಹರಿಯ ೪

ಶೇಷಗಿರಿಯೊಳು ಮತ್ತಾ ಮೇಲುಕೋಟೆಯೊಳ್
ಶೇಷಭೂತರಾಶೇಷ ಭಕ್ತರ
ಪೋಷಿಸುತ್ತಿಹ ಸರ್ವೇಶನೀತನೆ ಹರಿಯ ೫

## ೮೧

ಕೈಪಿಡಿದೆನ್ನನು ಕಾಪಿಡು ನಲವಿಂ ಕನ್ನಡ ನುಡಿವೆಣ್ಣೆ ಪ.

ಈ ಪಸುಳೆಗೈದಾ ಪಾಪವದಾವುದು ಕೋಪಿಸದಿರೆನ್ನಾಣೆ ಅ.ಪ

ಮುಳಿವಿಂತೇತಕೆ ನಳಿನದಳಾಂಬಕೆ ಎಳೆಗೂಸಿನ ಮನಕೆ
ಕಳವಳದಿಂದತಿ ಬಳಲಿಕೆಯಾದರು ತಳುವುದಿದೇನಿದು ಸಾಕೇ ೧

ಮಾತೆಯ ಮಮತೆಗೆ ಸೋತು ಭಜಿಸುವೀ ಪೋತನ ನೆರೆನೋಡಿ
ಪ್ರೀತಿಯಿಂ ಕರೆದಾತುಕೋ ನಲ್ವಾತಿನಿಂ ಕೈನೀಡಿ ೨

ಪರಿಪರಿಯೆಡರಿನ ಗಿರಿದುರ್ಗಂಗಳಾವರಿಸಿರುತಿಹುದೆ
ಪರಿಯಿಂದದನುತ್ತರಿಸಿ ಬಂದಪೆ ಕರುಣಿಸು ಭರದೆ ೩

ಕಾರ್ಯ ಕಾರಣ ಕರ್ತೃ ನೀನಹುದಾರ್ಯೆ ಸದಾ ಪೊರೆಯೇ
ಕೋರಿಕೆಗಳನೀಡೇರಿಸಿಯಣುಗರ ನಿರಪಾಯದೆ ಕಾಯೇ ೪

ಭಾಷೆಗೆ ತಪ್ಪಿದ ದೋಷಿಯೆನ್ನುತುಪೇಕ್ಷಿಸಬೇಡೆನ್ನ
ಶೇಷಗಿರೀಶನೆ ಪೋಷಕನಾಗಿರೆ ನಿರ್ದೋಷಿಯೆನಿಸುವೆ ನೀಂ ೫

## ೮೨

ನೀಂ ಕಟಾಕ್ಷಿಸೆನ್ನನೊಲವಿಂ ಲೋಕನಾಥ ಪಾಲಿಸೈ ಪ.

ಸಂಕಟಂಗಳೆಲ್ಲಮಂ ನಿಷ್ಕಲಂಕ ನೀಂ ನಿವಾರಿಸೈ ಅ.ಪ

ತಾತ ನೀನೇ ನಾಥನೇ ಆತ್ಮಜಾತಂ ನೀನೆಲ್ಕೈ
ದಾತ ನಿನ್ನ ನಂಬಿದೀಯನಾಥರಂ ಪ್ರೀತಿಯಿಂ ೧

ಭಾವಜಾತಜನಕ ಭೂ ದೇವದೇವ ಶ್ರೀಧವ
ಭಾವಿಸುವೆನನನ್ಯಭಾವದೆ ಕಾವುದೈ ಶ್ರೀನಿಧೇ ೨

ಪರಮಪುರಷ ಶೇಷಶೈಲವರದ ಶ್ರೀಕರ
ಪರಿಭವಂಗಳೆಲ್ಲ ಪರಿದು ಪಾಲಿಸೈ ಪರಾತ್ಪರ ೩

## ೮೩

ನೊಂದೆನಯ್ಯ ನಂದನಂದನ ಪ.

ನೊಂದೆನಕಟ ನಂದಕಂದ
ಹಿಂದು ಮುಂದನರಿಯದಿಂದು
ತಂದೆ ನೀನೆ ರಕ್ಷಸೆಂದೇ ಅನನ್ಯಭಾವದೇ ಅ.ಪ.

ನೋಡಲಿಲ್ಲ ನಿನ್ನಪದವ ಪಾಡಲಿಲ್ಲ ನಿನ್ನ ಗುಣವ
ಮಾಡಲಿಲ್ಲ ನಿನ್ನ ಸೇವೆ ಮೂಢನಂದದಿ
ದೂಡಿಸುಜನರ ಸಂಗವನ್ನು ಬೇಡಿ ಕೃಪಣರ ಕರುಣೆಯನ್ನು
ಕಾಡುಹರಟೆಯಿಂದ ಕಳೆದೆನಕಟ ಕಾಲಮಂ ೧

ಉರಿವಕೊಳ್ಳಿಯನ್ನೆ ತುಳಿದೆ ಸುರಿದೆನೀರನುರಿಗೆ ಬರಿದೆ
ಹಿರಿಯರುಕ್ತಿಯ ಮೀರಿನಡೆದೆ ಮೆರೆದೆ ಗರ್ವದೆ
ಶರಣರನ್ನು ಜರಿದು ನುಡಿದೆ ಪರರ ಹಿಂಸೆಗೈದೆ ಮದದೆ
ಪರಮಪಾಪಿಯಾದೆ ನಿನ್ನ ಸ್ಮರಣೆ ಮಾಡದೆ ೨

ಅರಿತು ಅರಿಯದಾಚರಿಸಿದಂಥಾ ದುರಿತಗಳನು ಕುರಿತು
ಕುರಿತು ಪರಿಪರಿಯೊಳೊರಲುತಿಹೆನು ಪರಮಪುರುಷನೇ
ವರದನೆಂಬ ಬಿರುದು ನೆನೆದು ಶರಣುಬೇಡುವ ಕಂದನೆಂದು
ಕರವಪಿಡಿದು ಪೊರೆಯೊ ಶೇಷಗಿರಿಯ ವರದನೆ ೩

## ೮೪

ನೋಡಿದ್ಯಾ ಶ್ರೀರಾಮನ ನೋಡಿದ್ಯಾ ಪ.

ನೋಡಿದ್ಯಾ ನಯನವೆ, ಕೊಂಡಾಡಿದ್ಯಾ ಮನವೆ
ಪಾಡಿದ್ಯಾ ವದನವೆ ಬಾಗಿದ್ಯಾ ಶಿರವೇ ಅ.ಪ.

ಕುವಲಯ ಶ್ಯಾಮ ಸುಂದರನ ಶ್ರೀ
ಭುವಿಜಾತೆಯರಸನ ರಾಘವನ (ವರ)
ಪವಮಾನಸುತ ಸಂಸೇವ್ಯನ
ಭುವಿಯೊಳಗರ್ಚಾವತಾರದಿ ಮೆರೆವಾ
ಸರ್ವವ್ಯಾಪಕ ಶ್ರೀ ರವಿಕುಲ ತಿಲಕನ
ಭುವನಮೋಹನ ವಿಗ್ರಹನಾ ೧

ಪಂಕ್ತಿರಥನಂದನನ ವರ
ಪಂಕೇರುಹ ಪತ್ರೇಕ್ಷಣನ ವರ
ಪಂಕಜಸಖನಿಭ ಭಾಸುರನ ಆಹಾ
ಪಂಕಜಾಸನನ ಪೆತ್ತಾತನ
ಶಂಕರಪ್ರಿಯ ಕೋದಂಡರಾಮನ ೨

ಕೌಶಿಕನೊಡನೈತಂದು
ದುಷ್ಟ ತಾಟಕಿಯನು ತಾ ಕೊಂದು
ಆ ಸುಬಾಹು ಮಾರೀಚರನಂದು ಶಿಕ್ಷಿಸಿ
ಕೌಶಿಕಮುಖ ಪಾಲಕನೆನಿಸಿ
ಬಿಸುಗಣ್ಣೆರೆಯ ನ ಸ್ತುತಿಯನಾದರಿಸಿ
ಎಸೆವ ಮಂಗಳಮೂರ್ತಿ ದಶರಥರಾಮನ ೩

ದೃಢದಿಯಹಲ್ಯೆಯ ಶಾಪಕಳೆದು ಬಂದು
ಮೃಡಧನುವನು ತಾ ಮುರಿದು
ಪೊಡವಿಜಾತೆಯ ಕೈಪಿಡಿದು
ತನ್ನೆ ಶ್ರೀಡಪುಟ್ಟಿದವರ ತನ್ನ
ಪಡೆದ ತಾಯ್ತಂದೆಯರ
ಒಡಗೂಡಿ ಮೆರೆದಂಥ ಒಡೆಯ ರಾಘವನ ೪

ವಾಸವಾನುಜನೆಂದೆನಿಸಿ ಮುನ್ನ
ಕಾಶ್ಯಪಸೂನುವೆನಿಸಿ ಬಂದು
ಮೋಸದಿಂ ದಾನವಂ ಯಾಚಿಸಿ ಬಲಿಯ ಭಕ್ತಿ
ಪಾಶದಿ ತಾ ಸಿಕ್ಕಿ ನಿರುತವು ತನ್ನ ನೆನೆಯುವ
ದಾಸರ ದಾಸನೆಂದೆನಿಸಿದಾತನ ೫

ಗರುಡವಾಹನ ಮುರಹರನ ವರ
ಶರಧಿಬಂಧನ ಕೋವಿದನ ತರಣಿನಂದನ ಸಂಸೇವ್ಯನ
ಪರಶುಧರ ಗರ್ವಹರನಾ ಆಹಾ
ವರಶೇಷಗಿರಿಯಲ್ಲಿ ಮೆರೆವ ವೆಂಕಟನಾ
ಶರಣಾಭರಣ ಶ್ರೀ ನರಹರಿ ರೂಪನ ೬

## ೮೫

ಪಾದತೋರೋ ಪದ್ಮಾಕ್ಷ ಬಾರೋ ಪ.

ಪಾದಪದ್ಮವ ತೋರೋ ಪದ್ಮಾಕ್ಷ ಬಾರೋ
ಆದಿಮಧ್ಯಾಂತ ಸ್ವರೂಪ ಮೈದೋರೋ ಅ.ಪ.

ಬಲಿಯನ್ನು ತುಳಿದಂಥ, ಭೂಮಿಯನಳೆದಂಥ
ಶಿಲೆಯಾಗಿದ್ದವಳ ಕಲುಷವ ಕಳೆದಂಥ ೧

ಶಿಶುರೂಪದಿಂದಲೆ ಶಕಟನ ಒದ್ದಂಥ
ಶಶಿಮುಖಿಯಶೋದೆಗೆ ಶಿಶುವೆನಿಸಿ ಮೆರೆದಂಥ ೨

ಗೊಲ್ಲರ ಮನೆಮನೆಗೆ ಕಳ್ಳನಂದದಿಪೊಕ್ಕು
ನಲ್ಲೆಯರ ಕೈಪಿಡಿಗೆ ನಿಲ್ಲದೋಡುವ ಮುದ್ದು ೩

ಕಾಳಿಂಗನ ಫಣೆಯೊಳ್ ಕೋಲಾಹಲದಿ ಕುಣಿದ
ಕಾಳಿಂಗನರಸಿಯರಿಗೆ ತಾಲೀ ಭಾಗ್ಯವನಿತ್ತ ೪

ಕರುತುರುಗಳ ಮರೆಸಿ ದೊರೆ ನಿನ್ನರಸಿದ
ಪರಮೇಷ್ಠಿಯೆ ತನ್ನ ಕರದಿಂ ಪೂಜಿಸಿದಂಥ ೫

ಮಾವ ಕಂಸನ ಕೊಂದು ತಾಯಿ ದೇವಕಿ
ವಸುದೇವಸುತ ವಾಸುದೇವನೆಂದೆನಿಸಿದ ೬

ಸಿರಿದೇವಿಯೇ ನಿಜಕರಗಳಿಂದೊತ್ತುವ
ಪರಮಪಾವನ ಪದಸರಸೀರುಹ ೭

ವರಶೇಷಗಿರಿದೊರೆ ಶರಣರ ಮರೆವರೆ
ಶಿರಬಾಗಿ ಬೇಡುವೆ ಭರಿಸೆನ್ನನೆನುವೆ ೮

## ೮೬

ಪಾಲಿಸೆನ್ನ ಪಂಕಜಾಕ್ಷ ಪತಿತಪಾವನ
ನೀಲಮೇಘಶ್ಯಾಮ ರಮಾಲೋಲ ಜಗನ್ಮೋಹನಾ ಪ

ಭವವಿದಾರ ಭಯವಿದೂರ ಭಾರ್ಗವೀವರ
ಭವ ಸುರೇಶವಂದಿತಾಂಘ್ರಿಯುಗಳ ಶ್ರೀಧರ ೧

ನಿನ್ನನೇ ಮರೆಹೊಕ್ಕೆ ನಾನನ್ಯಭಾವದೆ
ಪನ್ನಗಾದ್ರಿನಿಲಯ ಸಲಹು ಸಾನುರಾಗದೆ ಪಾಲಿಸೆನ್ನ ೨

## ೮೭

ಪಾಲಿಸೈ ಪದ್ಮಾಕ್ಷ ಪಾದವೇ ಗತಿಯೆನಗೆ ರಾಮಚಂದ್ರಾ
ದೀನಪಾಲಕನೆಂಬೀ ಬಿರುದುಂಟು ನಿನ್ನೊಳು ರಾಮಚಂದ್ರ
ಅನಿಮಿಷ ರೂಪದಿಂದಾಗಮವನು ತಂದ ರಾಮಚಂದ್ರ
ಘನಕೂರ್ಮರೂಪದಿಂ ಗಿರಿಯ ಬೆನ್ನೊಳಗಾಂತ ರಾಮಚಂದ್ರ
ಕನಕಾಕ್ಷನನು ಕೊಂದ ಧರಿಣಿದೇವಿಯ ರಮಣ ರಾಮಚಂದ್ರ
ಹಿರಣ್ಯಕನ ಕರುಳನು ಕೊರಳೊಳು ಧರಿಸಿದ ರಾಮಚಂದ್ರ
ತರಳ ಪ್ರಹ್ಲಾದನ ಕರೆದಾದರಿಸಿದ ರಾಮಚಂದ್ರ
ವಟುರೂಪದಿಂ ಬಂದು ವಸುಧೆಯ ಬೇಡಿದ ರಾಮಚಂದ್ರ
ದಾನಕೊಟ್ಟವಗೆ ಪಾತಾಳ ಪಟ್ಟವ ಕಟ್ಟಿದ ರಾಮಚಂದ್ರ
ಕ್ಷತ್ರಿಯರ ಕುಲಬೇರ ಕತ್ತರಿಸಿದ ದೇವ ರಾಮಚಂದ್ರ
ಧರಿತ್ರಿಯ ಭಾರವ ಪರಿಹರಿಸಿದ ದೇವ ರಾಮಚಂದ್ರ
ವಸುದೇವನಂದನನೆಂದೆನಿಸಿ ಮೆರೆದೆಯೋ ರಾಮಚಂದ್ರ
ಮತ್ತೆಕಾಮಿನಿಯರ ಚಿತ್ತವ ಕಲಕಿದ ರಾಮಚಂದ್ರ
ಉತ್ತಮಾಶ್ವವನೇರಿ ಕಲ್ಕಿಯೆನಿಸಿದ ರಾಮಚಂದ್ರ
ಆದಿಮಧ್ಯಾಂತ ಸ್ವರೂಪ ಸುಂದರರೂಪ ರಾಮಚಂದ್ರ
ವೇದವೇದ್ಯನೆ ನಿನ್ನ ಪಾದವೇ ಗತಿಯೆನಗೆ ರಾಮಚಂದ್ರ
ರಘುಕುಲತಿಲಕನೆ ರಮ್ಯಚರಿತ್ರನೆ ರಾಮಚಂದ್ರ
ಅಘಹರ ಪುರವೈರಿ ಸಂಸ್ತುತಿಪಾತ್ರನೆ ರಾಮಚಂದ್ರ
ಮಾನಾಭಿಮಾನ ನಿನ್ನಾಧೀನವೆಂಬೆನೈ ರಾಮಚಂದ್ರ
ಏನೊಂದನರಿಯದ ಅಜ್ಞಾನಿ ನಾನಯ್ಯ ರಾಮಚಂದ್ರ
ನೀನಲ್ಲದೆ ಮತ್ತನ್ಯರಾರಿಹರೈ ರಾಮಚಂದ್ರ
ದೀನಪಾಲಕ ನಿನ್ನುಳಿದಾರ ನೆರೆಯೆ ರಾಮಚಂದ್ರ

ವರಶೇಷಗಿರಿದೊರೆ ಮರೆಹೊಕ್ಕು ಬೇಡುವೆ ರಾಮಚಂದ್ರ
ಕರುಣಾಳು ನೀನೆಂಬ ಬಿರುದುಳಿಸೆನ್ನುವೆ ರಾಮಚಂದ್ರ

## ೮೮

ಪಾಲಿಸೈ ಮುಕುಂದ ಗೋವಿಂದ ಆನಂದದಿಂದ ಪ.

ಮಾರಜನಕನೆ ಕೋರಿ ನಿನ್ನಡೆ
ಸಾರಿ ಬೇಡುವೆನೊ
ಗಾರುಗೊಳಿಸದೆ ತೋರು ಕರುಣೆಯ
ಮಾರಹರನುತ ವೀರರಾಘವ ೧

ಭಾನುಕೋಟಿ ಸಮಾನ ಭಾಸುರ
ಜಾನಕೀ ಮನೋಹರ
ದಾನವಾಂತಕ ದೀನರಕ್ಷಕ
ಮಾನನಿಧಿ ಪೊರೆ ಸುಜ್ಞಾನವಾರಿಧಿ ೨

ಶೇಷಶೈಲನಿವಾಸ ಸಜ್ಜನ
ಪೋಷ ಭವಭಯನಾಶನ
ಕ್ಲೇಶಹರಣ ಶ್ರೀಕೇಶವಾಚ್ಯುತ
ಲೇಸು ಬೇಡುವೆ (ನಾ) ಮೀಸಲಿರಿಸಿಹೆ ೩

## ೮೯

ಬರಿದೆ ಕಾಲವ ಕಳೆದೆ ನರಹರಿಯ ಧ್ಯಾನಿಸದೆ ಪ.

ಪರಿಪರಿಯ ಮೋದದಲಿ ಮರುಳನಂದದಿ ಮೆರೆದೇ ಅ.ಪ.

ಗುರುವ ಸೇವಿಸಲಿಲ್ಲ ಹರಿಯ ಧ್ಯಾನಿಸಲಿಲ್ಲ
ಹಿರಿಯರೊಲಿವಂತುಪಚರಿಸಲಿಲ್ಲ । ಪರಮ ಭಾಗವತರ

ಚರಣಕ್ಕೆ ನಾನೊಮ್ಮೆ । ಶಿರಬಾಗಿ ನಮಿಸಿ
ಪರಿಚರಿಸಲಿಲ್ಲವಲ್ಲಾ ೧

ಇನ್ನೆನಗೆ ಗತಿಯಾರು – ಮನ್ನಿಸುವರದಾರು
ಇನ್ನದಾರಲ್ಲಿ ಪೇಳುವೆನೆನ್ನ ದೂರು
ನಿನ್ನನೇ ಮೊರೆಹೊಕ್ಕು ನೀನೆ ಗತಿಯೆಂದಿರುವ
ಎನ್ನ ಮನ್ನಿಸಲುಬೇಕು ಪನ್ನಶೇಷಗಿರೀಶ ೨

## ೬೦

ಬರಡು ಕಣ್ಗಳಿದ್ದರೇನು ಮನದ ಕಣ್ಣ ತೆರೆಯದ ಪ.

ತರಳಗೊಲಿದ ವರದರಾಜದೊರೆಯ ನಿಜವನರಿಯದ ಅ.ಪ.

ನಾರದಾದಿ ಮೌನಿವರರು ಸಾರಿಬಂದು ಸೇವಿಸಿ
ಸಾರಸಾಕ್ಷನ ಮನವನೊಲಿಸಿ
ಸಾರಭೂತರೆನಿಸಿದರು ಮನದ ಕಣ್ಣ ತೆರೆಯದಿಂತು ೧

ತರಳಗೊಲಿದು ಕಂಬದಿಂದ ಬಂದು
ಹಿರಣ್ಯನುರವ ಬಗೆದು ಕರುಳಮಾಲೆ
ಧರಿಸಿ ಮೆರೆವ ನರಹರಿಯ ಕಾಣದ ೨

ಲೋಕನಾಯಕ ರಂಗನಾಥನ ಏಕಚಿತ್ತದಿ ಸೇವಿಸೆ
ಈ ಕಳಂಕವೆಲ್ಲ ತೊಳೆದು
ಶ್ರೀಕಟಾಕ್ಷಕೆ ಪಾತ್ರನಾಗಲು ೩

ಶರಧಿಶಯನ ಪರಮಪಾವನೆ
ಶರಣರಕ್ಷಕನೀತನ ವರದ ಶೇಷಶೈಲಧಾಮನ
ವರದಿ ಪಡೆವೆ ಮನದಕಣ್ಗಳಂ ೪

## ೯೧

ಭಜಿಸ್ಯೆ ಮಾನಸ ದೊರೆಯ ಶ್ರೀ ನರಹರಿಯ
ಭಜಿಸು ಮಾನಸ ತ್ರಿಜಗದರಸ ಪ.

ನಿಜಭಜಕ ಜನಾಶ್ರಯ ಸುಜನಬಾಂಧವ
ಅಜಮುಖಾರ್ಚಿತ ಪಾದಪಂಕಜ ಅಜಾಮಿಳವರದನಂಘ್ರಿಯ ಅ.ಪ.

ಪವನನಂದನ ಸೇವ್ಯನ ಪದ್ಮಾಕ್ಷನ ಪಾವನಗುಣಶೀಲನ
ಪರಮಾತ್ಮನ ಪತಿತಪಾವನ ನಾಮನ ಅಪಾರ ಮಹಿಮನ
ಸುರನರೋರುಗ ನಮಿತ ಚರಣನ ತರಣಿವಂಶಾಬ್ಧಿ ಚಂದ್ರಮನ
ಪುರವೈರಿ ಪ್ರಿಯಸಖನ ಪರಂತಪ ರಾಘವೇಂದ್ರನ ೧

ಶ್ರೀಕರಮುಖಜಿತಸೋಮನ ದಾನವಕುಲ ಭೀಕರ ಶೌರ್ಯ
ವಿಕ್ರಮನ ಭಯನಾಶನ ಕಾಕುತ್ಸ್ಥಕುಲದೀಪನ ಸುಗುಣಾ ರಾಮನ
ಪಾಕಾರಿವಿನುತ ಸಾಕೇತನಿಲಯನ ರಾಕೇಂದುನಿಭಾಸ್ಯ ಶ್ರೀ ವರನ
ಲೋಕಮೋಹನ ಮೇಘ ಶ್ಯಾಮನ ವೈಕುಂಠಪತಿ ಲಕ್ಷ್ಮೀಶ ಕೇಶವನ ೨

ಲೀಲಾಮಾನುಷ ವಿಗ್ರಹನ ಶೈಲಾತ್ಮಜಾನುತರಾಮನ ಸತ್ಯಾತ್ಮನ
ಬಾಲಾರ್ಕದ್ಯುತಿಭಾಸುರನ ಭಕ್ತ್ಯಧೀನನ ಶ್ರೀರಾಮನ
ಪಾಲಲೋಚನನ ಪಂಕಜಾಸನ ಪಾಕಾರಿಮುಖ ನಮಿತ ಚರಣನ
ಶ್ರೀಲೋಲ ಶೇಷಾಚಲನಿಲಯ ಶ್ರೀವೇಂಕಟನ ೩

## ೯೨

ಭಯದೂರ ಧರ್ಮಸಾರ ಭುವನಾಧಾರ ಪ.

ಭಕ್ತಾರ್ತಿಭಂಜನ ಭವಪಾಶಮೋಚನ
ನಕ್ತಂಚರ ದಮನ ವೈಕುಂಠ
ನಿಕೇತನ ಸಾರಿ ಮೈದೋರು ಬಾ ಶ್ರೀರಮಾಮನೋಹರ ೧

ಸಂದಿಗ್ಧ ಸಮಯಂಗಳ್ ಬಂದಿರ್ಪವೇಳೆಯೊಳ್
ನೊಂದಿರ್ಪ ಭಜಕರೊಳ್ ಇಂದೇಕೆ ಸಂದೆಗಂ ಪೇಳ್
ಇಂದಿರಾಮನೋಹರ ನಂದನಕುಮಾರ ೨

ಶ್ರೀನಾಥ ನಿನ್ನಂಘ್ರಿಯೊಳ್ ಅನ್ಯೂನ ಭಕ್ತಿಯಿರಲ್
ಮಾನಾಭಿಮಾನಂಗಳೇನೊಂದನೆಣಿಸದೆ
ಜ್ಞಾನೋದಯಂ ತಾನಾಗೆ ಚಿದಾನಂದಮಪ್ಪುದೈ ೩

೯೩

ರಘುರಾಮ ನೀನೆನ್ನ ಪಾಲಿಸೈ
ಜಗನ್ನಾಯಕ ಜಾನಕೀಪತೇ ಪ.

ಸಾಗರಶಯನ ಸಾರಸನಯನ
ನಾಗವೈರಿಗಮನ ಬಾಗಿ ನಮಿಪೆನಾ ೧

ಯಾಜ್ಞಸೇನಿಯಂದು ಯಾಚಿಸಲ್ಕೆನಿಂದು
ಅಕ್ಷಯವಸ್ತ್ರದಿಂ ರಕ್ಷಿಸಿದ ಬಂಧು ೨

ವಸುದೆಯೊಳು ಬಂದು ಅಸುರರನ್ನೆ ಕೊಂದು
ವಾಸುದೇವನೆಂದು ಪೆಸರನಾಂತೆಯಂದು ೩

ಪಾಹಿರಾಮರಾಮ ಪಾಹಿಪೂರ್ಣಕಾಮ
ತ್ರಾಹಿ ಸತ್ಯ ಪ್ರೇಮ ತ್ರಾಹಿರಂಗಧಾಮ ೪

ಶೇಷಶೈಲನಿಲಯವಾಸ ವಾದಿಗೇಯ
ವಾಸುದೇವ ಸದಯ ಶ್ರೀಸತೀಪ್ರಿಯ ೫

೯೪

ವಾಗೀಶವಂದಿತ ಸಲಹೈ ವರದಾತ ಪೊರೆಯೈ ಪ.

ಕರಿ ಮಕರಿಗೆ ಸಿಕ್ಕಿ ಕರೆಕರೆ ಪಡುತಲಿ
ಹರಿಹರಿ ಪೊರೆಯೆನೆ ಭರದಿ ನೀ ಪೊರೆದೆಯ್ಯೆ ೧

ದುರುಳನಾ ಸಭೆಯಲಿ ಸೆರಗ ಪಿಡಿದೆಳೆಯೆ
ತರುಣಿಯು ಮೊರೆಯಿಡೆ ತ್ವರಿತದಿಂ ವರವಿತ್ತೈ ೨

ಕಂದನು ಕೂಗಲು ಕಂಬದಿಂ ಬಂದೆಯ್ಯೆ
ತಂದೆ ನೀನೆಂದೆನೆ ಬಂದು ಕೈಪಿಡಿ ದೊರೆ ೩

ಅರಿಗಳಟ್ಟುಳಿಯಿಂದೆ ಪರಿಪರಿಯಿಂ ನೊಂದೆ
ಅರಿವನು ಕರುಣಿಸಿ ನರಹರಿ ಸಲಹೆಂದೆ ೪

ಶೇಷಭೂಷಣವಿನುತ ಶೇಷಶಯನ ಮಹಿತ
ಶೇಷಶೈಲೇಶನೆ ಪೋಷಿಸೈ ಶ್ರೀಶನೆ ೫

## ೬೫

ಶ್ರೀನಿವಾಸನೆ ಗಾನಲೋಲನೆ ಸಾನುರಾಗದೊಳೀಕ್ಷಿಸೈ
ಜ್ಞಾನಪೂರ್ಣನೆ ಸೂನುವೆಂಬಭಿಮಾನದಿಂ ಪರಿಪಾಲಿಸೈ ಪ.

ದೀನಪಾಲಕ ದಾನವಾಂತಕ ದೈನ್ಯದಿಂ ಮೊರೆಹೊಕ್ಕೆನೈ
ಜ್ಞಾನಗಮ್ಯನೆ ಭಾನುತೇಜನೆ ನೀನೇ ಗತಿಯೆಂದೆಂಬೆವೈ ಅ.ಪ.

ಸಾರಸಾಕ್ಷನೆ ಶ್ರೀರಮೇಶನೆ ಸಾರಿ ಬಾ ಭವದೂರನೇ
ಗಾರುಗೊಂಡೆವು ಪಾರುಗಾಣಿಸು ನೀರಜೋದ್ಭವ ಜನಕನೆ
ಕಾರ್ಯಕಾರಣ ಕರ್ತೃ ನೀನಹುದಾರಯಲ್ ಜಗದೀಶನೆ
ಬೇರೆ ಕಾಣೆವದಾರ ನಿನ್ನನೇ ಸಾರೆ ಬೇಡುವೆ ದೇವನೆ ೧

ಭಾರತೀಯರ ಆರ್ಯಧರ್ಮದ ಸಾರ ಸಂಗ್ರಹ ಮಾಡುತೆ
ಆರ್ಯಕೀರ್ತಿಯ ಸಾರಿಪಾಡುತೆ ವೀರನಾದವ ಗೈಯುತೆ
ವೀರಪುರುಷರ ಶೌರ್ಯಸಾಹಸ ಭೂರಿ ವೈಭವವೆಲ್ಲವಂ
ಧೈರ್ಯದಿಂ ನಲವೇರೆ ಕೀರ್ತಿಸಿ ಕಾರ್ಯಸಿದ್ಧಿಯ ಪೊಂದುವೋಲ್ ೨

ನಿರ್ಗುಣಾತ್ಮನೆ ನಿರ್ವಿಕಲ್ಪನೆ ನಿತ್ಯನಿರ್ಮಲಚರಿತನೆ
ಮಾರ್ಗದರ್ಶಕನಾಗಿ ನಮ್ಮೊಳಗಾವಗಂ ಕೃಪೆ ಗೈವನೇ
ಸಾರ್ವಭೌಮನೆ ಸರ್ವಶಕ್ತನೆ ಶೇಷಶೈಲ ನಿವಾಸನೇ
ಸಾರ್ವಕಾಲದೊಳೋವುದೆಮ್ಮನು ಪಾರ್ವತೀಪತಿ ಮಿತ್ರನೆ ೩

೯೬

ಶ್ರೀ ರಘುರಾಮ ಬಾರೋ ಪದವನ್ನು ತೋರೋ ಪ.

ದಶರಥಪ್ರಿಯ ಬಾಲ ದಶಮುಖಾಸುರ ಕಾಲ
ಕುಶಿತಾತ್ಮಜ ಮಖಪಾಲ ಶಶಾಂಕನಿಭ ಫಾಲ ೧

ಶತಪತ್ರಾಯತನೇತ್ರ ಶತಪತ್ರಾಪ್ತಜ ಮಿತ್ರ
ಶತಮನ್ಯುಸ್ತುತಿಪಾತ್ರ ಶತಯಾಗ ಸಹಜಾತ ೨

ವರಶೇಷಗಿರಿನಿಲಯ ಶರಣರಕ್ಷಕ ಸದಯ
ಗಿರಿಜಾಧವಪ್ರಿಯ ನತಸುರ ಸಮುದಾಯ ೩

೯೭

ಶ್ರೀಲೋಲನೆ ಪರಿಪಾಲಿಪುದೆಮ್ಮನು ಕಾಲವಿಳಂಬಿಸದೇ ಪ.

ತಾಳಲಾರೆವೀ ಖೂಳರ ಬಾಧೆಯ
ಪೇಳಲೆಮಗೀ ನಾಲಿಗೆ ಸಾಲದು ಅ.ಪ

ಅನಿಮಿಷರೂಪದಿಂದಾಗಮವನು ನೀನಜನಿಗೆ ತಂದಿತ್ತೆ ಪೂರ್ವದಿ
ಘನ ಕಚ್ಛಪರೂಪದೊಳಾಗಿರಿಯನು ಬೆನ್ನೊಳಗಾಂತೇ
ಅನಿಮಿಷರೊಡೆಯನ ಮನವನು ತಣಿಸಿದ
ಘನಮಹಿಮನೆ ಶ್ರೀ ವನಜಜ ಜನಕನೆ ಶ್ರೀಲೋಲನೆ ೧

ದುರುಳನ ಕರದಲಿ ಧರಣಿಯು ಸಿಲುಕುತ ಕರೆಕರೆಗೊಳ್ಳುತಿರೆ
ವರಸೂಕರನಾಗುತ ದುರುಳನ ಛೇದಿಸಿ ಧರಣಿಯ ಕೈಪಿಡಿದೆ
ಮತ್ತೆ ತರಳನ ಪೊರೆಯಲು ನರಕೇಸರಿ ರೂಪದಿ
ಹಿರಣ್ಯಕನುದರದ ಕರುಳನು ಕಿತ್ತೆಸೆದೇ ಶ್ರೀಲೋಲನೆ ೨

ಕಪಟತನದಲಿ ವಟುವಂದದಿ ಬಂದು ನೆಲವದಾನವ ಬೇಡಿ
ಕಪಟವನರಿಯದೆ ದಾನವ ಕೊಟ್ಟನ ಪಾತಾಳಕೆ ಗುರಿ ಮಾಡಿ
ಅಪರಿಮಿತಾನಂದದಿ ಮೆಚ್ಚಿ ಬಲೀಂದ್ರನ
ಮನೆಬಾಗಿಲ ಕಾಯುವ ಗೊಲ್ಲ ನೀನೆನಿಸಿದೆ ೩

ವರಮುನಿ ಜಮದಗ್ನಿಯ ರೇಣುಕಾಸುತ ಭಾರ್ಗವ ನೀನಾಗಿ
ವರಪರಶುದರನೆಂದೆನ್ನಿಸಿ ಭೂಭುಜರನು ತರಿದಟ್ಟಿ
ಧರಣಿಯ ಭಾರವ ಪರಿದು ಸರಾಗದಿ
ಧರಣೀಸುರರಿಗೆ ಸುರತರುವೆನಿಸಿದ ೪

ಹರವಿರಂಚಿಯರ ವರಗಳ ಗರ್ವದೆ ದಶಶಿರದೈತ್ಯನು
ಮೆರೆದು ಪರಿಪರಿ ವಿಧದಿಂ ಸುರಭೂಸುರರನು
ಕರೆಕರೆಗೊಳಿಸುತಿರೆ ಧರಣಿಪ ದಶರಥ ತನುಭ
ವರೆನ್ನಿಸಿನಿಶಿಚರ ಕುಲವನೇ ಸವರಿದ ರಾಘವ ೫

ಅಷ್ಟಮದಂಗಳ ದಟ್ಟಣೆಯಿಂದತಿ ಅಟ್ಟಹಾಸದಿ ಮೆರೆದಾ
ದುಷ್ಟ ಕಂಸನ ಮರ್ಧಿಸಿ ಧರಣಿಯ ಶಿಷ್ಟರ ಪಾಲಿಸಲು
ವೃಷ್ಣಿವಂಶದಿ ಬಂದು ಕೃಷ್ಣನೆನಿಸಿ ತನ್ನ
ಇಷ್ಟರಾದ ಪಾಂಡುಪುತ್ರರ ಸಲಹಿದ ೬

ಸಿದ್ದಿ ಸಂಕಲ್ಪದಿ ಬಲಭದ್ರನೆನ್ನಿಸಿ ಭವಬದ್ಧ ಜೀವಿಗಳಂ
ಶುದ್ಧ ಮಾರ್ಗದಿ ಸಂಸ್ಕರಿಸಿ ಜಗವನು ಉದ್ಧರಿಸಲ್ಕಂಡು

ಬುದ್ಧನೆಂದೆನಿಸಿ ಮೆರೆದ ಸಂಕರ್ಷಣ
ಭದ್ರಮಂಗಳ ಭವ್ಯಸ್ವರೂಪನೆ ೭

ಕಲಿಮಲದೋಷವ ತೊಳೆಯಲು ಪುನರಪಿ ಕಲ್ಕಿಯೆ ನೀನೈತರುವೆ
ಫಲತೆರದಲಿ ಭಕ್ತರ ಸಲಹಲು ಫಲರೂಪಗಳ ಕೈಕೊಳುವೆ
ನೆಲದೊಳು ನಿನ್ನೀ ನೆಲೆಯನು ತಿಳಿಯದೇ
ಹಲುಬುವ ಕಂದನ ಸಲಹೈ ಸಿರಿದೊರೆ ೮

## ೯೮

ಶ್ರೀಲೋಲ ಶ್ರೀನರಸಿಂಹ ಬಲಗೋಂಬೆನು ನಿನ್ನ ಪ.

ಸಾರರಹಿತವಹ ಘೋರತರ ಸಂಸಾರದಿ ತೊಳಲುತ
ಗಾರುಗೊಂಡಿಹೆನೈ ಶ್ರೀಲೋಲ ಅ.ಪ.

ಚಿಣ್ಣನು ತಾ ಬಣ್ಣಿಸಿ ಕರೆಯೆ ಮನಕದ ತಂದು
ಅನ್ಯದೈವಗಳ ಮರೆದು ತನ್ನನೆ ನೆನೆವ
ಚಿಣ್ಣನಿಗಾಗಿ ಕಂಬದಿ ಬಂದು
ಘನ್ನ ರೋಷದಿ ದೈತ್ಯನ ಸೆಳೆದು
ಕುನ್ನಿಯ ಮುಡಿಯನು ಪಿಡಿದೆತ್ತಿ ಜಡಿದು
ತನ್ನ ತೊಡೆಯೊಳಗಿರಿಸಿ ಖಳನುರ
ವನ್ನು ಬಗೆದು ಕರುಳನು ಕೊರಳೊಳು ಧರಿಸಿದ ೧

ಘೋರರೂಪಕೆ ನಡುಗುತಲಂದು ಸುರಗಣನಿಂದು
ಶರಣೆಂದಾಕಂದನ ಕರೆದು
ಪರಮಾದರದಿಂ ಶ್ರೀದೇವಿಯನೊಡಗೊಂಡು
ಪರತರಾಭಯ ಹಸ್ತವ ನೀಡಿ
ಸರಸದಿ ಕರೆದಾದರಗೂಡಿ ತರಳನೆ ಭಕ್ತಾಗ್ರೇ
ಸರ ನೆನ್ನಿಸಿ ನೆರೆಸುಖಿಸೆಂದೊದವಿದ ೨

ಚಾರು ಚರಿತ ಪ್ರಹ್ಲಾದನ ಆಲಿಸಿ ನಲವಿಂ
ನಾರೀಶ್ರೀಯೊಡನೈತಂದು ಮಾರಹಳ್ಳಿಯೊಳ್ನಿಂದು
ಸಾರಿತನ್ನನೇ ನೆನೆವರನೆಂದೆಂದು
ಕೋರಿಕೆಗಳ ಸಲ್ಲಿಸಿ ಸಲಹುವನೆಂದು
ಸಾರೆಬಂದಿಹೆ ನಿನ್ನೆಡೆಗಿಂದು ಸಾರಸಾಕ್ಷನೆ ನೀ ಕೃಪೆದೋರೆಂದು
ಕೋರಿಭಜಿಪೆ ಶ್ರೀಶೇಷಗಿರಿವರ ದಯಾಸಿಂಧು ೩

## ೯೯

ಸರೋಜಲೋಚನಸುರಾರಿ ಮಥನ ಮುರಾರಿ ಮಾರಮಣ
ಪುರಾರಿಮಿತ್ರಾ ನಿರೀಕ್ಷಿಸೆನ್ನ ನಿರಾಕರಿಸದಿರಿನ್ನು ಪ.

ಬಲೀಂದ್ರಗೊಲಿದೆ ಬಾಗಿಲೊಳ್ನಿಂದೆ ಗೊಲ್ಲನು ನೀನಾದೆ
ಬಲೀಂದ್ರ ಪೂಜಾಬಲದಿ ಜಗಮಂ ಕಳೆಯೇರಿಸಿ ಮೆರೆದೆ ೧

ತಳಿರ್ದೋರಣಂಗಳ್ ಎಲೆಬಾಳೆಲೆಗಳ್ ನಳನಳಿಸುವ ಬಗೆಯೊಳ್
ಬೆಳಗುವ ದೀಪಾವಳಿಯಿಂ ಜಗಮಂ ತೊಳಗುವದೆಲ್ಲೆಡೆಯೊಳ್ ೨

ಚಿತ್ತಜಪಿತ ಬಾ ಉತ್ಸವಪ್ರಿಯ ಬಾ ಸತ್ಯವಿಕ್ರಮ ನೀ ಬಾ ಬಾ
ಕೃತ್ತಿಕೋತ್ಸವ ಮಿದಕೈಕೊಳ್ಳೈ ನಿತ್ಯ ತೃಪ್ತನೆ ಬಾರೈ ೩

ಮದಮತ್ಸರಗಳ ಸದೆವಡೆದೇಗಳು ಸದಯನೆ ನೀ ಎಮ್ಮೊಳು
ಸದನವ ಮಾಡೈ ಹೃದಯ ಪೀಠದ ಅಧಿಪತಿ ನೀನಹುದೈ ೪

ಮಾಯಾಪಾಶದಿ ಗಾಯಗೊಂಡೆವು ಜೀಯ ಪಾಲಿಪುದೈ
ಧ್ಯೇಯಮಾರ್ಗದೆ ನಡೆಯಿಸು ನೀ ನಿರಪಾಯದೆ ಸತತಂ ೫

ಕೈಪಿಡಿದೆಮ್ಮಂ ಕಾಪಿಡು ನಲವಿಂ ತಾಪತ್ರಯ ಹರ ನೀಂ
ಭೂಪಶೇಷಾದ್ರೀಶನೆ ನೋಡೈ ಶ್ರೀಪಾದದಾಸರನು ೬

## ೧೦೦

ಹರಿಯೆ ಮೂಜಗದ ದೊರೆಯೆ ನಿನಗಿದು ಸರಿಯೆ ಪ.

ಹರಿಯೆ ಮೂಜಗದ ದೊರೆಯೆ ನಿನ್ನನೆ
ಮರೆಯಪೊಕ್ಕವರಲ್ಲಿ ಈ ಪರಿ
ಬರಿಯ ಪಂಥದಿ ಮರುಗದಿರ್ಪುದು
ಸರಿಯೆ ನಿನಗದು ಸರಸವಲ್ಲದು ಅ.ಪ.

ಉಕ್ಕಿನ ಕಂಬದಿಂದ ಉದಿಸಿ ಬಂದು
ರಕ್ಕಸನುರವ ಸೀಳಿ ಕರುಳನು ಬಗೆದು
ಉಕ್ಕುವ ಕೋಪದಿಂದ ರಕುತವು ಸುರಿಯೆ
ಭಕ್ತ ಪ್ರಹ್ಲಾದನಾದರದಿ ಕಾಯ್ದು
ಭಕ್ತ ವತ್ಸಲನೆನಿಸಲಹುದು
ಶಕ್ತಿಹೀನತೆಯಿಂದ ಮರೆಹೊಕ್ಕ ಎನ್ನನು [ಕಾಯು]ವುದು ೧

ಒಪ್ಪಿಡಿಯವಲಕ್ಕಿಯ ಒಪ್ಪಿಸಿನಿಂದ
ವಿಪ್ರನ ನಲವಿಂದ ನೋಡುತಲಂತು
ವಿಪುಲಸಂಪದವನ್ನು ಕರುಣಿಸಿದಂಥ
ಅಪ್ರತಿಮ ಸಾಹಸಿಯೆನುತೆ ನಿನ್ನೊಳು
ತಪಿಸಿ ಬೇಡುವ ಎನ್ನೊಳೀಪರಿ
ಒಪ್ಪದೊಪ್ಪದೆನ್ನಪ್ಪ ಕೇಳಿದು ಸರಿಯೇ ಶ್ರೀನರಹರಿಯೇ ೨

ಮಾನಿತಧ್ರುವ ಬಾಲನಂ ಮನ್ನಿಸಿ ಪೊರೆದೆ
ಮಾನಿನಿ ಪಾಂಚಾಲಿಯ ಮಾನದಿ ಕಾಯ್ದೆ
ಸಾನುರಾಗದಿಂ ಗಜನಂ ಉದ್ಧರಿಸಿದೆ
ಕ್ಷೋಣಿಯೊಳಗತಿ ದೀನರಾದರ ಸಾನುರಾಗದಿ ಪೊರೆವ ಶ್ರೀಧರ
ದಾನವಾಂತಕ ಶೇಷಗಿರೀಶನೆ ಸೂನುವೆಂಬಭಿಮಾನ ನಿನಗಿರೆ
[ಮಾಣದೆನ್ನನು ಕಾಯೊ] ಹರಿಯೇ ಶ್ರೀನರಹರಿಯೇ ೩

## ೧೦೧

ಹಸಿವಾಗುತಿದೆಯೆನಗೆ ಬಸವಳಿದೆನೆ ಹೀಗೆ ಪ.

ಹಸಿವು ಹೆಚ್ಚಿತು ಅಕಟಾ ತೃಷೆಯಿಂದೆನಗತಿಕಾಟ
ರಸನೆಯೊಳಿನಿತುಂ ರಸಮಿಲ್ಲದಿರೆ
ಪುಸಿಯಲ್ಲಿದು ಒಣಗಿದ ಕಾಷ್ಠಂ ಅ.ಪ.

ಅಂಗಜ ಜನಕ ಶ್ರೀರಂಗನಾಯಕ ನಿಮ್ಮ
ಮಂಗಳನಾಮದ ಪೊಂಗಲ ಸವಿಯದೆ [ಭವ]
ಸಂಗತಾಪದಿಂ ತಪಿಸುತಲಿ ೧

ವಾಸುದೇವನೆ ನಿಮ್ಮ ಸಾಸಿರ ನಾಮಾಮೃತವ
ಲೇಸಾಗಿ ಕುಡಿಯದೆ ಆಸೆಗೆ ಸಿಲುಕುತ
ಮೋಸವೋದೆನೋ ಮರುಳನಂದದಿ ೨

[ಒಂದ] ಅರಿಯದ ಈ ಪಸುಳೆಯನು
ಪರಿಭಾವಿಸಿ ನೋಡಿನ್ನು ವರಶೇಷಗಿರಿದೊರೆ
ವರದ ನಿನ್ನಡಿದಾವರೆಗಾರಡಿಯಂತಿರಿಸೆನ್ನಂ ೩

## ಲೋಕನೀತಿ

## ೧೦೨

ನಂಬಲಾಗದು ಮಾನವ ಭ್ರಾಂತಿಸುಖವ ಪ.

ನಂಬಲಾಗದು ಮಣ್ಣಬೊಂಬೆಯಂದದ ದೇಹ
ಡಂಭ ಮೋಹಗಳಿಂದ ಮದಿಸುತ ಹಂಬಲಕ್ಕೀಡಾಗುವಂತಿದ ಅ.ಪ.

ನೀರಮೇಲಣಗುಳ್ಳೆ ತೋರಿಹಾರುವ ಬಗೆ
ತೋರುತ್ತಲಳಿವ ಶರೀರದೋಳ್ ಮರುಳಾಗಿ ಪರಿಪರಿ ಭೋಗಂಗಳ
ನಾರೈಸುತ ಸ್ಥಿರವೆಂದು ಭಾವಿಸುತ ಧಾರುಣವಾದ

ಮಾರನಾಟದೊಳಾಡುತ ನಲಿಯುತಲಿಕೆ
ಸಾರಿಬರೆ ತನಗಪಮೃತ್ಯುಕಾಲವು
ಮೀರಿದುಬ್ಬುಸವಾಂತು ಮಿಡುಹುತ
ಬೋರಿಡುತ ಬೊಬ್ಬರಿಸಿ ತರಳರ
ಸಾರಿಕೂಗುವ ಕಾಯಧಿರವನು ೧

ನಾನು ನನ್ನದಿದೆಂದಭಿಮಾನದಿಂ ಮತಿಗೆಟ್ಟು
ಜ್ಞಾನವಿಲ್ಲದೆ ಭುವಿಯೊಳ್ ದೀನನಾಗಿ
ಶ್ವಾನನಂದದಿ ತಿರುಗಿ ಗತಿಗಾಣದೆ
ನಾನಾಪರಿಯಿಂ ಸೊರಗಿ ನರಳುತಿಹ
ಹೀನವೆನ್ನಿಪ ಈ ಭ್ರಾಂತಿಜೀವನವನ್ನು
ನೀ ನಿಜವೆಂದು ನಂಬದೆ
ಜ್ಞಾನಿಗಳನಾಶ್ರಯಿಸಿ ಆತ್ಮ
ಜ್ಞಾನ ಲಾಭದಿ ಮನುಜನೆನ್ನಿಸೆ ೨

ಕಾಮಕ್ರೋಧವ ಬಿಟ್ಟು ರಾಮನೊಳ್ ಮನವಿಟ್ಟು
ತಾಮಸಬುದ್ಧಿಯನೀಡಾಡುತೆ ಮತ್ತೆ
ಶಮದಮಾದಿಗಳನಭ್ಯಸಿಸುತೆ
ಕ್ಷಮೆಯನಾಶ್ರಯಿಸುತೆ ಸುಖದುಃಖದೊಳ್
ಸಮಭಾವದಿಂದಿರುತ ಅಮಲನೆನ್ನಿಸುತ
ಕಮಲನಯನ ಶೇಷಾದ್ರಿನಾಥನ ।
ವಿಮಲ ಪದದೊಳೈಕ್ಯನಾಗಲು
ಅಮಲಭಕ್ತಿಯೆ ಮುಖ್ಯ ಸಾಧನ ನಮಗೆ ಈ ಭ್ರಾಂತಿ ಸಲ್ಲದು ೩

## ೧೦೩

ಭಜಿಸಬಾರದೆ ಹರಿಯ [ಮನವೇ]
ಭಜಕರಕ್ಷಕ ದೊರೆಯ ಪ.

ಗಜಪತಿ ವರದನ ತ್ರಿಜಗಜ್ಜನಕನ
ಅಜಮಿಳ ವರದನ ವಿಜಯನ ಸಖನಾ ಅ.ಪ.

ಕಾಮಕ್ರೋಧವ ಸುಟ್ಟು [ಶ್ರೀರಾಮನೋಳ್ ಮನನೆಟ್ಟು]
ನೇಮಧರ್ಮದಿ ಬುದ್ಧಿಯನಿಟ್ಟು ತಾಮಸ ಬುದ್ಧಿಯ ಬಿಟ್ಟು ೧

ಸತ್ಯಮಾರ್ಗವ ಬಿಡದೆ ದುಷ್ಕೃತ್ಯದೊಳ್ ಮನಗೊಡದೆ
ಸತ್ವಗುಣಭರಿತ ಜರಾಮೃತ್ಯುರಹಿತ ನಿತ್ಯತೃಪ್ತನನೀಂ ೨

ಇಂದುಧರಸಖಿ ರಘುವರನ ಪದದ್ವಂದ್ವವ ನೆನೆನೆನೆದನುದಿನ ಹೃ
ನ್ಮಂದಿರದೊಳಗಾನಂದದಿ ನೆಲಸಿರುವಂದವ ಮರೆಯದಿನ್ನು ೩

ಪರಮಾಚಾರ್ಯರುಗಳ ನಾಮಸ್ಮರಣೆಯ ಸೌಭಾಗ್ಯದಲಿ
ವರಗುರುಗಳ ಘನ ಕರುಣಾಕಟಾಕ್ಷದಿ ಸಿರಿವರನ ನೆಲೆಯರಿವತನಕ ೪

ವಾತಾತ್ಮಜ ಸಂಸೇವಿತೆಯ ಭೂಜಾತೆಯ ಜನಕಸುತೆಯ ಸೀತೆಯ
ನಿಮಿಕುಲಪೂತೆಯ ತ್ರಿಜಗನ್ಮಾತೆಯ ಶುಭಗುಣಯುತೆಯ [ನಿಗೆ] ೫

ತರುಣಿ ಕುಲಾಂಬುಧಿ ಸೋಮರಾಮ ತ್ರಿಭುವನ ಮೋಹನ ಶ್ಯಾಮ
ವರದ ಶೇಷಾಚಲಧಾಮನ ಸತ್ಯವಿಕ್ರಮ ರಘುರಾಮನ ನೀ ೬

## ೧೦೪

ಭಜಿಸಿ ಬದುಕೆಲೋ ಮಾನವ
ಶ್ರೀಹರಿನಾಮ ತಾರಕಮಂತ್ರವ ಪ.

ದುರಿತಕೋಟಿಗಳಂ ಪರಿಹರಿಸಿ ನಿಜಪದ
ಸರಸೀರುಹದೊಳಗಿರಿಸಿ ಪೊರೆವನ ೧

ದುರ್ಜನ ನಿಂದೆಗೆ ಲಜ್ಜಿತನಾಗದೆ
ದುರ್ಜನ ದಮನನ ಧ್ಯಾನದೇ ನೀಂ ೨

ಪೊಗಳಲು ಹಿಗ್ಗದೆ ತೆಗಳಲು ತಗ್ಗದೆ
ಬಗೆಕುಂದದೆ ಸಮ್ಮೋದದೇ ನೀಂ ೩

ಅಷ್ಟಮದಂಗಳ ಕಟ್ಟುತೆ ದೃಢದಿ
ದೃಷ್ಟಿನಿಲ್ಲಿಸಿ ನಿಷ್ಠೆಯೋಳ್ ನೀಂ ೪

ದೋಷರಹಿತ ಶ್ರೀಶೇಷಗಿರೀಶನ
ದಾಸರವಾಸನೆನ್ನಿಸಿ ಸಂತತಂ ೫

## ೧೦೫

ಮಿತಭಾಷಿಯಾಗಿ ಬಾಳು ನೀ ಮನುಜಾ
ಅತಿಭಾಷಿಯೆನಿಸದೆ ಪ.

ಭಾಷೆ ಹೆಚ್ಚಲು ದೋಷಿಯೆನ್ನುತ
ದೂಷಿಸುವರಾಕ್ರೋಶದಿಂದಲಿ
ರೋಷಗೊಳ್ಳುವೆ ಗಾಸಿಯಾಗುವೆ
ಶೇಷಶಯನನ ದಾಸನೆನಿಪೊಡೆ ೧

ಮೂಲಕಾರಣನಾದ ದೇವನ
ಮೂಲಮಂತ್ರದ ಸಾರವಿದು
ಮೇಲನರಿತು ಸುಶೀಲನೆನ್ನಿಸು
ಕಾಲಪಾಶದಿ ಬೀಳದಂತಿರೆ ೨

ಕಾಕುಮನುಜರ ಕಾಕುಟಾಪಕೆ
ಏಕೆ ಸೇರುವೆ ಜೋಕೆಯಿಂದಿರು
ಮೂಕನಂತಿರು ಲೋಕನಾಥ ನೊ
ಳೈಕ್ಯವಾಗಿ ವಿವೇಕಿಯೆನ್ನಿಸೆ ೩

ನಿತ್ಯವಲ್ಲದ ವಿತ್ತಮನೆಧನ
ಭೃತ್ಯರೆಲ್ಲರ ಸುತ್ತಿನೀಂ
ಮತ್ತನಾಗದೆ ನಿತ್ಯತೃಪ್ತನ
ಸತ್ಯಚರಿತನ ಸತ್ವವರಿವೊಡೆ ೪

ಬಂದು ನುಡಿಯದಿರೆಂದೆ ಸುಮ್ಮನೆ
ಕಂದ ನೀ ಮನದಂದು ಬಿಮ್ಮನೆ
ತಂದೆ ಶೇಷಗಿರೀಶ ನಂಪ್ರಿಯೆ
ನಂಬಿ ನೀ ನಲವಿಂದ ಸುಖಿಪೊಡೆ ೫

## ೧೦೬

ಶ್ರೀಕಾಂತನನ್ನೊಲಿಸುವಾ ಬಗೆಯಾನೊರೆವೆ
ನೀ ಕೇಳೆಲೊ ಮಾನವ ಪ.

ಶ್ರೀಕರಗುಣಯುತ ಪಾಕಶಾಸನವಿನುತ
ಲೋಕೈಕ ವೀರನನ್ನೊಲಿಸುವಾ ತೆರನ ಪೇಳ್ವೆನಾಲಿಸು ಅ.ಪ.

ಶಕ್ತಿ ಸಾಹಸಗಳಿಗೆ ಸೋಲುವನಲ್ಲ ರಕ್ಕಸಾಂತಕಮಲ್ಲ
ಯುಕ್ತಿಮಾರ್ಗಕೆ ಮನವ ಸಿಲುಕಿಪನಲ್ಲ ಭಕ್ತವತ್ಸಲ ಸಿರಿನಲ್ಲ
ವಿತ್ತ ಮೂಲಕದಿಂದ ಚಿತ್ತ ಚಲಿಸುವುದಲ್ಲ
ಮತ್ತೆ ಮಣಿಹೇಮಂಗಳರ್ಥಿಗೊಳ್ಳಿಪುವಲ್ಲ ಲಕ್ಷಣವು
[ಚಿತ್ತ] ತಾನವನ ವಶಗೊಂಬುದಲ್ಲ
ಮುಕ್ತಿದಾಯಕನ ಮೆಚ್ಚಿಸಲ್ ವಿರಕ್ತಿಯಿಂ ಫಲವಿಲ್ಲ
[ಮತ್ತ] ಖಿಲಾಂಡಕೋಟಿ ಬ್ರಹ್ಮಾಂಡನಾಯಕನ ಮೆಚ್ಚಿಸಲ್
ಭಕ್ತಿಯೊಂದೇ ಉತ್ತಮೋಪಾಯ ಕೇಳೆಲೈ ೧

ಬಡವಿಪ್ರನೇನಿತ್ತನೈ ಸರ್ವೇಶಗೆ ಭಕ್ತನಾ ಧ್ರುವನು
ದೃಢದಿ ಶೈಶವದೊಳೇ ಅಡವಿಯನಾರಯ್ಯುತೆ
ಪೊಡವೀಶನಡಿಗಿತ್ತ ತೊಡವಾವುದದ ಪೇಳ್
ದೃಢಭಕ್ತಿಯಲ್ಲವಿನ್ನೊಲ ವಾಂತುದಾವುದು
ಕಡು ಭಕ್ತನಾ ವಿದುರ ಪಡೆದನಸುರಾರಿಯಾಲಿಂಗನದ ಸುಖಮಂ
ಮಡದಿಮಣಿ ಪಾಂಚಾಲಿ ಪಡೆದಳಕ್ಷಯಪ್ರದಾನಮಂ
ತಡೆಯೇನು ಪೇಳಾ ಪರಮಾತ್ಮನೊಲ್ಮೆಗಿನ್ನು
ದೃಢಭಕ್ತಿಗಿಂ ಮಿಗಿಲು ತೊಡವಾವುದಿರ್ಪುದೈ ೨

ದಾನವವಂಶದಲಿ ಜನಿಸಿದನಾ [ಸು]ಜ್ಞಾನಿ ಪ್ರಹ್ಲಾದನು
ಸಾನುರಾಗದಿ ಹರಿಯ ಭಕ್ತಿಯಿಂ ಧ್ಯಾನಿಸೆ ಕಂಬದಿಂ
ಜನಿಸಿಯಾಕ್ಷಣದಲ್ಲಿ ಮನುಜಕೇಸರಿಯಾಗಿ
ಘನದಾಕೋಪವನು ತಾಳಿ ದನುಜನ ಉರವ ಸೀಳಿ
ಮನ್ನಿಸುತೆ ಭಕ್ತನಂ ನನ್ನಿಯಿಂ ಮೈದಡಹಿ
ಉನ್ನತೋನ್ನತ ಪದವನಿತ್ತನಾಖಿಲಕುಠಾರಿಶೌರಿ
ಚನ್ನಶೇಷಾದ್ರಿನಾಥನ ಪದವ ಪೊಂದಲು
ಮುನ್ನ ಭಕ್ತಿಯಿದುವೇ ಮುಖ್ಯಸಾಧನ ಕೇಳೈ ೩

## ಸಂಪ್ರದಾಯದ ಹಾಡುಗಳು

### ೧೦೭

ಆರತಿಯೆತ್ತಿರೆ ನಾರಿಯರೆಲ್ಲರು
ಶಾರದದೇವಿಗೆ ಭೂರಿಸಂಭ್ರಮದೆ ಪ.

ಬೊಮ್ಮನ ರಾಣಿಯ ನೆಮ್ಮಿಭಜಿಸುವ
ಸುಮ್ಮಾನದಿಂ ಪರಬೊಮ್ಮನ ಪಾಡುವ ೧

ಕರಗಳ ಜೋಡಿಸಿ ಶಿರವನು ಬಾಗಿಸಿ
ಸರಸತಿಗೊಂದಿಸಿ ಪರಮನ ಧ್ಯಾನಿಸಿ ೨

ಪರಮೇಷ್ಠಿದಯಿತೆಗೆ ವರಗುಣಭರಿತೆಗೆ
ಸುರಮುನಿ ಮಾತೆಗೆ ಶರಣಸಂಪ್ರೀತೆಗೆ ೩

ಪಾಡಿರಿ ಗುಣಗಳ ಮೂಡಿದ ಭಕ್ತಿಯಿಂ
ನೋಡಿರಿ ದೇವಿಯ ಬೇಡಿರಿ ವರಮಂ ೪

ವರಶೇಷಗಿರೀಶನ ಹಿರಿಯಸೊಸೆಗಿಂದು
ಮರಕತದಾರತಿ ಹರುಷದಿಂದೆತ್ತಿ ೫

## ೧೦೮

ಮಂಗಳಂ ರಘುರಾಮಗೇ ಜಯಮಂಗಳಂ ಗುಣಧಾಮಗೆ
ಮಂಗಳಂ ಮದನಾರಿವಂದ್ಯಗೆ ಮಂಗಳಂ ಮನ್ನಾಥಗೆ ಪ.

ರಾಮಗೇ ನತಕಾಮಗೆ ಘನಶ್ಯಾಮಗೆ ಸುಪ್ರೇಮಗೇ
ಕಾಮಿತಾರ್ಥಪ್ರದಾತಗೆ ವರ ರಮಣೀಯಕರೂಪಗೆ ೧

ಶ್ರೀಶಗೆ ಜಗಧೀಶಗೆ ಭಯನಾಶಗೇ ಸರ್ವೇಶಗೆ
ರಾಸಮನೋಲ್ಲಾಸ ಲಕ್ಷ್ಮೀಶ ಕೇಶವಮೂರ್ತಿಗೆ ೨

ಮಾರುತಾತ್ಮಜ ಸೇವೆಗೇ ನತಪಾರಿಜಾತ ಸಮಾನಗೆ
ವಾರಿಜಾಯತನೇತ್ರಗೇ ಶ್ರೀ ಶೇಷಶೈಲನಿವಾಸಗೆ ೩

## ೧೦೯

ಮಂಗಳಂ ಶ್ರೀ ನರಸಿಂಹಗೆ ಜಯಮಂಗಳಂ ಪ್ರಹ್ಲಾದವರನಿಗೆ ಪ.

ತರಳನು ಮೊರೆಯಿಡೆ ಭರದಿಕಂಬದಿಂಬಂದು
ದುರುಳನ ಸದೆವಡೆದು ಕರುಳನು ಧರಿಸಿ
ಧರಣಿಗಚ್ಚರಿಯೆನೆ ತರಳನ ಮನ್ನಿಸೆ
ಸಿರಿಯೊಡಗೂಡಿದ ನರಕೇಸರಿಗೇ ೧

ತ್ರಿಜಗತ್ಪಿತ ನಿನ್ನ ನಿಜಪಾದಾಂಬುಜವ
ಭಜಿಸುವೆ ನೋಡೆನ್ನ ಗಜರಾಜವರದ
ಸುಜನರ ಸಂಗತಿದೊರೆವಂತೆ ಕರುಣಿಸು
ಗಜಾರಣ್ಯಕ್ಷೇತ್ರ ವಿರಾಜಿತನೆ ೨

ದೋಷ ನಿವಾರಣ ಶೇಷಗಿರಿಯಲ್ಲಿ
ದಾಸರ ಕೈ ಬಿಡೆನೆಂದು ಘೋಷಿಸುತಿಹ
ಸರ್ವೇಶನಿಗೆ ಶೇಷಶಯನ ಲಕ್ಷ್ಮೀಶ
ಕೇಶವ ಕಮಲಾಕ್ಷ ಶ್ರೀ ಶ್ರೀನಿವಾಸನಿಗೆ ೩

## ೧೧೦

ಮಂಗಳಂ ಶ್ರೀಲಕ್ಷ್ಮೀಕಾಂತಗೆ
ಜಯಮಂಗಳಂ ವೈಕುಂಠನಿಲಯಗೆ ಪ.

ಆಮನಸಿಜನಯ್ಯಗೆ ಭುಜಗಭೂಷಣ ಪ್ರಿಯಗೆ
ತ್ರಿಜಗತ್ಪತಿ ಪುರುಷೋತ್ತಮಗೆ ಭಜಕರಕ್ಷಕ ಶ್ರೀ
ವಿಜಯಸಾರಥಿಗೆ ದ್ವಿಜರಾಜಗಮನ ಅಜಾಮಿಳವರದಗೆ ೧

ಆಪನ್ನಿವಾರಣ ಅಪ್ರಮೇಯನಿಗೆ ತಾಪತ್ರಯಹರ
ಶ್ರೀಪತಿಗೆ ತಾಪಸವಂದಿತ ಕೋಪವಿರಹಿತ
ಗೋಪಾಲಕನಂದನ ಯದುಪತಿಗೇ ೨

ಸನಕಾದಿಮುನಿಗಳಿಂದನವರತವು ಪೂಜೆಯನು ಕೈಗೊಂಬ
ವನಜಾಕ್ಷಗೆ ಘನಶೇಷಗಿರಿವಾಸ ಚಿನ್ಮಯರೂಪ ಶ್ರೀ
ವನಜನಾಭವೇಂಕಟಗೆ ಮಂಗಳಂ ಶ್ರೀ ಲಕ್ಷ್ಮೀಕಾಂತಗೆ ೩

## ೧೧೧

ಮಂಗಳಾರತಿಯೆತ್ತಿ ಪಾಡಿರೆ ರಂಗನಾಥನ ನೋಡಿರೇ ಪ.

ಅಂಗನಾಮಣಿಯನ್ನು ಸಲಹಿದ ಪಾಂಡುರಂಗನ ಭಜಿಸಿರೆ ಅ.ಪ.

ನೆರೆದಸಭೆಯೊಳು ಸೆರಗನೆಳೆಯಲು ತರಳೆಭೀತಿಯ ತಾಳಲು
ದುರುಳನೆರಿಗೆಯ ಸೆಳೆಯಲು ಶರಣು ನೀನೇ ವರದನೆನ್ನಲು
ವರವನಿತ್ತಗೆ ಭರದೊಳು ಕರಣವಾರ್ಧಿಗೆ ಮುದದೊಳು ೧

ಅಕ್ಷಯಾತ್ಮಕ ರಕ್ಷಿಸೈ ಶ್ರೀವತ್ಸ ದೀನಳ ಮಾನಮಂ ಕಮ
ಲಾಕ್ಷ ಬೇಡುವೆ ದೈನ್ಯದಿಂ ರಕ್ಷನೀನೆನೆ ಚಪಲಾಕ್ಷಿ
ಆಕ್ಷಣಂ ರಕ್ಷಿಸಿದೈ ಕರುಣದಿಂ ಅಕ್ಷಯಪ್ರದಾನದಿಂ ೨

ನಿತ್ಯನಿರ್ಮಲ ನಿರ್ವಿಕಲ್ಪ ನಿತ್ಯತೃಪ್ತನ ಭಜಿಸಿರೆ
ಭಕ್ತ್ಯಾಧೀನನ ಬೇಡಿರೆ ಸತ್ಯವಿಕ್ರಮ ಶೇಷಶೈಲ
ನಿಕೇತಗೆ ಜಯವೆನ್ನಿರೇ ಚಿತ್ತಶುದ್ಧಿಯ ಪಡೆಯಿರೇ ೩

## ೧೧೨

ಶ್ರೀರಂಗಪುರದೊಳ್ ಮೆರೆವ ಗಂಗಾಪಿತಗೆ ಮಂಗಳಂ
ಶ್ರೀರಂಗನಾಯಕಿ ಮನೊಹರಂಗೆ ಮಂಗಳಂ ಪ.

ವರದೆಕಾವೇರಿ ಸುತ್ತುವರಿಸಿ ಮೆರೆಯಲು
ಉರಗತಲ್ಪದಿ ಶಿರಕೆ ಬಲದಕರವೆ ದಿಂಬಿರಲ್ ೧

ಚರಣತಲದಿ ಮೆರೆಯೆ ಸಿರಿಯು ಧರೆಯು ಕುಳ್ಳಿರೆ
ಪರಮಭಾಗವತರು ಮುಂದೆ ನೆರೆದು ನಿಂದಿರೆ ೨

ಇಕ್ಕೆಲದಿ ಮೆರೆವ ಗಂಗಾ ಗೌರಿ ಅಕ್ಕತಂಗಿಯರ್
ನಕ್ಕುನಲಿವನೊಂದೆಡೆ ಮುಕ್ಕಣ್ಣ ಸನಿಯದಿ ೩

ಆರ್ತಜನರ ಪೊರೆವನೆಂಬ ಕೀರ್ತಿಗೊಂಡಿಹ
ಕರ್ತೃನೃಹರಿ ತನ್ನರಸಿಯೊಡನೆ ಇತ್ತ ಮೆರೆಯುವ ೪

ಉಭಯಕಾವೇರಿ ಮಧ್ಯದಿ ಪ್ರಭುವು ತಾನೆನೆ
ವಿಭವದಿಂದ ಮೆರೆವನೀಪರಿ ಪ್ರಭೆಯ ಬೀರುತ ೫

ಶರಣಜನರಿಗೆರೆಯ ಶೇಷಗಿರಿಯ ವರದನ
ಕರುಣ ಶರಧಿರಂಗಪುರದ ವರದನೆಂಬೆನೆ ೬

## ೧೧೩

ಜಯಮಂಗಳಂ ನಿತ್ಯ ಶುಭ ಮಂಗಳಂ ಪ.

ಸರಸೀರುಹಾಕ್ಷಾಯ ದುರುಳಮದಶಿಕ್ಷಾಯ
ಸುರಮೌನಿ ಪಕ್ಷಾಯಾಧೋಕ್ಷಜಾಯ
ಶರಣನ ರಕ್ಷಾಯ ಕರುಣಾಕಟಾಕ್ಷಾಯ
ಧರಣಿಜಾರಮಣಾಯ ರಾಮಭದ್ರಾಯ ೧

ದಶರಥಾತ್ಮಜಾತಂಗೆ ಕೌಶಿಕ ಕ್ರತು ಪಾಲಕಗೆ
ಶಶಿವದನೆ ಜಾನಕಿಯ ಕೈಪಿಡಿದವಂಗೆ
ಶಶಿಮೌಳಿಚಾಪಮಂ ಮುರಿದ ಅಸಮಬಲನಿಗೆ
ದಶಕಂಠಕಾಲಂಗೆ ರಾಘವೇಂದ್ರನಿಗೇ ೨

ಕಾಕುತ್ಸ್ಥಕುಲಮಂಡನಗೆ ಕಮಲಾಪ್ತ ಕುಲದೀಪಂಗೆ
ಸಾಕೇತನಗರಾಧಿಪಗೆ ಲೋಕೇಶನಿಗೆ
ಪಾಕಶಾಸನಮುಖ್ಯ ನಾಕಪೂಜಿತಚರಣ
ವೈಕುಂಠನಾಯಕ ಶ್ರೀ ಶೇಷಗಿರಿವರಗೆ ೩

## ೧೧೪

ಕುಶಲದಿಂದ ಬಾಳಿರೈ ಯಶವನಾಂತು ಬೆಳಗಿರೈ
ಕುಶೇಶಯಾಕ್ಷನೊಲಿದು ಸಂತೋಷವೀಯಲಿ ಪ.

ಪಿತೃಭಕ್ತರೆನಿಸುತ ಮಾತೃಸೇವೆಗೈಯುತ
ಪುತ್ರಪೌತ್ರಮಿತ್ರರಿಂ ಕಲತ್ರಭಾಗ್ಯದಿಂ ೧

ಕಾರ್ಯಸಿದ್ಧಿಯಾಗೆ ನಿಮ್ಮಾರ್‍ಯಮಾತೆಗೆರಗುತ
ಸಾರಸತ್ಯಧರ್ಮಮಂ ನೀವ್ ಮೀರದಾವಗಂ ೨

ದಾನವೇಂದ್ರನ ತೆರದೊಳು ದಾನಶೂರರೆನ್ನಿಸಿಳೆಯೊಳ್
ದೀನ ದುಃಖಗಳಿಗೆ ನೀವು ಶ್ರೀನಿಧಾನರೆನ್ನುವೋಲ್ ೩

ಈ ಶರತ್ಸಮಾಗಮಂ ದೇಶಮಾತೆಗೆ ಸಂಭ್ರಮಂ
ದೇಶಭಕ್ತರಿಗುತ್ಸವಂ ಇದೇ ನಮಗೆ ಸಂಭ್ರಮಂ ೪

ತಂದೆ ಶೇಷಗಿರಿವರಂ ನಂದಿನಿಯ ಕೈಪಿಡಿಯುತಾ
ನಂದದಾಯಕ್ ನೆನಿಸಲೆಂದೆಂದು ಹರಸುತ ೫

## ೧೧೫

ಕುಶಲಿಯಾಗಿರ್ಪೆ, ಯಶವಪೊಂದಿರ್ಪೆ ಪ.

ಕುಶಿಕತನುಜ ಯಾಗಪಾಲಕನೊಲವ ಪಡೆಯಿರ್ಪೆ ಅ.ಪ.

ಕಾಂತಾಪುತ್ರರಿಂ ಅನಂತ ಭಾಗ್ಯಮಂ
ಶಾಂತಚಿತ್ತಮಾಂತುಧರೆಯೊಳನಂತ ಕಾಲಮುಂ ೧

ವಂಶದೀಪನುಂ ಪ್ರಶಂಸನೀಯನುಂ
ಕಂಸದಮನ ಭಕ್ತನುಂ ಎನಿಸಿ ಸಂತತಂ ೨

ಶೇಷಗಿರಿವರಂ ಪೋಷಿಸಲ್ಕೆ ತಾಂ
ದೇಶಭಕ್ತರಾಗಿ ಬಾಳಿ ವಾಸಿಪಂಥದಿಂ ೩

## ೧೧೬

ಕೊಡಲಾಗದಿದ್ದರೆ ನುಡಿಯುವರೇನಣ್ಣ
ಕಡೆಯಿಂದ ಬಾರೆಂದು ಜಡಿದಿಂದು ಪ.

ದುಡುಕಿದೆವೆನ್ನುತ ಮಿಡುಕದಿರಣ್ಣಯ್ಯ
ಕಡುಮುದದಿಂದಾವು ನಡೆದೇವು
ಕೋಲೇಕೋಲೆ ಮುತ್ತಿನ ಕೋಲೆ ಅ.ಪ

ಗುಣಯುತರೆನಿಸುವ ಹಿರಿಯ ವಂದಿಸ
ಲೆನಂತಲ್ಲೆ ತಂದೆವು ಮಣಿದೆವು
ಹಣಗಾರರರೆಂದಲ್ಲಿ ಮಣಿಯಲು ಬರಲಿಲ್ಲ
ಹಣದಾಸೆ ನಮಗಿಲ್ಲ ಕೇಳೀಸೊಲ್ಲ ॥ಕೋಲೇ॥ ೧

ಅಣ್ಣಯ್ಯ ನಿಮಗೀ ಘನತೆಯು ಸಲ್ವುದು
ಗಣ್ಯರಾದಿರಿ ನೀವು ಜಗದೊಳು
ಪುಣ್ಯವಂತೆಯು ನಿಮ್ಮ ಪಡೆದಾಮಾತೆಯು
ಧನ್ಯರಾದಿರಿ ನಿಮ್ಮೀಗುಣದಿಂದ ಕೋಲೆ ೨

ದೋಷರಹಿತ ಶ್ರೀಶೇಷಗಿರೀಶನಾ
ಕೇಶವನೊಲವೊಂದೆಮಗಿರಲಿ
ಭಾಷೆಯ ಕೊಡುವೆವು ದೇಶಸೇವಕರಾವು
ಲೇಸಾಗಲಿಳೆಗೆಂದು ಮನದಂದು ॥ಕೋಲೆ॥ ೩

## ೧೧೭

ಕೋಲನಾಡೇ ಲೋಲಾಕ್ಷಿ ಬಾರೆ ಪ.

ಕನ್ನಡಿಕದಪುಗಳ್ ಚೆನ್ನಾಗಿ ಪೊಳೆಯಲ್
ಚಿನ್ನದ ಕೋಲ್ಪಿಡಿದು ಚನ್ನೆ ನೀಂ ನಲಿದು ೧

ಪಂಚಬಾಣನಶರ ಹೊಂಚಿಬೀಳುವ ತೆರೆ
ಚಂಚಲಾಕ್ಷಿಯೆ ಅರಸಂಚೆಗಮನದಿಂ ೨

ವಿಭವದೇಳಿಗೆಗಿದು ಶುಭದಿನವಹುದೆಂದು
ಪ್ರಭುವ ಬೇಡಿ ಇಂದು ಅಭಯವೀವನು ಬಂದು ೩

ಶಾರದಾಗಮದಿಂದ ಸಾರವಾಂತಿರುವೆಮ್ಮ
ಭಾರತಾಂಬೆಗೆನಲವೇರೆ ಸಂಭ್ರಮದಿ ೪

ಭಾರತಮಾತೆಗೆ ಭವ್ಯಮೂರುತಿಗೆ
ಭೋರೆನೆ ಜಯಭೇರಿ ಮೊರೆವುದು ಸಾರಿ ೫

ತರಳೆಯರಾವೆಲ್ಲ ಪರಿಶುದ್ಧ ಭಾವದಿ
ವರಶೇಷಗಿರಿದೊರೆಗೆರಗಿ ಸಮ್ಮುದದಿ ೬

## ೧೧೮

ಬಾಲೆಯರೆಲ್ಲರು ಬನ್ನಿರೆ ರನ್ನದ ಕೋಲ್ಗಳನೀವ್ ಪಿಡಿದು ಪ.

ಮೇಲಹ ಪದಮಂ ಪಾಡುವ ಕೋಲಾಹಲ ಸಮಯವಿದು ಅ.ಪ.

ಗಿರಿಸುತೆ ನೀ ಬಾ ಸರಸ್ವತಿ ನೀ ಬಾ
ಶರಧಿತನೂಭವೆ ನೀ ಬಾ ಬಾ
ನೆರೆಮೆರೆವೀ ಶರದುತ್ಸಹಮಂ ಅರಿಪುತು ಜಗಕಿಂದು ೧

ನಿಗ್ರಹಕಾರ್ಯದಿಂದುಗ್ರನಾಗಿಹ ಭರ್ಗನಕೆಲಕ್ಕೈತಂದು
ವ್ಯಗ್ರತೆಯಿಳಿಸಿ ಪೊರೆ ಶೀಘ್ರದಿ ಗಿರಿಸುತೆ ಸಮಗ್ರ ಭಾರತಮಿಂದು ೨

ಸರಸ್ವತಿ ಬಾ ನಿನ್ನರಸನ ಕೆಲಸಾರ್ ಧರೆಯೊಳ್ ಸುಪ್ರಜರಂ
ನೆರೆ ಸೃಜಿಸುವ ವೋಲ್ ಅರುಹು ವಿಚಕ್ಷಣೆ ಅಸುರರ ಪಡೆಯದಿರೆನ್ನು ೩

ಶರದಿತನೂಭವೆ ಅರಸಗೆ ನೀನೊರೆ ಪರಿಪರಿ ವಿಧದಿಂದಂ
ಕೊರತೆಯದಿಲ್ಲದೆ ಪೊರೆ ಜಗಮೆನ್ನುತ ಪೊರೆವೆವು ಛಲದಿಂದಂ ೪

ಭಾರತ ಜನನಿಯ ಭಾಗ್ಯೋದಯಮಂ ತೋರಿರೆ ಶಕ್ತಿತ್ರಯರೆ
ಭಾರತವೀರರಿಗಾರೋಗ್ಯೈಶ್ವರ್ಯಂಗಳ ಕರುಣಿಸಿರೇ ೫

ರಾಷ್ಟ್ರಪ್ರಮುಖರ ಕಷ್ಟಂಗಳ ನಾ ವಷ್ಟೆಂದೊರೆದಪೆವೇ
ಸೃಷ್ಟಿ ಸ್ಥಿತಿ ಲಯಕರ್ತರು ನೀವಿರೆ ದೃಷ್ಟಿಸಿರೀಗೆನ್ನುವೆವೆ ೬

ಕನ್ನಡತಾಯಿಯ ಕನ್ನೆಯರಾವು ಉನ್ನತಿಯನ್ನೆಳಸುವೆವು
ಮನ್ನೆಯರ್ ನೀವೆಮ್ಮೊಳಿನ್ನಾವೇಶಿಸೆ ಧನ್ಯರು ಮಾನ್ಯರು ನಾವಹೆವು ೭

ಆರ್ಯಮಹಿಳೆಯರೆನೆ ವೀರಮಾತೆಯರೆನೆ ಧಾರುಣಿಯೊಳಗೆಮ್ಮಂ
ಧೈರ್ಯಸ್ಥೈರ್ಯೌದಾರ್ಯ ಗುಣಂಗಳ ಪೂರಿತರಪ್ಪಂತೊಸೆವುದೆಮಗಿನ್ನು ೮

ಒಲಿದೆಮ್ಮನು ನೀವ್ ನೆಲೆಸಿರೆ ನಲವಿಂ ಬಲಗೊಳ್ಳುತ್ತಾನವರತಂ
ಕಲಿಯುಗಮಲ್ಲಿದು ಕೃತಯುಗಮೆನುವೋಲ್ ಬೆಳಗುವೆವೆಲ್ಲೆಡೆಯೋಳ್ ೯

ಭಾವಿಪೆವೀ ಪರಿದೇವಿಯರೇ ನೀವ್ ಪರಿ ಭಾವಿಸಿ ಮನ್ನಿಸಿರೆ
ಶ್ರೀವರ ಶ್ರೀಶೇಷಗಿರೀವರ ನಾವಗ ಮೋವುಗೆ ಕರುಣಿಸಿರೆ ೧೦

## ೧೧೯

ಲೀಲೆಯಿಂ ಬಾ ಲೋಲಲೋಚನೆ ಕೋಲನಾಡುವ ಪ.

ಶೀಲದಿಂದೆಮ್ಮಾಳ್ವ ಭೂಪಗೆ ಜಯವ ಪಾಡುವ ಅ.ಪ.

ಮಂದಗಮನದಿಂದ ಬಾ ಅರವಿಂದ ಲೋಚನೆ
ಮಂದಿಗಳಿಗಾನಂದ ಸಮಯಮಿಂದು ಪೊಸತೆನೆ ೧

ಬಣ್ಣ ಬಣ್ಣ ಬೆಳೆಗಳಿಂ ಪೊಂಬಣ್ಣ ದುಡುಪಿನಿಂ
ಕಣ್ಮನಂಗಳ ತಣ್ಪುಗೊಳಿಪಳ್ ಜನ್ಮಭೂಮಿತಾಂ ೨

ನವನವೋತ್ಸವದಿರವ ಸೂಚಿಪ ಶರತ್ಸಮಾಗಮಂ
[ತವ] ಮೆರೆವುದರರೆ ಶೇಷಶೈಲವರದನೊಲವಿನಿಂ ೩

## ೧೨೦

ಲೇಸುಲೇಸಿದು ಹರ್ಷವಾದುದು
ಕಾಸನಿತ್ತಿರಿ ಭರದಲಿ ಹಾಗದ ಕಾಸನಿತ್ತಿರಿ ಭರದಲಿ ಪ.

ವಾಸುದೇವನ ದಯೆಯೆ ಸಾಕು
ಕಾಸುಬೇಡಿದವರಲ್ಲ ನಾವ್ ಕೃಪಣರ ಕಾಸಮುಟ್ಟುವರಲ್ಲ ನಾವ್ ಅ.ಪ

ಘನತೆಯೊಂದಿಹ ಧನಿಕರೆಂದು ಗಣಿಸಿಸಾರಿದೆವಿಲ್ಲಿಗೆ
ಮಣಿಯ ಬಂದೆವು ಇಲ್ಲಿಗೆ
ಘನತೆಗೊಪ್ಪುವ ಬಗೆಯ ತೋರದೆ
ಧನದ ಮೋಹದಿ ಮೆರೆದಿರೆ ನೀವ್
ಅಣುಗಿಯರೋಳ್ ಮುಳಿದಿರೇ ೧

ಒಂದು ಹಣವನು ಮುಂದೆ ಎಸೆದಿರೆ
ಮಂದಿಯಿದಿರೋಳ್ ಮೌನದಿಂ ನೀ
ವಿಂದು ಲೋಭದ ಮಂತ್ರದಿಂ
ತಂದೆ ನಿಮ್ಮೀ ಒಂದು ಹಣವನು ಕೈಗೊಂಡು ನೀವೇ ನಲಿಯಿರಿ
ಬಂಧು ಮಿತ್ರರನೊಲಿಸಿರಿ ೨

ಭಳಿರೆ ನೀವೌದಾರ್ಯಗುಣದೊಳು ಬಲಿದರೆನ್ನಿಸಿ ಮೆರೆದಿರೆ
ಕಲಿಗರ್ಣರೆನ್ನಿಸಿ ನಲಿದಿರೆ
ಜಲಜಲೋಚನ ಶೇಷಶೈಲನಿವಾಸನೊಲವಿಂ ಸಂತತಂ
ನಲಿದು ಸುಖಿಸಿರಿ ಸಂತತಂ ೩

## ೧೨೧

ವನಜನೇತ್ರೆ ಕನಕಗಾತ್ರೆ ಅನುವಿನಿಂ ಬಾ ಮಿತ್ರೆ ಪ.

ವಿನಯದಿಂದ ಜನಕ ಸಾರುವ ಕೋಲನಾಡುವ ಅ.ಪ.

ಆರ್‍ಯಮಾತೆಯ ಆರ್‍ಯಧರ್ಮದ ಸಾರವರಿಯುವ
ವೀರಮಾತೆಯ ಭೂರಿಕೀರ್ತಿಯ ಪಾಡಿಸುಖಿಸುವ ೧

ಬೇಗನೇಳಿರೆ ಭಾಗ್ಯೋದಯಮದೀಗ ನೋಡಿರೇ
ಬೀಗಿಮಲಗುವ ರೋಗವುಳಿದು ಸರಾಗದೆ ಪಾಡಿರೇ ೨

ನವಯುಗಮಿದರೋಳ್ ಯುವತಿಯರೆ ನೀವ್ ಸುವಿಚಾರಗೈಯುತ
ಅವನೀಮಾತೆಯ ಭವಿತವ್ಯತೆಗೆ ತವಕಗೊಳ್ಳುತ ೩

ನಿದ್ದೆ ತಿಳಿದೆದ್ದೇಳಿರೆಲೆ ಭದ್ರೆಯರೇ ಭರದಿ
ಶುದ್ಧರಾಗಿ ತಿಲಕತಿದ್ದಿ ವೃದ್ಧರಂ ನಮಿಸಿರಿ ೪

ಶ್ರದ್ಧೆಯಿಂ ಕಾರ್ಯಸಿದ್ಧಿಗೊಯ್ಯಿರಿ ಸಿದ್ಧಾರ್ಥರೆನಿಸಿರಿ
ಸದ್ಧರ್ಮ ದೀಕ್ಷಾಬದ್ಧರಾಗಿ ಸುಭದ್ರವಿಳೆಗೊದವಿರಿ ೫

ಅರಸರನ್ನು ಸರಸದಿಂದ ಹುರುಡಿಸಿರಿನ್ನು
ಪುರುಷರೆನ್ನಿಸಿ ಕಾರ್‍ಯಮೆಸಗುವ ತೆರನ ತೋರಿಸಿ ೬

ದೇಶದೇಳ್ಗೆಯೊಳಾಸೆಯಿರಿಸಿ ಲೇಸನೆಸಗಿರಿ
ದೋಷಹರಣ ಶೇಷಗಿರೀಶಗೆ ಮೀಸಲಿರಿಸಿರಿ ೭

## ೧೨೨

ಸಖಿಬಾರಿತ್ತಲ್ ಸರೋಜಮುಖಿಯೇ
ಸುಗುಣಗಣಾನ್ವಿತೆಯೇ ಪ.

ಸುಖದಲಿ ಕೋಲಾಡುವ ಬಾ ಬಾ
ಸಖಿಯೇ ಸರೋಜಮುಖಿಯೇ ಅ.ಪ.

[ಸು] ಮತಿನೀ ಬಾ ಶಶಿಮುಖಿ ನೀ ಬಾ
ಸುಮಕೋಮಲೆ ನೀ ಬಾ ಬಾ ದಶರಥ ಸುತನ ಮ
ಹಿಮೆಯಿದೆಂದು ಪೊಗಳುವ ಬಳಿಸಂದು ೧

ಚಿನ್ನದ ಕೋಲಂ ರನ್ನದ ಕೋಲಂ
ನನ್ನಿಯಿಂದಲಿ ಪಿಡಿದು ಚೆನ್ನಿಗನೋವಿಂದು
ಚೆನ್ನಿಗ ನೊಲವಿಂ[ನ್ನೊ]ಳಗಾಯ್ತೆಂದೆನ್ನುವ ನಲಿನಲಿದು ೨

ವರಶೇಷಗಿರೀವರನೊಲವಿಂ ಧರೆ
ಮೆರೆವಳು ಮೋಹಿನಿಯೋಲ್ ದೊರೆತುದು ನಮಗೀ
ಶರದಾಗಮ ಮಿಂದರರೇ ಸುಗ್ಗಿಯ ಸಮಯಂ ೩

## ೧೨೩

ಸಖಿ ಬಾರೆ ಬಾರೆ ಬೆಡಗತೋರೆ ನಡೆದು ಬಾರೆಲೆ
ಸುಖದ ಸುಗ್ಗಿಯಿದೆಂದು ಸಾರೆ ಭ್ರಮರಕುಂತಲೆ ಪ.

ಜಲಜಮುಖಿಯೆ ನಲಿದುಬಾರೆ ಕೋಲವಾಡುವ
ಕಲಕೀರಕಂಠದಿಂದ ನಾವು ನಲಿದು ಪಾಡುವ ೧

ಇಳೆಯ ಸುಖದ ಗೆಳೆಯ ಬಂದ ಬಳಿರೆ ಬಾಪುರೆ
ಬೆಳಗುತಿರ್ಪ ದೀಪಾವಳಿಯೆ ಬಲಿಯ ಕೀರ್ತಿಯೆ ೨

ವಿಜಯಯಾತ್ರೆಗೆಂದು ಪರಕೆಯೆತ್ತಿ ಭರದಲಿ
ಅಜಸುರಾರ್ಚಿತಾಂಘ್ರಿಯುಗನ ಭಜಿಸಿಮುದದಲಿ ೩

ನೀರನೆಮಗೆ ಮಾರತಾತನೆಂದು ಸಾರುವಾ
ಶಾರದಾಗಮ ಸಮಯವಿದನು ಸಾರಿಯಾಡುವಾ ೪

ಶೇಷಶೈಲಶಿಖರ ಧಾಮನೆಮ್ಮ ಮೆಚ್ಚುವೋಲ್
ಮೀಸಲೆತ್ತಿಯೊಸಗೆ ಪೇಳಿ ಪೊಸತಿದೆನ್ನುವೋಲ್ ೫

## ೧೨೪

ಸರೋಜಲೋಚನೆ ಸಾರಿತ್ತ ಬೇಗನೆ ಪ.

ನೀಲಕುಂತಲೆ ಬೇಗಬಾರೆ ಕೋಲನಾಡುವ
ನೀಲಮೇಘಶ್ಯಾಮ ನಮ್ಮ ಪಾಲಿಸೆನ್ನುವ ೧

ತಂಗಿ ನಮ್ಮಯ ಅಂಗಳದೊಳು ರಂಗನಮುಂದೆ
ಮಂಗಳಂ ಪಾಡುತಾವು ಸಂಗತದಿಂದೆ ೨

ಆರ್ಯಮಾತೆಗೆ ಭೂರಿಸಂಭ್ರಮ ತೋರಿ ಮೆರೆಯುವಾ
ಶಾರದೋತ್ಸವ ಆರ್ಯಕೀರ್ತಿಯ ಸಾರವೆನ್ನುವ ೩

ಶೇಷಶೈಲಾವಾಸನೊಲವಿಂ ದೇಶಮಾತೆ ಸಂ
ತೋಷವಾಂತು ಬೆಳಗುವೋಲ್ ಜಯಘೋಷಗೈಯುವ ೪

## ವಿಶೇಷ ಕೀರ್ತನೆಗಳು

## ೧೨೫

ಮುಟ್ಟಬೇಡಿ ಮುಟ್ಟಬೇಡಿ ಮುರಹರನ ಭಕ್ತರನು ಪ.

ಭ್ರಷ್ಟರಾಗದಿರಿಯೆಂದು ಕಟ್ಟು ಮಾಡಿದ ಯಮನು ಅ.ಪ.

ಹರಿನಾಮ ಪಾರಾಯಣ ನಿರುತರಾಗಿರುತಿಹರ
ಹರಿದಿನ ವ್ರತವನಾಚರಿಸುತಿಹರ
ಹರಿಮಹಿಮೆಯನು ಕೊಂಡಾಡಿ ಪಾಡುತಲಿಹರಂ
ಹರಿದಾಸರಾ ದಾಸ್ಯದೊಳಿರುತಿಹರಂ ೧

ಗುರುಹಿರಿಯರಾಣತಿಗೆ ಶಿರಬಾಗಿ ನಡೆವವರ
ಪರನಾರಿ ಸೋದರರ ಸಚ್ಚರಿತ

ಮುಳ್ಳವರ ಪರಮಾತ್ಮ ತತ್ಮಜ್ಞಾನ
ವರಸತ್ಯಸಂಧರ ಹರಿಶರಣರ ೨

ಪತಿಪಾದ ಸೇವಾನಿರತೆಯಾಗಿಹ ಸತಿಯ
ಪತಿಗತಿಯನನುಸರಿಪ ಸುಗುಣ ಸುವ್ರತೆಯ
ಪತಿಹಿತೆಯಾಗಿ ಹಿತಬಾಂಧವರ ಮಾನಿಸುವ
ಸತೀಸಾಧ್ವಿಯರ ಶ್ರೀಪತಿ ಶರಣೆಯರ ೩

ವಾಸವಾರ್ಚಿತ ಶ್ರೀಶೇಷಗಿರಿವಾಸನ್ನ
ದಾಸ್ಯಭಾವದೊಳಿರುವ ಶರಣರನ್ನು
ಮೋಸತನದಿಂ ನೀವ್ ಪೋಗಿಸೆಣಸಿದರೆ ಅವರಿಂದ
ಘಾಸಿ ಪಡೆಯುವಿರೆಂದವ ಯಮಧರ್ಮ ನಯದಿಂದ ೪

## ೧೨೬

ಮುಳಿಯ ಬೇಡಿರಿ ಎನ್ನಪ್ಪಗಳಿರೆ ಕೇಳಿ ಪ.

ಎಳದಂಗೆ ನುಡಿದುದನು ಹಳಿವಿರೇ ಪೇಳೀ ಅ.ಪ.

ಯತಿಗಣಪ್ರಾಸ ಶ್ರುತಿತಾಳ ಲಯ ಸಂಗತಿಯ ನಾನರಿಯೆ ಮಸಿಯನುಡಿಯೆ
ಶೃತಿ ಸ್ಮೃತಿ ಪುರಾಣ ಇತಿಹಾಸ ಶಾಸ್ತ್ರಗಳ ಗತಿಮಿತಿ ತತ್ವಮದೊಂದನರಿಯೆ
ಅತಿಶಯಿತ ಪಾಂಡಿತ್ಯ ಪ್ರಭೆಯಿಂ ರಾಜಿಪರಲ್ಲಿ
ಕ್ಷಿತಿನಾಥನಾಡಿಸಿದ ಪರಿಯಿದೆಂದೆನುವೆ ವಿನಯದಲಿ ೧

ಅಪ್ಪಗಳಿರೆ ನಿಮ್ಮಡಿಯೊಳೊಪ್ಪಿಸಿರುವೀ ಕೃತಿಯ
ತಪ್ಪೊಪ್ಪುಗಳ ಸಲೆ ನೋಡಿ ನಲವಿಂ
ತಪ್ಪುಳ್ಳೊಡದನೊಪ್ಪದಿಂಸಾವರಿಸಿ ಮುಂ
ದೊಪ್ಪುತಿಹ ಜಸವನಪ್ಪುಗೊಳ್ಳಿರಿ ದಿಟದಿಂ ೨

ಕಕ್ಕುಲತೆಯುಳ್ಳೆನ್ನ ಅಕ್ಕತಂಗಿಯರಿಗಿದನು
ಅಕ್ಕರತೆಯಿಂದೊಪ್ಪಿಸಿಹೆನೆಂದರಿಯಿರಿನ್ನು
ಕಕ್ಕಸದಿ ನೋಡದಿರಿ ಧಿಕ್ಕರಿಸಿ ನುಡಿಯದಿರಿ
ಚಿಕ್ಕಮಕ್ಕಳ ನೋಡಿ ತಕ್ಕೈಸಿ ನುಡಿಗಲಿಸಿರಿ
[ಅಕ್ರೂರವರದ ಶೇಷಗಿರಿವರನೆನ್ನ
ಸುಕೃತಕೆ ಸಾಕ್ಷಿಯೆಂಬೆ ಸಾರಿ] ೩

## ೧೨೭

ಹರಿವಾಸರದ ಮಹಿಮೆಯೆನು ಅರಿತಷ್ಟು ಪೇಳುವೆನು
ತರಳರಾಡುವ ನುಡಿಯೆಂದು ಗುರುಜನರು ಮನ್ನಿಸಿರಿನ್ನು ಪ.

ಹಿಂದೆ ತಾನಜಾಮಿಳನು ಮಂದಮತಿಯಾಗಿ ಜಗದಿ
ನಿಂದಿತಾಚಾರದಲಿ ಮನವಿರಿಸಿ ನಲಿದು
ಬಂಧುಮಿತ್ರರ ನುಡಿಗೊಂದಿಷ್ಟು ಕಿವಿಗೊಡದೆ ಮನ
ಬಂದಂತೆ ಚರಿಸಿದರನು ಮದಮೋಹದಿಂದ ೧

ಮಂದರೋದ್ಧರನ ದಿನದಂದು ಮಳೆಬಂದು ತಾನವನ
ಮಂದಿರವ ನೊಳಪುಗಲು ಗಂಗೆಯಂತು
ದಂದುಗದಿನೊಂದು ಮಡದಿ ಮಕ್ಕಳಿಗಾಗಿ
ನಿಂದಂತೆ ತಾನುಪವಾಸ ಜಾಗರದಿ ಕಳೆದು ಮರುದಿನ ದ್ವಾದಶೀ ೨

ಅರುಣೋದಯದಲ್ಲಿ
ಮರಣದಾಹದಿ ಹರಿವ ನೀರ ಕುಡಿಯೇ
ಹರಿಗರ್ಪಿಸಿದ ತುಳಸಿದಳವೊಂದದರೊಳಿರೆ
ದುರಿತಕೋಟಿಗಳೆಲ್ಲ ದೂರಸಾರೆ ೩

ಅಂತ್ಯಕಾಲದೊಳ್ಬೆತಂದ ಅಂತಕನದೂತರಂ ಕಂಡು
ಕಂದನಾರಗ ಬಾರೆನುತ ಕರೆಯೆ
ಬಂದರಾಕ್ಷಣವೆ ತಾವವನ ಸಂತವಿಸೆ
ಇಂದಿರೇಶನಾಣತಿಯುಂತೆ ಕಿಂಕರರು ೪

ಅರಿಯದಾಚರಿಸಿದೊಡಂ ಹರಿವಾಸರದ ಮಹಿಮೆ
ಹರಿಪದವವಗಾಯ್ತು ಹರಿಕರುಣೆಯಿಂ
ಹರಿದಿನವ ನಿಷ್ಠೆಯಿಂದಾಚರಿಪ ಶರಣರಿಗೆ
ಪರಮಪದನಾಥನೇ ವಶನಪ್ಪನಯ್ಯಾ ೫

ಹರಿಭಕ್ತ ರುಕ್ಮಾಂಗದನ ಪರಿಭವಿಸೆ ಬರೆ ಮೋಹಿನಿ
ಹರಿದಿನವ್ರತವೆಂದು ಸರಿಯಲಾನೃಪನಂ
ತರಳ ಧರ್ಮಾಂಗದನ ಶಿರವತೆಗೆಯೆಂದೆನಲು
ವರಧರ್ಮದೇವನೇ ಕರವಿಡಿದು ಪೊರೆದಂ ೬

ದಶಮಿ ದ್ವಾದಶೀ ದಿನದಲ್ಲಿ ಅಶನವೊಂದೇಸಾರಿ ಏಕಾ
ದಶೀ ದಿನದಲ್ಲಿ ಉಪವಾಸ ಜಾಗರದಿ
ವಸುಧೆಯರಸನ ನೆನೆದು ನಲಿವ ಭಕ್ತರನು
ಕುಸುಮನಾಭನಾ ಶೇಷಗಿರಿವಾಸ ಕೈಬಿಡನೊ ೭

## ೧೨೮

ಮೇಲನೆಸಗಲಿ ನಿಮಗೆ ಮಾಲಕುಮಿ ಮನ್ನಿಸುಗೆ ಪ.

ಬಾಲಕರು ಬಯಸುವೆವು ಬಾಲೆಯರು ಹರಸುವೆವು ಅ.ಪ.

ಮಾಧವನ ದಯೆಯಿರಲಿ ಯೊಧರಿಗೆ ಜಯವಿರಲಿ
ಸಾಧನವು ಕೈಸೇರೆ ಶ್ರೀಧರನು ಮೈದೋರೆ ೧

ಸಿದ್ಧಿಸಿದಾವ್ರತವೆಂದು ಶುದ್ಧಭಾವದಿ ಬಂದು
ಬದ್ಧಕಂಕಣರಾಗಿ ಶ್ರದ್ಧೆಯಿಂ ಶಿರಬಾಗಿ ೨

ವಾಸುದೇವನ ಸ್ಮರಿಸಿ ಮೀಸಲಂ ತೆಗೆದಿರಿಸಿ
ವಾಸಪಂಥದಿ ಬೇಗ ದಾಸ್ಯಮಂ ಬಿಡಿಸೀಗ ೩

ವಿಜಯದಶಮಿಯು ನಾಳೆ ವಿಜಯಯಾತ್ರೆಗೆ ತೆರಳೆ
ವಿಜಯಸಾರಥಿಯೊಲಿದು ವಿಜಯವೀಯುವನಹುದು ೪

ಘನತೆಗೇರುವ ನಮ್ಮ ವನಿತೆಯರೆ ನಿಮ್ಮ
ಮನೆತನವ ಬೆಳಗಿಸಿರೆ ಇನಿಯರನು ಹುರಿಡಿಸಿರೆ ೫

ಪೌರುಷವು ಪುಟ್ಟುವೋಲ್ ವೀರರಹುದೆನ್ನುವೋಲ್
ವೀರಮಾತೆಯರೆ ನೀಂ ವೀರಪುತ್ರರ ಪಡೆಯಿರೆ ೬

ಮಕ್ಕಳಂ ತಕ್ಕೈಸಿ ತಕ್ಕಂತೆ ನುಡಿಗಲಿಸಿ
ಕಕ್ಕುಲಿತೆಯಿಂ ನೋಡಿ ಅಕ್ಷರಸ್ಥರ ಮಾಡಿ ೭

ಮಹಿಳೆಯರೆ ಮಾದರಿಯ ಗೃಹಿಣಿರಹೆ ಶಾರದೆಯ
ಮಹಿಮೆಯದು ಕರಮೆಸೆಗೆ ವಿಹಿತಮದು ನಿಮ್ಮೊಳಗೆ ೮

ದೇಶದೇಳಿಗೆಯಲ್ಲಿ ಆಸೆ ನಿಮಗಿರುವಲ್ಲಿ
ದೇಶೀಯವ್ರತಧರಿಸಿ ಐಶ್ವರ್ಯಮಂ ಬೆಳಸಿ ೯

ಪತಿ ಸುತ ಸಹೋದರರ ಹಿತವೆಳಸಿ ಬಾಂಧವರ
ಮತವರಿತು ನಡೆಯಿಸಿರೆ ವ್ರತಸಾಂಗವೆನ್ನಿಸಿರಿ ೧೦

ಇನ್ನೇಳಿ ಕೈನೀಡಿ ಸನ್ಮಾನ್ಯೆಯರೆ ನೋಡಿ
ಧನ್ಯವಾದವ ಮಾಡಿ ಮನ್ನಿಸಿರೆ ದಯೆಗೂಡಿ ೧೧

ಬಾಲಕರು ಬೇಡುವರು ಮೇಲೆನಿಪ ಮಮತೆಯನು
ಶಾಲುಸಕಲಾಸೆಯನು ಬಾಲಕರು ತಾ ಬಯಸರು ೧೨

ತಾಯಿಯರೆ ನೀವಿತ್ತ ತಾಯ್ನೊಲವನಿತ್ತ
ತಾಯೆಂದುಕೊಳ್ಳುವರು ಈಯಣುಗರ್ ಕೇಳಿದನು ೧೩

ಕನ್ಯೆಯರು ಹಾಡುವರು ಕನ್ನಡವ ಪಾಡುವರು
ಕನ್ನಡಕೆ ಜಯವಾಗಲೆನ್ನುವರು ನಲವೀಗೆ ೧೪

ಹರಕೆಯನು ಸಲ್ಲಿಸಿರೆ ತರಳರಂ ಮನ್ನಿಸಿರಿ
ಮರಳಿ ಬಾರೆಂದೆನಿರೆ ಹರುಷದಿಂ ಬೀಳ್ಕೊಡಿರಿ ೧೫

ವರಶೇಷಗಿರಿವಾಸ ಕರುಣದಿಂದಲೆ ಲೇಸ
ಧರೆಗೆಲ್ಲ ಸಂತೋಷ ದಯೆಗೆಯ್ಯೆ ಸರ್ವೇಶ ೧೬

# ಭದ್ರ ಗೀತಾವಳಿ (ಮದುವೆ ಹಾಡುಗಳು)

## ೧

ಜಯಜನಕಜಾಮಾತ ಜಯಜಾನಕೀ ಕಾಂತ
ಜಯದುರಿತ ಘನವಾತ ಮದನ ತಾತ
ಜಲಜಾಪ್ತಸಂಕಾಶ ವಿಲಸದ್ಗುಣಾವೇಶ
ಲಲಿತ ಸನ್ಮೃದುಭಾಷ ಪರಮಪುರುಷ
ನತಕಾಮಸುರದ್ರುಮ ದಿತಿಜಾಬ್ಜಕುಲಸೋಮ
ಕ್ಷಿತಿನಾಥ ರಘುರಾಮ ಸಮರಭೀಮ
ಪಿತೃವಾಕ್ಯಪರಿಪಾಲ ಸತ್ಯವ್ರತ ಸುಶೀಲ
ಮೃತ್ಯುಂಜಯ ವಿನುತ ಮಹಿತ ಚರಿತ

ಭವಭಯಾಂಭುದಿ ತರಣ ಭಕ್ತಭರಣ
ಪವನನಂದನ ಸೇವ್ಯ ದೇವದೇವ
ಸುವಿಮಲ ಯಶಶ್ಚಂದ್ರ ರಾಮಚಂದ್ರ
ಪರಿಪಾಹಿ ಶ್ರೀಶೇಷಗಿರಿವಿಭೂಷ

## ೨

ಸಖಿಯೆ ಲಾಲಿಸು ಎನ್ನ ಸಖನ ವರ್ಣಿಪೆ ಮುನ್ನ
ಸುಖದಾತ ಸುಂದರನ ಪ್ರಾಣಸಖನ
ಜಡನಾಗಿ ತಾ ನಿಂದು ಜಲಜಸಂಭವನಂದು
ಕಡುದೈನ್ಯದಿಂದೆರೆಯಲೊಡನೆ ಬಂದು
ವೇದಗಳ್ಳನು ಪೋದ ಹಾದಿಯನೆ ತಾ ಪಿಡಿದು
ವಾರ್ಧಿಯೊಳ್ಮುಳುಗಿ ಸಮ್ಮೋದದಿಂದ
ಕ್ರೋಧಿರಕ್ಕಸನುರವ ಭೇದಿಸುತೆ ವೇದವ
ನ್ನಾದರಿಸಿ ತಂದೀಯುತ ಜಗಕೆನಲವಿಂ

ನಿರ್ಮಾಣ ಕಾರ್ಯದೋಳ್ ನಿಯಮಿಸಿದನಾ
ಸ್ವರ್ಣಗರ್ಭನನಂತು ಮೀನನಾಗಿ
ಅರ್ಣವದಿ ನೆಲೆಯಾಗಿ ನಿಂತ ಸುಗುಣ
ಘನ್ನಶೇಷಾದ್ರೀಶನೆನ್ನರಮಣ

೩

ಸರಸಿಜಾಯತನೇತ್ರ ಸರಿಯಾರೆ ಧರೆಯೊಳಗೆ
ಪರಮಕಾರುಣಿಕ ಎನ್ನೆರೆಯನಿವಗೆ
ಸುರರು ದಾನವರಂದು ಶರಧಿಮಥನವ ಮಾಡೆ
ಗಿರಿಯ ಭಾರವ ವಹಿಸೆ ಮೊರೆಯನಿಡಲು
ಪೆರ್ಮೆಯಿಂ ಮೈದೋರಿ ಕೂರ್ಮಾವತಾರದಿಂ
ಮೇರುಗಿರಿಯನೆಪೊತ್ತ ಧೀರನಿವನೆ
ಅಪರಾಧವ ಪರಿಹರಿಸಿ ಕಾಪಿಡೆಂದೊರಲುವರ

ಕೈಪಿಡಿದು ಕಾಪಾಡುವಾಪ್ತ ಬಂಧು
ವಂದಾರು ಮಂದಾರನಮರವಿನುತ
ಇಂದಿರಾರಮಣ ನರವಿಂದನಯನ
ಬೃಂದಾರಕಾಂತಿ ಗರ್ವಭಂಗ ಕಂದರ್ಪಜನಕ ಶೇಷಾದ್ರಿನಾಥ

೪

ಆದಿವರಾಹನೇ ಆದಿತ್ಯಸನ್ನಿಭನೆ
ಆದ್ಯಂತರಹಿತನೆ ಸತ್ವಮಯನೆ
ಭವರೋಗ ಭೇಷಣಾಸಕ್ತ ನಾರಾಯಣ
ಭೂರಮಣ ಭಯಹರಣ ಕಲಿತಸುಗುಣ
ಧೀರ ದುರಿತವಿದೂರ ಸಾರ ಜಗದಾಧಾರ
ವಾರಾಶಿಜಾಗಾರ ವೇದಸಾರ
ಕನಕಾಕ್ಷ ಮದಶಿಕ್ಷ ಅನಿಮಿಷಾಧಿಪ ಪಕ್ಷ
ದಾನವಾಳಿವಿಪಕ್ಷ ಶರಣರಕ್ಷ

ಅನಂತ ಕಲ್ಯಾಣಗುಣಾಪ್ರಮೇಯ
ಸನಕಾದಿ ಮುನಿನಿಕರವಂದ್ಯ ಚರಣ
ವನಜಾಕ್ಷ ಶ್ರೀಶೇಷಶೈಲಧಾಮ
ಮನ್ಮೋಹನಾಂಗ ಪರಿಪಾಹಿರಂಗ

೭

ನಕ್ತಂಚರವಿದಾರಿ ಭಕ್ತವತ್ಸಲಶೌರಿ
ವ್ಯಕ್ತಾವ್ಯಕ್ತನಮೋ ವಿಶ್ವಕರ್ತ
ಪಾಹಿ ತ್ರೈವಿಕ್ರಮ ಪರಮಪಾವನನಾಮ
ಅಹಿತಸಂಕುಲಭೀಮ ಪೂರ್ಣಕಾಮ
ಬಲಿಮಂದಿರದ್ವಾರ ತಲನಿಲಯ ಶ್ರೀಧರ
ಜಲಧಿಸಮಗಂಭೀರ ವರದ ಧೀರ
ಪಾಕಶಾಸನ ಪಕ್ಷ ನಾಕಾರಿ ಕುಲಶಿಕ್ಷ
ಶ್ರೀಕಲಾಂಕಿತವಕ್ಷ ಶರಣ ರಕ್ಷ

ಪಂಕಜಾಸನ ಪೂಜಿತಾಂಘ್ರಿಯುಗಳ
ಪಂಕಜೇಕ್ಷಣ ಪಾಹಿ ಪದ್ಮನಾಭ
ಓಂಕಾರ ರೂಪ ಶ್ರೀಶೈಲ[ಗಿರಿ]ಧಾಮ
ಕಿಂಕರಾಭರಣ ಭೋ ಭದ್ರಧಾಮ

೮

ಭೃಗುವಂಶಸಂಭೂತ ಜಗತ್ರಯ ವಿಖ್ಯಾತ
ಅಘದೂರ ಪರಶುಧರ ಧೈರ್ಯಸಾರ
ಪರಿಹಾರ ಭಕ್ತಜನಮಂದಾರ
ಭೂಭುಜತರುಕುಠಾರ ಅನುಸಾರ
ರುಚಿಕನಂದನ ಬಾಲ ಶೌಚ ಸತ್ಯಸುಶೀಲ
ದ್ವಿಜಸಂಘ ಪರಿಪಾಲ ದಾನಶೀಲ
ಸಹಸ್ರಭುಜ ವಿದಾರ ಅಹಿತಜನ ಮದಹರ
ವಿಹಿತಪಥ ಸಂಚಾರ ಪಾಹಿಸುಕರ

ಖಂಡಲಾರ್ಚನಪಾತ್ರ ನುತಚರಿತ್ರ
ದ್ವಾರಕಾಪುರಿವಾಸ ಧರ್ಮರಕ್ಷಣದೀಕ್ಷ
ವೈರಿಶಿಕ್ಷಣದಕ್ಷ ಶ್ರೀಕಟಾಕ್ಷ

ದ್ರೌಪದೀ ಮಾನದಾ ಪಾಹಿವರದ । ತಾಪತ್ರಯ ಹರಣ
ಭಕ್ತ್ಯಾಧೀನ । ಆಪನ್ನಿವಾರಣಾಮೋಘ ವಚನ
ಭೋ ಪರಂಧಾಮ ಶ್ರೀ ಶೈಲಧಾಮ

೧೧

ಮಾನಿನೀ ವ್ರತಹರಣ ದೀನರಕ್ಷಣ ನಿಪುಣ
ದಾನವ ಕುಲಾಹನನ ವಸನಹೀನ
ತ್ರಿಪುರಾರಿ ವಂದಿತ ತಪ್ತಹೇಮಸುಗಾತ್ರ
ಸುಪವಿತ್ರ ಸುಚರಿತ ಭೇದರಹಿತ
ಮೃತ್ಯುಭಯ ವಿರಹಿತ ನಿತ್ಯ ನಿಷ್ಕಲ್ಮಷ
ಸತ್ವಮಯ ಸ್ವರೂಪ ಬುದ್ಧರೂಪ
ಆನಂದಪರಿಪೂರ್ಣ ಅಬ್ಜಪತ್ರೇಕ್ಷಣ
ಆದ್ಯಂತಕಾರಣ ಅಪಾರಮಹಿಮ

ಭೂತದಯಾಪರ ಧರ್ಮಸಾರ
ಪೂತ ಸದ್ಗುಣಲಸಿತ ದುರಿತದೂರ
ಧಾತ ಸುಕವಿಜನ ಚೈತನ್ಯದಾತ
ಖ್ಯಾತ ಶೇಷಾದ್ರಿವರ ಪಾಹಿಸುಕರ

೧೨

ಜಲಜಾಪ್ತ ಸಂಕಾಶ ಲಲಿತ ಸನ್ಮೃದುಹಾಸ
ಕಲಿಕಲುಷ ವಿಧ್ವಂಸ ಪರಮಹಂಸ
ಶರಣಜನ ಸಂರಕ್ಷ ಸುರವಿರೋಧಿ ವಿಪಕ್ಷ
ಧರ್ಮರಕ್ಷಣ ದೀಕ್ಷ ಶ್ರೀಕಟಾಕ್ಷ

ಸರಸಿಜಾಯತನಯನ ಶರದಿಂದುನಿಭವದನ
ದುರುಳ ಮ್ಲೇಂಛನಿಹನನ ತುರಗವದನ
ಧುರಧೀರ ಶ್ರುತಿಸಾರ ಸುರುಚಿರಾಂಗದ ಹೀರ
ವರಹಾರ ಕಂಧರ ಭಯವಿದೂರ

ಕಮಲಾಸನಾದಿ ಸಂಸೇವ್ಯಮಾನ
ಅಮರಸಂಕುಲತೋಷ ದಿವ್ಯವೇಷ
ವಿಮಲ ಶೇಷಾದ್ರೀಶ ಶ್ರೀನಿವಾಸ
ಮಮ ದೇವ ಪರಿಪಾಹಿ ಪರವಾಸುದೇವ

೧೩

ಸಾಗರ ಸ್ಥಿತನಿಲಯ ಭೋಗೀಶ ಕೃತಶಯ್ಯ
ವಾಗೀಶಸಂಸೇವ್ಯ ಭಜಕಭಾವ್ಯ
ಮುನಿಮನೋಂಬುಜಭೃಂಗ ಘನನೀಲ ಮೃದುಲಾಂಗ
ಅನಘ ಕರುಣಾಪಾಂಗ ಮಂಗಳಾಂಗ
ಆದಿನಾರಾಯಣಾ ಆನಂದ ಪರಿಪೂರ್ಣ
ಆಪನ್ನಿವಾರಣಾ ಅಪ್ರಮೇಯ
ಸುರವಿರೋಧಿಕೃತಾಂತ ಸುರರಾಜವಂದಿತ

ಧರಣೀ ಸುರಾರ್ಚಿತ ದಿವ್ಯಚರಿತ
ಕ್ಷೀರಾಬ್ಧಿಜಾರಮಣ ದೇವ ದೇವ
ಮುರಾರಿ ವಿನುತಾದ್ಭುತ ಪ್ರಭಾವ ಸ್ಮರತಾತ ಸ್ಥಿತಿಕರ್ತ
ನಿತ್ಯವಿಭವ ವರಶೇಷಗಿರಿವಾಸ ಶ್ರೀನಿವಾಸ

೧೪

ಕಾಮಾರಿನುತನಾಮ ಶ್ಯಾಮಸುಗುಣಾರಾಮ
ಕಾಮಿತ ಸುರದ್ರುಮ ಸತ್ಯಕಾಮ
ಅಜನೃಪಾತ್ಮಜ ಬಾಲ ರಜನೀಚರಕಾಲ

ರಜನೀಕರಸುಫಾಲ ಸತ್ಯಶೀಲ
ಪಾದಾಪಹೃತಶಾಪ ಪರಮಪಾವನ ರೂಪ
ಪದ್ಮಾಪ್ತ ಕುಲದೀಪ ವಿಶ್ವರೂಪ
ವಾರಿಜೋದ್ಭವ ತಾತ ವಾರಿಜಾಯತನೇತ್ರ
ವಾರಿಜಾಪ್ತಜ ಮಿತ್ರ ನುತಚರಿತ್ರ

ಪರಮಕರುಣಾಪೂರ ಸತ್ವಸಾರ
ಧರಣಿಜಾ ಮನೋಹರ ಸಮರಶೂರ
ಶರಣಜನರಕ್ಷ ಶ್ರೀವತ್ಸವಕ್ಷ
ವರಶೇಷಗಿರಿವಾಸ ಪಾಹಿಶ್ರೀಶ

## ೧೫

ಕ್ಷೀರಾಬ್ಧಿಜಾರಮಣ ಕ್ಷೀರಾಂಬುನಿಧಿಶಯನ
ಶ್ರೀರಮಾಮಣಿ ಸದನ ಗರುಡಗಮನ
ಕಾಕುತ್ಸ್ಥವಂಶಾಬ್ಧಿ ರಾಕೇಂದು ಗುಣನಿಧೀ
ಪಾಕಾರಿಮುಖದೇವ ನಿಕರಜೀವ
ನಿಟಿಲಾಕ್ಷನುತನಾಮ ಜಟಾವಲ್ಕಲಧಾಮ
ತಾಟಕಾಂತಕರಾಮ ಸಮರಭೀಮ
ಇಂದುಸನ್ನಿಭವದನ ಕುಂದಕುಟ್ಮಲರದನ
ಇಂದೀವರ ಸುನಯನ ಕನಕವಸನ

ಕವಿಜನಮನೋಲ್ಲಾಸ ಶಶಿಸುಹಾಸ
ಪವನನಂದನ ಸೇವ್ಯ ದೇವದೇವ
ಭವಭೀತಿಹರ ಶೇಷಶೈಲನಿಲಯ
ಸುವಿಮಲಯಶಶ್ಚಂದ್ರ ರಾಘವೇಂದ್ರ

## ೧೬

ಅಕ್ಷವಿದ್ಯಾನಿಪುಣ ಅಕ್ಷಯಾತ್ಮಕ ಸುಗುಣ
ಅಕ್ಷಯತರ ಸುವಚನ ಲಸಿತವದನ
ದ್ಯೂತೋದ್ಯೋಗತರ ಖ್ಯಾತ ಸುಗುಣೋಪೇತ
ದೈತ್ಯ ಸಂಕುಲಘಾತ ಪ್ರಾಣನಾಥ
ನರಸೂತ ಸಚ್ಚರಿತವರದಾತವಿಖ್ಯಾತ
ಸುರಸಿದ್ಧ ಸಂಪ್ರೀತ ಮಾರತಾತ
ಗೋಪಾಲ ಕುಲರತ್ನದೀಪ ಗೋಕುಲ ಶರಣ
ಗೋಪಿಕಾಜನಮನದ ತಾಪಶಮನ

ಲೀಲಾ ವಿಭೂತಿಯುಗನಿರತ ಸುಹಿತ
ನೀಲಾಂಬರಾವರಜ ರಾಜರಾಜ
ಕಾಲಾಂಬುದಾಕಾರ ಖಲಕುಠಾರ
ಪಾಹಿಮಾಂ ಶ್ರೀಶೇಷಗಿರಿವಿವಿಭಾಕ್ಷ

## ೧೭

ಮಂದರೋದ್ಧಾರ ಮುಚುಕುಂದವರದ ಮುಕುಂದ
ಇಂದಿರಾನಂದ ಗೋವಿಂದ ವರದ
ಕಂದನತಿ ದೈನ್ಯದಿಂ ತಂದೆ ಬಾರೆನ್ನಲಾ
ನಂದದಿಂ ಭದಿಂ ಬಂದೆ ಭರದಿಂ
ನಂದಾತ್ಮ ಸಂಜಾತನೆಂದೆನಿಸಿ ನಲವಿನಿಂ
ಬೃಂದಾವನದಿ ನಿಂದೆ ವರದನೆಂದೆ
ಅಂದಂತು ಪಾಂಚಾಲಿಗಂದದಿಂ ದಕ್ಷಯಾ
ನಂದಮಂ ಕೃಪೆಗೆಯ್ದುದರರೆ ಪಿರಿದು

ಅಚ್ಚುತಾನಂತ ಚಿದ್ರೂಪ ವಿಭವ
ಪಚ್ಚಕರ್ಪೂರದಿಂ ಮಿಳಿತವಾಗಿ

ಪೆರ್ಚೆ ಪರಿಮಳ ವೀಳ್ಯಮಿದನುಕೊಂಡು
ಮೆಚ್ಚಿ ಪೊರೆಯೆನ್ನ ಶೇಷಾದ್ರಿರನ್ನ

೧೮

ಮಣಿಹಾರಮಂ ತೊರೆದು ದನುಜೇಶನಾಕರುಳ –
ನಣಿಯ ರದಿ ಧರಿಸಿರ್ಪನನಘನಿವಗೆ
ವರರತ್ನಹಾರಮಂ ಹರಿಸದಿಂದಳವಡಿಪೆ
ನರಹರಿಯ ಕಂಧರಂ ಮೆರೆಯಲರರೆ
ಜಪಸರವನಾಂತೆಸೆವ ಸುಪವಿತ್ರಗಿಂದಿಡುವೆ
ವಿಪುಲ ಮುಕ್ತಾಸರವನುಪಮೆಮೀರೆ
ಕಮನೀಯಗಾತ್ರಂಗೆ ರಮಣೀಯ ಶ್ಯಾಮಲಗೆ
ಕಮಲಮಾಲೆಯನಲಂಕರಿಪೆನಿಂದು
ಧುರಧೀರನಂ ವೀರ ಶೌರ್ಯನಿಧಿಯ
ಧರಣೀ ಸುರಾಳಿ ಸಮ್ಮೋದಕರನ
ಶರಣಾಗತರಕ್ಷನ ನಮಿತಬಲನ
ವರಶೇಷಗಿರೀಶನಂ ನಮಿಪೆನಿನ್ನು

೧೯

ನಗಮಂ ನಖಾಗ್ರದಿಂ ನೆಗಪಿ ಸಮ್ಮೋದದಿಂ
ಜಗಕೆ ಚಿತ್ರವ ತೋರ್ದ ಜಗದಧೀಶ
ಗಾರಡಿಗತನದಿಂದ ಭೂರಿ ಸಂಭ್ರಮವಾಂತು
ಕ್ರೂರಫಣಿಗರ್ವಮಂ ಭಂಗಗೈದು
ಶಿಶುರೂಪದಿಂದಮೆ ನಿಶಿಚರರ ಸದೆವಡೆದ
ವಸುದೇವನಂದನಗೆ ವಿಶ್ವಪಿತಗೆ
ಅಣುರೇಣು ತೃಣಕಾಷ್ಠ ಪೂರ್ಣನಾಗಿರುತಿರ್ಪ
ಪ್ರಾಣಕಾಂತಗೆ ನಾನು ಮಣಿವೆ ಮುನ್ನ

ಮುತ್ತಿನಾರತಿಯೆತ್ತಿ ನಲಿವೆನೆಂದು
ಸತ್ಯವಿಕ್ರಮನನ್ನು ಸಾರಿಬಂದು
ಭಕ್ತಿಭಾವದಿ ನಮಿಪೆ ನುತಿಸಿ ಮನದಿ
ಕರ್ತೃಶೇಷಗಿರೀಶನೆನುವೆ ಮುದದಿ

೨೦

ನಾರಗ ಎನುತಂದು ಸಾರಲಾ ನುಡಿಕೇಳಿ
ಆರಯ್ದು ಕಯ್ವಿಡಿದು ಕಾಯ್ದೆ ದ್ವಿಜನ
ಗೋವಿಂದ ಪೊರೆ ಎಂದು ಗೋಳಿಟ್ಟಗಜರಾಜಗಾ
ದಿವ್ಯದರ್ಶನಾನಂದಮಾಯ್ತು
ಅಕ್ಷಯನೆ ಕಾಪಿಡೆಂದಾಕ್ಷಣವೆ ಪಾಂಚಾಲಿ
ಗಕ್ಷಯಾಂಬರಗಳಿಂ ರಕ್ಷೆಯಾಯ್ತು
ಪಾರ್ಥಸೂತನೆ ನಿನ್ನನರ್ಥಿಯಿಂ ಕೆಲಸಾರ್ದು
ಪ್ರಾರ್ಥಿಸುತ್ತಿರ್ಪೆನ್ನೈ ಪರಮಪುರುಷ
ವರಶೇಷಗಿರಿನಿಲಯ ಸುಗುಣವಲಯ
ಶರದಿಂದು ನಿಭವದನ ಚತುರವಚನ
ಸುರವೈರಿಕುಲ ದಮನ ಗರುಡಗಮನ
ಪರಿಪಾಹಿ ಮಮದೇವ ಸುಪ್ರಭಾವ

೨೧

ಶರಣಜನಮಂದಾರ ಮುರದಾನವವಿದಾರ
ಕರವಿಡಿದು ಕಾಪಿಡೈ ಕಮಲನಾಭ
ಧರೆಯೊಳಾರಿರ್ಪರೈ ಪರಮಸತ್ವಾತ್ಮರೀ
ಪರಿಯ ನೋಡಲು ನಿನಗೆ ಸರಿಯನರಿಯೆ
ಮೂರಡಿಯ ನೆವದಿ ನೀನಾರಯ್ದು ಭೂಮಿಯಂ
ಧಾರಾವಿಧಿಯಿನಿತ್ತ ದೈತ್ಯವರನ
ಶಿರಮೆಟ್ಟಿ ಪಾತಾಳ ಕುಹರದೊಳ್ ಸೆರೆವಿಡಿದು
ಪರಮ ಜಾಗರದಿಂದ ಕಾಪುಗುಡುವೈ

ಕರಿರಾಜವರದ ಲಕ್ಷ್ಮೀವಿನೋದ
ಕರುಣಾಳು ನೀನೆಂದು ತಿಳಿದೆ ಮನದೆ
ಭರದಿಂದ ಮೈದೋರು ಮುದುವ ಬೀರು
ವರಶೇಷ ಗಿರಿನಿಲಯ ಸುಗುಣವಲಯ

## ೨೨

ಕುಲಕೆ ತಕ್ಕ ಸ್ವರೂಪ ಚಲುವಿಗೊಪ್ಪುವ ವಿದ್ಯೆ
ಕಲೆಗೆ ಸಲ್ಲುವ ಸುಗುಣ ಭಳಿರೆ ನಿಪುಣ
ಕಿರುಕುಳದೆ ಕೈ ನೀಡಿ ಕರೆಕರೆಯ ತಂದೊಡ್ಡಿ
ಹರಿಸವಾನುವಮೋಡಿ ವರನಗಾಡಿ
ಜೂಜುಗಾರರಿಗೆರೆಯ ಮೋಜಿನೋಳ್ ಸಮನರಿಯ
ಸೋಜಿಗಂ ಮಿಗೆತೋರ್ಕುಮಿನಿತುಸೊರ್ಕು
ನಿಶಿಚರಾಂತಕನೆನುವ ಪೆಸರಾಂತುಮೀತೆರದ
ವಿಷಮವರ್ತನದಿ ಸಂತಸವ ಪಡುವ
ಪರಿಯಿದಚ್ಚರಿಯಾಗಿ ತೋರ್ಕುಮೆನಗೆ
ಪರಿಪರಿಯ ಚಿಂತೆಗಾಕರಮಿದಾಗೆ
ಉರಿಯುತಿಹುದೀಬಗೆಯೊಡಲ ಬೇಗೆ
ವರ ಶೇಷಗಿರೀಶನೆ ಶರಣನೆನಗೆ

## ೨೩

ಅನಘಸಂಪದನೆಂದು ಮನದೊಳಗೆ ನಲಿದಿಂತು
ಜನಕನಿತ್ತನು ಎನ್ನ ನಿನಗಿಂದು
ದಾನಕ್ಕೆ ಕೈನೀಡಿ ದಾನಮಂ ತಾಂ ಬೇಡಿ
ದಾನಿಯಂ ಪಾತಾಳಕೀಡು ಮಾಡಿ
ಮಾನಾಭಿಮಾನವಿಂತೇನೇನುಮಿಲ್ಲದೆಯೆ
ದಾನವನ ಮನೆಗಾವನೇನ ಪೇಳ್ವೆ
ತಿರುಕ ಹಾರುವನಿವಗೆ ಅರಸಿಯಾನಾದೆನೇ
ಮರುಗಲ್ಕೆ ಫಲವೇನೊ ಅರಿಯೆನಿನ್ನು

ಸಟೆನುಡಿಯಿನೆಲ್ಲರಂ ಮರುಳುಗೊಳಿಪ
ಕುಟಿಲಗಾರನದೆಂತು ಸುಖವಪಡಿಪ
ಚಟುಲಮತಿಕೇಳೆನ್ನಮನದಿಷ್ಟ ಸಲಿಪ
ಸಟೆಯಲ್ಲವೆನ್ನೆರೆಯ ಶೇಷಗಿರೀಶಂ

೨೪

ಚಲುವನಿವನೆಂದೆನುತೆ ಪಲತೆರದೆ ಬಣ್ಣಿಸುತೆ
ನಲಿದಿತ್ತ ಹಲುಗಿರಯಗೆನ್ನ ತಾತ
ಕೆಂಗಣ್ಣು ಕಿಡಿರೋಷ ಸಿಂಗದಾಮುಖಭಾವ
ಭಂಗಿಯನು ಕುಡಿದವೋಲ್ ಕಂಡುಬರುವ
ರುಧಿರ ಪಾನವಮಾಡಿ ಅಧರವಿದು ಕೆಂಪಾಗಿ
ವಿಧವಿಧದಿ ಹೂಂಕರಿಸಿ ಬೆದರಿಸುತಿಹ
ವರರತ್ನಹಾರವನು ತೊರೆದು ರಕ್ಕಸನುರವ
ಹರಿದು ಕರುಳನು ಧರಿಸಿ ಮೆರೆವನಕಟ

ಘೋರವದನನೆ ಎನಗೆ ನೀರನಾಗೆ
ಹಾರಮಳವಡಿಸಿದೆನೆ ಕುಪಿತಗಿವಗೆ
ಸಾರೆ ಫಲವೇನಿನ್ನು ನಡೆದೆಬಗೆ
ಧೀರಶೇಷಗಿರೀಶನೊಡೆಯನೆನಗೆ

೨೫

ಅತ್ತೆಯಣುಗನು ಮತ್ತೆ ಸತ್ಯಾತ್ಮನಿವನೆನುತೆ
ಚಿತ್ತದೊಳು ನೆರೆನಂಬಿ ಪತ್ನಿಯಾದೆ
ಪಲಜನರನೆರೆಬೇಡಿ ಪಲಜನರನುರೆ [ವಧು]ಕಾಡಿ
ಪಲಸತಿಯರ ಕೂಡಿದಿವನಗಾಡಿ
ಅರಿತು ಪೇಳುವರುಂಟೆ ಸರಸಿಯಿವನೆಂದೆನುತೆ
ನೆರೆದು ಜೀವಿಪರುಂಟೆ ಅರರೆ ತಂಟೆ
ಮೋಸಗಾರರೊಳಗಗ್ರೇಸರನು ಈ ವರನು
ವಾಸುದೇವನು ಬಂಧುದ್ವೇಷಿಯಿವನು

ಸ್ತ್ರೀಯರನದಾವಗಮನದೆನಿತೊ ಜರೆವ
ಮಾಯೆಯಿಂದವರೊಡನೆ ಕೂಡಿಮೆರೆವ
ಬಾಯೊಳಗೆ ಸುಬ್ರಹ್ಮಜ್ಞಾನ ಮೊರೆವ
ಜೀಯ ಶೇಷಗಿರೀಶತಾನೆಂದು ನಲಿವ

## ೨೬

ಮಾತಿನೊಳು ಕಡುಜಾಣ ನೀತಿಯೆಂಬುದ ಕಾಣ
ಪ್ರೀತಿಯಿಲ್ಲದ ಪ್ರಾಣನಾಥನಮ್ಮ
ಕಪಿಜನಗಳೊಡನಾಡಿ ಚಪಲಚಿತ್ತನುಮಾದ
ಕೃಪೆಯಿಲ್ಲವೆಳ್ಳನಿತು ಕೃಪಣನಕಟ
ಸ್ತ್ರೀಹತ್ಯ ನರಹತ್ಯ ಬ್ರಹ್ಮಹತ್ಯವಗೈದ
ಸಾಹಸಿಯೆದೇನೆಂಬೆ ಘನನಿತಂಬೆ
ಪಕ್ಷಪಾತಿಗಳೊಳಗೆ ಈಕ್ಷಿಸಲ್ ಧರೆಯೊಳಗೆ
ದಕ್ಷನೀತಗೆ ಸರಿಯೆ ಪೇಳೆ ಸಖಿಯೆ

ಶರವೊಂದು ನುಡಿಯೊಂದರಿಂದ ನಲಿವ
ತಿರುಕ ಹಾರುವರೊಡನೆ ಚರಿಸುತಿರುವ
ಪರಮಸಾತ್ವಿಕ ಮೂರ್ತಿಯೆಂದು ನುಡಿವ
ವರಶೇಷಗಿರಿವಾಸ ನೆಂದುಮೆರೆವ

## ೨೭

ದೃಢಚಿತ್ತದೊಳಗೆನ್ನ ಒಡೆಯನೀತಗೆ ಮುನ್ನ
ಪಡಿಯೆನಿಪರಿನ್ನುಂಟೆ ಪೊಡವಿಯಲ್ಲಿ
ಜನವಾರ್ತೆಯನೆ ಕೇಳಿ ವನಿತೆಯೊಳು ಖತಿತಾಳಿ
ಇನಿತು ಕಾಡಿದ ಚಾಳಿಯೊರೆವೆ ಕೇಳಿ
ಮಡಿವಳನ ನುಡಿಗಾಗಿ ಕಡುಮೂರ್ಖ ತಾನಾಗಿ
ಅಡವಿಗಟ್ಟುವರೇನೆ ಮಡದಿಯನ್ನೆ

ಧರ್ಮಪತ್ನಿಯುಮಂತು ಪೂರ್ಣಗರ್ಭವನಾಂತ
ಅರ್ಧಾಂಗಿಯನ್ನುಳಿದ ನಿರ್ದಯಾತ್ಮ

ದಯೆಯೆಂಬುದಿವನಲ್ಲಿ ತೋರದಿಲ್ಲಿ
ಪ್ರಿಯರಾರು ಮತ್ತಿವಗೆ ಧಾತ್ರಿಯಲ್ಲಿ
ಭಯವಿಲ್ಲ ಮಾತಿನೊಳು ನಯವದಿಲ್ಲ
ಜಯಶೇಷಗಿರಿವಾಸನೆನ್ನನಲ್ಲ

## ೨೮

ಹೆತ್ತವರಿಗೆರವಾಗಿ ಹೆರವರಿಗೆ ಮಗನಾಗಿ
ಚಿತ್ತದೊಳು ನಲಿವವನೆ ಮತ್ತನಿವನೆ
ತುಂಟತನದೊಳಗೆ ಸರಿಯುಂಟೆ ಈತಗೆ ಜಗದಿ
ನಂಟರನು ಗೋಳಿಡುವ ತುಂಟನಿವನೆ
ವಂಚಕರಿಗೆಲ್ಲರಿಗೆ ಸಂಚಕಾರವ ಕೊಡುವ
ಚಂಚಲಾಕ್ಷಿಯರನ್ನೆ ವಂಚಿಸಿರುವ
ಮಾನವರೊಳಿಂತಪ್ಪ ಮಾನಿಯಂ ನಾನರಿಯೆ
ಮೀನಾಂಕ ಸಮರದೊಳ್ ಜಾಣನಿವನೆ

ಜಾರರೋಳ್ ಕಡುಶೂರ ಮಾಯಕಾರ
ಚೋರತನದೊಳು ವೀರ ಭಯವಿದೂರ
ದಾರಿಕಾಯಲು ಧೀರ ಧೈರ್ಯಸಾರ
ಮಾರಪಿತ ಶೇಷಗಿರಿವರನೆ ನೀರ

## ೨೯

ಜನಕನೇನೆನುತೆನ್ನ ಘನವಂತನಿವನೆಂದು
ಮನದಂದು ಬಳಿಸಂದು ಕೊಟ್ಟನಿಂದು
ವೇಷವನು ನೋಡಿದೊಡೆ ಖುಷಿಯಂದಮಾಗಿಹುದೆ
ಭಾಷೆಯಿಂ ಭಾವೆಯೊಲು ಭಾಸಮಹುದೆ

ಚರ್ಯೆಯಿಂ ಭೂಭುಜನ ಪರ್ಯಾಯದಿಂದಿಹನೆ
ಸಾರ್ವಭೌಮನುಮಹನೆ ವೀರ್ಯದಲ್ಲಿ
ವನವಾಸಿಯಿಂತಿವಗೆ ಧನುದಿದ್ದುಫಲವೇನು
ವನಿತೆಯನು ಸಂತವಿಸ ಲರಿಯದವನು

ಹೇಸದಾ ಸ್ತ್ರೀಭುಕ್ತ ಶೇಷವುಂಡು ಬೇಸರದೆ
ವನಮೂಲ ಫಲವತಿಂದು
ವಾಸಿಪಂಥದೊಳಾನೆ ಶೂರನೆಂದು
ಘೋಷಿಸುವ ಶೇಷಗಿರಿವಾಸನೆಂದು

## ೩೦

ನುಡಿಯಲ್ಲಿ ರಸತೋರೆ ಉಡಿಯೊಳಗೆ ವಿಷಮಿರೆ
ನಡೆಯಲ್ಲಿ ವಕ್ರಮಿರೆ ನೋಡಲರರೆ
ಅನೃತೋಕ್ತಿಯಿಂತಿವಗೆ ಅಮೃತಾನ್ನದಂತಾಗೆ
ಸೂನೃತದಿ ಚಿತ್ತಮಿಗೆ ಬಹುದು ಹೇಗೆ
ನಗಧರಗೆ ಸತಿಯಾದೆ ಹಗರಣಕ್ಕೀಡಾದೆ
ನಗೆಗೇಡಿಗೊಳಗಾದೆ ಜಗದ ಮುಂದೆ
ಪರರ ಬಿನ್ನಣದ ನುಡಿ ಗೆರಕಮಾಗಿರೆ ಕಿವಿಯ
ಪರಿಯದೇಂ ವರ್ಣಿಸುವೆ ನರಿಯೆನಾನು

ಕೋಟಿಜನ್ಮದಿನೋಂತ ಪುಣ್ಯಫಲದಿ
ಬೂಟಕವ ತೋರುವನ ಪಡೆದೆ ಮುದದಿ
ನಾಟಕಪ್ರಿಯನಿಂದೆ ಸುಖಿಪ ಬಗೆಗೆ
ಸಾಟಿಯುಂಟೇ ಶೇಷಗಿರೀಶನಿವಗೆ

## ೩೧

ಕೋಪದೊಳು ಜಮದಗ್ನಿ ತಾಪದೊಳು ಮಾರ್ತಾಂಡ
ಭೂಪರೊಳು ರಘುನಾಥನೆನ್ನ ನಾಥ

ದ್ವೇಷದೊಳು ಭಾರ್ಗವನು ರೋಷದೊಳು ದೂರ್ವಾಸ
ಮೋಸದೊಳ್ ಶ್ರೀಕೃಷ್ಣ ಮುದ್ದು ಕೃಷ್ಣ
ಭೋಗದೊಳು ದೇವೇಶ ರಾಗದೊಳು ಗಿರಿಜೇಶ
ತ್ಯಾಗದೊಳು ಶಿಬಿರಾಯ ಮದನಕಾಯ
ಜ್ಞಾನದೊಳು ಜನಕನು ಧ್ಯಾನದಲಿ ದತ್ತರ್ಷಿ
ಸೂನೃತದಿ ಹರಿಶ್ಚಂದ್ರ ಮಾನನಿಧಿಯು

ಧನಿಕನೆಂದೆನಲಷ್ಟಸಿದ್ಧಿದಾತಂದೆ
ಘನವಂತನೆನೆ ಪ್ರಣವಸ್ವರೂಪಗೆ
ಧಣಿಯೆನಲು ಮೂಜಗಕ್ಕೊಡೆಯನಿವನೆ
ಎಣೆಯುಂಟೆ ಶೇಷಾದ್ರಿವಾಸನಿವಗೆ

೩೨

ಪ್ರಾಣೇಶನೆನ್ನೊಳಗೆ ಕೇಣವಾಂತಿಹನೇಕೆ
ಗೋಣಬಿಗಿವಂತಾಗೆ ನಾಣದೇಕೆ
ಇಲ್ಲದುದನಿವನೊಳಾಂ ಸೊಲ್ಲಿಸಿದನೇನಮ್ಮ
ಕಲ್ಲೆದೆಯಿದೇವೆಳ್ವೆ ನಲ್ಲನಿವಗೆ
ಕಂಡಸುದ್ದಿಯ ಪೇಳೆ ಕೆಂಡದಂತಾಗುವರೆ
ಕಂಡುದಿಲ್ಲಕ್ಕಟೀ ಭಂಡತನವ
ನ್ಯಾಯವನು ಸೂಚಿಸಲು ನೋಯುವಂತಾಡುವರೆ
ಜಾಯೆಯೊಳಗೀತೆರದನ್ಯಾಯಮರರೆ

ಕಪಟನಾಟಕ ಸೂತ್ರಧಾರನಿವನೆ
ಸುಪವಿತ್ರ ಕೇಳೆನ್ನ ಪ್ರಾಣಸಖನೆ
ತಪನವಂಶಾಬ್ಧಿ ರಾಕೇಂದುವಿವನೆ
ವಿಮಲ ಶೇಷಾದ್ರೀಶನೆನಿಪ ವರನೆ

೩೩

ಮೌನಮೇಂ ಪ್ರಾಣೇಶ ಎನ್ನೊಳೀಪರಿರೋಷ
ಇನ್ನೇತಕೀ ದ್ವೇಷ ಜೀವಿತೇಶ
ಅನ್ಯಾಯಮೇಂಗೈದೆ ನಿನ್ನನಾನೇನೆಂದೆ
ನಿನ್ನ ಚರ್ಯೆಯನೊರೆದೆ ನಿನ್ನ ಮುಂದೆ
ಇಷ್ಟು ಮಾತ್ರದಿಯೆನ್ನ ದಿಟ್ಟಿಸದೆ ನೀಂಘನ್ನ
ಸಿಟ್ಟಿನಿಂ ಕುಳ್ಳಿಹುದೆ ದಿಟ್ಟತನದೆ
ಕರುಣಾಳು ನೀಕೇಳು ತರುಣಿ ನಾ ನಿನ್ನವಳು
ಪರರ ಭಾವಿಸಲೊಲ್ಲೆ ನೀನೆ ಬಲ್ಲೆ

ಇನ್ನಾದೊಡೀ ಪಂಥವುಳಿದು ದಯದಿ
ಕಣ್ತೆರೆದು ನೋಡಿನ್ನು ಮನ್ನಿಸೆನ್ನ
ನಿನ್ನುಳಿದು ಕಾಣೆನಾನನ್ಯರನ್ನು
ಘನ್ನ ಶೇಷಾದ್ರೀಶನಹುದು ನೀನು

೩೪

ವೀಳ್ಯವೊಪ್ಪಿಸುವುದು

ಹೃದಯೇಶ ನಿನ್ನಂತೆ ಸದಯರಿನ್ನಿಹರೇನು
ವಿಧುಸನ್ನಿಭಾನನಾ ಪದ್ಮನಯನ
ಶ್ಯಾಮಲಾಂಗನೆ ಎನ್ನ ಕಾಮಿತಮಿದೆಲ್ಲಮಂ
ಪ್ರೇಮದಿಂ ಪಾಲಿಸೈ ಕ್ಷೇಮಧಾಮ
ಏಲಾಲವಂಗದಿಂ ಬಾಲ್ಮೆಣಸುಪತ್ರೆಯಿಂ
ಮೇಲೆನಿಸಿ ಘಮಘಮಿಪ ವೀಳ್ಯಮಿದನು
ಮೆಚ್ಚಿ ನೀಡುವೆ ನಾನು ನೆಚ್ಚಿನಿಂ ಕೊಂಡಿದನು
ಅಚ್ಯುತನೆ ನೀನಿನ್ನು ರಕ್ಷಿಸೆನ್ನ

ರನ್ನದಟ್ಟೆಯ ಪಿಡಿದು ನಿಂದು ನಿಂದು
ಖಿನ್ನತೆಯನಾಂತೆನ್ನ ಕರವು ನೊಂದು –

ದಿನ್ನಾದೊಡೆನ್ನ ಕಣ್ದೆರೆದು ನೋಡು
ಚನ್ನಶೇಷಾದ್ರೀಶ ಕರವನೀಡು

## ೩೫

## ದಶಾವತಾರದ ನಿಂದಾಸ್ತುತಿಗಳು

ವರನ ಚಂದಮದೇನ ವರ್ಣಿಸುವೆನೆಲೆ ಸಖಿಯೆ
ಪರಮಸುಂದರಗಾತ್ರನಿರವ ಕೇಳೆ
ಬಿಚ್ಚಿರುವ ಕಣ್ಗಳಂ ಮುಚ್ಚಲಾರದ ವರಗೆ
ಪಚ್ಚಕರ್ಪೂರದಾ ಕಪ್ಪಿದೇಕೆ
ಕೊಳೆತುನಾರುತಲಿಹಗೆ ಲಲಿತವಸ್ತ್ರಗಳೇಕೆ
ಹೊಲಸು ಮಯ್ಯಿಗೆ ಗಂಧ ಬಳಿಯಲೇಕೆ
ಜಲಧಿಯಲಿ ವಾಸಿಪಗೆ ಪಲವಿಧದ ತೊಡವುಗಳೆ
ನೆಲೆಯಿಲ್ಲದಾತಂಗೆ ಲಲನೆ ಸುತರೆ

ಅಜ್ಞಾತಪಾದಕ್ಕೆ ಗೆಜೆ ಗೊಲಸೆ
ವಿಜ್ಞಾನಮಯಗೆ ವಿವಿಧ ಸಿಂಗರವೆ
ಯಜ್ಞಭೋಕ್ತಗೆ ಮತ್ತೆ ಭಕ್ಷ್ಯದೆಡೆಯೆ
ಸೂಜ್ಞ ಶೇಷಾದ್ರೀಶನರಿಯಲಳವೇ

## ೩೬

ವನಜಾಕ್ಷಿ ಕೇಳೆನ್ನ ಮನದನ್ನನಂದವನು
ಮನನಲಿದು ಪೇಳುವೆನು ಮಹಿಮೆಯನ್ನು
ತುಚ್ಛಮಾಗಿರುತಿರ್ಪ ಕಚ್ಛಪಾಕಾರದೊಳು
ಇಚ್ಛೆಗೊಂಡವನಿವನೆ ಮಚ್ಚನಯನೆ
ಹೆಡ್ಡತನದಲಿ ಬಂದು ದೊಡ್ಡ ಮಡುವೊಳು ನಿಂದು
ಗುಡ್ಡವನು ಪೊತ್ತಿಹನೆ ದಡ್ಡನಿವನೆ
ಸುರುಚಿರಾಂಗವನಿಂತು ಮರೆಗೈದು ಮುಸುಕಿನಿಂ
ಪರಮಸಂಭ್ರಮವಾಂತು ಮೆರೆಯುತಿಹನೆ

ಕ್ಷೋಣಿಯೊಳಗಿಂತಹರ ಕಾಣೆನಿನ್ನು
ಪ್ರಾಣೇಶನಾಗಿನಾಂ ಪಡೆದೆನಿವನಂ
ಏಣಾಕ್ಷಿ ನಡೆದುದಿನ್ನಾಡಲೇನು
ಜಾಣ ಶೇಷಾದ್ರೀಶನಾಣ್ಮನಹನು

೩೭

ಅಮಮಪೇಳುವೆನೇನ ರಮಣನಾಕೃತಿಯನಾ
ಕಮಲ ಪತ್ರಾಂಬಕೀ ಕೇಳು ಸಖೀ
ಹುಳುಕು ಮೋರೆಯ ಮತ್ತೆ ಕೊಳಕು ದೇಹದ ಕಾಂತ
ಹುಳುಕು ಬೇರನು ಮೆಲುವನರೆರೆ ಚಲುವ
ಕೋರೆಯದು ಮೊಳಯುದ್ಧ ಮೀರಿಹುದು ತುಟಿಯನ್ನು
ಕ್ರೂರರೂಪವನಾಂತ ಧೀರನಹುದು
ಪುರದಾಚೆ ಸಂಚಾರ ಮರದಡಿಯೊಳೇ ವಾಸ
ವರಹಗಳೆ ಬಾಂಧವರು ಪರಮಚಿತ್ರ
ಅರರೆ ಬಣ್ಣಿಪೆನೆ ಕೀಟಿರೂಪಧರನ
ಪರಿಯೇನ ಪೇಳ್ವೆನೀ ಕ್ರೂರವರನ
ಗುರುಗಳಾಣತಿಯಿಂದ ಪಡೆದೆನಿವನ
ವರಶೇಷಗಿರಿವಾಸನೆನೆದ ಹದನ

೩೮

ಅಬ್ಬಬ್ಬ ಈ ವರನ ಅದ್ಭುತಾಕೃತಿ ನೋಡಿ
ಉಬ್ಬುಸವು ಮಿಗಿಲಾಯ್ತು ಸಹಿಪೆನೆಂತು
ಕೆಮ್ಮೀಸೆ ಕೆಂಗಣ್ಣು ಕೆಂಪಾದ ರೋಮಗಳು
ಹೆಮ್ಮಾರಿಯಂದದೊಳು ಮೊರೆವಮಿಗಿಲು
ಕೆನ್ನೀರು ಪಾನದಿಂದುನ್ಮತ್ತನಂದದಿಂ
ಘನ್ನಘಾತಕನಾಗಿ ಮೆರೆವ ಬೀಗಿ
ಕರುಳ ಮಾಲೆಯ ಧರಿಸಿ ಮೆರೆಯುತಿಹನೀ ಸಹಸಿ
ತರತರದಿ ಸುರನರರು ನಡುಗುತಿಹರು

ಸ್ತಂಭವಿದೆ ಜನ್ಮಸ್ಥಲವಾಯಿತಿವಗೆ
ಕುಂಭಿಣೀಯಂಬರಕೆ ಮಧ್ಯದೊಳಗೆ
ಸಂಭ್ರಮದಿ ನೆಲಸಿಹನೆ ಪಡಿಯಮೇಲೆ
ನಂಬಿದೆನು ಶೇಷಗಿರಿವರನ ಲೀಲೆ

## ३೯

ಏಣಾಕ್ಷಿ ಕೇಳೆನ್ನ ಪ್ರಾಣೇಶನೀತನಂ
ಬಣ್ಣಿಪೆನದಂತಾಟೊ ಕಾಣೆನಮ್ಮ
ಕುಟಿಲವೇ ಭೂಷಣವು, ಸಟೆಯಿದುವೆ ಕುಲದೈವ
ವಟುವೇಷಧರನಿವನುಅಹುದು ಚಲುವ
ಕೃಪಣರೊಳಗ್ರಣಿಯು ಕಪಟ ಗುಣಗಳ ಗಣಿಯು
ಕೃಪೆಯೆಂಬುದೆಳ್ಳನಿತು ಕಾಣದವನು
ನುಡಿದ ನುಡಿಯನು ಮತ್ತೆ ನಡಿಸಲಾರದವರನ
ಪಡೆದೆ ಪೇಳುವೆನೇನು ನಡೆದ ಬಳಿಕ

ಧರಣಿಯೊಳಗಿಂತಪ್ಪ ವರನ ಕಾಣೆ
ತರುಣಿಮಣಿ ಕೇಳೆನ್ನ ಅರಸನಿವನೆ
ತರುಣನೀತನ ಪಡೆದ ಧನ್ಯಳಾನೆ
ವರಶೇಷಗಿರಿವರನೆ ಬಲ್ಲಹದನೆ

## ೪೦

ನೀರೆ ನೋಡಿವನಾರೆ ಘೋರರೂಪವು ಮೀರೆ
ಸಾರೆ ಬಂದಹನರರೆ ನಿಲ್ಲಲಾರೆ
ಮುಪ್ಪಾದಮುಳ್ಳವನೆ ಕಪ್ಪುಬಣ್ಣದ ವರನೆ
ಅಪ್ಪನೇಕಿವಗೆನ್ನನೊಪ್ಪಿಸಿದನೆ
ದಾನವನು ತಾಂ ಬೇಡಿ ದಾನಿನಿಯಂ ತುಳಿದಾಡಿ
ನ್ಯೂನತೆಯ ಪೊಂದಿಸಿದ ಜ್ಞಾನಿಯಿವನೆ
ಗಾತ್ರದೋಳಿವನಂತೆ ಗಾತ್ರಮುಳ್ಳವರಿಲ್ಲ
ಸರ್ವತ್ರ ಬಳಸಿ ನಿಂತಿರ್ಪನಿವನೆ

ತೃಣದಿ ಶುಕ್ರನ ಕಣ್ಣನಿರಿದ ವರನೆ
ಅಣುರೇಣು ತೃಣಾಕಾಷ್ಠ ಪೂರ್ಣನಿವನೆ
ಪ್ರಣವ ಪ್ರತಿಪಾದ್ಯನೆನಿಸುವವನೆ
ಫಣಿತಲ್ಪಿ ಶೇಷಾದ್ರಿವಾಸ ತಾನೆ

೪೧

ಪ್ರಿಯಸಖಿಯೆ ನೋಡೆನ್ನ ಪ್ರಿಯನಂದವನು ಮುನ್ನ
ಜಯಶಾಲಿಯೆನಿಸಿಹನ ಶೌರ್ಯಧುರನ
ಧರ್ಮಪಥವರಿಯದೆಯೆ ಕರ್ಮನಿಷ್ಠಾಪರನೆ
ನಿರ್ಮಲಾನ್ವಯದಲ್ಲಿ ಜನ್ಮಿಸಿದನೆ
ಪೆತ್ತವಳ ಶಿರವನೆ ಗ್ಗೊತ್ತಿ ಭೂಭುಜಕುಲಕೆ
ಮೃತ್ಯು ರೂಪಾದವನೆ ಮತ್ತನವನೆ
ಘನ್ನ ಘಾತಕನೆನಿಸಿ ಕೆನ್ನೀರಕೊಳನೈದ
ನನ್ನಿಯಿಂ ನಿರ್ಮಿಸಿದ ಘನ್ನನಿವನೆ

ಕಿಡಿಗಣ್ಣಲರೆ ಗಂಡುಗೊಡಲಿ ಪಿಡಿದು
ಕಡುಭಯಂಕರನಾಗಿ ಕೃಪೆಯನುಳಿದು
ಸಡಗರದಿ ನಡೆತರ್ಪನಕಟ ಮುಳಿದು
ಒಡೆಯ ಶೇಷಗಿರೀಶನೆನಗೆ ಬಂಧು

೪೨

ಧುರಧೀರನಿವನೆಂದು ನೆರೆವೆರೆಯಲೈತಂದು
ಮರುಳಾದೆ ನಾನಿಂದು ಮುಂದೆ ನಿಂದು
ನಾರ್ವಟ್ಟೆಯುಟ್ಟಿರುವ ಅರಣ್ಯದೊಳಗಲೆವ
ನಾರುಬೇರನೆ ಮೆಲುವ ಅರರೆ ಚಲುವ
ಜನಪನಂದನನೆನಿಸಿ ಮುನಿಜನರ ತಾವೆರಸಿ
ವನವನದಿ ಸಂಚರಿಸುತಿರುವ ಸಹಿಸಿ
ಲಲನೆಯನು ಕರೆತರಲು ಪಲವು ಕಪಿಗಳನೆರೆದು
ಜಲಧಿಯನು ಬಂಧಿಸಿದನಲಘುಬಲನೆ

ಇನಿತು ಸಾಹಸವುಳ್ಳ ಸುಗುಣನಿಧಿಗೆ
ಮನವೊಲಿದು ನಾ ಬಂದು ಮೋಸಪೋಗೆ
ಮಿಣುಕಿ ಫಲವೇನಿನ್ನು ಮಿಂಚಿದುದಕೆ
ಧಣಿಯೆನಗೆ ಶೇಷಾದ್ರಿವರನೆ ಸಾಕೆ

೪೩

ಎಂತುಟೆಂದಾಡುವೆನು ಕಾಂತನಾ ಚರ್ಯೆಯನು
ಸಂತತವು ಚಿಂತಿಪೆನು ಕಾಂತೆ ನಾನು
ಪಾಲನೂಡಿದಳನ್ನೂ ಪಾಳುಮಾಡಿದನಕಟ
ಬಾಲ ಗೋಕುಲಬಾಲ ಜಾಲಲೋಲ
ಖಲತನದಿ ಗೋಪಿಯರ ನಿಲಯವನು ತಾಪುಗುತೆ
ನಲಿದು ಪಾಲ್ವೆಣ್ಣೆಯನು ಕದ್ದು ತಿಂದು
ಪಿಡಿದು ಬಂದಿಪೆವೆಂದು ನಡೆತರ್ಪವರ ಮುಂದು
ಗೊಡದಂದು ಮೈಗರೆದು ಜಡಿವಹಿಂದು

ಕಾಳಿಯಾ ಮಡುವನ್ನು ಕಲಕಿ ಬಂದು
ಕಾಲಮೇಘವಪೋಲ್ವ ರೂಪತಳೆದು
ಲೀಲೆಯಿಂ ಶೇಷಗಿರಿಯಲ್ಲಿ ನಿಂದು
ಜಾಲವನು ಬೀರುತಿಹ ದೀನಬಂಧು ೪

೪೪

ಎಷ್ಟೆಷ್ಟು ಜನ್ಮಗಳ ಕಷ್ಟಂಗಳನು ಸಹಿಸಿ
ನಿಷ್ಠೆಯಿಂ ತಪಗೈಯ್ದ ಶ್ರೇಷ್ಠಫಲದಿ
ದುಡುಕನೀತನ ಕರವ ಪಿಡಿದೆ ಪೇಳುವದೇನು
ನಡೆದ ಕಾರ್ಯಕೆ ಮನದಿ ಮಿಡುಕಲೇನು
ಬಟ್ಟೆಗೇ ಗತಿಯಿಲ್ಲ ಪುಟ್ಟಿದಂತಿಹನಲ್ಲ
ಹುಟ್ಟು ನೆಲೆಯರಿತಿಲ್ಲ ದಿಟ್ಟನಲ್ಲ
ಅಹಿಂಸೆಯೆ ಮರ್ತ್ಯರಿಗೆ ಸಹಜಧರ್ಮವದೆಂದು
ಬಹುನೀತಿ ಪೇಳುವನು ಬುದ್ಧನಿವನು

ಬೆತ್ತಲೆಯೆ ಮನೆಮನೆಗೆ ಸುತ್ತುತಿಹನೆ
ಉತ್ತಮಾಂಗನೆಯರ ಚಿತ್ರ ಚಲಿಸಿ
ಮತನೆನ್ನಿಸಿ ನಲಿವ ಉನ್ಮತ್ತನಿವನೆ
ಕರ್ತೃ ಶೇಷಾದ್ರೀಶನೆಸೆದ ಹದನೆ

೪೫

ಏನೆಂದು ಬಣ್ಣಿಪೆನೆ ಈ ನವ್ಯವಿಗ್ರಹನೆ
ಮನದನ್ನನಾದನೆ ವನಜನಯನೆ
ತೊಳೆದಕೆಂಡದ ಕಾಂತಿ ಮೊಳದುದ್ದ ಮೋರೆಯು
ಕೊಳಗುಳದ ಮನವಿತ್ತು ಮೊಳಗುತಿಹನು
ಕತ್ತಿಯನು ಪಿಡಿದೆತ್ತಿ ಉತ್ತಮಾಶ್ವವ ಹತ್ತಿ
ಅತ್ಯಂತ ರೋಷದಿಂ ಸುತ್ತುತಿಹನು
ಕೊಲೆಗೆ ಹೇಸದ ವರನೆ ಪಲಜನರ ಕಡಿದವನೆ
ಕಲಿತಾನೆ ಎನುತಿಹನೆ ಕಲ್ಕಿಯಿವನೆ

ಇಂತಿರ್ಪ ವರಗೆ ಮನಸೋತು ನಾನು
ಕಾಂತನೆಂದಾಡಿದೆನು ಪೇಳ್ವುದೇನು
ಶಾಂತಗುಣ ಶೇಷಾದ್ರಿನಿಲಯ ತಾನು
ಸಂತತವು ಭಕ್ತರನು ಸಲಹನೇನು

೪೬

ರಮಣನಾ ವಿಭವವನು ಅಮಮ ವಿವರಿಪೆ ನಾನು
ಕಮಲಾಕ್ಷಿ ಕೇಳ್ನೀನು ಕ್ರಮದೊಳಿದನು
ತನಯರೊಳು ಜಡನೊರ್ವನನಂಗನೆ ಮತ್ತೊರ್ವ
ವನಿತೆ ಚಂಚಲೆಯಚಲೆಯೆನಿಪರವರು
ವಕ್ರಗಮನೆಯೆ ಸುತೆಯು ಚಕ್ರವೆ ನಿಜಾಯುಧವು
ಪಕ್ಷಿಯೇ ವಾಹನವು ದಕ್ಷನಿವನು

ಶರಧಿಯೇ ಮಂದಿರವು ಉರಗವೇ ಹಾಸಿಗೆಯು
ಇರವನರಿಯರದಾರು ಭುವಿಯ ಜನರು

ಬರಿಯ ಮಾತಿಗೆ ಮನವು ಕರಗಿದುದಕೆ
ಅರಿಯದಾನ್ಯೆತಂದು ನೆರೆದೆನೇಕೆ
ಪರಿಕಿಸಲ್ ಮತಿಭ್ರಮೆಯಿದುವೆ ಸಾಕೆ
ವರಶೇಷಗಿರೀಶನೆ ಸಲಹಬೇಕೆ

೪೭

## ಉರುಟಣೆಯ ಹಾಡು

ಜಯಜಯ ಸಾರಸನಯನ ಜಯಜಯ ವಾರಿಧಿಶಯನ
ಜಯಜಯ ಲಕ್ಷ್ಮೀರಮಣ ಜಯ ಭಕ್ತಾಭರಣ ಪ.

ಸ್ಮರತಾತಾ ಶ್ರೀಕಾಂತ ವರದಾತಾ ರಘುನಾಥ
ವರಕಪೋಲವ ತಾರೈ ಅರಿಸಿನ ಹಚ್ಚುವೆನು ೧

ಹರಧನುಖಂಡನ ಶೌರಿ ಸುರರಿಪುಸಂಕುಲ ವೈರಿ
ಕರಪಲ್ಲವತೋರೈ ಅರಿಸಿನ ಪೂಸುವೆನು ೨

ಪಾದಾಪ ಹೃತಶಾಪ ಪರಮಪಾವನರೂಪ
ಪಾದಪದ್ಮವ ತಾರೈ ಪೂಜಿಪೆ ನಾನೊಲವಿಂ ೩

ಖಲದೈತ್ಯಕುಲಕಾಲ ಬಾಲೇಂದು ನಿಭಫಾಲ
ಸ್ಥಳದೊಳುಮಿಗೆ ಪೊಳೆವ ತಿಲಕವ ತಿದ್ದುವೆನು ೪

ಶಂಭುಸನ್ನುತನಾಮ ಜಂಭಾರಿನುತರಾಮ
ಕಂಬುಕಂಧರ ತೋರೈ ಗಂಧವ ಹಚ್ಚುವೆನು ೫

ಕಮನೀಯ ಮೃದುಲಾಂಗ ಕಮಲಾಕ್ಷ ಶ್ರೀರಂಗ
ನಳವಡಿಪೆ ನಿನ್ನೀಕೊರಳೊಳು ಕಮಲಮಾಲೆಯ ೬

ವರಶೇಷಾಚಲವಾಸ ಶರದಿಂದುನಿಭಹಾಸ
ಕರುಣಿಸುನೀಂಹೃದಯೇಶ ತರಣಿಕುಲಾವತಂಸ ೭

## ೪೮

ಪ್ರಾಣಾಧಿಕ ಬಾ ಬಾ ನಲವಿಂ ಚಂಡಾಡುವ ಪ.

ಶ್ರೀನಾಯಕ ನೀನ್ನೈತರಲಾನಾನತೆಯಾನಂದದಿಂ ಅ.ಪ.

ಬಿಲ್ಲಾಳುಗಳೊಳು ಕಡುಬಿಲ್ಲಾಳು ಬಲ್ಲಿದ ನೀಂ
ಫುಲ್ಲಾಸ್ತ್ರನಲ್ಲಗಳೆಫುಲ್ಲಸುಮ ಮಾಲೆಯಾಂತು ೧

ವಿಕಸಿತ ನಾನಾವಿಧ ಸುಕುಮಾರ ಪುಷ್ಪಂಗಳಿಂ
ಸುಖಮೀವ ಕಂತುಕವಂ ಸುಕರದಿಂದಾಲಿಂಗಿಸಿ ೨

ಶೇಷಾಚಲಧಾಮ ರಮಾವಾಸಾಶ್ರಿತಪೋಷ ಘನ
ಯಾಸಾ ಸರೋಜಾಕ್ಷ ನಿನ್ನ ದಾಸ್ಯದೊಳೇ ನಿಲ್ಲಿಸೆನ್ನ

## ೪೯

ಚಂಡನಾಡುವ ಬಾರೆಲೈ ಪ್ರಾಣೇಶ್ವರ ಪ.

ಮಲ್ಲೆ ಜಾಜಿ ಸಂಪಿಗೆ ಮೇಣ್ ಮಲ್ಲಿಗೆ ಇರುವಂತಿಗೆ
ಚಲ್ವ ಪಾರಿಜಾತದಿಂದ ಚೆಲ್ವನಾಂತು ಮೆರೆಯುತಿರ್ಪ ೧

ಪರಿಮಳಾನ್ವಿತ ಪಾಟಲೀ ಸುರಗಿ ಸೇವಂತಿಗೇ ಸುರಭಿಳ
ಕರಮಾಗಿ ಯೆಸವಪರಿಯನೋಡಿ ನಲಿಯುತಾವು ೨

ವಿಮಲಶೇಷಶೈಲವಾಸ ಕಮಲಬಾಂಧವ ಸದೃಶಭಾಸ
ಕಮಲನಾಭ ಭಕ್ತಪಾಲ ರಮಣ ನಿನ್ನ ಕಮಲಪಾಣಿಯಿಂ ೩

## ೫೦

ಸ್ವೀಕರಿಸೈ ವೀಳ್ಯಮಿದನು ಶ್ರೀಕರಾಬ್ಜಪಾಣಿಯಿಂ ಪ.

ಲೋಕನಾಥ ಪಾಲಿಸೆನ್ನ ಶ್ರೀಕಟಾಕ್ಷದಿಂದಲೆ ಅ.ಪ.

ಪಚ್ಚಕರ್ಪೂರಯಾಲದಿಂದ ಹೆಚ್ಚು ವಾಸನೆಯನುತಳೆದ
ಅಚ್ಯುತನೆ ವೀಳ್ಯಮಿದನು ಮೆಚ್ಚಿ ನೀಡುತಿರುವೆನು ೧

ತಟ್ಟೆಯನ್ನು ಪಿಡಿದು ಎನ್ನ ರಟ್ಟೆಗಳಿದು ನೊಂದವೈ
ಸಿಟ್ಟುಮಾಡದೀಗ ದಯದಿ ದಿಟ್ಟಿಸೈ ಮದೀಶನೇ ೨

ಲಲಿತಗಾತ್ರ ಎನ್ನೊಳಿಂತು ಚಲಮಿದೊಳ್ಳಿತೇನೆಲೈ
ಜಲಜನೇತ್ರ ಶೇಷಶೈಲನಿಲಯ ನಿನ್ನ ನಮಿಪೆನೈ ೩

## ೫೧

ಬೆಳಗುವೆನಾರತಿಯ ನಾಂ ಪ.

ನಳಿನಾಕ್ಷ ರಂಗಗೆ ನಲವಿಂದ ಪಾಡುತೆ ಅ.ಪ.

ಕನಕಪಾತ್ರೆಯೊಳು ಘನಮುತ್ತುರತ್ನಂಗಳು
ಮಿನುಮಿನುಗುತ್ತಿರಲು ಮನಮಂತುಬ್ಬೇರಲು ೧

ನವಭಕ್ತಿಯೋಗಂಗಳಿಂ ನವಭಾವ ಪಾತ್ರಂಗಳಿಂ
ನವನೀತ ಚೋರಗೆ ನಮಿಸುತ್ತೆ ನೇಮದಿಂ ೨

ವರಶೇಷಶೈಲೇಶಗೆ ಶರಣಾಗತಸಂರಕ್ಷಗೆ
ಕರಿರಾಜವರದಗೆ ಸುರರಾಜವಂದ್ಯಗೆ ೩

೫೨

ಎತ್ತುವೆನಾರತಿಯ ರಂಗಧಾಮನಿಗೆತ್ತುವೆನಾರತಿಯ ಪ.

ಗೋಕುಲದೊಳು ಬೆಳೆದು ಆಕಳನೆಲ್ಲ ಕಾಯ್ದು
ಪಾಕಶಾಸನನಿಗೆ ಪರಾಕ್ರಮ ತೋರಿದ ನೀರಗೆ ೧

ಮಥುರೆಗೆ ನಡೆತಂದು ಮಾವ ಕಂಸನ ಕೊಂದು
ಮಾತೆಗೆ ಮುದವಿತ್ತ ಮಧುಸೂದನ ಕೃಷ್ಣಗೆ ೨

ಶೇಷಗಿರಿಯಲ್ಲಿ ವಾಸವಾಗಿರುತಿರ್ಪ
ಶೇಷಭೂಷಣನುತ ವೃಷ್ಣಿವಂಶೋತ್ತಮಗೆ ೩

೫೩

ಮುತ್ತಿನಾರತೀ ತಂದೆತ್ತಿಪಾಡುವೆ
ಚಿತ್ತಜಾತ ಜನಕ ರಂಗನಾಥದೇವಗೆ ಪ.

ಭೂಮಿಪಾಲಗೆ ಶ್ರೀ ಭಾಮೆಯರಸಗೆ
ಕಾಮಿತಾರ್ಥ ದಾತ ಮನೋ ಮೋಹನಾಂಗಗೆ ೧

ಕಾಳೀಮಡುವನು ಕಲಕಿ ಬಂದಗೆ
ಬಾಲನಾಗಿ ಗೋವುಗಳನು ಕಾಯ್ದ ಗೊಲ್ಲಗೆ ೨

ಮುರವಿರೋಧಿಗೆ ಕರುಣವಾರ್ಧಿಗೆ
ತರಳ ಧ್ರುವನಿಗೊಲಿದು ಬಂದ ವರದರಾಜಗೆ ೩

ಶರಣರಕ್ಷಣೆ ಸರಸಿಜಾಕ್ಷಗೆ ಪರಮ
ಪಾವನ ಶೇಷಶೈಲ ಶಿಖರ ಧಾಮಗೆ ೪

## ೫೪

ಲಕುಮೀಶ ನಿನಗಾರತಿ ಭಕುತಿಯಿಂದೆತ್ತುವೆ
ಸಕಲರ ಸುಖಕರ ಭಕ್ತರಿಗೊಲಿಯುವ ರುಕ್ಮಿಣಿಯರಸನೆ ಪ.

ರಮಾಪತಿ ನಿನ್ನನು ನಮಿಸಿ ನುತಿಸುತ್ತಿರ್ಪೆನು
ಕಮಲಾಂಘ್ರಿಯ ಭ್ರಮರವೆಂದಮಲನೆ ಕೈಪಿಡಿ
ರಮಣನೆ ನುಡಿ ನುಡಿ ೧

ಇನಕುಲಮಂಡನ ವನರುಹಲೋಚನ
ಜನಕಜಾ ಸುಪ್ರೇಮನೆ ಚಿನ್ಮಯರೂಪನೆ
ಮನುಮುನಿ ಸೇವ್ಯನೆ ೨

ಸುರನರ ಪೂಜಿತ ಸರಸಿಜ ಭವಪಿತ
ಕರುಣಾಕರ ನರಕೇಸಂ ಮರೆಹೊಕ್ಕೆನು ಪೊರೆ
ವರಶೇಷಗಿರಿದೊರೆ ೩

## ೫೫

### (ಬಾಗಿಲು ತಡೆ)

ಸಾರಸ ನಿಲಯೆ ಸಾಗರ ತನಯೆ
ಸಾರೆ ಬಂದೆನು ಈಗ ಬೇಗ
ಸಾರಿ ಬಾಗಿಲ ತೆಗೆ ಬೇಗ ಪ.

ಸಾರು ಸಾರೆಲೊ ಸಾರಿಕೂಗುವನಾರೊ
ಸಾರು ನಿಲ್ಲದೆ ನೀನು ಇನ್ನು
ಸಾರು ಬಾಗಿಲ ತೆಗೆ ನಾನು ಅ.ಪ.

ಏಕಿಂತು ಕೋಪವೆ ಕೋಕಿಲಾರವೆ
ನೀಂ ಕಟಾಕ್ಷಿಸು ಎನ್ನ ಮುನ
ಸಾಕುಮಾಡುವುದಿದೆನ್ನ ೧

ಸಾಕು ಸಾಕಿಂತು ಏಕೆ ಕೂಗುತಿರ್ಪೆ
ಕಾಕಲಾಪವಿದೆಲ್ಲ ಸಲ್ಲ
ಕಾಕು ನುಡಿಗಳುಸಲ್ಲ ೨

ಪುಂಡರ ತಡೆವುದ ಕಂಡುಂಟು ಜಗದೊಳು
ಗಂಡನ ತಡೆವರೆ ಭಾಮೆ ರಾಮೆ
ಕಂಡವರೇನೆಂಬರೆ ಭಾಮೆ ೩

ಗಂಡನಾರಿಗೆ ಹೆಂಡತಿಯಾರಿಗೆ
ಪುಂಡಾಟವಾಡದೆ ಪೋಗು ಸಾಗು
ಭಂಡನಾಗಿರ್ಪೆ ಪೋಗು ೪

ವಲ್ಲಭೆ ನಿನ್ನೆದೆ ಕಲ್ಲಾಗಿರುವುದೆ
ನಲ್ಲನಾನಿನಗಲ್ಲೇ ನಲ್ಲೆ
ಬಲ್ಲವಳೆಂಬುವುದೆಲ್ಲೆ ೫

ಬಲ್ಲೆ ಬಲ್ಲೆನೀ ಚಲ್ಲಾಟಗಳ
ಸೊಲ್ಲಿಸು ಬಂದಿಹುದೇನು ಇನ್ನು
ಸೊಲ್ಲಿಸದಾರನ್ನು ೬

ಶಶಿನಿಭವದನೈನಿಶಿಚರದಮನನೆ
ದಶರಥರಾಮನೆ ಸೀತೆ ಖ್ಯಾತೆ
ಪುಸಿಯಲ್ಲವೆಲೆ ಭೀತೆ ೭

ದಶರಥಜನಾದೊಡೆ ದಶೆ ದಶೆ ತಿರುಗೆಲೆ ।
ನಿಶಿಚರರಿಲ್ಲಿಹರೇನೈ ಜ್ಞಾನಿ
ವಿಷಮವರ್ತನವೇನೈ ೮

ಅಂಗನೆ ನಿನ್ನ ಮೋಹನಾಂಗನಾದ ಶ್ರೀ
ರಂಗ ನಾನೆಲೆ ಚಪ
ಲಾಕ್ಷಿ ಲಕ್ಷ್ಮಿ । ಭಂಗಿಸಬೇಡೆನ್ನ ಲಕ್ಷ್ಮಿ ೯

ಹಂಗಿಸಬೇಡ ಶುಭಾಂಗ ಮನ್ನಿಸೆನ್ನ
ತುಂಗ ವಿಕ್ರಮ ರಘು ರಾಮ ಶ್ಯಾಮ
ರಂಗ ಕಾರುಣ್ಯಧಾಮ ೧೦

ಈ ಪರಿ ಪೇಳುತೆ ಕೈಪಿಡಿದಳು ತ
ನ್ನೋಪನ ವಂದಿಸಿ ರಾಣಿ ರಮಣಿ
ಕೋಪರಹಿತೆ ಸುವಾಣಿ ೧೧

ಭೂಪಶೇಷಾದ್ರೀಶನು ಕಾಂತೆಯ ಕೈಪಿಡಿದನು
ನಲವೇರೆ ಅರರೆ ತಾಪಸಸುತ ನಲವೇರೆ ೧೨

೫೬

ಕಲಭಯಾನೆ ಕಂಜಲೋಚನೆ ಕದವತೆಗೆಯಲೆ ಭಾಮಿನಿ
ನಾಂ ಬಳಲಿ ಬಂದೆನು ಭಾಮಿನೀ ಪ.

ಬಳಲಿ ಬಂದರೆ ಒಳ್ಳಿತಾಯಿತು ತಳರ್ವುದಿಲ್ಲಿಂ ನಿಲ್ಲದೆ
ನಾಂ ಕದವ ತೆಗೆಯೆನು ಸಾರೆಲೆ ಅ.ಪ.

ಭಾಮುಭಾಪೆಲೆ ಕೋಪಗೈವುದು ಚಾಪಲ್ಯಾಂಬಕಿ ಯೆನ್ನೊಳು
ಆಹ ! ಚಾಪಲ್ಯಾಂಬಕಿಯೆನ್ನೊಳು
ಓಪನಲ್ಲೇ ಕೋಪಸಲ್ವುದೆ ಈ ಪರಿಯೊಳ್ ಪೇಳ್ವುದು
ನೀ ನೀಪರಿಯೊಳ್ ಪೇಳ್ವುದು ೧

ಪಾಪಭೀತಿಯನುಳಿದು ಈ ಪರಿ ಕಪಟನಾಟ್ಯವ ಮಾಳ್ಪರೇ
ನೀಂ ಕಪಟನಾಟ್ಯವ ಮಾಳ್ವರೇ
ಓಪನೆಂದು ಕೂಗುತ್ತಿರುವ ಭೂಪನಾವನು ಸಾರೆಲೋ
ನಾನೋಪೆ ಯಾರಿಗೆ ಸಾರೆಲೊ ೨

ನೀರೆ ಮುಕ್ತಾಹಾರೆ ಸ್ಮರವೈಯ್ಯಾರೆಯಿಂತು ಪೇಳ್ವರೇ
ವೈಯಾರೆಯಿಂತು ಪೇಳ್ವರೆ

ದಾರಿನಡೆದು ದುಡಿದು ಬಂದೆನು ನೀರನಾನೆಲೆ ಶ್ರೀಕರೆ
ಕೇಳ್ ನೀರನಾನೆಲೆ ಶ್ರೀಕರೆ ೩

ಚೋರನಂದದಿ ಸಾರಿ ರಾತ್ರಿಯೊಳು, ದ್ವಾರದೋಳ್ ನಿಂತು ಕೂಗುವೆ
ನೀಂ ಜಾರನಂದದಿ ಕಾಣುವೆ
ಸಾರೆ ಬಂದಿಹ ಕಾರಣವನು ಸಾರಿಪೇಳು ಕೇಳುವೆ
ನೀನಾರು ಪೇಳು ನೋಡುವೆ ೪

ದೇವಿಕೇಳು ವಸುದೇವ ದೇವಕಿಕುಮಾರ ನಾನೆಲೆ ಭಾಮಿನೀ
ಸುಕುಮಾರನಾನೆಲೆ ಭಾಮಿನೀ
ಭಾವಜಾತನ ಬಾಣಕೀಯದೆ ಕಾವುದೆನ್ನನು ಕಾಮಿನೀ
ದಯೆತೋರು  ಮನೋಮೋಹಿನೀ ೫

ದೇವಕೀಸುತನಾದರೊಳ್ಳಿತು ನಾವು ಬಲ್ಲೆವು ಸಾರುನೀಂ
ಗೋವ ಕಾಯ್ದುದ ಬಲ್ಲೆನಾಂ
ಮಾವನನ್ನೆ ಮಥಿಸಿ ಬಂದ ಮಹಾಮಹಿಮನೆ ಸಾರು ನೀಂ, ಆಹ
ಭಾವಿಸೀ ಭಯಪಡುವೆನೇಂ ೬

ಭೀಷ್ಮಕಾತ್ಮಜೆ ಭೇಷಜಾಂಬಕಿ ಹಾಸ್ಯ ಮಾಡದೆ ಬೇಗನೆ
ಪರಿಹಾಸ ನಿಲ್ಲಿಸು ಸುಮ್ಮನೆ
ಶೇಷಭೂಷಣ ನಮಿತ ಚರಣೆ ಸಂತೋಷ ಪಡಿಸುವದೆನ್ನನು
ನಾಂ ಬೇಡಿಕೊಂಬೆನು ನಿನ್ನನು ೭

ದೋಷವೆಣಿಸದೆ ಪೋಷಿಸೆನ್ನ ಮದೀಶ ಹಾಸ್ಯವ ಮಾಡಿದೆ
ಜೀವಿತೇಶ ನಿನ್ನನು ದೂರಿದೆ
ಶೇಷಶೈಲನಿ ವಾಸ ಎನ್ನನು ಪೋಷಿಸೆಂದಳು ವಿನಯದಿ
ಕೈಪಿಡಿದ ದೇವನ ಮೋದದಿ ೮

ಜಯಜಗನ್ನಾಥ ಭಕ್ತಾಭಯಪ್ರದ ಶ್ರೀಕರ
ಜಯಜಾನಕೀ ಮನೋಹರ
ಜಯ ಸುರೇಶಸು ಪೂಜಿತಾಂಘ್ರಿಯೆ
ಜಯದೇವ ದಯಾಸಾಗರ ಶೇಷಗಿರೀಶ ಶ್ರೀಧರ ೯

## ೫೭

ರಮಣಿ ಮಂಜುಳವಾಣಿ ಕಮನೀಯ ಸುಶ್ರೋಣಿ
ವಿಮಲ ಪಲ್ಲವಪಾಣಿ ಫಣಿಪವೇಣಿ
ಮೀನಾಕ್ಷಿ ಯೀ ಚಿಂತೆ ನಿನಾಂತುದೇಂಕಾಂತೆ
ಮೌನಮೇಂ ಮತಿವಂತೆ ಬಿರುಸದೆನಿತೆ
ಕುಹಕರುಕ್ತಿಯ ಕೇಳಿ ಕಡುಕೋಪವನು ತಾಳಿ
ಬಹುವಿಧದಿ ಬಳಲಿಸುವೆ ವಿಹಿತವೇನೆ
ಹೆಬ್ಬುಲಿಯ ತೆರದಿಂದ ಬೊಬ್ಬಿರಿದು ಮತಿಯುಳಿದು
ಅಬ್ಬರಿಸಿ ಕೂಗುವರೆ ಅಬ್ಜನೇತ್ರೆ

ಕೈಪಿಡಿದ ರಮಣನೊಳು ಮುನಿಸೆ ತರುಣಿ
ತಾಪಶಮನವ ಮಾಡು ನೋಡು ರಮಣಿ
ಓಪನೆಂದೊಲಿದಾಡು ಕರವನೀಡು
ಭೂಪಶೇಷಾದ್ರೀಶನತ್ತ ನೋಡು

## ೫೮

ವನಜಗಂಧಿಯೆ ನಿನ್ನ ಮನದಸಂದೆಗೆವನ್ನು
ಸನುಮತದಿ ಪೇಳಿನ್ನು ಮುನಿಸಿದೇನು
ಚಾಡಿಮಾತನು ಕೇಳಿ ರೂಢಿಯಿಂ ಖತಿತಾಳಿ
ಕಾಡುತಿಹುದೇಂ ಚಾಳಿ ರೌದ್ರಕಾಳಿ
ಸೂಚನೆಯ ಕೊಡದಿಂತು ವಾಚನದಿ ಬಿರುಸಾಂತು
ರಾಚುತಿರ್ಪೆಯದೇನೆ ನಾಚದಿಂತು

ಮಾನವತಿನೀನೆಂದು ನಾನು ನಂಬಿಕೊಂಡು
ಏನು ಮಾಡಿದೆನೆಂದು ಜರಿದೆ ಬಂದು

ಸಾಕು ಸಾಕೀಬಗೆಯ ಕಠಿಣವಾಕು
ಕೋಕಿಲಾರವೆ ನಿನ್ನೊಳಿರುವ ಸೊರ್ಕು
ಸಾಕುಮಾಡಿಹುದೆನ್ನ ನೋಡು ಮುನ್ನ
ಲೋಕೇಶ ಶೇಷಾದ್ರಿ ವರದನೆನ್ನ

## ೫೯

ಇಂದುಸನ್ನಿಭವದನೆ ಕುಂದಕುಟ್ಮಲರದನೆ
ಸಿಂಧೂರಸಮಗಮನೆ ಚತುರವಚನೆ
ಸಿಟ್ಟೇಕೆ ಪೇಳೆ ತರುಣಿ ದಿಟ್ಟಿಸೆನ್ನನು ರಮಣಿ
ದಿಟ್ಟೆ ನೀನೆಲೆ ರಾಣಿ ಕೃಷ್ಣವೇಣಿ
ಕಾವಗೀಯದೆಯೆನ್ನ ಭಾವಪಾಲಿಸು ಮುನ್ನ
ಭುವಿಜಾತೆ ಮತಿವಂತೆ, ಪ್ರಾಣಕಾಂತೆ
ಚಪಲೆನೀನಹುದಲ್ಲೆ ಕೃಪಣೆಯೆಂಬುದ ಬಲ್ಲೆ
ವಿಪರೀತಂಮೆಲುನಲ್ಲೆ ಸೊಲ್ಲಿಸಿಲ್ಲೆ

ಕ್ಷೀರಸಾಗರತನಯೆ ಸದಯೆ ಜಾಯೆ
ಸಾರೆ ವೀಳ್ಯವನು ಕೈಗೊಂಡು ನೀನು
ಬೀರು ಸಂತಸವನ್ನು ಬೇಡುತಿಹೆನು
ನೀರೆ ಶೇಷಾದ್ರೀಶನಿವನೆತಾನು

## ೬೦

ನೀತಿಯೇನಿದು ಕಾಂತೆ ಮಾತಿನೊಳ್ ಬಿರುಸೆನಿತೆ
ಘಾತಿಸುವುದಿದೊಳ್ಳಿತೇ ಪ್ರಾಣದಾತೆ
ಈಕಾಲದಬಲೆಯರ ಕಾಕಲಾಪಕೆ ಸೋತು
ಸಾಕಾರನೊಳಗಿಂತು ಕೇಣಮಾಂತು

ನೀನೆರೆವೆ ವಸ್ತುಗಳ ನಾನಿತ್ತೆನಾದರೆ
ಕಾನನದ ವಾಸವು ಎನಗೆ ನಿಜವು
ಇದನರಿತು ನೀನೆನ್ನ ಪದುಳದಿಂ ಸುಖಿಯಪ್ಪ
ಹದನನರಿಯದೆ ಬರಿದೆ ಜರಿದೆ ಮುಗುದೆ

ಪ್ರೇಮ ಗೌರವ ಭಕ್ತಿ ಭಾವ ಶುದ್ಧಿ
ನೇಮನಿರತಿಶಯ ಸುಸ್ನೇಹದಿಂದ
ಕೋಮಲತೆಯಯಾಂತೆಸೆವ ಬಗೆಯ ತಾಳ್ದು
ಭಾಮೆಯೆನ್ನಿಸು ಶೇಷಗಿರೀಶಗೊಲಿದು

೬೧

ಭಳಿರೆ ಮೆಚ್ಚಿದೆ ರಮಣಿ ಒಳಿತು ನಿನ್ನಯ ವಾಣಿ
ಬಲುಹು ತೋರಿದೆ ತರುಣಿ ಒಲಿದೆ ರಾಣಿ
ಮುಳಿದು ಮೂದಲಿಸುತ್ತ ಹಳಿದು ಹಂಬಲಿಸುತ್ತ
ಬಳಬಳನೆ ಕಣ್ಣೀರನಿಳಿಸುತಳುತೆ
ಕೋರಿದುದ ತಂದೀಯಲಾರದಿಹ ಪುರುಷರಂ
ದೂರುವುದೆ ನಾರಿಯರ ಧರ್ಮವೇನು
ಉಡುಪುತೊಡುವೆಂದೆನುತ ಸಡಗರದಿ ಹಿಗ್ಗುತ
ಬಡಿವಾರ ತೋರುವುದೆ ನಡತೆಯೇನು

ಸಜ್ಜೆಸುಖಶಯ್ಯೆ ಯಿದನೆ ನಂಬಿ
ಲಜ್ಜೆಯಲಿಕರ್ತವ್ಯವನೆ ಮರೆದು
ದೌರ್ಜನ್ಯಕೀಡಾಗಬಹುದೆ ಸಾಧ್ವಿ
ಸಜ್ಜನೆಯೆನಿಸು ಶೇಷಗಿರೀಶನಣೆಸು

೬೨

ಕಲಶಾಬ್ಧಿಜಾತೆ ಸೀತೆಗಾರತಿಯನು ಬೆಳಗುವೆ
ಲಲನಾಮಣಿಯ ಸೇರಿ ಸುಖಿಸಿ ನಲಿದು ಪಾಡುವೆ ಪ

ಸರಸಿಜಾಸನಾದಿವಿನುತೆ, ಸುರವರಾರ್ಚಿತೆ
ಶರದಿಂದುಹಾಸೆ ಧರಣಿಜಾತೆ ಕರುಣಿಸೆನ್ನುತೆ ೧

ಕಮಲವದನೆ ಕಮಲನಯನೆ ಕಮಲವಾಸಿನೀ
ವಿಮಲಚರಣೆ ರಾಮರಮಣಿ ಮಧುರಭಾಷಿಣಿ ೨

ಶೇಷಶೈಲಾವಾಸದಯಿತೆ ವಿಶ್ವಸನ್ನುತೆ
ಪೋಷಿಸೆನ್ನ ಜನಕಜಾತೆ ಸೀತೆಯೆನ್ನುತೆ ೩.

## ೬೩

ಬೇಡಿಕೊಂಬೆ ಹಸೆಗೇಳೆಲೈ
ಗಾಡಿಪಂಥ ಮಾಡಬೇಡೆಲೈ ಪ.

ಮಾರುತಿಸೇವ್ಯನೆ ಧೀರ ದಾತಾರನೆ
ಕೋರಿ ಭಜಿಪೆ ಬೇಗ ಬಾರೈ ಸುಂದರ ೧

ನಾರಿಯರ್ನಿನ್ನನು ಸಾರಿಕರೆವರೈ
ಧಾರಣಿಜಾತೇಸಹ ಸಾರಿ ಬಾಬಾ ಬೇಗ ೨

ಭವಭಯದೂರನೆ ಭಕ್ತಮಂದಾರನೆ
ಭಾವಜ ಜನಕನೆ ದೇವಾದಿದೇವನೆ ೩

ಶೇಷಗಿರೀಶನೆ ದಾಸಜನಾಶ್ರಯನೆ
ವಾಸವವಂದಿತನೆ ಶ್ರೀ ವಾಸುದೇವನೆ ೪

## ೬೪

ಬಾರೆಂದು ಹಸೆಗೆ ಕರೆವೆನು
ಕ್ಷೀರಾಬ್ಧಿಶಯನನೆ ಸಾರಸನಯನನೇ ಪ.

ಕ್ಷೀರಾಬ್ಧಿಜಾವರ ಮೇರುಗಂಭೀರನೆ
ನೀರಜಭವಪಿತ ಮಾರಹರಾರ್ಚಿತ
ಚಾರುನೀರದಗಾತ್ರ ಪರಮ ಪವಿತ್ರ ಅ.ಪ

ಧರಣೀಸುರರ ಮೊರೆಗಳನಾಲಿಸಿ
ಧರೆಯೊಳಗವತರಿಸಿ ನರರೂಪಧರಿಸಿ
ಧರಣಿಪ ದಶರಥತರಳನೆಂದೆನಿಸಿ
ಧರೆಯ ಭಾರವನಿಳಿಸಿ ಕರುಣಿಸು ಮನವೆರಸಿ ೧

ಅಸುರೆ ತಾಟಕಿಯ ಅಸುವನಳಿದು ದುಷ್ಟ
ನಿಶಿಚರರನು ಸದೆದು ಅನುಜನೊಡಗೊಂಡು
ಕುಶಿಕನಂದನನ ಕ್ರತುವನು ತಾ ಕಾಯ್ದು
ಅಸಮ ಶೂರನೆನಿಸಿ ಅಮರರ ಮನತಣಿಸಿ ೨

ಶಿಲೆಯ ಶಾಪವಕಳೆದು ಲಲನೆಯ ಪೂಜೆಗೊಲಿದು
ಬಲುಹಿನಿಂದಲೆ ಬಂದು ಹರಧನು ಮುರಿದು
ಲಲನೆ ಜಾನಕಿಯ ನಲವಿನಿಂ ಕೈಪಿಡಿದು
ಬಲುಗರ್ವಿತ ಭಾರ್ಗವ ಮದಮುರಿದೆ ಸಲಹೆನ್ನ ೩

ಈಶವಿನುತ ಶ್ರೀ ಶೇಷಾಚಲ ನಿಲಯನೆ
ದಾಸರಮನದೊಳು ವಾಸವಾಗಿಹನೇ
ವಾಸವಾದ್ಯಮರ ಪೋಷಕನೆನಿಸಿಹನೆ
ಭಾಸುರವದನನೆ ಶ್ರೀಸತೀಸದನನೆ ನೀಂ ನಲಿದು ೪

## ೬೫

ಸಾರಸಾಕ್ಷಿ ಬಾ ಬಾ ಬೇಗ ಸಾರಿ ನೀಂ ಪ.

ಸಾರಸಾಕ್ಷಿ ಬೇಗ ಚಾರುಪೀಠಕೀಗ ಅ.ಪ.

ಭೇರಿ ತಮ್ಮಟಾದಿ ಭಾರಿವಾದ್ಯಂಗಳೂ
ಭೋರ್ಗರೆಯುತಿರಲು ನೀರೆ ನೀ ಭರದೊಳು ೧

ಭಾವಜಾತಜನನೀ ಭಾರ್ಗವಿ ಕಲ್ಯಾಣಿ
ದೇವದೇವನರಾಣಿ ಶ್ರೀಮತೀ ಪದ್ಮಿನಿ ೨

ಕ್ಷೀರವಾರಿಧಿಜಾತೆ ಮಾರವೈರಿವಿನುತೆ
ಪಾರಿಜಾಸನ ಮಾತೆ ಸಾರಿ ಬಾ ಪ್ರಖ್ಯಾತೆ ೩

ಶೇಷಶೈಲನಿಲಯೆ ವಾಸವಾದಿಗೇಯೆ
ವಾಸುದೇವಜಾಯೆ ವಸುಮತೀ ತನಯೆ ೪

೬೬

ತರುಣಿಯರೆಲ್ಲರು ಬಾರೆಂದು ಕರೆವರು
ವರಮಣಿಪೀಠಕೆ ಮುದದಿ ಪ.

ಕ್ಷೀರವಾರಿಧಿಜಾತೆ ಚಾರುಸುಂಧರಗಾತ್ರೆ ಮಾರಜನಕದಯಿತೆ
ಸಾರಸಾನನೆ ಮದ ವಾರಣಗಮನೆ ನಿನ್ನ ಅ.ಪ

ಇಂದಿರಾದೇವಿ ಬಾ. ಇಂದು ಸೋದರಿ ಬಾ
ಕುಂದಣದ ಹಸೆಗೆ
ಮಂದಹಾಸವ ತೋರಿ ಬಂದೆಮ್ಮ ಮನೆಯೊಳೆಂದೆಂದಿಗು
ಕುಂದದಾನಂದವ ಬೀರೆಂದು ೧

ನಾಡಿಗೊಡೆಯ ಗರುಡಾರೂಢನೆಂದೆನಿಸಿದ
ಗಾಡಿಕಾರನಾ ಕೃಷ್ಣನ
ಮಡದಿರನ್ನೆಯೆ ನಿನ್ನ ಪೊಡಮಟ್ಟು ಬೇಡುವ
ದೃಢಭಕ್ತರ ಕೈ ಬಿಡದಾಧರಿಸುತ್ತ ೨

ಸುರನರಪೂಜಿತ ಚರಣಸರೋಜದಿ
ನಿರುತಸೇವಿಪ ವರವ
ಕರುಣಿಸೆಂದೆನುತಲಿ ಕರಮುಗಿದೆರೆವೆನು
ವರಶೇಷಗಿರಿವಾಸನರಸಿ ನೀನಲಿದಿಂದು ೩

## ೬೭

ಏಳುಪೀಠಕೆ ನಳಿನಸಂಭವೆ ಜಗನ್ನುತೆ ಪ

ಬಾಲೇಂದು ನಿಭಫಾಲೆ ಶ್ರಿತಪರಿಪಾಲೆ ಕೋಮಲೆ ಅ.ಪ.

ಸಿಂಧುನಂದನೆ ಇಂದುಸೋದರಿ ಕುಂದರದನೆ ಮಂದಗಾಮಿನಿ
ವಂದಿತಾಖಿಲವೃಂದಾರಕ ವೃಂದಾನಂದಪ್ರದೆ ೧

ತೋರಮುತ್ತಿನ ಚಾರುಪೀಠಕೆ ಸಾರುಬೇಗನೆ ಸಾರಸಾನನೆ
ನಾರೀರನ್ನೆಯರು ಸಾರಿಕರೆವರು ಮೀರದಾನಂದದಿಂ ೨

ಶೇಷಶೈಲನಿವಾಸಿನೀ ನತಪೋಷದಾಯಿನಿ ಶ್ರೀರಮಾಮಣಿ
ಯಾಸಾಸಾರಸನೇತ್ರೆ ಕಮಲಾವಾಸೇ ದಯೆತೋರಿಸೆ ೩

## ೬೮

ಲಾಲಿಮನುಕುಲತಿಲಕ ಮದನಾರಿವಿನುತ
ಲಾಲಿಜನಕಜಾಮಾತ ಜಾನಕೀ ಸಮೇತ ಪ.

ಕೌಸಲ್ಯಾಪ್ರಿಯಬಾಲ ಕನಕಮಯ ಚೇಲ
ಕೌಶಿಕಕ್ರತುಪಾಲ ಕರುಣಾಲವಾಲ
ಪೋಷಿತಾಮರಜಾಲ ಬಾಲೇಂದು ನಿಭಫಾಲ
ದಶಕಂಠಮುಖಕಾಲ ಜಾನಕೀಲೋಲ ೧

ನಾಕೇಶನುತಚರಣ ನಕ್ತಂಚರಶಮನ
ಶ್ರೀಕಾಮಿನೀಸದನ ರಾಜೀವನಯನ
ಲೋಕನಾಯಕ ಸರ್ವ ಲೋಕಪಾಲಕ ದಿವ್ಯ
ಸಾಕೇತಪುರನಿಲಯ ಸನಕಾದಿಗೇಯ ೨

ಈಶಸನ್ನುತ ನಾಮ ನೀಲಮೇಘಶ್ಯಾಮ
ಶೇಷಾದ್ರಿಶಿಖರಧಾಮ ಶ್ರೀರಾಮನಾಮ
ಕ್ಲೇಶಪಾಶವಿರಾಮ ವಿಶ್ವಜನಸುಪ್ರೇಮ
ಕೋಸಲಾಧಿಪರಾಮ ಪರಿಪೂರ್ಣಕಾಮ ೩

## ೬೯

ಸರಸಿಜಾಲಯವೆನಿಪ ಸೊಗಸಿನ ವರರತ್ನ ಮಂಟಪದೊಳು
ಉರಗಪತಿಯಂತು ವರತಲ್ಪವಾಗಿರಲು
ಸಿರಿದೇವಿಯೊಡನೆ ನೀಂ ಶಯನಿಸು ೧

ತಪನಶಶಿಗಳೆಂಬುವ ಅಪ್ರತಿಮ ದೀಪಗಳು ಪ್ರಜ್ವಲಿಸಲು
ಚಪಲಾಕ್ಷಿ ಶ್ರೀದೇವಿಯುಪಚಾರದಿಂ ನಲಿದು
ಅಪರಿಮಿತಾನಂದದಿಂ ಶಯನಿಸು ೨

ತುಂಬುರ ನಾರದರೆಂಬುವ ವಂದಿಮಾಗದರ ತಂಬೂರಿಸ್ವರಗಾನವ
ಸಂಭ್ರಮದಿ ಕೇಳುತ್ತ ಅಂಬುಜೋದ್ಭವ ತಾತ
ಅಂಬುಜಾನನೆಯೊಡವೆರಸಿ ನಲಿಯುತ ೩

ಗರುಡ ಪವನಜರೆಂಬುವ ನಿನ್ನಂಘ್ರಿಸರಸಿಜವ ಸೇವಿಸುವ
ಪರಮಭಕ್ತರು ಬಂದು ಕರಮುಗಿದು ನಿಂದಿರಲು
ವರಯೋಗನಿದ್ರೆಯಿಂ ಕುಡುತೆ ಮುದವಂ ೪

ವರಶೇಷಗಿರಿನಿಲಯನೆ ಜಯಜಯತು ವರದನಾರಾಯಣನೆ
ಕರವಿಡಿದು ಪೊರೆಯೆನ್ನ ದೊರೆ ಮರೆಯೆ ನಾನಿನ್ನ
ಪರಮಮಂಗಳೆಯೊಡನೆ ನೀಂ ಪರುಕಿಸೆನ್ನ ೫

೭೦

ಮಂಗಳಂ ರಘುರಾಮಗೆ ಜಯಮಂಗಳಂ ಗುಣಧಾಮಗೆ
ಮಂಗಳಂ ಮದನಾರಿವಂದ್ಯಗೆ ಮಂಗಳಂ ಮನ್ನಾಥಗೆ ಪ.

ರಾಮಗೆ ನತಕಾಮಗೆ ಘನಶ್ಯಾಮಗೆ ಸುಪ್ರೇಮಗೆ
ಕಾಮಿತಾರ್ಥಪ್ರದಾತಗೆ ವರರಾಮಣೀಯಕ ರೂಪಗೆ ೧

ಶ್ರೀಶಗೆ ಜಗದೀಶಗೆ ಭಯನಾಶಗೆ ಸರ್ವೇಶಗೆ
ದಾಸಜನಮನೋಲ್ಲಾಸ ಲಕ್ಷ್ಮೀಶಕೇಶವ ಮೂರ್ತಿಗೆ ೨

ಮಾರುತಾತ್ಮಜಪರಿಸೇವ್ಯಗೆ ನತಪಾರಿಜಾತ ಸಮಾನಗೆ
ವಾರಿಜಾಯತನೇತ್ರ ಶ್ರೀಶೇಷಶೈಲ ನಿವಾಸಗೆ ೩

೭೧

## ಕ್ಷಮಾ ಪ್ರಾರ್ಥನೆ

ಗುರುಹಿರಿಯರೆಡೆಯಲ್ಲಿ ಶಿರಬಾಗಿಸಿನಯದಲಿ
ಎರೆವೆನೀಪರಿಯಲ್ಲಿ ಕರವಮುಗಿದು
ಯತಿನಿಯಮ ಛಂದಸ್ಸು ಗತಿತಾಳಲಯಬಂಧ
ನುತಶಬ್ದ ತತ್ವಾರ್ಥ ಸಂಗತಿಯನು
ವರಕವಿಗಳೊರೆದಿರ್ಪ ತರತರದ ಪ್ರಾಸಗಳ
ವರಲಕ್ಷಣಲಂಕಾರ ಮೆಂಬ
ಪರಿಕರಂಗಳನರಿದು ಪರಿಪರೀಸಿಂಗರಿಸ
ಲರಿಯೆ ಕವಿತಾಮಣಿಯ ಪರಿಯನರಿಯೆ

ಸರಿಸದೋಳ್ನಿಂದೆ ನೆಂದರಿಯ ಬೇಡಿ
ಅರಿಯದಾತರಳೆ ರಚಿಸಿದುದನುನೋಡಿ
ಹಿರಿಯರೊಳುಗರುವತೋರಿದೆನೆನ್ನ ಬೇಡಿ
ಸರಿದೋರಿದಂತೆಸಿಗೆ ಕೃಪೆಮಾಡಿ

**ಸಮರ್ಪಣೆ**

ತ್ವದ್ದತ್ತವಾಚಾ ತವಕಿಂಕರೇಣ
ತ್ವತ್ಪ್ರೀತಿ ಕಾಮೇನ ಮಯಾಕೃತೇನ ।
ಸ್ತೋತ್ರೇಣ ಲಕ್ಷ್ಮೀನೃಹರೇ ಸವಿಷ್ಣುಃ
ಪ್ರೀತೋಭವತ್ತಂ ಕರುಣಾರ್ದ್ರದೃಷ್ಟಿಃ ॥

ಮಾತೆ ಬರುವುದ ಕಂಡಾನೇ । ಮುದ್ದದಿಂದಲಿ ಎದ್ದುಕುಳಿತಾನೇ
ತಂದ ಶುಭವಾರ್ತೆಯ ಕೇಳ್ಯಾನೇ
ಮಂದಹಾಸದಿಂದ ನಲಿದಾನೇ ೭

ಬಂಧುಗಳೆಲ್ಲರ ಕರಿಸ್ಯಾನೇ ಮುಂದೆ ಮಾಡಿಕೊಂಡು ನಡೆಸ್ಯಾನೇ
ಮದು ಮಗನಾಗಿ ನಿಂತಾನೆ । ಪದುಮಾವತಿ ಕೈ ಪಿಡಿದಾನೇ ೮

ಜಯ ಜಯವೆಂದರು ಸುರಬ್ರಹ್ಮಾದಿಗಳು ವಾಣಿ-ಪಾರ್ವತಿಯರು
ಜಯ ಜಯ ವೆಂದರುಗಗನದಿ ಅಮರರು ಮದುಮಳ
ಮೇಲೆ ಪೂಮಳೆಗರೆದರು ೯

ಮಂಗಳವೆನ್ನಿರೆ ಪದ್ಮಿನಿ ಅರಸಗೆ ಪನ್ನಗ ಶಯನಗೆ
ಮಂಗಳವೆನ್ನಿರೆ ಪರಮ ಕಲ್ಯಾಣಗೆ ಮಂಗಳವೆನ್ನಿರೆ ಶ್ರೀ
ವೇಂಕಟ ವಿಠಲಗೆ ಮಂಗಳಾ ಜಯಮಂಗಳಾ ೧೦

## ೨

ಎಂದೆಂದಿಗೂ ನಾ ಬಿಡೆ ನಿನ್ನ ಚರಣಾ
ಬಂದೆನ್ನ ಕಾಯೊ ಶ್ರೀ ವೇಂಕಟರಮಣಾ ಪ

ಪಟ್ಟಿ ಪೀತಾಂಬರ ತೊಟ್ಟ ಮುತ್ತಿನ ಹಾರಾ
ಕಟ್ಟಿದ ವೈಜಯಂತಿ ತುಳಸಿಯ ಮಾಲಾ
ಸುಂದರ ವದನ ಶುಭಾಂಗ ಮನೋಹರಾ
ಮಕರ ಕುಂಡಲಧರ ಮೋಹನ ರೂಪಾ ೧

ನಿತ್ಯ ತೃಪ್ತನೀನೆ ನಿಜ ಗುಣಪರಿಪೂರ್ಣ ನಿತ್ಯ ಕಲ್ಯಾಣನೆ
ನಿಗಮ ಗೋಚರನೆ ಅಕಳಂಕ ಚರಿತನೆ ಸಕಲರಪಾಲಿಪ
ಅನಂತ ರೂಪಾ ಶ್ರೀ ವೆಂಕಟೇಶಾ ೨

ಪಾವನ ಚರಿತನೇ ಪರಮ ಪವಿತ್ರನೇ
ಪರಮ ಕಲ್ಯಾಣ ಗುಣಾರ್ಣವನೇ

ಗರುಡ ಗಮನನೇ ದುರಿತ ವಿದೂರನೆ
ಪರಮದಯಾ ನಿಧೆ ವರಗಿರಿವಾಸಾ ೩

ದೇಶ ದೇಶವ ತಿರುಗಿ ಘಾಸಿ ಗೊಂಡಿಹೆ ಭರದಿ
ಕ್ಲೇಶ ಪಾಶಂಗಳ ಪರಿಹರಿಸಯ್ಯಾ
ವಾಸುದೇವನೆ ನಿಮ್ಮ ನಾಮ ಸ್ಮರಿಸುವಂತೆ
ಲೇಸಾದ ಭಕುತಿಯ ನಿತ್ಯ ಪಾಲಿಸು ಪ್ರಭುವೆ ೪

ಸುರಮುನಿ ವಂದ್ಯನೇ ಸುರನರ ಸೇವ್ಯನೇ
ಶರಣರ ಪಾಲಿಪ ಸರ್ವೋತ್ತಮನೇ
ತಿರುಪತಿವಾಸನೆ ತಿರುಮಲೆ ಶ್ರೀಶನೇ
ಶೇಶಗಿರೀಶನೆ ಶ್ರೀ ವೇಂಕಟವಿಠಲನೇ ೫

೩

ಏನೆಂದು ಕೊಂಡಾಡಿಸ್ತುತಿಸಲೋದೇವಾ
ನಾರಾಯಣ ಕೃಷ್ಣನಂದ ಮುಕುಂದಾ ಪ

ನಿನ್ನ ಪೊತ್ತು ತಿರುಗಿಸಲು ಖಗರಾಜನಲ್ಲ
ನಿನ್ನ ಪದ ಸೇವಿಸಲು ಪವನ ಸುತನಲ್ಲಾ
ನಿನ್ನೆತ್ತಿ ಆಡಿಸಲು ನಂದ ಯಶೋದೆಯಲ್ಲಾ
ನಿನ್ನೆಂತು ಸೇವಿಸುವೆ ಪೇಳು ಇಂದಿರೆರಮಣಾ ೧

ನಿನ್ನೊಡನಾಡುವೆನೆ ಗೋಪಾಬಾಲಕನಲ್ಲಾ
ನಿನ್ನ ಸಹಪಾಠಿ ಸುಧಾಮನಾನಲ್ಲಾ
ಪಾಡಿ ಪೊಗಳಲು ಸುರ ಮುನಿಯುನಾನಲ್ಲ
ನಿನ್ನೆಂತು ಸೇವಿಸಲೊ ಯದುಕುಲೋತ್ತಮನೇ ೨

ಅಗರು ಚಂದನ ಪರಿಮಳದ್ರವ್ಯಗಳನೆ
ತಂದು ಅರ್ಪಿಸಲು ಕುಬುಜೆಯಲ್ಲಾ

ಆದರದಿ ಪಾಲ ನೀಡೆ ವಿದುರನಲ್ಲಾ
ಅನಂತ ಗುಣಪೂರ್ಣನೇ ಶ್ರೀ ಹರಿ ೩

ಗೋವುಪಾಲನು ತಂದು । ನಿನಗ ಭಿಷೇಕ ಮಾಡುವೆನೆ
ಕ್ಷೀರಸಾಗರದಲ್ಲಿ – ಪವಡಿ ಸಿರುವೇ
ವಿಧ ವಿಧ ಪುಷ್ಪಗಳ ತಂದು ಅರ್ಚಿಸಲು
ಪೊಕ್ಕಳೊಳು ಪುಷ್ಪವನೆಪಡೆದಿರುವೆ ಹರಿಯೆ ೪

ಕರಿರಾಜ ನಿನ್ನ ಕರೆಯೆ ಕರುಣದಿಂದ ಬಂದೆ
ಪ್ರಹ್ಲಾದಗೋಲಿದು ಕಂಬದಲಿ ನಿಂತೇ
ದ್ರೌಪದೀ ದೇವಿಗಕ್ಷಯಾಂಬರ ವಿತ್ತೆ
ಅಂತೆ ಎನ್ನಪಾಲಿಸೊ ಲಕ್ಷ್ಮೀಕಾಂತನೇ ೫

ಪರಿಪಯಲಿಭಕ್ತರ ಪಾಲಿಸಿದೆಯೊ ದೇವಾ
ಪರಮ ದಯಾಳುವೆಂದೆನಿಸಿಕೊಂಡೇ
ಪರಮ ಪುರುಷನು ನೀನು ಪಾಮರನು ನಾನಹುದೊ
ದಾರಿ ಕಾಣದೆ ಇರುವೆ ದಯೆತೋರು ಮುರಾರಿ ೬

ಭಕ್ತವತ್ಸಲ ನೀನೆ ಭಯನಿವಾರಣ ನೀನೇ
ಭಾಗವತಜನಪ್ರಿಯ ನೀನೆ ಸರ್ವರಕ್ಷಕ ನೀನೆ
ಸರ್ವವ್ಯಾಪಕ ನೀನೆ ಸರ್ವಾಂತರ್ಯಾಮಿ
ಶ್ರೀ ವೇಂಕಟವಿಠಲಾ ೭

೪

ಕರುಣೆ ತೋರಬಾರದೇನೋ ಮಾಧವಾ
ಹರಿಯೇ ಧೊರೆಯೇ ಪ

ಕಂದನ ನುಡಿಕೇಳಿ ಕಂಬದಿಂದ ಬಂದೆ
ಅಂದು ಅಹಲ್ಯೆಯ । ಬಂಧನ ಬಿಡಿಸಿದೆ

ಕರಿಮೊರೆಯಿಡಲಾಕ್ಷಣ ಬಂದು ನೀ
ನಕ್ರನ್ನ ಸೀಳಿದ ಚಕ್ರಧರನೆ ನೀನು ೧

ತರಳ ಧೃವನ್ನಾ ತೊಡೆಯಿಂದ ನೂಕಲು
ಕಡುಭಯದಿಂದ ವನದಲ್ಲಿ ಚರಿಸುತ್ತ
ಘನತಪಗೈಯಲು ಧೃಡ ಭಕುತಿಗೆ ಮೆಚ್ಚಿ
ಒಡನೆ ಓಡಿ ಬಂದು ಘನತರ ಸಂಪದವತ್ತೆ ೨

ಪರಿಪರಿಯಲಿ ದೇವ ಭಕ್ತರ ಕಾವ
ಪರಮ ಪುರುಷೋತ್ತಮ ನೀನಲ್ಲವೆ
ಮೊರೆಹೊಕ್ಕೆನು ನಿನ್ನ ಕರುಣಿಗಳರಸನ್ನ
ತ್ವರಿತದಿಂದಲಿ ಕಾಯೊ ವೆಂಕಟವಿಠಲಾ ೩

೫

ಪಾಲಿಸೆಮ್ಮನು ವೆಂಕಟೇಶಾ ನಂಬಿದೆ ನಿನ್ನ ಪಾದಾ
ಸಲಹೋ ಗಿರೀಶಾ ಪಾಲಿಸು ಪನ್ನಗಾ ಚಲವಾಸಾ
ಪಾಲಿಸುವ ನ್ನ ಸರ್ವೇಶಾ ಪ

ಪರಿಪರಿಯಲಿ ನಿನ್ನನಾ ಅನುದಿನ ಕೊಂಡಾಡುವೆನಾ
ಪತಿತ ಪಾವನ ನೀನೇಗತಿಯೆಂದು ನಂಬಿದೆ
ಸನ್ಮತಿಯ ಪಾಲಿಸು ದೇವಾ ಅಹಿಗಿರಿ ನಿಲಯಾ ೧

ಕರುಣಾಳು ನೀನೆನುತಾ ನಿನ್ನ ಬಳಿ ಬಂದೇನು ಬಹು ತ್ವರಿತಾ
ಕರಣಶುದ್ಧನ ಮಾಡಿ ಕರೆದುಕೋ ಯನ್ನನು
ಕರುಣಾಕರ ವೆಂಕರಾಯಾ ಜೀಯಾ ೨

ಕಲಿಯುಗದೊಳಗೆ ನಿನ್ನ ಮಹಿಮೆಯ ಪೊಗಳಲೆನ್ನೊಶವೆ
ಮುನ್ನಾ ಅಗಣಿತ ಮಹಿಮನೀನೆನುತಾ ಸಾರುತಲಿರೆ
ಸರಿಯಾರು ನಿನಗೇ ಮೂಲೋಕದ ದೊರೆಯೇ ೩

ಕರೆಕರೆ ಸಂಸಾರದೀ ಕೊರಗುತ್ತ ಮರುಗುತ್ತಲಿಹೆ ಭರದೀ
ಕರುಣಿಗಳರಸನೆ ಕಾರುಣ್ಯ ಮೂರುತಿ
ಕಣ್ದೆರೆದು ನೋಡೆಮ್ಮನು ಕನಕಾದ್ರಿಗೊಡೆಯಾ ೪

ಅರ್ಥಿಯಿಂದಲಿ ನಿನ್ನ ಬಲು ಪರಿಯಿಂದಲಿ ನುತಿಪೆನಾ
ಕಡೆಗೆ ನೀನಲ್ಲದೆ ಮತ್ಯಾರಿಹರೊ ದೇವಾ
ಸತ್ಯ ಮೂರುತಿ ನೀನೆ ಹತ್ತಿರ ಕರೆದು ಸಲಹೋ ೫

ಹಿಂದೆ ಪ್ರಹ್ಲಾದನ ನುಡಿಯಾ ಕೇಳಿ ನೀ ಕಂಬದಿಂದೊಡೆದು ಬಂದೆ
ಅಂಧಕಾರದಿ ಮುಳುಗಿ ಮುಂದೆ ಕಾಣದಲಿರುವೆ ಒಡೆಯ
ಬಂದೆನ್ನ ಕಾಯೋ ಶ್ರೀ ಇಂದಿರೆ ರಮಣಾ ೬

ಬೆಟ್ಟದ ಮೇಲಿರುವೇಬಂದ ಬಂದವರಿಗನಂತ
ವರವ ಕೊಡುವೇ
ನಿಷ್ಠೆಯಿಂದಲಿ ಮನ ಮುಟ್ಟಿ ಭಜಿಸುವರ
ಇಷ್ಟಾರ್ಥಗಳ ಕೊಡುವೆ ವೆಂಕಟವಿಠಲಾ ೭

**೬**

ಭಕ್ತ ವತ್ಸಲ ಸ್ವಾಮಿ ಭಯನಿವಾರಣ ದೇವ
ಭರದಿಂದ ಬಂದುದ್ಯಾಕೆ ಪೇಳಯ್ಯಾ ಪ

ನೀರೋಳಗೆ ಮುಳುಗುತವನಿ ಭಾರ ಹೊತ್ತು ಬಂದೆಯಾ
ಕೋರೆದಾಡಿಗಳಿಂದ ಧಾರೂಣಿ ಎತ್ತೀ ತಂದು
ಭಾರ ವಾಯಿತೆಂದು ಬಂದೆಯಾ ೧

ಬಾಲಕಾನಾ ನುಡಿಯ ಕೇಳಿ । ಬೇಗದಿಂದಾ ಬಂದೆಯಾ
ದುರುಳನ್ನ ಕೊಂದು ಕರುಳ ಮಾಲೆಯಧರಿಸಿ ನೀ
ತರಳಗಭಯವಿತ್ತು ಬಂದೆಯಾ ೨

ಬಲಿಯ ದಾನಾಬೇಡಿ ನೀನು ಕೊಡಲಿ ಪಿಡಿದೂ ನಿಂತೆಯಾ
ಮಡದಿಯಾ ಕದ್ದವನ ಬಿಡದೆ ಬೆನ್ನಟ್ಟಿಕೊಂಡು
ಸಡಗರದಲಿ ನೀ ಬಂದೆಯಾ ೩

ಮಧರೇಲಿ ಹುಟ್ಟಿ ಮಲ್ಲಾರ ಮಡುಹೀ
ಮಾವ ಕಂಸನ ಕೊಂದು ಬಂದೆಯಾ
ತಂದೆ ತಾಯಿಗಳ ಬಂಧನ ಬಿಡಿಸೀನೀ
ಆನಂದಿಂದಿಲ್ಲಿ ಬಂದೆಯಾ ೪

ವಸನಾ ವಿಲ್ಲದೆ ನೀನು ಪಶುವನ್ನೇರಿಕೊಂಡು ವಸುಧೆಯ
ಒಳಗೆಲ್ಲಾ ತಿರುಗೀದೆಯಾ
ಸ್ಮರಿಸುವ ಜನರಾ ಪೊರೆಯ ಬೇಕೆನುತಲೀ ಅವಸರದಲಿ
ನೀ ಬಂದೆಯಾ ೫

ಕರಿಯಾ ಮೊರೆಕೇಳಿ ನೀ ತ್ವರಿತಾದಿಂದಾ ಬಂದೆಯಾ ಮ
ಕರಿನ್ನ ಸಂಹರಿಸಿ ಕರಿಯಾನುದ್ಧರಿಸಿ ।
ಕರಿವರದನೆಂದೆನಿಸಿಕೊಂಡೆಯಾ ೬

ಕಷ್ಟ ಪಡುವಾ ಜನರ ಕಂಡು ಕಡುದಯದಿಂ ಬಂದಿಯಾ
ಪಕ್ಷಿವಾಹನನೇ । ಲಕ್ಷ್ಮಿರಮಣನೆ । ಕಟಾಕ್ಷವನೇ ಬೀರುವಿಯಾ ೭

ಹತ್ತವತಾರವ ಎತ್ತಿ ಬೇಸತ್ತು ನೀ ಮತ್ತೆ ನೀನಿಲ್ಲ ಬಂದಿಹೆಯಾ
ಎತ್ತ ಪೋದರು ಸ್ವಾಮಿ ಬಿಡದೆ ನಿನ್ನ ಬೆನ್ನತ್ತಿ
ಬರುವರು ಕಂಡೆಯಾ ೮

ಲಕ್ಷ್ಮಿ ಇಲ್ಲದೆ ನಾನಿರೆನೆನುತಲಿ ವೈಕುಂಠ ಬಿಟ್ಟು ಬಂದೆಯಾ
ಹುತ್ತಾದೊಳಗೆ ಇದ್ದು ನೆತ್ತೀಯ ಒಡಕೊಂಡು
ಭಕ್ತಾರ ಸಲಹಲು ಬಂದಿಹೆಯಾ ೯

ಎಲ್ಲೆಲ್ಲಿಯೂ ನಿನಗೆ ಸ್ಥಳವಿಲ್ಲವೆನುತಲಿ ಗಿರಿಯ
ಮೇಲೇರಿ ನಿಂತಿರುವಿಯಾ
ಜಗದಲ್ಲೆಲ್ಲ ನಿನ್ನ ಕೀರ್ತಿ ತುಂಬಿರಲಾಗಿ
ಹುಡುಕೀಕೊಂಡಿಲ್ಲೇ ಬಂದಿಹೆಯಾ ೧೦

ಪಾಪನಾಶಿನಿ ಸ್ನಾನ ಮಾಡೋರು । ನಿನ್ನ ಧ್ಯಾನ ಬೇಡೋರು
ಮನದಿಷ್ಟಾರ್ಥಗಳ ಸಲಿಸಲು । ಆತೂರದಿಂದಲಿ ಬಂದೆಯಾ ೧೧

ನಾನಾದೇಶಗಳಿಂದ ನಾನಾ ಜನರು ಬಂದು ನಾನಾ
ರೀತಿಗಳಿಂದ ಸೇವಿಸುವರು
ನಡೆಮುಡಿ ಹಾಸೋರು ಅಡಿಗಡಿಗೆ ಗೋರು ಬಿಡದೆ
ನಿನ್ನ ಕೊಂಡಾಡುವರು ೧೨

ದೂರ ದೂರದಿಂದ ದಾರಿನಡೆದು ಬಂದು ಬಳಲುತ್ತ ನಿನ್ನ
ಬಳಿ ಬಂದಿಹರು
ಅಡ್ಡಬಿದ್ದೂ ನಿನಗೆ ಬಡ್ಡಿಸಹಿತಾ ಕೊಟ್ಟು ಶರಗೊಡ್ಡಿ
ಬೇಡುತಾ ನಿಂದಿಹರೂ ೧೩

ಕಂಗಳಿಲ್ಲಾದವರು ಅಂಗಾವಿಕಲದವರು ಭಂಗಾವ
ಪಡುತಲಿ ಬಂದಿಹರು
ಮಂಗಳಮೂರುತಿ ಅವರ ಅಂತರಂಗಾ ತಿಳಿದು
ಸಂತಯಿಸಬೇಕೆನುತ ಬಂದಿಹೆಯಾ ೧೪

ಮೂಕ ಬಧಿರಾರೆಲ್ಲ ಸಾಕು ಸಾಕುಗುತ್ತ ಬಳಲುತ್ತ ನಿನ್ನ
ಬಳಿ ಬಂದಿಹರೂ
ವ್ಯಾಕೂಲದಿಂದನೇಕಾ ಪಾಪಗಳನೆಲ್ಲ ನೂಕಿ
ಬೀಸಾಡಲೂ ಬಂದಿರುವಿಯಾ ೧೫

ಕಪ್ಪಾಕಾಣಿಕೆಗಳಾ ತಪ್ಪಾದೆತಂದು ನಿನಗೊಪ್ಪಿಸಬೇಕೆಂದು
ಬಂದಿಹರೂ

ಅಪ್ಪಾ, ನಮ್ಮಪ್ಪಾ, ತಿಮ್ಮಪ್ಪಾ ನೀ ಕಾಯೆಂದು,
ನಿನಗೊಂದಿಸುವರೂ ೧೬

ಲಜ್ಜೇಯ ತೊರೆದು ಕಾಲ್ಗೆಜ್ಜೇಯ ಕಟ್ಟಿಕೊಂಡು
ಹೆಜ್ಜೆಗೆ ನಿನ್ನ ವಂದಿಸುತಲೀ
ನೋಡುತ್ತ ಮನದಣಿ ಪರವಶರಾಗುತ್ತ ಆನಂದ
ಬಾಷ್ಟಗಳ ಸುರಿಸುವರೂ ೧೭

ಗೊವಿಂದ, ಗೋವಿಂದ, ಎಂದೆನುತ್ತಜನ ಆನಂದದಿಂದ
ನಲಿಯುವರೂ
ಆಡುತ್ತಾ ಪಾಡುತ್ತ ನಿನ ಕೊಂಡಾಡುತ್ತ ಕುಣಿ
ಕುಣಿ ದಾಡುವರೂ ೧೮

ಮೋಸಾ ವಿಲ್ಲಿದೆ ಒಂದು ಕಾಸೂಬಿಡದೆ ಹಣ
ದೋಚಿಕೊಳ್ಳುತ ನೀ ನಿಂತಿರುವೇ
ಇಲ್ಲಾ ಎನುತ ಜನ ಮಳ್ಳುಮಾತಾಡಿದರೆ
ಯಲ್ಲಾನುಕಸಕೊಂಡು ಕಳುಹುವಿಯೇ ೧೯

ನಿನ್ನ ದರ್ಶನದಿಂದ ಮುನ್ನ ಮಾಡಿದ ಕರ್ಮವೆಲ್ಲಾ
ತೀರೀತೆಂದು ತಿಳಿಯುತಲೀ
ಘನ್ನ ಮಹಿಮಾ ನಿನ್ನ ಮನ್ನಾಣೆ ಪಡೆಕೊಂಡು
ಧನ್ಯರಾದೇವೆನುತ ತೆರಳುತಿಹರೂ ೨೦

ಸಾಲುಸಾಲಾಗಿ ಎಲೆಗಳ ಹಾಕುತ್ತ
ಮೇಲಾದ ಭಕ್ಷಗಳ ಬಡಿಸುವೋರು
ಉಂಡು ಕೈತೊಳಕೊಂಡು ತಾಂಬೂಲವಾ
ಹಿಂಡಾಗಿ ಹಿಡಿದು ತೆರಳುವರೂ ೨೧

ಅಪ್ಪ ವೆಂಕಟಸ್ವಾಮಿ ತಪ್ಪುಸಾಸಿರಗಳ
ಒಪ್ಪಿಕೊಂಡು ಎಮ್ಮ ರಕ್ಷಿಸುವನೂ
ಆಪದ್‌ಬ್ಯಾಂಧವನೇ ಅನಾಥ ಬಂಧುವೇ
ಅಪಾರ ಮಹಿಮ ನೀನಲ್ಲವೇ ೨೨

ಪಂಕಜನಾಭನೇ ಪಂಕೇರುಹಾಕ್ಷನೇ
ಪಂಕಜೋದ್ಭವನೇ ನಮೋ ನಮೋ
ಅರಸುತ್ತ ಬಂದು ಅಳಗಿರಿಯಲಿ ನಿಂದ
ಅನಂತ ಮೂರ್ತಿಯೆ ನಮೋ ನಮೋ ೨೩

ಶೇಶಗಿರೀಶನೇ ದಾಸರಧೀನನೇ ಶ್ರೀವೆಂಕ –
ಟೇಶನೆ ನಮೋ ನಮೋ
ಭಕ್ತಾರ ಸಲಹಲಿಕೆ ಬೆಟ್ಟಾದೊಳ್ನಿಂದ
ವೆಂಕಾಟ ವಿಠಲನೆ ನಮೋ ನಮೋ ೨೪

ನಮೋ ನಮೋ ವೆಂಕಟೇಶಾ ನಮೋ ನಮೋ ತಿರುಮಲೇಶಾ ।
ನಮೋ ನಮೋ ಜಗದೀಶಾ ನಮೋ ನಮೋ ಸರ್ವೇಶಾ ೨೫

## ೭

ರಕ್ಷಿಸು ಶ್ರೀ ವೆಂಕಟೇಶಾ ನಿನ್ನ ನಂಬಿದೆನ್ನೈ ಶ್ರೇಷಗಿರಿವಾಸಾ ಪ

ವರ ಋಷಿಗಳು ಕೂಡೀ ಸರ್ವೋತ್ತಮನಾರೆಂದು
ತಿಳಿಯಲು ಬೇಗಾ ಭೃಗು ಮುನಿತಾ ಬಂದೂ
ಶ್ರೀ ಹರಿ ಮಲಗಿರಲಂದೂ ತಾಡನೆ ಮಾಡಿದನೆಂದೂ ೧

ಅದು ಕೇಳಿ ಸಿರಿದೇವಿ ಸೈರಿಸಲಾರದೆ
ನಡೆದಳು ಕೊಲ್ಲಾಪುರಕೆ ತಾನಾಗಾ
ತಿಳಿದು ಹರಿಬೇಗಾ ಧರೆಗಿಳಿದನು ಆಗಾ ೨

ಪರಿಪರಿಭಕ್ತರಾ ಪೊರೆಯ ಬೇಕೆನುತಲಿ
ಧರೆಗಿಳಿದು ಬಂದೂ ಬೆಟ್ಟದೊಳ್ ನಿಂದಾ
ಸುರಮುನಿವಂದ್ಯ ಶರಣು ಗೋವಿಂದಾ ೩

ದೇಶದೇಶಗಳಿಂದಾ ಭಕ್ತಜನರು ಬಂದೂ
ಕಾಣಿಕೆಗಳ ತಂದೂ ಅರ್ಪಿಸುವರು ದೇವಾ
ಮಹಾನುಭಾವಾ ಪಾಲಿಸುದೇವಾ ೪

ಅಪ್ಪಲು ಅಕಿರಸಿ ಒಪ್ಪದಿಂದಲಿಮಾರಿ
ಕೊಪ್ಪರಿಗೆ ಹಣ ತುಂಬಿಸಿಕೊಂಡು ಸೇವೆಕ್ಕೆ ಕ್ಕೊಂಡ್ಯಾ ನಿನ್ನ
ಸರಿಯಾರಿಲ್ಲ ಕಂದ್ಯ ೫

ಮೋಸ ಹೋಗುವನಲ್ಲಾ ಭವಪಾಶ ಬಿಡಿಸಲು ಬಲ್ಲ
ಈಸು ಮಹಿಮೆಗಾರ ಶ್ರೀಲಕ್ಷ್ಮೀವಲ್ಲ ಕೈಬಿಡನಲ್ಲ
ಇದಕೆ ಸಂಶಯವಿಲ್ಲ ೬

ದಾನವಾಂತಕ ನಿನ್ನಾ ದಯವಾದ ಮೇಲಿನ್ನಾ
ಬೇರೆ ದೈವಗಳನ್ನ ಬಯಸಲ್ಯಾತಕೆ ಹೇಳು
ದೀನ ದಯಾಳೂ ಭಕ್ತಕೃಪಾಳೂ ೭

ನಿನ್ನ ಹೊರತು ಪೊರೆವರನ್ನರಕಾಣೆನು ಘನ್ನ ಮಹಿಮಾ
ಶ್ರೀ ಕರುಣಾ ಸಂಪನ್ನಾ ತಡವ್ಯಾಕೊ ಪ್ರಸನ್ನಾ
ಮನಮಾಡೋ ಮೋಹನ್ನಾ ೮

ಭಕ್ತ ವತ್ಸಲ ನೀನಭಯವಿತ್ತ ಮೇಲೆ ಭಯವ್ಯಾಕೊನಮಗಿನ್ನು
ಭಕ್ತರಭಿಮಾನೀ ಸತ್ಯ ನಿನವಾಣೀ ನಿನ್ನ ಸಮರ್ರ್ಯಾರೊದಾನೀ ೯

ಆದರದಿಂಧ ಪೊರೆವಾಪ್ರೇಮಸುಧೆಯ ಕರೆವಾ
ಕಾಮಿತ ಫಲಗಳ ಕರೆದುತಾ ಕೊಡುವಾ
ಕನಕಾದ್ರಿಯೊಳಿರುವಾ ಕೀರ್ತಿಯೊಳ್ ಮೆರೆವಾ ೧೦

ಕಷ್ಟಗಳನೆ ಕಳೆದಿಷ್ಟಾರ್ಥ ಕೊಡುವಾ ಸೃಷ್ಟಿಗೊಡೆಯ ಶ್ರೀ
ವೆಂಕಟವಿಠಲಾ ಕರುಣಾಲವಾಲಾ ಪದ್ಮಿನಿಲೋಲಾ ೧೧

## ೮

ಅಂದರೇನೋ ಆ ನಾರಿಯರು ನಿನ್ನಂದರೇನೋ ಪ

ಅಂದವರ ಬಾಯಿಗೆ ಅಂಕುಶನಾನ್ಹಾಕುವೆ ಮುದ್ದು
ಕಂದಯ್ಯ ನಿನ್ನಂದಾರೇನೋ ಅ.ಪ

ಬಿಸಿಲೊಳು ಮನೆಕಟ್ಟಿ ಬಿಸಿಬಿಸಿಯಾಗಿ ಹಾಲೆರದೂ
ಶಶಿ ಮುಖಿಯರ ಕೋಲಾಪಿಡಿದೂ
ಕೊಲ್ಲೀಸುವೆ ನೀನಳದಿರಣ್ಣಾ ೧

ನಿನ್ನಾಡಿಕೊಂಬೋರಚೆನ್ನಾಗಿ ಹಿಡಿದೆಳತಂದು
ಬೆನ್ನಾ ಹೊಯಿಸುವೆನೀನಳಬೇಡವೋ ಚಿನ್ನಾ ೨

ಇನ್ನಾದರೆನ್ನಯ ಮಾತು
ಪೇಳುವೆ ಕೇಳ್ ರಂಗಾ ನಾರಿಯರ ಸಂಗಾ ಪಡಿಸೋದು
ಬಲುಭಂಗಾ ಪೋಗಾಬೇಡಾ ೩

ಪಾಲು ಮೊಸರನ್ನವ ಕಲೆಸಿ ನಾ ಉಣಿಸುವೆ
ಸದ್ದು ಮಾಡದೆ ಉಂಡು ನಿದ್ರೆ ಮಾಡೆನ್ನ ಕಂದಾ ೪

ಮುದ್ದು ಕಂದಯ್ಯ ನೀನು ಮಡುವ ಧುಮಿಕಿದರೆ
ಮನದಾ ಸಂತಾಪ ಸೈರಿಸಲಾರೆನೋ ೫

ಶೇಷ ಗಿರೀಶನೆ ದಾಸರಧಿನನೇ
ಶೇಷ ಶಯನನೇ ವೇಂಕಟ ವಿಠಲನೇ ೬

## ೬

ಅಂದಾರಮ್ಮಾ ಆ ನಾರಿಯರು ನನ್ನಂದಾರಮ್ಮಾ ಪ

ಗೋಪಾಲರೊಡಗೂಡಿ ಗೋವ್ಗಳ ಕಾಯ್ವಾಗ
ಗೋಪಾಲನೆಲ್ಲಾ ಸೂರೆಗೊಂಬುವೆ ನಂತೇ
ಗೋಪೇರ ಮನೆ ಪೊಕ್ಕು ನೆಲುವಿನ ಪಾಲ್ಮೊಸರ
ಕುಡಿದು ಗಡಿಗೆಯ ಒಡೆದು ತೂತು ಮಾಡಿದೆನಂತೆ ೧

ನಾರೀಮಣಿಗಳೆಲ್ಲ ನೀರಿಗೆ ಪೋಪಾಗ ದಾರಿಗಡ್ಡವಕಟ್ಟಿ
ಪೋಲು ಮಾಡಿದೆನಂತೆ ಕಳ್ಳಾನು ನಾನಂತೇ ಕಾಮಿನಿಯರ
ಕೆಡೆಸಿದನಂತೇ
ಒಳ್ಳೆ ಬುದ್ಧಿ ಇಲ್ಲಾವಂತೇ ಯನ್ನ ಹೋಗ್ಹೋಗಂದರಮ್ಮಾ ೨

ಮರುಳಾನು ನಾನಂತೆ ಸರಸಿಜಾಕ್ಷಿಯರೆಲ ವರಳಿಗೆ
ಕಟ್ಟಿ ಬರಿದ ಬಾಧಿಸುವರೇ
ಬಲ್ಲೀದ ನಾನಾಂತೆ । ಫುಲ್ಲಾಕ್ಷಿಯರಿಗೆಲ್ಲ ವಲ್ಲಾಭನೆನುತಲಿ
ಸುಳ್ಳಾಡಿ ಕೊಂಬೋರೆ ೩

ಸಣ್ಣಾವನಲ್ಲವಂತೆ । ಬಿನ್ನಾಣಗಿತ್ತಿಯರೆಲ್ಲ
ಸೆಳಕೊಂಡ್ಹೋಗಿ ಬಿಗಿದಪ್ಪಿ ಕೊಂಬೋರೆ
ಮುದ್ದು ಮಾಡಿದಿಯಂತೆ ಬುದ್ಧಿ ಕಲಿಸಲಿಲ್ಲವಂತೆ
ಮೊಸರು ಬೆಣ್ಣೆಗಳನು ಮೆದ್ದು ಓಡುವೆನಂತೆ ೪

ಶಶಿಮುಖಿಯರೆಲ್ಲ ಹಸುಗೂಸು ಎನ್ನ ಮೇಲೆ
ಪುಸಿಮಾತು ಪೇಳೋರು ಕೇಳ ಬೇಡವೆ ತಾಯಿ
ಇಂದುವದನೇರ ಕಾಟಾ ತಡೆಯಲಾರದೆ ದೊಡ್ಡ
ಮಡುವನ್ನಾದರು ಪೋಗಿ ಧುಮುಕುವೆನೇ ತಾಯೆ ೫

೧೦

ಮಾಡಿರೆ ಆರತಿಯ್ಯಾ ಹರಿಗೋವಿಂದನಿಗೆ ಪ

ನೀರೊಳು ಮುಳುಗಿದ್ದಾ ಭಾರ ಬೆನ್ನಲಿ ಪೊತ್ತ
ಕೋರೆ ದಾಡಿಯ ತೋರ್ಯಿ ಕಂದನ ಕಾಯ್ದಗೆ ೧

ನೆಲನ ಮೂರಡಿ ಆಡೆ ಛಲದಿ ಕೊಡಲಿ ಪಿಡಿದು
ಶಿಲೆಯ ರಕ್ಷಿಸಿದ ಶ್ರೀ ರಾಮ ಚಂದ್ರಗೇ ೨

ಹಾಲು ಮೊಸರು ಬೆಣ್ಣೆ ಕದ್ದು ಮೆದ್ದವನಿಗೆ
ಬೆತ್ತಲೆನಿಂತ ಬುದ್ಧ ಮೂರುತಿಗೇ ೩

ವರ ತುರಗವನ್ನೇರಿ ಜಗಪನೆಲ್ಲಪ ತಿರುಗೀ
ಜಗವರಕ್ಷಿಸುವ ವೆಂಕಟ ವಿಠಲಗೇ ೪

೧೧

ತೂಗಿರೆ ರಂಗನ್ನ ತೂಗಿರೆ ಕೃಷ್ಣನ್ನ
ತೂಗಿರೆ ವೇಣು ಗೋಪಾಲನ್ನ
ತೂಗಿರೆ ಅಳಗಿರಿ ಅಪ್ಪ ತಿಮ್ಮಪ್ಪನ್ನ
ತೂಗಿರೆ ಕನಕಾದ್ರಿ ವೆಂಕಟನಾ ಪ

ಪಾಲಗಡಲೋಳು ಆಲದೆಲೆಯಮ್ಯಾಲೆ
ಬಾಲಾನುಮಲಗ್ಯಾನೆ ತೂಗಿರೇ ೧

ಕಂಜದಳಾಕ್ಷನ್ನ ಕಮನೀಯಗ್ಗಾತ್ರನ್ನ
ಕಮಲಾಕ್ಷಿಯರೆಲ್ಲಾ ತೂಗೀರೇ
ಕಾಮಿನಿಯರುಟ್ಟ ಸೀರೆಗಳನೆ ಕದ್ದು
ಕಟಹಾಲ್ದಮರನೇರಿದ್ದವನ್ನಾ ೨

ದಶರಥ ತನುಜನ್ನ ದನುಜಸಂಹಾರನ್ನ

ಪ. ವನಜಾಕ್ಷಿಯಾರೆಲ್ಲಾ ತೂಗೀರಮ್ಮಾ

ಅಶರಥನ ಮಡದಿ ಧರಣಿಸುತೆಯ ತಂದ

ಪವಮಾನನುತರಾಮಚಂದ್ರನ್ನಾ

ಕಿಂಕರರಿಗೆ ಬಂದ ಸಂಕಟ ಕಳೆವನ್ನ

೧ ವೆಂಕಟರಮಣನ್ನ ತೂಗೀರೇ

ಬಿಂಕಾದಿಂದಲಿ ಬಂದು ಬೆಟ್ಟದೊಳ್‌ನಿಂದಹ

ವೆಂಕಟವಿಠಲನ್ನ ತೂಗೀರೇ

## ೧೨

೭ ಆನೆ ಬಂದಿತಮ್ಮಾ ಮರಿಯಾನೆ ಬಂದಿತಮ್ಮಾ ಪ

ಸ್ಮರಿಸಿರಿ ಸ್ಮರಿಸಿರಿ ಸರ್ವರ ರಕ್ಷಿಸುವ ಮುಖ್ಯ ಪ್ರಾಣನೆಂಬಾನೆ ಅ.ಪ

ವಾಯು ಸುಪುತ್ರ ನೆಂದೆನಿಸ್ಯಾನೇ ವಾರಿಧಿಯನ್ನೇದಾಟ್ಯಾನೇ

ಶಶಿಮುಖಿ ಸೀತೆಯ ಕಂಡಾನೇ ದಶಕಂಠನಗರ್ವ ಮುರಿದ್ದಾನೆ ೧

ಪಂಚಪಾಂಡವರ ಮಧ್ಯಾನೆ ಪ್ರಚಂಡ ಪರಾಕ್ರಮಿ ಎನಿಸ್ಯಾನೇ

ವಂಚಿಸಿ ಕೀಚಕನ ಕೊಂದಾನೆ ಪಾಂಚಾಲಿಗೆ ಪ್ರಿಯನಾದನೆ ೨

ಮಧ್ಯಗೇಹ ಭಟ್ಟರೊಳು ಜನಿಸ್ಯಾನೇ

ಮಧ್ವಮತವ ಉದ್ಧರಿಸ್ಯಾನೇ

ಮಧ್ವಮಾನಿ ಎಂದೆನಿಸ್ಯಾನೇ ಮುದ್ದು

ವೆಂಕಟ ವಿಠಲನೆಂಬಾನೆ ೩

## ೧೩

ಮರುತಾತ್ಮಜಾ ನಿನ್ನ ಮೊರೆಹೊಕ್ಕ ಮೇಲೆನ್ನ

ಮರೆತು ಬಿಡುವರೇ ಸ್ವಾಮಿ ಪ

ಕರಗಳ ಮುಗಿಯುವೆ ಕಷ್ಟ ಪಡುತಲಿರುವೆ
ಕರಪಿಡಿದೆನ್ನನು ಕಾಯೊ ಮಾರುತಿ ಅ.ಪ.

ಸೀತೆಗೋಸುಗ ಪೋಗೀ ಶಿರಧಿಯದಾಟಿ ನೀ
ಮಾತೆ ಗುಂಗುರ ವಿತ್ತು ಮೋದ ಪಡಿಸಿದೇ
ಪಾತಕಿ ರಾವಣನಾ ಪುರದ ದಹಿಸಿ ಬಂದು
ಚೂಡಾಮಣಿಯ ತಂದು ಶ್ರೀ ರಾಮರಿ ಗರ್ಪಿಸಿದೇ ೧

ಕುಂತಿಯ ಸುತನಾಗಿ ಬಲಭೀಮನೆಂದೆನಿಸಿನೀ
ಪ್ರಚಂಡ ಕೀಚಕನ ಸಂಹಾರ ಮಾಡಿದೆ
ಕ್ರೂರ ದೈತ್ಯನಾದಾ ಜರಿಯ ಸುತನ ಸೀಳಿ
ಪರಮಾತ್ಮಾ ಶ್ರೀ ಕೃಷ್ಣಗರ್ಪಣೆ ಮಾಡಿದೆ ೨

ಮಧ್ವರಾಯರೆಂಬೊ ಪೆಸರಿನಿಂದಾ
ಅದ್ವೈತವಾದಿಗಳ ಖಂಡಿಸಿ ಮೆರೆದೇ
ಅದ್ಭುತ ಮಹಿಮ ವೇಂಕಟವಿಠಲನ
ಪಾದ ಪದ್ಮಂಗಳ ನಿರುತ ಸೇವಿಸುತಿರಾ ೩

## ೧೪

ಕೂಸನು ಕಂಡೀರ್‍ಯಾ ನಮ್ಮ ಕೂಸನು ಕಂಡೀರ್‍ಯಾ ಪ

ಹತ್ತಾವತಾರದಿ ಭಕ್ತರ ಸಲಹುವ ಚಿತ್ತಜನೈಯ್ಯ
ಶ್ರೀಕೃಷ್ಣನ ಸೇವಿಪ ಅ.ಪ.

ಭೂಮಂಡಲವೆಲ್ಲಾ ತಿರುಗಿ ಬಂದಿಹ ಕೂಸು ದಂಡಕ
ಮಂಡಲ ಪಿಡಿದಿಹ ಕೂಸು
ಬಂದ ಬಂದವರ ಅಭೀಷ್ಟಸಲಿಸುತ ಮಂದಹಾಸದಿ
ನಗುತಿಹ ಕೂಸು ೧

ತುಂಗಾ ತಡಿಯಿಲ್ಲಿ ಬಂದಿಹ ಕೂಸು ಕಂಡ ಕಂಡಲ್ಲಿ
ಕರೆದರೆ ಬರುವಂಥ ಕೂಸು
ಕಾರುಣ್ಯನಿಧಿ ನಮ್ಮ ಗುರುರಾಜರೆಂಬ ಕೂಸು ೨

ಬೇಡಿದವರಗಳ ಬಿಡದೆ ನೀಡುತಲಿ ಭಕ್ತ ಕೋಟಿಗೆ ರವಿ
ಕಿರಣದಂತ್ಹೊಳೆಯುತ
ಮುಕ್ತಿ ಮಾರ್ಗಕೆ ದಾರಿ ತೋರಿಸಿತಿರುವಂಥ
ಭಕ್ತಶಿರೋಮಣಿ ಶ್ರೀ ರಾಘವೇಂದ್ರರೆಂಬೊ ಕೂಸು ೩

## ೧೫

ಎಂಥಾ ಮಹಿಮರು ನೋಡಿ – ಶ್ರೀ ರಾಘವೇಂದ್ರರು
ಎಂಥಾ ಮಹಿಮರೋ ಪ

ಇಂಥಾ ಮಹಿಮರೆಂದು
ಹೇಳಲಳಾವಲ್ಲ
ಕೊನೆಗಾಣೆನಿವರ ಅದಭುತ ಮಹಿಮೆಯನ್ನು ಅ.ಪ.

ದೇಶ ದೇಶಗಳನೆಲ್ಲಾ ಸಂಚರೀಸುತಲೀ
ವರ ಮಂತ್ರಾಲಯದೊಳು ಬಂದು ನಿಂದಿಹರು ೧

ಭಕ್ತಾದಿಗಳೆಲ್ಲಾ ಪರಿಪರಿಯಿಂದ
ನಿಮ್ಮ ಸ್ತುತಿಸಿ ಕೊಂಡಾಡುತಿಹರು ೨

ಒಂದೇ ಮನದಿಂದ ಒಂದು ಪ್ರದಕ್ಷಿಣೆ ನಮಿಸಲು
ಭವಬಂಧಗಳ ಬಿಡಿಸಿ ಆನಂದದಿ ಸಹಲುವರು ೩

ಆದಿವ್ಯಾಧಿಗಳಿಂದ ಬಾಧೆ ಪಡುವಜನ
ಮೊದಲು ನಿಮ್ಮ ಸೇವಿಸೆ ಪಾವನಗೊಳುವರು ೪

ಪೀಡೆ ಪಿಶಾಚಿಗಳಿಂದ ಪೀಡಿತರಾಗುತ
ನಿಮ್ಮಡಿಗೆರಗಲು ಕಡುದಯ ಮಾಡುವಿರಿ ೫

ಶ್ರೀರಾಘವೇಂದ್ರಾಯ ನಮಃ ಎಂಬ ದಿವ್ಯನಾಮವ ಪಠಿಸಲು
ಪ್ರಭುಗಳು ಪಾವನ ಮಾಡುವರು ೬

ಧರೆಯೊಳು ನಿಮ್ಮ ಸರಿಯಾರಿಹರೊ ಪ್ರಭು
ಗುರುಸಾರ್ವಭೌಮರು ಶ್ರೀ ರಾಘವೇಂದ್ರರು ೭

## ೧೬ ೪೧

ಕಂಡು ಧನ್ಯನಾದೆ ಶ್ರೀ ರಾಘವೇಂದ್ರರಾ
ಕಂಡು ಧನ್ಯನಾದೆ ಭೂಮಂಡಲದೊಳ್ ಪ

ಅಧಿಕ ಮಹಿಮೆ ತೋರಿ ಮೆರೆಯುತಿರುವ
ಶ್ರೀ ಗುರುಸಾರ್ವಭೌಮ ರಾಘವೇಂದ್ರರಾ ೧

ಕಲಿಯುಗದೊಳ್ ಭಕ್ತಜನರಾ ಉದ್ಧರಿಸಬೇಕು ಎಂಬ ಮನದಿ
ವರಮಂತ್ರಾಲಯದೊಳ್ ಬಂದು ನಿಂದಿಹ ಯತಿವರರಾ ೨

ತುಂಗಭದ್ರೆಯ ಸ್ನಾನವಮಾಡಿ ಅಂಗದ ಕಶ್ಮಲನೀಗಿ
ಮಂಗಳಮೂರುತಿ ರಾಘವೇಂದ್ರರ ಬೃಂದಾವನ ಮನದಣಿಯೆ ೩

ವಿಶಿಷ್ಟ ಜನರ ಕಷ್ಟಗಳನು ನಿಮಿಷಮಾತ್ರದಿ ಕಳೆದು ಸಲಹುವ
ಶ್ರೇಷ್ಠ ಗುರುಗಳ ದಿವ್ಯವಾದ ದರ್ಶನ ಭಾಗ್ಯಾ ದೊರೆಕಿತಿಂದು ೪

ಆದಿವ್ಯಾಧಿಗಳೆಲ್ಲ ಹರಿಸಿ ಅಂಧ ಬಧಿರ ಮೂಕತ್ವ ತೊಲಗಿಸಿ
ಬಂದ ದುರಿತಗಳೆಲ್ಲ ಓಡಿಸಿ ಕಂದನಂದದಿ ಸಲಹುವ ಗುರುಗಳಾ ೫

ದಿನದಿನದೊಳ್ ಇವರ ಮಹಿಮೆ ಅಧಿಕವಾಗುತಿರಲು ಕಂಡು
ತಂಡ ತಂಡದ ಜನಗಳೆಲ್ಲ ಹಿಂಡು ಹಿಂಡಾಗಿ ಬರುತಲಿಹರೂ ೬

ಹೆಜ್ಜೆ ಹೆಜ್ಜೆಗೆ ವಂದಿಸುತಲೀ ದಂಡೆ ಮುಡಿ ಉರುಳುತಲೀ
ಮಂಡೆಬಾಗಿ ನಮಿಸತಲಿ ಬಿಡದೆ ರಾಯರ ಕೊಂಡಾಡುತಲೀ ೭

ಸುತ್ತ ಕೋಟಿಯೊಳಗೆ ಮೆರೆಯುತಾ ಸಮಸ್ತ
ಜನರೆನರವ ಕೊಡುತಾ
ಕಾಮಧೇನುವಂತೆ ಹೊಳೆಯುತಾ ಕಾಮಿತಾರ್ಥ
ಕೊಡುವ ದಾತಾ ೮

ನಿತ್ಯ ನಿತ್ಯದಿ ಬ್ರಾಹ್ಮಣರ ವೇದ ಪುರಾಣ ನಡೆಯುತಿರುವುದು
ಕೇಳಿ ಭಕ್ತಿಯಿಂದ ಜನರಾನಂದ ಭರಿತರಾಗುತಿಹರು ೯

ಕೇಳುತಿಹುದು ಮಂತ್ರಘೋಷ ಪೇಳುತಿಹ ಪುರಾಣ ರಹಸ್ಯ
ನೀಡುತಿಹರು ಗುರೂಪದೇಶ ಎಮಗಾಯಿತಿಂದು ಬಹುಸಂತೋಷ ೧೦

ಎಲ್ಲಿ ನೋಡಲು ಬೀದಿ ಶೃಂಗಾರಾ ಎಲ್ಲಿ
ನೋಡಲು ಹೂವು ಸಿಂಗರ
ಮತ್ತೆಲ್ಲಿ ನೋಡಲು ಮಂಗಳಕರ ಕಂಡೆ
ಗುರುಗಳ ಮನಸಾರಾ ೧೧

ಬಂದ ಭಕ್ತಬೃಂದಕೆಲ್ಲ ಬೇಡಿ ದೊರಗಳ ನೀಡುತ ಸಲಹಿ
ಉಣಿಸಿದಣಿಸಿ ಹರಸಿ ಅವರ ಆನಂದದಿಂದ ಕಳುಹುತಿಹರು ೧೨

ಭಕ್ತರಸವ ಪಾನಮಾಡಿಸಿ ಮುಕ್ತಿ ಮಾರ್ಗಕೆ ದಾರಿ ತೋರಿಸಿ
ಕರ್ತೃ ಶ್ರೀಹರಿ ಹೊರತುಯಿಲ್ಲೆಂದು ಸತ್ಯವಾಕ್ಯ ವ್ಯಾಕ್ತಪಡಿಸುತಿಹರು ೧೩

ಭಕ್ತಜನರ ಪೊರೆಯಲಿವರ ಸರಿಗಾಣೆನೀಧರೆಯೊಳಗೆ
ತಂದೆಯಂದದಿ ಬಿಡದೆ ಕಾಯ್ವರು ಸಾರ್ವಭೌಮ ಶ್ರೀ ರಾಘವೇಂದ್ರರು ೧೪

ಎಷ್ಟು ಜನ್ಮದ ಸುಕೃತದ ಫಲವೋ ಶ್ರೇಷ್ಠಗುರುಗಳ ದರ್ಶನವಾಯಿತು
ಕಂಗಳಿಂದಲಿ ಕಂಡು ಮನದ ಕ್ಲೇಶವೆಲ್ಲ ಪರಿಹಾರವಾಯಿತು ೧೫

ಹಿಂದೆ ಪ್ರಹ್ಲಾದರಾಜರೆನಿಸಿ ಬಂದು ಮಂಚಾಲೆಯಾಂಬಿಕೆ ದರ್ಶನ
ಕೊಂಡು ಗುರುಗಳ ದರ್ಶನ ಮಾಡಿಸೆಂದು ಭಕ್ತಿಲಿಜನ ಬೇಡುತಿಹರು ೧೬

ದೇಶ ದೇಶದ ಜನರಿಗೆಲ್ಲ ವಿಸ್ತಾರದಿಂದ ಎಲೆಗಳ್ಹಾಕಿ
ಭಕ್ಷ್ಯ ಪಾಯಸಾನ್ನಗಳನು ತೃಪ್ತಿಯಿಂದ ಉಣಿಸುತಿಹರು ೧೭

ಶ್ರೀ ರಾಘವೇಂದ್ರಾಯ ನಮಃ ಎಂದರೆ ದುರಿತಗಳೆಲ್ಲವದೂರಮಾಳ್ವರು
ಸ್ಮರಣ ಮಾತ್ರದಿ ಸಕಲಪಾಪಗಳೆಲ್ಲ ನಾಶಗೊಳಿಸೋರು ೧೮

ಗುರುವಾರ ಪೂಜಾ ಸಂಭ್ರಮದಿಂದ ನಮಗಾಯಿತು ಇಂದು
ಬಹು ಆನಂದ ರಾಯರು ರಥವೇರಿ ಬರುವುದು ಚಂದ
ಮುಂದೆ ನಮಿಸಲು ಭಕ್ತವೃಂದಾ ೧೯

ಜಯ ಜಯತು ಗುರುರಾಜ ಜಯ ಜಯತು ಸುರಭೂಜ
ಜಯ ಜಯತು ಸುಧೀಂದ್ರ ಸುತ ಜಯ
ಜಯತು ಶ್ರೀ ರಾಘವೇಂದ್ರಾ
ಜಯ ಜಯತು ಜಯ ಜಯತು ಜಯ ಜಯಾ ೨೦

## ೧೭

ಕರುಣದಿ ಕಾಯಬೇಕೆನ್ನಾ ನೀಪರಮದಯಾಳು
ವೆಂದೆನುತ ಬಂದೆನು ನಾ ಪ

ಬಂದಾ ಬಂದಜನಕಾನಂದ ಕೊಡುತಲಿ
ಬೃಂದಾವನ ದೊಳು ಬಂದು ನಿಂದಿರುವೇ
ವಂದಿಸಿ ಭಜಿಪರಘಂಗಳ ಕಳೆದು
ಸಲಹುವಿಯೋ ಸದ್ಗುರು ರಾಘವೇಂದ್ರಾ ೧

ಭೂತ ಪ್ರೇತಗಳಿಂದ ಬಾಧೆ ಪಡುವಜನ
ಭೀತರಾಗುತ ನಿನ್ನಡಿಗಳ ಸೇವಿಸಲು

ಆದರದಿಂದಲವರ ಭವ-ಭಯವ ಪರಿಹರಿಸಿ
ಸಲಹಿ ಉದ್ಧರಿಸುವೆ ಗುರುರಾಘವೇಂದ್ರಾ ೨

ದುಷ್ಟ ಜನರು ಕೂಡಿ ಕೆಟ್ಟಯೋಚನೆ ಮಾಡಿ
ಗುಟ್ಟಾಗಿ ನಿಮ್ಮ ಪರೀಕ್ಷಿಸ ಬೇಕೆಂಧು
ಜೀವ ವಿದ್ದವನ ನಿರ್ಜೀವನೆನುತ ತರಲು
ಸತ್ಯದಿ ನಿರ್ಜೀವನನ್ನಾಗಿ ಮಾಡಿದೆ ಪ್ರಭವೆ ೩

ಕುಹಕಿ ಜನರು ಎಲ್ಲಿ ವನಕೆತುಂಡನು ತಂದು
ಚಿಗುರಿಸ ಬೇಕೆನುತಲಿ ಕೇಳಲು
ಕಮುಂಡದೊಳಿದ್ದ ದಿವ್ಯೋದಕ ಪ್ರೋಕ್ಷಿಸಿ
ಚಿಗುರಿಸಿ ಫಲ ಮಾಡ್ದೆ ಅದ್ಭುತ ಮಹಿಮಾ ೪

ಮಾವಿನರಸದೊಳು ಮುಳುಗಿ ಮೃತನಾದಾ
ಬಾಲಕನಿಗೆ ಪ್ರಾಣಗಳನಿತ್ತೆ ದಯದೀ
ಭುವಿಯೊಳು ನಿಮ್ಮ ಮಹಿಮೆಗೆಣೆಕಾಣೆ
ಮಂತ್ರಾಲಯದೊರೆ ಗುರು ರಾಘವೇಂದ್ರಾ ೫

"ಶ್ರೀರಾಘವೇಂದ್ರಾಯ ನಮಃ" ಎಂಬ ದಿವ್ಯನಾಮವ
ಮನುಜನು ಪ್ರತಿದಿನ ಭಜಿಸುತ್ತಲಿರಲು
ಘೋರ ದುರಿತಗಳೆಲ್ಲ ದೂರವ ಮಾಡಿ
ನಿನ್ನ ಚರಣಸೇವಕರನ್ನು ಸಲಹುವಿಯೋಗುರುವೇ ೬

ಶ್ರೀ ರಘುರಾಮನ ಪ್ರಿಯಭಕ್ತನಾದ
ಶ್ರೀ ಗುರು ರಾಘವೇಂದ್ರರ ಚರಣ ಭಜಿಸಿರೊ
ನಂಬಿದ ಭಕ್ತರ ಬೆಂಬಿಡದೆ ಸಲಹುವ
ಘನ್ನಕೃಪಾನಿಧಿ ನಮ್ಮ ಗುರು ರಾಘವೇಂದ್ರಾ ೭

## ೧೮

ಗುರುವೆ ನೀ ಪಾಲಿಸೋ ನಿನ್ನ ಪಾದವೆ ಗತಿಯೆಂದು
ನಂಬಿ ಬಂದಿಹೆನಯ್ಯಾ ಪ

ಬಂಧುಗಳೆಲ್ಲವು ಬಳಗಗಳೆಲ್ಲವು ಸರ್ವವು
ನೀವೆಂದು ನಾನಂಬಿಹೆ
ಸರ್ವರಕ್ಷಿತ ನಿನ್ನೊರತು ಇನ್ನಾರಿಹರು ಸರ್ವದಾ
ನಿನ್ನನಾ ಸ್ತುತಿಸಿ ಕೊಂಡಾಡುವೆ ೧

ಕುಂದಿದ ಮನದಲಿ ನಿನ್ನನಾ ನೆನೆಯುದೆ
ಮುಂದೇನುಗತಿ ಎನಗೆಂದು ತಿಳಿಯದೆ
ಹೀನವಾಗಿ ನಾ ಕಾಲಕಳೆದೆಪ್ರಭು
ಇನ್ನಾದರೆನ್ನ ಮನನಿನ್ನಲ್ಲಿ ನಿಲಿಸು ೨

ಕಂಡ ಕಂಡಲ್ಲೆಲ್ಲಾ ಮುಳುಗುತಲೀ ಪ್ರಭು
ಭೂಮಂಡಲವೆಲ್ಲಾ ತಿರುಗಿದೆ ಪ್ರಭುವೇ
ಎಲ್ಲೆಲ್ಲಿಯೂ ಎಮ್ಮ ಕಾಯ್ವರ ಕಾಣದೆ
ನಿಮ್ಮ ಶರಣು ಬಂದಿಹೆ ನಯ್ಯ ಹೇಗುರುವೇ ೩

ಎಂತೆಂಥ ಭಕ್ತರು ನಿನ್ನ ಸೇವಿಸುತಿರುವಾಗ
ಸಂತಸದಲ್ಲವರ ಸೇವೆ ಕೈ ಗೊಂಬುವೆ
ಇಂದೆನ್ನ ಮೊರೆಕೇಳಿ ಕೇಳಿಸದಂತಿರುವೆಯಾ ಪ್ರಭುವೆ ೪

ಧರೆಯೊಳು ನಿನ್ನಂಥ ದಾತರಿನ್ನಿಲ್ಲವೊ
ಪರದೇಶಿಯೆನುತೆನ್ನ ಕೈಬಿಡಬೇಡವೋ
ಕೊಡಲು ಎನ್ನುಯ ಕೈ ಹಿಂದಾಯಿತೋ ಪ್ರಭುವೆ
ಬಿಡದೆ ನಿನ್ನಡಿಗಳ ಪಿಡಿದಿಹೆನಯ್ಯಾ ೫

ಎಷ್ಟುದಿನಗಳೀ ಕಷ್ಟ ಪಡಲಾರೆ
ದೃಷ್ಟಿಯಿಂಲಿ ನೋಡಿ ರಕ್ಷಿಸು ನಮ್ಮನು ।
ಇಷ್ಟ ಪ್ರದಾತ ನೀನೆನುತ ನಾ ಬಂದೆ ।
ಘಟ್ಯಾಗಿ ನಿಮ್ಮಪಾದ ಮುಟ್ಟಿ ನಾ ಭಜಿಸುವೆ ೬

ಸಿರಿಯರಸನ ಪ್ರಿಯ ಶ್ರೀ ರಾಘವೇಂದ್ರನೆ
ಸರ್ವಾಪರಾಧವ ಕ್ಷಮಿಸಿ ನೀ ಕಾಯೋ
ಮನ ಬಹು ನೊಂದಿದೆ ತಾಳಲಾರನೊ ಪ್ರಭು
ಕಾಲಮೀರದೆಮ್ಮನು ಪಾಲಿಸಬೇಕಯ್ಯ ೭

## ೧೯

ಗುರುವೆ ನಿಮ್ಮಯ ಪಾದಗಳ ನಂಬಿದೆ ನೈಯ್ಯಾ
ಉದ್ಧರಿಸ ಬೇಕಿನ್ನು ಗುರು ರಾಘವೇಮದ್ರರಾಯಾ ಪ

ನಿನ್ನ ಬಿಟ್ಟರೆ ನನಗಿಲ್ಲ ಬೇರಾರು ಗತಿಯಿಲ್ಲ
ಕಾವ ಕರುಣಿಯು ನೀನೆ ರಾಘವೇಂದ್ರಾ ಅ.ಪ

ನಿನ್ನನ್ನೆ ಸ್ತುತಿಸುವೆನು ನಿನ್ನನ್ನೆ ಸೇವಿಪೆನು
ನಿನ್ನ ವಾನೆನಿಸಯ್ಯ ಗುರುರಾಘವೇಂದ್ರ
ಸಾಧುಸಂಗವನಿತ್ತು ಮೋದ ಪಡಿಸೆಮ್ಮನು
ಆದರಿತಿಪೂದಯ್ಯ ಗುರುರಾಘವೇಂದ್ರಾ ೧

ಒಂದು ದಿನವೂ ನಿಮ್ಮ ನಾಮ ನುಡಿಯಲಿಲ್ಲವೊ ನಾನು
ಮಂದ ಮತಿನಾನಾದೆ ಗರುರಾಘವೇಂದ್ರಾ ಕುಂದುಗಾ
ಳೆಣಿಸದಿರು ನೊಂದೆನೈಯ್ಯಾ ನಾನು ತಂದೆಯಂದದಿ
ಕಾಯೊ ಗುರುರಾಘವೇಂದ್ರಾ ೨

ನಿಂದು ಭೂಸುರರೆಲ್ಲಾ ಜಯ ಜಯಾ ವೆನುತಿರಲು
ಮಂದಹಾಸ ದಲವರ ಪೊರೆದೇ

ನಮೊ ನಮೋಗುರುರಾಜ ನಮೊ ನಮೋ
ರವಿತೇಜ । ನಮೊ ನಮೋ ಸುಧೀಂದ್ರ ಕರಜಾತ ।
ನಮೋ ಗುರು ರಾಘವೇಂದ್ರಾ ೩

## ೨೦

ತಾಳು – ತಾಳು – ತಾಳಬೇಕೆನ್ನುವಿರೋ ಗುರುವೇ ಪ

ಇನ್ನೆಷ್ಟುದಿನ ತಾಳಬೇಕೋ ತಿಳಿಯಾದೋ ಅ.ಪ.

ಆಶ್ರಿತಜನ ರಕ್ಷಕನೆಂದೂ ನಂಬಿದೇನೊ ಪ್ರಭುವೇ ।
ಎಂದೆಂದಿಗೂ ಬಿಡೆ ನಿಮ್ಮಯ ಪಾದ ಶ್ರೀ ರಾಘವೇಂದ್ರ ಪ್ರಭವೇ ೧

ತನುವಿನೊಳಗೆ ಬಲವು ಇಲ್ಲಾ ಮನದೊಳಗೆ ಧೃಡಾವಿಲ್ಲ
ಇನ್ನಾದರು ದಯಮಾಡಿ ಸಲಹಯ್ಯ ಪ್ರಭವೇ ೨

ದುರಿತ ರಾಶಿಗಳ ನಾಶಗೊಳಿಸೆ ನಿನ್ಹೊರತ್ಯಾರಿಲ್ಲ ಪ್ರಭುವೇ
ತ್ವರಿತದಿ ಕರುಣ ಕಟಾಕ್ಷದಿ ನೋಡು ಶ್ರೀ ರಾಘವೇಂದ್ರ ಗುರುವೇ ೩

ಈ ಸಂಸಾರ ಶರಧಿಯೋಳ್ ಮುಳುಗಿ ಬಳಲಿದೆ ಗುರುವೇ
ಘಾಸಿಗೊಂಡಿಹೆ ಕೃಪೆಮಾಡೈ ಶ್ರೀ ರಾಘವೇಂದ್ರ ಗುರುವೇ ೪

ಈ ವಿಧ ಬವಣೆಯ ಪಡಲಾರೆನೋನಾ ಕರುಣಿಸೈ ಪ್ರಭುವೇ
ತಡೆಮಾಡದೆ ಕಡೆಹಾಯಿಸೋ ಶ್ರೀ ರಾಘವೇಂದ್ರ ಪ್ರಭವೇ ೫

## ೨೧

ದಯಮಾಡಿ ಬಾರೆನ್ನ ಗುರುವೇ ಮಂತ್ರಾಲಯ ಪ್ರಭುವೇ ಪ

ಧರೆಯೊಳು ಸುಜನರಾ ಪೊರೆಯಲೋಸುಗ ನೀನು
ವರ ಮಂತ್ರಾಲಯದೊಳು ಬಂದು ನಿಂದಿಹೆ ಗುರುವೇ ೧

ಬಹು ವಿಧದಲಿ ನಿನ್ನ ಮಹಿಮೆಗಳ ಕೇಳೀ
ದೇಶ ದೇಶದಿ ಜನರು ಬಂದು ಕಾದಿಹರೋ ೨

ಕರೆದಾರೆ ಬರುವಂಥ ಕರುಣಸಾಗರ ನೀನು
ಪರಿ ಪರಿಸ್ತುತಿಸುವೆ ಕಾರುಣ್ಯ ಮೂರ್ತಿಯೆ ೩

ಬೇಡಿದಳಾ ವರಗಳ ಕೊಡುವ ನೀನೆನುತಲಿ
ಧೃಡ ಭಕುತಿಯೊಳು ನಿನ್ನಡಿಗಳ ಸೇವಿ ಸುವರೋ ೪

ಹಗಲು ಇರುಳು ನಿನ್ನ ಬಿಡದೆ ಸ್ತುತಿಸುವಂತೆ
ಮತಿಯ ಪಾಲಿಪುದು – ಶ್ರೀ ಗುರುರಾಘವೇಂದ್ರಾ ೫

## ೨೨

ದಯ ಮಾಡೋ ಗುರುವೇ ದಯ ಮಾಡೋ ಪ

ದಯ ಮಾಡೋ ಗುರುವೇ ನಿನಗೆದುರಾರೀ ಧರೆಯೊಳಗೆ
ಸದಮಲ ಮೂರುತೀ ಶ್ರೀ ರಾಗವೇಂದ್ರಾ ಅ.ಪ

ಭಕ್ತರ ಪೊರೆಯಬೇಕೆಂಬೀಕಾರಣದಿಂದ ಸಿದ್ಧ ಹಸ್ತಾನಾಗಿ
ಬಂದು ನಿಂತಿರುವೇ ಕಂಡ ಕಂಡಾ ದೈವಂಗಳ ಪೂಜಿಸಿ
ಪರಿಪರಿಸ್ತುತಿಸುತ ಬಳಲಿ ಬೆಂಡಾದೆನ್ನೈ ಸದ್ಗುರುವೇ ೧

ನಿರುತ ನಿನ್ನಡಿಗಳಬಿಡದೆ ಸೇವಿಸುವಂಥ ಧೃಡ
ಭಕ್ತಿಯಾ ಲಿಟ್ಟು
ಸಲಹು ಸದ್ಗುರುವೇ ಮಂದಾಮತಿಯುನಾನು ।
ಮಾಡಿದಪರಾಧಂಗಳ
ಒಂದೆಣಿಸಾದೆ ಎನ್ನನು ಮನಿಸು ಪ್ರಭುವೇ ೨

ಪವನತನಯನ ಪ್ರಭುವಾದ ಶ್ರೀರಾಮನ । ಪ್ರಿಯನಾದ
ಶ್ರೀ ರಾಘವೇಣದ್ರಾ
ಎತ್ತ ಪೋಗಲಿ ನಾನೇನು ಮಾಡಲಿ ದೇವಾ ಎಂತು
ದಾರಿಯಕಾಣೆ ಸಂತೈಸು ಜೀಯಾ ೩

ತಂದೆ ನೀ ಕೈ ಬಿಟ್ಟರಾರೆನ್ನ ಕಾಯ್ವರೊ ಮಂತ್ರಾಲಯ
ಧೊರೆ ರಾಘವೇಂದ್ರಾ
ಹಿಂದೆ ಮುಂದಿಲ್ಲದೆ ತಪಿಸುತಿರುವೆನ್ನ ಕೈ ಪಿಡಿದು
ಕಾಯೋ ಶ್ರೀ ಗುರು ರಾಘವೇಣದ್ರಾ ೪

## ೨೩

ನಡೆದು ಬಾರಯ್ಯ ಪ್ರಭುವೇ ಶ್ರೀ ರಾಘವೇಂದ್ರ ಪ

ಪರಿಪರಿಯಲಿ ಭಕ್ತ ಜನಗಳೆಲ್ಲಾ ಕರಗಳ ಮುಗಿಯುತ
ಕಾದುನಿಂದಿಹರು ಅ.ಪ

ಕಾರುಣ್ಯಾ ಮೂರ್ತಿನೀ ಕರುಣಿಸದಿದ್ದರೆ ಬೇರಾರ
ಕಾಣೆನೋ ಪ್ರಭುವೇ
ತಡಮಾಡದೆ ಎಮ್ಮ ಮನದ ಸಂತಾಪವ
ಪರಿಹರಿಸಿ ಕಾಯೋ ಗುರುವೇ ೧

ನಿನ್ನ ನಂಬಿದೆನಯ್ಯ ಅನ್ಯಾರ ಬೇಡೆನೊ
ಎನ್ನ ಪಾಲಿಸು ಪ್ರಭುವೇ
ನಿನ್ನ ಸಂಕಲ್ಪವೇನೆಂದು ನಾನರಿಯೆನೋ ಅನ್ಯಥಾ
ತಿಳಿಯದೆ ಸಂತೈಸು ಪ್ರಭುವೆ ೨

ನಿನ್ನಂಥ ದಾತರಿಲ್ಲವೊ ಜಗದೊಳಗೆ ಪಂಥ ಮಾಡದೆ
ಎಮ್ಮಕಾಯೋ

ಸಂತಸದಲಿ ನಿಶ್ಚಿಂತೆ ಎನಗೆ ಕೊಡು ಶಾಂತ ಮೂರುತಿ
ಶ್ರೀ ರಾಘವೇಂಧ್ರಾ ೩

## ೨೪

ಪರಿಪಾಲಿಪುದೈ ಗುರುವೆ ನೆರೆನಂಬಿದೆನಯ್ಯ ಪ್ರಭುವೆ ಪ

ಮೋಸ ಹೋದೆನಲ್ಲಾ । ಬಲು ಘಾಸಿ ಗೊಂಡೆನಲ್ಲಾ
ಮಾಯಾ ಪಾಶದಿ ಸಿಲುಕಿದೆನಲ್ಲಾ । ಉ–
ಪಾಯ ವನರಿಯೆ ಪಾಲಿಸೈ ಪ್ರಭವೇ ೧

ಆರಿಗೆ ಮೊರೆಯಿಡಲೋಲಿ ಮತ್ಯಾರನು
ಬೇಡಲೋ ಪ್ರಭುವೇ
ಆರೆನ್ನ ಸಲಹುವರೋ ದಾರಿಯಕಾಣೆನೊ
ಕಾಯೋ ಪ್ರಭುವೇ ೨

ಶರಣೆಂದವರನು ಪೊರೆವಾ ಬಿರುದನು
ಉಳಿಸಿಕೊ ಗುರುದೇವಾ
ನಿರುತದಿ ಮಾಡುವೆ ನಿನ್ನ ಸೇವಾ ಕರುಣಿಸು
ಶ್ರೀ ರಾಘವೇಂದ್ರಾ ೩

## ೨೫

ಬಂದು ನಿಮ್ಮಡಿಗಳ ನಾಶ್ರಯಿಸಿದೆ ಪ್ರಭುವೆ
ಭವ ಬಂಧನಗಳ ಬಿಡಿಸಿ ನೀ ಕಾಯೊ ಸದ್ಗುರುವೇ ಪ

ಎಲ್ಲೆಲ್ಲಿಯೂ ತಿರುಗಿ ಕಾಯುವರ ಕಾಣದೆಲೆ
ಇಂದು ನಿಮ್ಮಯ ಪಾದಗಳ ಪಿಡಿದು ಬೇಡುವೆ ಪ್ರಭುವೇ
ತಡಮಾಡದೆಮ್ಮಯ ದುಗುಡಗಳ ಪರಿಹರಿಸಿ
ಕರುಣದಿಂದಲಿ ಕಾಯೊ ಗುರುರಾಘವೇಂದ್ರಾ ೧

ನಿಶೆ ಹಗಲು ನಿನ್ನನು ಸ್ತುತಿಸಿ ಬೇಡುವೆ ಪ್ರಭುವೆ
ಗತಿಗಾಣೆ ನಿನ್ಹೊರತು ಈ ಪೃಥುವಿಯೊಳಗೆ

ಅತಿವ್ಯಥೆಯಲೀ ನೊಂದು ಮತಿಯಿಲ್ಲದಂತಿಹೆನು
ತ್ವರಿತದಿಂದಲಿ ಕಾಯೊ ಹೇ ಗುರುರಾಜ ಪ್ರಭುವೇ ೨

ಜಗವೆಲ್ಲ ನಿಮ್ಮ ಮಹಿಮೆ ಸಾರುತಿರುವುದ ಕೇಳಿ
ಭರದಿಂದ ಬಂದೆನೋ ಗುರುರಾಘವೇಂದ್ರಾ
ಇಂದೆಮ್ಮ ಅಪರಾಧಗಳ ಎಣಿಸದೆಲೆ ಸಲಹ್ಯಯ್ಯಾ
ಕಾರುಣ್ಯಮೂರ್ತಿ ಶ್ರೀ ಗುರುರಾಘವೇಂದ್ರಾ ೩

## ೨೬

ಬಾರ್‍ಯ್ಯಾ ಶ್ರೀ ರಾಘವೇಂದ್ರಾ ಭಕ್ತಾರನಿಧಿಯೆ
ಕಾರುಣ್ಯ ಮೂರ್ತಿ ನೀ ಕರುಣಿಸೊ ಪ್ರಭುವೇ ಪ

ಎಲ್ಲೆಲ್ಲಿ ನೋಡಲಲ್ಲಿಲ್ಲಿ ನಿಮ್ಮಯ ಕೀರ್ತಿಯನು
ಮೊರೆಹೊಕ್ಕ ಸುಜನರ ಪೊರೆವರೆಂಬ ಬಿರುದು ಕೇಳಿ
ತ್ವರಿತದಿಂದಲಿ ಬಂದೆನೋ ಭರದೀ ಹಾರೈಸು ಕರುಣಾ ಶರಧೀ ೧

ನಿಷ್ಠೆಯಿಂದಲಿ ಮನ ಮುಟ್ಟಿ ಭಜಿಸುವರ
ಇಷ್ಟಾರ್ಥಗಳನಿತ್ತು ಸಲಹಿದೆ ತುಷ್ಟರಾಗುತಲವರ
ಕಷ್ಟಗಳನೇ ಕಳೆದೆ ಉದ್ಧರಿಸಿದೆ ಅಷ್ಟ ಸೌಭಾಗ್ಯವ
ಕೊಟ್ಟು ರಕ್ಷಿಸಿದೇ – ಕೈಬಿಡದೇ ೨

ಅಡಿಗಳಿಗೆರಗುತಲಿ ನುಡಿ ನುಡಿಗೆ ತುತಿಸಲಿ
ಬಿಡದೆ ನಿನ್ನನು ಕೊಂಡಾಡುತಲಿ ತಡಮಾಡದೆ
ಯಡರುಗಳ ಪರಿಹರಿಸಿದೆ ನಿಮ್ಮ ಮಹಿಮೆಗೆ
ಸರಿಗಾಣೆ ಭೂಮಂಡಲದೊಳಗೇ ಪ್ರಭವೇ ೩

## ೨೭

ಯಾಕೆ ನಿರ್ದಯನಾದೆ ಪ್ರಭುವೇ ಎನ್ನ ಗುರುವೇ
ಶ್ರೀಮನ್ಮಂತ್ರಾಲಯ ದೊರೆ ಗುರುರಾಜ ಪ್ರಭುವೇ ಪ

ಏನು ಮಾಡಲು ದಾರಿಕಾಣದೊ ಯನ್ನ ತನು – ಮನ–
ಹಳ ನಿನಗೊಪ್ಪಿಸಿದೆ ಪ್ರಭುವೇ ಕಷ್ಟಾದಿಕಾಲ
ಕಳೆಯಲಾರೆನೊ ಗುರುವೆ ತಡಮಾಡದೆಮ್ಮನು
ಸಲಹಯ್ಯ ಪ್ರಭುವೆ ೧

ಮನಸು ನಿನ್ನಲಿ ನಿಲ್ಲದೊ ಯನ್ನ ಮನವತಿ ಚಂಚಲವಾಗಿ
ಹುದೊ ಕೊನೆಗಾಣದೆನ್ನ ಮನದ ಸಂತಾಪ
ಪರಿಹರಿಸಿ ಕಾಯೊ ಗುರುರಾಘವೇಂದರಾ ೨

ಯನ್ನಲ್ಲಿ ಧನವಿಲ್ಲ ಮನದಣಿಯೆ ಸೇವಿಪೆನೆ
ಶಕ್ತಿಯಿಲ್ಲ । ವ್ಯರ್ಥವಾಗಿ ಕಾಲಕಳೆದು ಹೋಯಿತಲ್ಲಾ
ಇನ್ನೆಷ್ಟು ದಿವಸ ನಿಂತೂ ಕಾಯಬೇಕಲ್ಲಾ ೩

ಎತ್ತನೋಡಲು ಕಣ್ಣತ್ತಲು ಕವಿಯುತಲಿದೆ
ಬೆಳಕೆಂತು ತೋರ್ಪಯೊ ಗುರುರಾಜ ಪ್ರಭುವೇ
ಅಂಧಕಾರದಿ ಮುಳುಗಿ ಒಂದೂ ಕಾಣದೆ ಇಹುದು
ಬಂಧನವ ಬಿಡಿಸೆನ್ನ ಕಾಯೊ ಸದ್ಗುರುವೆ ೪

ಶರಣು ಬಂದವರಾ ಪೊರೆಯುವರೆಂಬಾ
ಬಿರುದನ್ನು ಕೇಳಿ ಬಂದೆನೊ ನಾನಿಂದೂ
ಆಪನ್ನರಕ್ಷಕಾ ಅನಾಥ ಬಂಧೂ ಶ್ರೀ
ರಾಘವೇಂದ್ರಾ ಕಾರುಣ್ಯಸಿಂಧೂ ೫

## ೨೮

ರಾಘವೇಂದ್ರರಾಯರೆಂಬ ರತುನ ದೊರೆಕಿತೋ
ಪಾದಸೇವೆ ಮಾಡುವಂಥ ಭಾಗ್ಯ ಲಭಿಸಿತೋ ಪ

ಮಂಗಳಾರಿಗರು ತುಂಗಾತೀರದಿ ನಿಂದಿಹರೋ
ಕಂಗಳಿಂದಲಿ ಕಂಡು । ಮನದಿ ಹರುಷಗೊಳುವರೋ ೧

ನಿತ್ಯ ನಿತ್ಯದಿ ಭಕ್ತಾದಿಗಳು ಹಾಡಿ ಪೊಗಳುವರೋ
ತುಷ್ಟ ಬಾಗುತಲವರ ಮನದಿಷ್ಟಗಳನೆ ಸಲಿಸುವರೊ ೨

ಬಂದ ಬಂದ ಜನರಿಗೆಲ್ಲ ಮೃಷ್ಟಾನ್ನ ಉಣಿಸುವರೊ
ಉಣಿಸಿ, ದಣಿಸಿ, ಹರಸಿ, ಅವರನಾದರದಿ ಕಳಿಸಿಕೊಡುವರೋ ೩

ಯತಿಕುಲತಿಲಕರು ರಘುವರ ಪ್ರೀಯರು
ಶ್ರೀ ರಾಘವೇಂದ್ರರೂ
ಅಘಗಳ್ಹರಿಸಿ ದಯಾಸಂಪನ್ನರೂ ಮಹಾ
ನಂತ ಮಹಿಮರೂ ೪

ಅಂದಣವೇರಿ ರಾಯರು ಬರುವಾ ವೈಭವ ನೋಡುತ್ತಾ
ಮುಂದೆ ಬಂದು ಶ್ರೀ ರಾಘವೇಂದ್ರರಿಗೊಂದಿಸೂವರೂ ೫

## ೨೯

ರಾಯ ಬಾರೋ । ತಂದೆ ತಾಯಿ ಬಾರೋ ಅ
ನ್ಯಾಯವಾಗಿ ಕಾಲಕಳೆದೆನು ಕಾಯಬಾರೋ ಪ

ಅನುದಿನದಲಿ ನಿನ್ನ ಸ್ಮರಣೆಯ ಮಾಡದೆ ಕೆಟ್ಟೆನಯ್ಯ
ಕಷ್ಟಗಳನೆ ಕಳೆದಿಷ್ಟವ ಸಲ್ಲಿಸಿ ರಕ್ಷಿಸೊ ನೀನು ೧

ಜಪತಪ ಮಾಡದೆ ಪಾಪವಗಳಿಸಿದೆ ಕೃಪೆ ಮಾಡು ಗುರುವೇ
ತಾಪವ ಹರಿಸು ಪ್ರೀತಿಯ ತೋರಿಸು ಪೋಷಿಸುನೀನು ೨

ಕನಸಿಲಿ ಮನಸಿಲಿ ನಿನ್ನನು ಸ್ತುತಿಸುವೆ ಧನ್ಯನ ಮಾಡೈ
ಮನ್ನಿಸದಿದ್ದರೆ ಅನ್ಯರ ಕಾಣೆಸು ನಿನ್ನ ನಾ ಬಿಡೆನೈ ೩

## ೩೦

ಶ್ರೀಗುರುರಾಜ ಪ್ರಭೋ । ನಮೊ ನಮೊ ಗುರು ರಾಜಪ್ರಭೋ ಪ

ಪರಿಪರಿಯಿಂದಲಿ ನಿನ್ನನಾ ಅನುದಿನಸ್ತುತಿ ಸುವೆನಾ
ಪರಮದಯಾಳು ಶ್ರೀ ಗುರು ರಾಘವೇಂದ್ರಾ
ತ್ವರಿತದಿಂದಲಿ ಎಮ್ಮ ಕರುಣಿಸಿ ಪೊರೆವುದು ೧

ಅಡಿಗಡಿಗೇ ನುಡಿನುಡಿಗೇ ಎಡಬಿಡದೇ ಭಜಿಸುವೆನಾ
ತಡಮಾಡದೆ ದಯೆತೋರುವುದೈ
ಬಿಡೆ ಬಿಡೆ ನಿಮ್ಮಯ ಅಡಿಗಳ ನಾನೆಂದೂ ೨

ಕನಿಕರಿಸೀ ದಯಸುರಿಸೀ ಭಯಹರಿಸೀ ಆದರ
ಪಡಿಸೀ ನಿಮಗೆ
ಸರಿಕಾಣೆನೊ ಧರಣಿಮಂಡಲದೊಳು
ಕರುಣಾಮಯ ಶ್ರೀ ರಾಘವೇಂದ್ರಾ ೩

## ೩೧

ಶ್ರೀ ಗುರು ರಾಜರ ಸೇವಿಸಿರೋ----
ದಂಡ ಕಮಂಡಲ ಪಿಡಿದಿ ನಿಂದಿಹ ಹಸ್ತ ಭೂ
ಮಂಡಲವೆಲ್ಲಾ ತಿರುಗಿ ಬಂದಿಹ ಹಸ್ತ
ಬಿಡದೆ ಭಕುತರಾ ಸಲಹುವ ಹಸ್ತ
ಪೊಡವಿ ಪತಿ ಶ್ರೀ ರಘು ರಾಮರ ಸೇವಿಪ ಹಸ್ತಾ
ಭಕ್ತಲಿ ತುತಿಪರ ಎತ್ತಿ ಸಲಹುವ ಹಸ್ತಾ
ಮತ್ತೆ ಭೂಸುರರಿಗೆಲ್ಲಾ ಅಭಯವೀಯುವ ಹಸ್ತ
ಮುಕ್ತಿಮಾರ್ಗಕೆ ದಾರಿ ತೋರುತಿಹ ಹಸ್ತ
ಚಿತ್ತಜನಯ್ಯನ ನೆನೆದು ಮನದಲ್ಲಿ ನಲಿಯುವ ಹಸ್ತಾ
ಭೂತ ಪ್ರೇತಗಳನೆಲ್ಲ ಓಡಿಸುತಿಹ ಹಸ್ತ
ಸಕಲವ್ಯಾಧಿಗಳ ಹರಿಸಿರಕ್ಷಿಪ ಹಸ್ತ
ಸುವ ಜನರ ಉದ್ಧಾರ ಗೈಯುವ ಹಸ್ತ
ಸರುವದಾ ಶಿರಿಪತಿಯ ಕೊಂಡಾಡುವ ಹಸ್ತಾ
ಕನಸಿಲಿ ಬಂದು ಕಣ್ಣಪೊರೆ ತೆಗೆದಿಹ ಹಸ್ತ

ಮುದದಲಿ ಮಗಿವಿಗೆ ಮಾತ ಕಲಿಸಿದ ಹಸ್ತ
ರಸದಿ ಮುಳುಗಿ ಜೀವ ಕಳೆದ ಕಂದಗೆ
ಜೀವ ಕಳೆ ತುಂಬಿದ ಹಸ್ತ
ಪರಮ ಪಾವನವಾದ ಶ್ರೀಗುರುರಾಜರ ಹಸ್ತಾ
ಜಗವೆಲ್ಲ ನೋಡೆ ಪ್ರಖ್ಯಾತಿ ಪಡೆದಿಹ ಹಸ್ತ
ನಗುತ ಮಂತ್ರಾಲಯದೊಳು ಬಂದು ನಿಂದಿಹ ಹಸ್ತ
ಅಗಣಿತಮಹಿಮೆ ತೋರಿ ಮೆರೆಯುತಿಹಾ ಹಸ್ತ
ಸರಿಗಾಣೆ ಧರೆಯೊಳು ಶ್ರೀರಾಘವೇಂದ್ರರ ದಿವ್ಯ ಹಸ್ತಾ.

## ೩೨

ಶ್ರೀ ರಾಘವೇಂದ್ರ ಗುರುವೇ ಪರಮ ದಯಾಳು ಪ್ರಭುವೇ ಪ

ನಿರುತಾದಿ ಸೇವಿಸುವರಾ ಕಾಮಿತ ಕಲ್ಪತರುವೇ ಅ.ಪ

ತುಂಗಾ ತೀರದೊಳ್ ಬಂದೂ ಮಂಗಾಳ ಮಹಿಮರು ನಿಂದೂ
ಮಂಗಳಾ ಮೂರುತಿ ಶ್ರೀ ರಾಮಚಂದ್ರನ್ನ ಪೂಜೇಪರಿಂದೂ ೧

ಕಾವೀಶಾಠಿಯನುಟ್ಟೂ ಗಂಧಾಕ್ಷತೆಗಳಿಟ್ಟೂ ।
ತಿರ್ದ್ದಿ ಹಚ್ಚಿರುವಾನಾಮಾ ಫಣಿಯಲ್ಲಿ ಹೊಳೆಯುತಾಲೀ ೨

ವೀಣಾವಾದನದಿಂದಾ ಗಾನವ ಮಾಡುತಲೀ
ವೇಣುಗೋಪಾಲ ಕೃಷ್ಣನ್ನ ಕುಣಿಸಿ ಕೊಂಡಾಡುತಿಹರು ೩

ಭಕ್ತಿಯಿಂದಲಿಸ್ತುತಿಪ ಜನರಾ ಆಪತ್ತುಗಳೆಲ್ಲವ ಕಳೆವಾ
ಸಂಪತ್ತು ಸೌಭಾಗ್ಯವೀವಾ ಶರಣೇಂದವರ ಪೊರೆವಾ ೪

ಸರಿಯಾರು ನಿಮಗೆ ದೇವಾ ಈ ಧರುಣಿಯೊಳರಸೆ ಕಾವಾ
ದೊರಗಳ ನಾ ಕಾಣೆನಯ್ಯ ಶ್ರೀ ರಾಘವೇಂದ್ರ ಜೀಯಾ ೫

## ೩೩

ಶ್ರೀ ರಾಘವೇಂದ್ರರ ಪಾದವನಂಬಿರೋ ಜಗದ್ಗುರುರಾಜರ
ಸೇವೆ ಮಾಡಿರೊ ಪ

ನಂಬಿದ ಭಕ್ತರ ಪೊರೆಯುವಾ ಹಗಲಿರುಳು
ಬೆಂಬಿಡದಲೆ ಕಾಯುತ್ತಿರುವಾ
ಸಕಲ ಸಂಪತ್ತು ಯಿತ್ತು ಸಲಹುವಾ ನಮ್ಮ ಕರುಣಾ
ದೃಷ್ಟಿಯಿಂದ ನೋಡುತ್ತಲಿರುವಾ ೧

ಬಂದ ಬಂದವರನ್ನು ಮುಂದಕ್ಕೆ ಕರೆವಾ
ಬಂದಾಪತ್ತುಗಳನೆಲ್ಲ ಕಳೆವಾ
ತಂದೆಯಂದದಿ ಕೈ ಪಿಡಿದಿರುವಾ ಇನ್ನೂ ಸಂದೇಹ
ವಿಲ್ಲದೆ ರಕ್ಷಿಸುವಾ ೨

ಶ್ರೀ ರಾಮಚಂದ್ರನ ಪ್ರಿಯ ಭಕ್ತರೂ ಶ್ರೀ ರಾಘವೇಂದ್ರರು
ಆಶ್ರಿತ ಜನ ರಕ್ಷಕರಾಗಿಹರೂ ಬಂದು
ಮಂತ್ರಾಲಯದಿ ನೆಲೆಸಿಹರೂ ೩

## ೩೪

ಶ್ರೀ ರಾಘವೇಂದ್ರ ಶ್ರೀ ರಾಘವೇಂದ್ರ ಶ್ರೀ ರಾಘವೇಂದ್ರ
ಎನ್ನಿರೋ "ಶ್ರೀ ರಾಘವೇಂದ್ರಾಯನ ನಮಃ" ಎಂಬ ಪ

ನಾಮವ ಸ್ಮರಿಸಿ । ಸುಖಿಯಾಗು ಮನವೇ ಅ.ಪ

ಸಂಸಾರ ಸಾಗರದಿ ಬೆಂದು ಬಳಲಿರುವೇನಯ್ಯ
ಮುಂದೇನು ಗತಿ ಕಾಣೆ ಗಾಡಾಂಧಕಾರದೊಳು
ಮುಳುಗಿ ಬೆಂಡಾದೆನೊ ಕರುಣಿಸೈ ಗುರುರಾಘವೇಂದ್ರಾ ೧

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆಂದು
ನಂಬಿದೆನ್ನೈ ಪ್ರಭವೆ ಸಂದೇಹವೇಕಿನ್ನು ಕಂದನೆನು
ತೆಂದು ಕಾಯೋ ಗುರುವೇ ಶ್ರೀ ರಾಘವೇಂದ್ರ ಪ್ರಭುವೆ ೨

ಅಂಧತ್ವ ಮೂಕತ್ವ, ಬಧಿರತ್ವ ಎಕಲಾಂಗಿಗಳ
ಹಿಂದೆ ಪೊರೆದೆ ನೀನೆಂಬ ವಾರ್ತೆಕೇಳಿ ನಿನ್ನ
ನಾ ಮೊರೆ ಹೊಕ್ಕೆ ಎನ್ನನುದ್ಧರಿಸುವುದು
ಘನ್ನಮಹಿಮಾ ಶ್ರೀ ರಾಘವೇಂದ್ರಾ ೩

ನಿನ್ನ ಪಾದೊದಕವ ಸೇವಿಸುವ ಸುಜನರಿಗೆ
ಭವರೋಗ ಗಳೆಲ್ಲ ಪರಿಹರಿವುದೊ
ಸ್ಮರಣೆ ಮಾತ್ರದಿ ಸಕಲ ಪಾಪಗಳನೋಡಿಸಿ
ಪುನೀತರನೆ ಮಾಡುವಿಯೊ ಗುರುವೆ ೪

ಬಿಡೆನು ಬಿಡೆನು ನಿನ್ನಡಿಗಳಿಗೆ ಸೇವಿಸಲು
ದೃಢ ಭಕುತಿಯನೆ ಕೊಡು ಎನಗೆ ಶ್ರೀ ರಾಘವೇಂದ್ರಾ
ಪ್ರಭವೆ ನಿನ್ಹೊರತು ಪೊರೆವರ ನಾ ಕಾಣೆ
ಅಪಾರ ಮಹಿಮ ಶ್ರೀ ರಾಘವೇಂದ್ರಾ ೫

## ೩೫

ಸಾರಿದೆನೋ ನಿನ್ನಾ ಶ್ರೀ ರಾಘವೇಂದ್ರರನ್ನಾ ಎಂದೆಂದಿಗೂ
ನಿಮ್ಮ ಚರಣ ಬಿಡೆ ಪ್ರಭುವೇ ಪ

ಗಾನವಿಲೋಲನೇ ದೀನ ಜನ ಪಾಲಕನೇ
ಜ್ಞಾನಿಗಳರಸನೇ ಶ್ರೀ ರಾಘವೇಂದ್ರಾ
ಭಕ್ತಿಯಿಂದಲಿ ನಿಮ್ಮ ಆರಾಧಿಪರ ಆಪತ್ತು
ಕಳೆಯುವೆ ಶ್ರೀ ರಾಘವೇಂದ್ರಾ ೧

ನಿಮ್ಮನ್ನು ಸ್ತುತಿಪೆನಾ ನಿಮ್ಮ ಪದಸೇವಿಪೆನಾ
ನಿಮ್ಮ ನಾಮ ವುಚ್ಚರಿದೇ ಶ್ರೀ ರಾಘವೇಂದ್ರಾ
ಜಪತಪ ಮಾಡಿಲ್ಲಾ ವ್ರತನೇಮ ತಿಳಿದಿಲ್ಲಾ
ವ್ಯರ್ಥವಾಯಿತು ಕಾಲ ಶ್ರೀ ರಾಘವೇಂದ್ರಾ ೨

ಎನ್ನಪರಾಧವ ಮನ್ನಿಸಬೇಕಿನ್ನು
ಘನ್ನ ಗುಣಮಣಿ ಶ್ರೀ ರಾಘವೇಂದ್ರಾ ।
ಬಗೆಬಗೆಯಿಂದಲಿ ಸ್ತುತಿಸಿ ಬೇಡುವೆ ಪ್ರಭುವೆ
ತಡ ಮಾಡದಲೆ ಕಾಯೊ ಶ್ರೀ ರಾಘವೇಂದ್ರಾ ೩

೧

ಗಜವದನಾ ಬೇಡುವೆ
ತ್ರಿಜಗದೊಳ್ ನಿನಗ್ಯಾರು ಸರಿ ಪ.

ಪೊರೆವರೆನ್ನ ಕಾಣಿ ಪುಸಿಯಲ್ಲೆನ್ನಾಣೆ ಅ.ಪ.

ಮೂಷಕ ವಾಹನ ನಮೋ
ಶೇಷಶಯನನ ತಂದು ತೋರಿಸುವೊ ನವ್ಹೋ ೧

ಚಾರದೇಷ್ಣನೆಂಬೊ ನಾಮದಿಂದ
ರುಕ್ಮಿಣಿ ಉದರದಲ್ಲಿ ಜನಿಸಿದಾತಗೆ ನಮೋ ೨

ಎಷ್ಟು ವರ್ಣಿಪೆ ನಿನ್ನ ಮಹಿಮೆಗೆ ನಮೋ
ದಿಟ್ಟ ಮೂರುತಿ ನಮ್ಮ ಕಾಳೀಮರ್ಧನಕೃಷ್ಣ ದಾಸಗೆ ನಮೋ ೩

೨

ಇಲ್ಲಿ ಬಾ ಇಲ್ಲಿ ಬಾ ಮೆಲ್ಲ ಮೆಲ್ಲನೆ ಹೆಜ್ಜೆಯನಿಕ್ಕುತ
ಪುಲ್ಲನಾಭ ಗೋಪಾಲಕೃಷ್ಣ ಗೊಲ್ಲರೊಡಗೂಡಿ ಪ.

ಪಾಲು ಮೊಸರು ಬೆಣ್ಣೆ ಕೊಡುವೆ ಬಾ
ಗೋಲಿ ಗುಂಡು ಗಜಗನೀಡುವೆ ಬಾ
ಆಲಯ ಪೊಕ್ಕು ಧೂಳಿ ಮಾಡಲು ಬ್ಯಾಡ ೧

ಅಂಗಳದೊಳು ಬಾ ಬೆಳದಿಂಗ ತೋರುವೆನು
ರಂಗು ಮಾಣಿಕ್ಯದುಂಗರ ನಿಡುವೆನು ಮಂಗಳಾಂಗನೆ ೨

ಮೃದನಯ್ಯನೆ ಬಾ ಸುದತಿಯರೊಡಗೂಡಿ ಬಾ
ಸಡಗರದಿ ನೀ ಬಾ ಕಾಳೀಮರ್ಧನಕೃಷ್ಣ ಬಾ ೩.

## ೩

ಏನು ಪೇಳಲಿ ಗೋಪಿ ಇಂಥಾ ಬುದ್ಧಿಯ
ನೋಡಮ್ಮಾ ಗೋಪೆಮ್ಮಾ ಪ.

ಗಡಿಗೆಯ ಒಡೆದಾನು
ಕೊಡಹಾಲು ಕುಡಿದಾನು
ಹುಡುಗರ ಬಡಿದು ಓಡಿ ಪೋದಾನು
ನಿಮ್ಮ ಹುಡುಗಾ ಸಿಕ್ಕಿದ ಮೇಲೆ
ಭಿಡಿಯಾವಿಲ್ಲದೆ ಗಿಡದಾ
ನೆರಳಿಗೆ ಕಟ್ಟುವೆನು ಬೆನ್ನಟ್ಟುವೆನು ೧

ನೆಲವಿನಲ್ಲಿದ್ದ ಪಾಲುಮೊಸರು
ಬೆಣ್ಣೆ ಕದ್ದಾನು ಬಾಲಕರೊದ್ದನು
ಮುದ್ದು ಹೆಣ್ಣು ಬಾಲೆಯರಿಗೆ
ಕಣ್ಣುಸನ್ನೆ ಮಾಡಲಿ ಬಂದಾನು
ಭಂಡು ಮಾಡಿದಾನು ದುಂಡ ಕುಚವ
ಕರದಿ ಪಿಡಿದಾ ಓಡಿ ಪೋದಾ ೨

ಹೆಡೆಯ ಸರ್ಪಾವ ಕರದೊಳು ಹಿಡಿದು
ಸಂಜೀಯ ಹೊತ್ತಿಲಿ ತಂದಾನು
ನಮ್ಮನ್ನಂಜಿಸಲು ಬಂದಾನು
ನಾಗಕನ್ನಿಕೆಯರಿಂದ ಸ್ತೋತ್ರ
ಮಾಡಿಸಿಕೊಂಡಾನು ಕಾಲಿಮರ್ಧನಕೃಷ್ಣಾನು ೩

೪

ಏಳು ಚೆನ್ನಿಗರಾಯ ನನ್ನೀನಾಗರ ಏಳು ಪ.

ಏಳೆನ್ನ ಕಣ್ಮಣಿಯೇ ಕಾಳಿಮರ್ಧನಕೃಷ್ಣ ಅ.ಪ.

ಮಾರನೆಯ ದಿನದಲ್ಲಿ ನೀ ಹಾರುತ್ಯಾರುತ ಬಂದು
ಸೀರೆ ಸೆರಗನು ಪಿಡಿದು ಬೆಲ್ಲವನು ಬೇಡಲು
ಕೇಳಿಕೊಳ್ಳವುದೇಕೆ ಹಗಲುಗಳ್ಳನೆ ಹೋಗು
ಒಳಿತು ಚೋರರಿಗೆಲ್ಲ ಕೇಳಿ ಕೊಳಲೆಂದೆ ೧

ಚೋರ ನೀನೆಂದುದಕ್ಕೆ ಈ ಸೀರೆಯನು ಜರಿವರೇ
ಚೋರನಲ್ಲವೇ ನೀನು ಮಧ್ವರ ಹೃದಯ ಕದ್ದ ೨

ಜಾರ ನೀನೆಂದುದಕೆ ಕರೆಕರೆಗೊಳಿಸುವರೆ
ಜಾರೆಯಾಸಹುದು ನೀನಲ್ಲ ಜಾರರಮಣ ೩

ಕಂಡದನು ಆಡಿದರೆ ಕಡುಕೋಪವ್ಯಾತಕೆ
ಹಿಂಡು ಗೋವಳಲೊಡೆಯ ಪುಂಡನೀನಹುದು ೪

ಮಜ್ಜನವ ಮಾಡಿಸುವೆ ಸುಳಿಗುರುಳ ತಿದ್ದುವೆ
ಸಜ್ಜಾದ ಚಂದನದ ಚಂದ್ರಮನ ಫಣಿಯಲಿಡುವೆ ೫

ಗೊಲ್ಲಬಾಲರು ಈಗ ಕರೆಯಲು ಬರುವರು
ಮೆಲ್ಲಗೆ ಎದ್ದು ನೀ ಬೆಲ್ಲವನು ಮೆಲ್ವ ಬಾಲಕೃಷ್ಣ ೬

ಮಧ್ವೇಶ ನೀನೇಳು ಮುದ್ದು ಮೊಗದವನೆ ಏಳು
ಹದ್ದುವಾಹನ ಏಳೂ ಹಾಲಕುಡಿಯೇಳು ೭

ಹಾಲು ಬೆಲ್ಲವ ಸವೆದು ಸುಧೆಯನು ಸುರಿಸೇಳೋ
ಪಾಲಗಡಲ ಶಯನ ಶಯನದಿಂದೇಳೋ ೮

ಮುನಿಸು ಏಕೇಕೆ ರಮಣ ಮುಸುಕನು ತೆಗೆದೇಳು
ತಿನಿಸು ತಿಂಡಿಯ ಕೊಡುವೆ ತನಿವಣ್ಣ ಕೊಡುವೆ ೯

ಚಿನ್ನದಾ ಒಂಟೆಳೆಯ ರನ್ನಧಾಭರಣ
ಭಿನ್ನ ಭಿನ್ನವಾದ ಆಭರಣಗಳಿಡುವೆ ಕೃಷ್ಣ ೧೦

ಹೆಚ್ಚೇನು ಪೇಳಲಿ ಮಗಸಾಮ್ರಾಜ್ಯದ ದೊರೆತನವು ನಿನ್ನದೊ
ಸ್ವಚ್ಛಾಗಿ ಹೇಳುವೆನು ಫಲಿಸೇಳು ಕೃಷ್ಣಾ ೧೧

ರಾಧೆಯ ಹೃದಯದನುರಾಗ ನೀ ಬಲ್ಲೆ
ಬಾಧಿಸದೆ ಜಾಗವನು ಬಿಟ್ಟೇಳೊ ೧೨

ಏನು ಬಯಸಿದ ಕೊಡುವೆ ಮನಬಯಕೆ ಪೂರೈಸೊ
ಮನದನ್ನನೇ ಎನ್ನ ಕಾಳಿಮರ್ಧನಕೃಷ್ಣ ೧೩

೫

ಮಧುರಾಪುರದಿಂದ ಎಂದಿಗೆ ಬರುವಿಯೊ ಕೃಷ್ಣಾ
ಮಧುರಾಪುರದ ಬಾಲೆಯರು ಬಲು ಮೋಸಗಾರರು ಪ.

ಗೋಕುಲದ ನಾರಿಯರು ನಾವು ಏಕವಾಗಿ ಬರುವೆವು
ಅನೇಕ ಬಗಿಯ ಸುಖದಿಂದಾ ಗೋಪಿಯ ತಂದಾ ಅ.ಪ.

ಯೆಂದಿಗೆ ನಿನ್ನ ಮುಖಾರವಿಂದವ ನೋಡುವೆವೋ
ಅಂದಿಗೆ ಸುಖವೋ ಮಾಧವ
ಮಂದರೊದ್ಧರನೆ ಮಾವ ಕಂಸನ ಕೊಂದು
ಸಿಂಧುರನಯನನೆ ನೀ ಬೇಗ ಬರಬೇಕೆಂದು
ನಾವು ಬೇಡುವೆವು ಬಂದು ೧

ಮಧುವನದಲ್ಲಿ ನಿನ್ನಾ
ಮಧುರ ಸ್ವರವನ್ನು ಕೇಳಿ

ಮದನ ತಾಪಕೆಮ್ಮ ಮರುಳು ಮಾಡಿಸಿ
ಮುರಲಿ ನುಡಿಸಿ ಆಧರಾಮೃತ ಪಾನವನ್ನೇ
ಮಾಡಿಸಿದ ನಿನ್ನ ಮಹಿಮೆಯನ್ನು ತೋರಿದಿ ೨

ಯೆಷ್ಟು ಮೊರೆ ಪೊಕ್ಕಾರು ಒಂದಿಷ್ಟು
ದಯವ್ಯಾಕೆ ಬಾರದೊ
ನಿನ್ನ ಬಿಟ್ಟು ಒಂದರಘಳಿಗಿರಲಾರೆವು ನಾನು
ಪ್ರಾಣನಾಯಕನೇ ಎನ್ನ ಪ್ರಾಣದೊಲ್ಲಭನೆ ಕೇಳೊ
ಸರ್ವಪ್ರಾಣಿಗಳಿಗೆ ಪ್ರೇರಕನೆ ನಮ್ಮ
ಕಾಳಿಮರ್ಧನ ಕೃಷ್ಣನು ೩

೬

ಮಧುರೆಗೆ ಪೋಗಬ್ಯಾಡಾ ರಂಗಯ್ಯ ರಂಗಾ ಪ.

ಮಧುರೆಗೆ ಪೋದಾರೆ ಚದುರಿ ನಾರಿಯರು ಬೆದರುತಲಿರುವೆವು
ಹರಿಯೇ ಎನ್ನಯ ದೊರೆಯೇ ಅ.ಪ.

ಮಧುರಾಪುರದಿಂದ ಅಕ್ರೂರ ಕರಿಲಿಕ್ಕೆ ಬಂದಾನು
ಆಹ್ವಾನ ತಂದು ನಿಂದಾನು
ಮಲ್ಲನ ಕೊಂದನು ಕೃಷ್ಣ
ರಜಕನ ಕೊಂದನು ರಕ್ತಾಲಂಕೃತನಾಗಿ
ಕುಬಜೆಯಿಂದ ಗಂಧವಾ ಕೊಂಡನು
ಡೊಂಕನು ತಿದ್ದಿದನು ೧

ಚಾಣಿಕರ ಮುಷ್ಟಿಕರ ಕೂಡಾ
ಮುಷ್ಟಿ ಯುದ್ಧವ ಮಾಡಿ ಕುಟಿಲರ ಕೊಂದು
ರಂಗಮಂಟಪಕೆ ಬಂದು
ನಾನಾಭರಣ ಭೂಷಿತನಾಗಿ
ರಾಜ ಬೀದಿಯೊಳು ಸಾಗಿ ೨

ಮಧುರಾಪುರದ ನಾರಿಯರು
ಬಲು ಚೆಲುವಿಯರು
ನಿನ್ನನೆ ಮರುಳು ಮಾಡುವ್ರೋರು
ಯಮ್ಮನಗಲಿಸುವ್ರೋರು ಇವರು ೩

ಕನಿಕರವಿಲ್ಲವೆ ನಾವು ನಿನ್ನನು ಬಿಟ್ಟು
ವೊಂದು ನಿಮಿಷವಾದರು
ಕಾಲಹ್ಯಾಗ ಕಳಿಯೋಣ
ಘನ ಮಹಿಮನ ಅಧರಾಮೃತ ಪರವಶವಾದೆವು ೪

ಮಲ್ಲಯುದ್ಧವ ಮಾಡಿ
ಮಾವ ಕಂಸನ ಕೊಂದು
ಉಗ್ರಸೇನರಿಗೆ ಅನುಗ್ರಹವ ಮಾಡಿ
ಶೀಘ್ರದಿ ಬರಬೇಕೆಂದು ಬೇಡುವೆ ನಾ ಬಂದು
ಕಾಳಿಮರ್ಧನಕೃಷ್ಣ ನಿನಗಿಂದು ೫

೭

ದಣಿಯ ನೋಡಿದೆನೊ ನಿನ್ನ ವೆಂಕಟರನ್ನಾ
ದಣಿಯಾ ನೋಡಿದೆ ನಿನ್ನಾ ಪ.

ಖಜಗಣದೊಡೆಯನೆ ಬಿಡುವಿಲ್ಲದೆ ನಿನ್ನ ಅಡಿಗಳಿಗೆ ವಂದಿಪೆ ಅ.ಪ.

ಮಹದ್ವಾರ ಬಾಗಿಲಾದಲ್ಲಿ ಇರುತಿರುವ್ರೋರು
ಜಯವಿಜಯರಿಲ್ಲಿ ವಾರವಾರಕ್ಕೆ ನಿನ್ನ
ಬ್ರಹ್ಮಾದಿ ದ್ವಿಜರು ಹಾರೈಸಿ
ಹರುಷದಿ ಪೂಜೆಗೊಂಬೊರೆ ೧

ಯಡಬಲದಲ್ಲಿ ನಿನ್ನ ಮಡದಿಯರಿಂದ ಒಡಗೂಡಿ
ಸಡಗರದಲ್ಲಿ ಇಂದಿರೇಶ

ಗರುಡವಾಹನೆ ರಂಗಾ ಉರಗಾದ್ರಿನಿವಾಸ
ಶೇಷಾಚಲವಾಸ ಶ್ರೀ ವೆಂಕಟೇಶಾ ೨

ಸೃಷ್ಟ್ಯಾದಷ್ಟ ಕರ್ತಾ
ಶ್ರೀವಿಠಲ ನಿನ್ನಾ ಗುಣಯೆಷ್ಟೆಂದು ವರ್ಣಿಪೆನಾ
ಅಷ್ಟ ಮಹಿಷಿಯರ ಆಳದ ಮದವೆಷ್ಟೊ
ಕಾಳಿಮರ್ದನಕೃಷ್ಣ ಬಲು ಜೋರಾ ದಿಟ್ಟಾ ಆನಂದ ಕೊಟ್ಟಾ ೩

೮

ದೂರ ನೋಡದಿರೆಲೊ ರಂಗಯ್ಯಾ ಪ.

ದೂರ ನೋಡದಿರು ಭವ ಮಡುವಿನೊಳಗಿರುವೆನೋ
ಪಿಡಿಯೆನ್ನ ಕೈಯ ತಡಮಾಡ ಬ್ಯಾಡಯ್ಯ ಅ.ಪ.

ಹಿಂದೇಸು ಜನ್ಮಂಗಳು ಬಂದು ಪೋದಾವಯ್ಯ
ಮುಂದಿನಾಗತಿಯು ತೋರದಯ್ಯಾ
ತಂದೆ ತಾಯಿ ಸರ್ವ ಬಂಧು ಬಾಂದವಾ
ನೀನೆ ಸಿಂಧುಶಯನನೆ ಕಂದರ್ಪ ಪಿತನೆ ೧

ಆರು ಕಾಯುವರಿಲ್ಲಾ ಮುರಾರಿ ನಿನಗೆ ಸಾರಿದೆನಲ್ಲಾ
ಸೇರಿಸೋ ಸಾಧು ಜನರ ಸಹವಾಸಾ
ಹರಿ ನಿನ್ನಲ್ಲಿ ಮನಸು ನಿಲ್ಲಿಸು
ಶ್ರೀಶಾ ಶ್ರೀನಿವಾಸಾ ೨

ಯೆಷ್ಟು ಹೇಳಲಿ ಯನ್ನ ಕಷ್ಟ ಕೇಳುವರಿಲ್ಲ
ಅರಿಷ್ಟ ಸಂಸಾರದೊಳೂ
ಕೆಟ್ಟು ಪೋಗುವೆನು ದೃಷ್ಟಿಯಿಂದಲಿ
ನೋಡೆನ್ನ ಕಾಳಿಮರ್ಧನಕೃಷ್ಣವಾ ೩

೯

ಮೂಲನಾರಾಯಣ ವಟಪತ್ರಶಾಯಿ
ಕಾಲಕಾಲಕೆ ವೊದಗಿ ನೀಯೆನ್ನ ಕಾಯೋ ಪ.

ಎಂದೆಂದಿಗೂ ಎನಗೆ ತಂದೆ ನೀ ದೇವಾ
ಯಿಂದೆನ್ನ ಕರಪಿಡಿಯೋ ಬಿಂದುಮಾಧವಾ ಅ.ಪ.

ಸ್ವಚ್ಛ ಮನವಮಾಡು ಮತ್ಸರೂಪಕನೆ
ತುಚ್ಛ ಮನಕೊಂದ ವಿಶ್ವವ್ಯಾಪಕನೆ ೧

ಮುಂದೆನ್ನ ಉದ್ಧರಿಸು ಮಂಧರೋದ್ಧರನೆ
ಇಂದ್ರಾದಿ ಸುರರಿಂದ ವಂದ್ಯಾಸುರವರನೆ ೨

ಹಿರಣ್ಯಾಕ್ಷನ ತರಿದಂಥ ಧೀರ
ಭರಧಿ ವೇದವ ತಂದ ಮಹಿಮೆ ಅಪಾರ ೩

ತರಳ ಪ್ರಹ್ಲಾದನ ತಲೆಗಾಯ್ದ ರೂಪ
ಸರಳ ಮತಿಯನಿತ್ತು ಪಾಲಿಸು ಶ್ರೀಶ ೪

ಬಲಿಯ ಸಿಕ್ಕನು ಮುರಿದೆ ಪ್ರಬು ನಿನ್ನ ಕೀರ್ತಿ
ಯೊಳ ಎನ್ನ ಮನವಿಡು ವಾಮನಮೂರ್ತಿ ೫

ಕ್ಷತ್ರಿಯ ಕುಂಭವ ಸವರಿದ ರಾಮ
ಶತಷಟ್ಕಂದರ ಬಡಿದ ದಿವ್ಯ ನಾಮ ೬

ದಾನವ ಕುಲಕುಟಾರ ಶ್ರೀ ರಾಮ
ಮಾನಾಭಿಮಾನವು ನಿನ್ನದೋ ರಮ ೭

ಮಲ್ಲರ ಗೆದ್ದಂಥ ದೂಕುಳ ವೈರಿ
ಗೊಲ್ಲಬಾಲಕರ ಕೂಡಾಡಿದ ಶೌರಿ
ಸೊಲ್ಲು ಸೊಲ್ಲಿಗೆ ನಿನ್ನ ನಾಮಕೊಡು ಶೌರಿ ೮

ತ್ರಿಪುರರ ಸ್ತ್ರೀಯರ ವ್ರತ ಕೆಡಿಸಿದ ಜಾಣ
ಉಪಗಮನ ವೀಯೋ ವಿಶ್ವೇಶ ಸುಜ್ಞಾನ ೯

ಕಲಿಮುಖದೈತ್ಯರ ಅಳಿಯುವ ಕಲ್ಕಿ
ಸಲಹೋ ಬಳಲುವೆ ನಾನು ಭವದಿಂ ಶಿಲ್ಕಿ ೧೦

ಗುರು ಕಾಳೀಮರ್ಧನಕೃಷ್ಣ ಯಾವಾಗ್ಯು
ಶರಣುಜನರಪಾಲ ಏನು ಬಂದಾಗ್ಯು ೧೧

## ೧೦

ಯಾವ ಪಾಪಿಯ ದೃಷ್ಟಿ ತಾಕೀತೋ ಗೋಪಾಲಕೃಷ್ಣಗೆ ಪ.

ಪಾಲು ಮೊಸರು ವೊಂದನಾದರು
ಯಾವ ಕಾರಣದಿ ಕುಡಿಯಲೊಲ್ಲೆ ಪೇಳೋ
ಯೆನಗೆ ಬಾಲಾ ಭೂಪಾಲ ಗುಣಶೀಲಾ ೧

ದಾವಪುಣ್ಯವತಿಯ ಕಣ್ಣು ಹತ್ತಿತೋ
ನೆಲುವಿಗಿಟ್ಟ ಬೆಣ್ಣೆಯ ಮುಟ್ಟುವುದಿಲ್ಲಾ
ಬಟ್ಟಲಲ್ಲಿಡುವೆವೋ ೨

ಕಷ್ಟವಾದರು ಇಡುವೇನು ಬಾ
ಅಪ್ಪ ವೇಣುಗೋಪಾಲಾ
ತುಪ್ಪ ಸಕ್ಕರಿ ನೀಡುವೆನು
ಚಪ್ಪರಿಸು ನೋಡುವೆನು
ಕಾಳಿಮರ್ಧನಕೃಷ್ಣಗೆ ೩

## ೧೧

ಸುಂದರಾಂಗನೆ ನಿನ್ನ ಇಂದು ಶ್ರೀರೂಪವ ಛಂದಾದಿಂದಲಿ
ನೋಡುವೆನು ಆನಂದ ಪಡುವೆನು ಪ.

ಭರದಿ ಜರಿ ಪೀತಾಂಬರವನುಟ್ಟಳು ಇವಳು
ಬಿಳಿಯ ಕುಪ್ಪುಸವಾ ತೊಟ್ಟಳು
ಲಲಾಟದಿ ಕುಂಕುಮ ತಿಲಕವನಿಟ್ಟಳು ವಾರೆ
ನೋಟವ ನೋಡುವಳು ೧

ಪಾದಾಕೊಪ್ಪುವ ಖುಳಿ ಪೈಜಣಿ ಕಾಲುಂಗರದಂದಾ
ನೋಳ್ಪ ಜನಕ್ಕೇ ವಿನೋದಾ ದೈವ ದೈತ್ಯ
ಸಾಲಿನೊಳಗೆ ಅಪಾದ ಪರಿಪೂರ್ಣ ೨

ಗಳದಿ ಕಠಾಣೆಯಕಟ್ಟಿ ಅದರ ಮೇಲ್ ಗೆಜ್ಜೆಯ ಟೀಕಿ
ಪುಥಲಿಸರ ಚಂದ್ರಹಾರಗಳು ವೈಯಾರದಿ ಬರುವೋಳೂ ೩

ಮುದ್ದು ಮುಖಕ್ಕೆ ತಕ್ಕ ಮುಖುರೆ ಬುಲಾಕು ದ್ರಾಕ್ಷಝೂಲರ
ಬುಗುಡಿಯ ಬೆಳಕು ಆನಂದ ಸುರಿಯೋಳು ಇವಳು ಮನಕ ೪

ಚವರಿ ಚಂದ್ರಾ ಜಡಿ ಭಂಗಾರದ ರಾಗುಟಿ ಬೈತಲ ಮುತ್ತನಿಟ್ಟ
ಹೇಳ ಭಂಗಾರ ಗೊಂಡೆವ ಕಟ್ಟಿ ಇವಳ್ಯಾರು ಧಿಟ್ಟಿ ೫

ಮಂದರ ಮಲ್ಲಗಿ ಸುಗಂಧಿಯು ಕ್ಯಾದಿಗಿ ನೂತನದ ಪಾರಿಜಾತವನ್ನು
ಇಂದು ತಾಂಬೂಲ ಮೆಲುವುತ ಮುಗುಳು ನೆಗಿಯು ನಗುತ ೬

ತರುಣಿಯೆನ್ನದಿರು ಹರಿಯಾ ರೂಪಾವ ವ್ಹಾ ನೋಡು
ಈ ಶ್ರೀ ರೂಪದಿಂದ ಹರನು ಮೋಹಿಸಿದನು
ಛಂದಾಮನ ಕಾನಂದಾ ೭

ಮಂಗಳಾಂಗನೆ ಎನ್ನುತ ರಂಗಾನಲ್ಲಿರು
ನೀನು ಶ್ರೀರಂಗನಾಯಕನೆ
ಕಾಳಿಂಗಶಯನನೆ ನರಶಿಂಗನೋ ೮

ಯೆಷ್ಟುನೋಡಿದರು ಈ ಧಿಟ್ಟ ಮೂರುತಿಯ ದೃಷ್ಟಿ ತಾಕುವ
ದಯ್ಯ ಕಾಳಿಯ ಮರ್ಧನ ಕೃಷ್ಣರಾಯಾ ೯

## ೧೨

ಸೃಷ್ಟಿಯೊಳಗೆ ಶ್ರೀ ಕೃಷ್ಣಮೂರುತಿ ಇನ್ನೆಷ್ಟು ಸ್ತುತಿಸಲಿ ನಾನು
ದೃಷ್ಟಿಯಿಂದಲಿ ನೋಡು ಮನಮುಟ್ಟಿ ಭಜಿಸುವೆನು
ಸೃಷ್ಟ್ಯಾದಷ್ಟ ಕರ್ತಾ ವಿಠಲಗುಣಶೀಲ
ಅಷ್ಟಯತಿಗಳಿಂದ ಇಷ್ಟದಿ ಪೂಜೆಗೊಂಡ ಮದವೋ
ಅಟ್ಟಹಾಸದಿಂದಲಿ ಬೆಟ್ಟ ಬೆರಳಿನಿಂದಲಿನೆತ್ತಿದ ಮದವೊ
ದಿಟ್ಟಮೂರುತಿ ನಮ್ಮ ಕಾಳೀಮರ್ಧನಕೃಷ್ಣ
ಮನೋಭೀಷ್ಟೆಯ ಕೊಡೋ ೧

ಇಂದಿರೇಶನೆ ನಿನ್ನ ಒಂದಿನವು ನಾನು
ಗೋವಿಂದ ನಿನ್ನಯ ಪಾದಾರವಿಂದವ
ಭಜಿಸಲಿಲ್ಲ ಆನಂದ ಮೂರುತಿ ನಿನಗಿಂತ
ಸಮಾನ ಅನಿಮಿತ್ತ ಬಂಧುಗಳು ಯನಗಿಲ್ಲ
ಎನ್ನಂಥ ಭಕುತರು ನಿನಗನಂತರರಿರುವರು
ನಿನ್ನಂಥ ಕರುಣೆ ಇನ್ನಿಲ್ಲ ಜಗದೊಳು
ಸರ್ಪಶಯನ ನಮ್ಮ ಕಾಳೀಮರ್ಧನಕೃಷ್ಣ
ನಿರುತದಿ ವೊಲಿಯೇ ೨

ಸುಂದರಿಯರ ಸೇರಿ ಆನಂದದಿಂದ ಕಳೆದ ಮದವೋ
ಮೇದಿನಿಯೊಳಗೆ ದಾಸಾರ್ಯರಿಂದ
ಸೇವೆಗೊಂಬುವ ಮದವೋ
ಸೋಳಸಾಸಿರ ಸುದತಿಯರೊಪ್ಪುವ ಮದವೊ
ಮುರಳೀಧರ ನಮ್ಮ ಕಾಳೀಮರ್ಧನಕೃಷ್ಣ ಇಷ್ಟದಿ ಒಲಿಯೆ ೩

ಮುಕುಂದ ನಿನ್ನ ಪಾದ ಎಂದಿಗೆ ಲಭ್ಯವೊ ಕಂದನ ನುಡಿ ಕೇಳಿ
ಕಂಬದಿಂದಲಿ ಬಂದ ಕರುಣಿ ನೀನು ಅಂದು ಧೃವಗೆ

ಆನಂದ ಪದವಿಯನಿತ್ತು
ಬಂದು ದ್ರೌಪದಿಯ ಮಾನವ ಕಾಯ್ದು ವಸುದೇವ ದೇವಕಿಯ
ಬಂಧನವ ಬಿಡಿಸಿದಿ ಆನಂದದಿಂದಲಿ ಅಜಮಿಳಗೊಲಿದು
ಮಡುವಿನೊಳಗಿರಲು ಗಜರಾಜ ಮಡದಿಗೆ ಹೇಳದೆ
ಗರುಡವಾಹನನಾಗಿ ಬಂದು ಮಕರಿಯನ್ನು ಕೊಂದ
ಸಿಂಧುಶಯನ ನಮ್ಮ ಕಾಳೀಮರ್ದನಕೃಷ್ಣ ಆಪತ್–ಬಂಧೋ ೪

ಬಾಲಕತನದಲ್ಲಿ ಏನೇನು ಲೀಲೆಯ ಮಾಡಿದ್ಯೊ
ಗೋಪಾಲಕೃಷ್ಣ ಮೂರುತಿ ಎಂದು ವರ್ಣಿಸಲೋ ನಿನ್ನ ಕೀರುತಿ
ಗೋವುಗಳ ಕಾಯ್ದುಕೊಂಡು ಎಂದಿಗೆ ಬರುತಿ
ನಿನಗೇಕೋ ಇಂಥಾ ಮದವು ಪಾರ್ಥಸಾರಥಿ
ಕ್ಷೀರಸಾಗರದಲ್ಲಿ ಲಕ್ಷ್ಮೀ ಸಹಿತವಾಗಿ
ಆಲದೆಲೆಯ ಮೇಲೆ ಮಲಗಿರುತ್ತೀ
ಥರವಲ್ಲವೋ ನಿನಗಿಂಥ ಮದವು
ಬ್ರಹ್ಮಾದ್ಯಮರ ಒಂದಿತ ಮದವು
ಜಾರಚೋರ ನಮ್ಮ ಕಾಳೀಮರ್ದನಕೃಷ್ಣ ಕರುಣಾಸಾಗರ ೫

## ಶ್ರೀ ಮಹಾಲಕ್ಷ್ಮೀ

### ೧೩

ಬಂದು ನಿಲ್ಲೇ ಎನ್ನ ಮಂದಿರದಲ್ಲೇ ಕೊಲ್ಲಾಪುರ ನಿಲಯೇ ಪ.

ಬಂದು ನಿಲ್ಲೇ ಎನ್ನ ಮನಮಂದಿರದಲ್ಲಿ
ಇಂದಿರಲಾರೆನು ಮುಂದರಿಯೇ ಇಂದಿನ ದಿನ ಅ.ಪ.

ನವಮೋಹನಾಂಗಿಯೇ ನೀನು ನೀಲಾಂಬರವನುಟ್ಟು
ಜರತಾರಂಚಿನ ಕುಪ್ಪಸ ಬಿಗಿದು ತೊಟ್ಟು
ಪಾದಕೊಪ್ಪುವ ಪೈಜಣ ಖುಳಿ ಕಾಲುಂಗರವಿಟ್ಟು
ಲಲಾಟದ ಕುಂಕುಮ ಬಟ್ಟು ೧

ಕರದಲಿ ಕಂಕಣ ಬೆರಳಲಿ ಉಂಗುರ
ನಿಮ್ಮ ಮುಖದಿ ಸೂರ್ಯನ ಕಿರಣ
ನಾನಾಲಂಕೃತ ಭರಣ
ದೇವಿ ನಾ ಮಾಡುವೆ ಶರಣು ೨

ನಿನ್ನ ಹೊರತಿನ್ನು ಜಗದೊಳಗೆ ಅನ್ಯರ ಕಾಣೆನೊ
ನಿರುತ ನಂಬಿದೆ ನೀಲವೇಣಿ
ಪಂಕಜಪಾಣಿ
ಕಾಳೀಮರ್ಧನಕೃಷ್ಣನ ರಾಣಿ ೩

## ೧೪

ಈತನೇನೆ ಮುಖ್ಯ ಪ್ರಾಣದೇವರು ಪ.

ಖ್ಯಾತಿಯ ಪಡೆದ ರಾಮ ದೂತನು ಅ.ಪ.

ಅಂಜನೆಯ ಕುಮಾರ ರಾಕ್ಷಸರ ಸಂಹಾರ
ಸಂಜೀವನವ ತಂದ ಧೀರ ಸಾಗರವ ದಾಟಿದ ೧

ಕುಂತಿಯಾ ಕಂದ ಕೀಚಕನ ಕೊಂದ
ಸತಿಗೆ ಕುಸುಮವಾ ತಂದೆ ಲೋಕದೊಳಗೆ ಆನಂದ ೨

ಮಧ್ಯಗೇಹನಲಿ ಜನಿಸಿ ಪ್ರಖ್ಯಾತನೆನಿಸಿ
ಕಾಳೀಮರ್ಧನಕೃಷ್ಣನಲಿ ಮನಸಿಟ್ಟ ಯತಿಯೆ ೩

## ೧೫

ಸುಂದರಮೂರುತಿ ಇಂದು ನಿನ್ನಯ ಪಾದಾ
ವಂದಿಸುವೆ ನಾನು ಛಂದದಿಂದಾ ಪ.

ಮಂದಾರೊದ್ಧರನ ಪಾದಾ ಸೇವಕರೆಂದೆನಿಸಿದಿ
ದುರ್ಮಾಯವಾದಿಗಳನು ಜಯಸಿದಿ
ಬ್ರಹ್ಮರಾಯನೆಂದೆನಿಸೀದಿ ಅ.ಪ.

ಅಂಜನಿಸುತನೆಂದೆನಿಸಿದೆ
ಸಂಜೀವನವ ತಂದಿ
ಕಂಜಾಕ್ಷಿಮುಖಿಗೆ ಉಂಗುರವನ್ನಿತ್ತಿ
ವನವ ಕಿತ್ತಿ ಸಂಜೀವರಾಯನೆ
ದುರುಳ ರಾವಣನ ಸಂಹರಿಸಿದಿ
ವಿಭೀಷಣನಿಗೆ ರಾಜ್ಯಭಾರದಲ್ಲಿ ನಿಲ್ಲಿಸಿದಿ
ಸೀತಾಸಹಿತ ರಾಮಲಕ್ಷ್ಮಣಾದಿಗಳಿಂದ
ಅಯೋಧ್ಯನಗರಿಗೆ ತೆರಳಿದಿ ೧

ಕುಂತಿಯಾ ಕಂದಾ ಕೌರವಾದಿಗಳ ಕೊಂದ
ಯುದ್ಧದಲ್ಲಿ ಪ್ರಚಂಡಾ ಭಾರತಿಗೆ ಗಂಡಾ
ಲಂಡದುಷ್ಯಾಸನನ ತುಂಡು ತುಂಡುಮಾಡಿ ಸೀಳಿದ
ವಿರಾಟ ನಗರದಿ ಸಂಚರಿಸಿದಾ
ಕೀಚಕಾದಿಗಳ ಸಂಹರಿಸಿದಾ
ಪಾಂಚಾಲಿಗೆ ಸೌಗಂಧೀಕುಸುಮವನೆ ತಂದಾ ಆನಂದಾ ೨

ಮಧ್ಯಗೇಹನಲ್ಲಿ ಉದ್ಭವಿಸಿದೆಯೋ ನೀ ಇಲ್ಲಿ
ಪದ್ಧತಿಯಲಿ ಅದ್ವೈತ ಮತವೆಲ್ಲಾ ಕಾಲಿಲೆ ವದ್ಯೋ
ಗೆದ್ಯೋ ಮಧ್ವಮತವೆಲ್ಲ ಉದ್ಧಾರ ಮಾಡಿದಾ
ಬದರಿಕಾಶ್ರಮಕೆ ಪುನರಪಿ ಪೋದಾ
ವ್ಯಾಸಮುನಿ ಪಾದಕೆ ಅಭಿವಂದಿಸಿದಾ
ಉಡುಪಿಯೊಳು ಕಾಳಿಮರ್ಧನಕೃಷ್ಣನು ನಿಲ್ಲಿಸಿದಾ ೩

## ೧೬

ಯೆಂದಿಗೆ ಬರುತೀಯೆ ಸುಂದರ ಭಾರತಿ
ಮಂದರೋದ್ಧರನ ತೋರಿಸೆಂದೆ ನಾ ಬಂದೆ ಪ.

ಅಂಧಕಾರಣ್ಯದೊಳು ನಿಂದು ತತ್ತರಿಸುವೆನು ತಾಯೆ
ಕುಂದುಗಳೆಣಿಸಾದಿರು ಆನಂದ ತೋರು ಅ.ಪ.

ಹರಿಗೆ ಕಿರಿಯ ಸೊಸಿ ವಾತನಸತಿಯು ನೀನು
ಪ್ರಖ್ಯಾತಿವಂತಳೇ ಏಕಾಂತ ಭಕ್ತಳೇ
ತ್ರಿವಿಧ ಜೀವರೊಳಗೆ ನಿಂತು
ತ್ರೀವಿಧ ಪ್ರೇರಣೆ ಮಾಡುವಿ
ದೇನಿ ನಿನ್ನಾ ಮಹಿಮೆಗೆ
ನಮೋ ಎಂಬೆ ಪುತ್ಥಳಿಯಾ ಬೊಂಬೆ ೧

ಮಂದರೋದ್ಧರನ ಪಾದಸೇವಕಳೇ
ನಿನಗೀಡೆ ನಲಿದಾಡೆ ಒಂದನಾದರೂ ಮಾತನಾಡೆ
ವರಗಳ ನೀಡೆ ದಯಮಾಡಿ ನೋಡೆ
ತವಪಾದವ ಕೊಡೆ
ಕರವ ಜೋಡಿಸಿ ಬೇಡುವೆನಿಂದು ನಾ ಬಂದು ೨

ಗರುಡ, ಶೇಷ ರುದ್ರಾದಿಗಳೊಡೆಯಳೇ
ನೀನು ನಿನ್ನಡಿಗಳಿಗೆರಗುವೆ
ನಾನು ತಡಮಾಡ ಬ್ಯಾಡಮ್ಮಾ
ನಡೆದು ಬಾರಮ್ಮ
ಭವ ಮಡುವಿನೊಳಗಿರುವೆನು
ಗರುಡವಾಹನ ನಮ್ಮ ಕಾಳಿಮರ್ಧನಕೃಷ್ಣ
ತೋರಿಸೋ ದಯಪಾಲಿಸೋ ೩

## ೧೭

ನೋಡಿದೆ ಹರನಾ ನೋಡಿದೆ ಪ.

ಹರನ ಕೊಂಡಾಡಿದೆ ಪಾದಪಾವನ್ನ ರೂಢಿಯೊಳಗೆ ಇಂಥಾ
ಈಡಿಲ್ಲ ಶಿವನಾ ಜೋಡಿಶಿರವ ಬಾಗುವೆನಾ ಶಿರವಾ ಅ.ಪ.

ಶುಕ ದೂರ್ವಾಸ ರೂಪದ ರುದ್ರಾ ನೀನು
ಅವತಾರ ತಾಳಿದ್ಯೊ ವೀರಭದ್ರಾ
ಮಥನವಾ ಮಾಡಲು ಸಮುದ್ರಾ
ನೀನು ವಿಷಪಾನ ಮಾಡಿದ್ಯೊ ಆರ್ದ್ರಾ ॥ ಆಹಾ॥
ನೀಲಕಂಠನಾಮವು ಬಂದವು
ನಿನ್ನ ನೋಡುವರ ಮನಕೆ ಆನಂದವ ಕೊಡುವುದು ಜಗಕೆ ೧

ಕರದಲಿ ಡಮರು ತ್ರಿಶೂಲಗಳಿಂದಾ
ನೀನು ಶೋಭಿಪಿಯೋ ಬಲುಛಂದಾ
ಗಳದಲ್ಲಿರು ರುದ್ರಾಕ್ಷಮಾಲೆಗಳಿಂದಾ
ನಾಗಭೂಷಣಾಯಿಂದಾ ॥ ಆಹಾ॥
ಶಿರದಾ ಜಡಿಯೊಳು ಗಂಗಿಯ ಧರಿಸಿದ
ಧೀರನು ಹರಿಯಾ ರೂಪಕೆ ಮರುಳಾದ ಶಂಕರನ ೨

ಕೈಲಾಸಪುರಧೀಶ ವಾಸಾ
ನೀನು ಸರ್ವರಮನಕೆ ಉಲ್ಲಾಸ
ನೀನು ಸತಿಗೆ ತಾರಕ ಮಂಗಳ ಉಪದೇಶಾ
ಸ್ಮಶಾನವನು ಕಾಯ್ದ ಹರಿದಾಸಾ ॥ ಆಹಾ॥
ನಂದಿವಾಹನನಾಗಿ ಆನಂದಾದಿ ಮೆರೆಯುವ
ಸಿಂಧುಶಯನನ ಕಾಳಿಮರ್ಧನಕೃಷ್ಣನ ತಂದು ತೋರಿಸುವನ ೩

## ೧೮

ಶಂಭು ಶಂಕರನೆ ನಿನಗೊಂದಿಸಿ ಬೇಡುವೆ ಬಿಂಬದಲ್ಲಿರುವ
ಮನ ಸ್ವಾಮಿಯ ತೋರ್ಸೈ ಪ.

ರುದ್ರ ದೇವನೆ ಮನಶುದ್ಧಿಯ ನೀ ಮಾಡಿ
ಶ್ರದ್ಧೆಯಿಂದಲಿ ಅನಿರುದ್ಧನ ತೋರ್ಸೈ ೧

ಸಿದ್ಧಗುಣಗಳೊಡೆಯ ಉದ್ಧರಿಸೆನ್ನ
ಹದ್ದುವಾಹನ ಪ್ರದ್ಯುಮ್ನನ ತೋರ್ಸೈ ೨

ಶಂಕರನೇ ನಿನ್ನ ಕಿಂಕರಳನೆ ಮಾಡಿ
ಮಂಕುಬುದ್ಧಿಯ ಬಿಡಿಸಿ ಸಂಕರುಷಣನ ತೋರ್ಯೆ ೩

ವಾಸುದೇವನಿಗೆ ಶಿಶುವಿನ ಶಿಶು ನೀನಾಗಿ
ಹುಸಿಯ ಮಾಡದೆ ವಾಸುದೇವನ ತೋರ್ಯೆ. ೪

ಪಾರ್ವತಿ ಪತಿಹರ ಪಾಪವ ಕಳೆಸೆನೆಗೆ
ಪಾರ್ಥನ ಸಖನ ನಾರಾಯಣನ ತೋರ್ಯೆ ೫

ನಂದಿವಾಹನ ನಿನಗೊಂದಿಸಿ ಬೇಡುವೆ
ಬಂಧನ ಬಿಡಿಸಿ ಗೋವಿಂದನ ತೋರ್ಯೆ ೬

ರಮಾವಲ್ಲಭ ವಿಠಲ ನಾಮವ ಅನುಗಾಲ
ನುಡಿವಂತೆ ವರಗಳ ನೀ ನೀಡ್ಯೆ ೭

## ವ್ಯಾಸರಾಯರು

### ೧೯

ಗೋಪಾಲಕೃಷ್ಣನ ಭಕ್ತಿಯಿಂದಲಿ ಭಜಿಸುವ
ನಮ್ಮ ಗುರು ವ್ಯಾಸಮುನಿರಾಯ ಪ.

ಹೇಸಿ ವಿಷಯಗಳಿಗೆ ಮೋಸ ಹೋದೆನು ನಾನು
ದೋಷ ರಾಶಿಗಳ ನಾಶಗೈಸೊ ಮನದ
ಭಿಲಾಷೆಗಳ ಪೂರೈಸೊ ಅ.ಪ.

ಹಿಂದೇಳ ಜನ್ಮಗಳು ಬಂದು ಪೋದವಯ್ಯಾ
ಇಂದು ವಸುಧಿಯೊಳಗೆ ಬಂದೆನಯ್ಯಾ
ಭವದೊಳಗೆ ನೊಂದೆನಯ್ಯಾ
ಬಹಳ ಬೆಂದೆನಯ್ಯ
ಅಘಕೂಪದೊಳು ಬಿದ್ದೆನಯ್ಯ
ಉದ್ಧರಿಸು ಜೀಯ್ಯಾ ೧

ವಂದಿಸುವೆನು ನಿಮಗೆ ನವವೃಂದ ವನದಲಿ
ಇರುವೋರು ಇಂದಿರೇಶನ ನೋಡುವೋರು
ಆನಂದಪಡುವೋರು
ಸಿಂಧುಶಯನ ತಂದು ತೋರಿಸೋ
ಇಂದು ನಿಮ್ಮಯ ಪಾದವೊಂದೆ ಭಜಿಪೆ
ತಂದೆ ಮಾಡೆಲೊ ಸತ್ಕೃಪೆ ೨

ಯೆಷ್ಟು ಜನುಮದ ಪುಣ್ಯ ಫಲಿಸಿತು ಎನಗೆ
ವೈಷ್ಣವಾ ಜನ್ಮ ದೊರಕಿತು
ಕೊನೆಗೆ ದುಷ್ಟ ಸಂಗವಾ ದೂರದಿ ಮಾಡಯ್ಯ
ಶಿಷ್ಟ ಜನ ಸಂಗದೊಳಗೆನ್ನಿಡಯ್ಯಾ
ಅಭೀಷ್ಟಗಳ ನೀಡಯ್ಯ ಕಾಳಿಮರ್ಧನ
ಕೃಷ್ಣನ ತೋರಿಸಯಾ ಪಾಲಿಸಯ್ಯಾ ೩

## ವಾದಿರಾಜರು

## ೨೦

ಸಾಗಿಬಾರಯ್ಯ ಗುರುವೆ ವಾದಿರಾಜೇಂದ್ರಾರ್ಯ
ಬಾಗುವೆ ನಾ ನಿನಗೆ ಶಿರವಾ ಪ.

ಭಾಗವತರ ದುರಿತಾಘಂಗಳನೆ ಕಳೆದು
ಬಂದಾ ದುರ್ವಾದಿಗಳನೆ ಮರೆದು
ಸುರರೆಲ್ಲ ಇವರೆ ಮೇಲ್ ಪೂ ಮಳೆಯಗರೆದು
ತುಂಬುರರು ನರದರು ಗಾನಗಳಿಂದ ಮೆರೆದು
ಘಲುಘಲು ಘಲುರೆಂದು, ಅಪ್ಸರರು ನಾಟ್ಯಗಳ ಕುಣಿದು ಅ.ಪ.

ಹೊದ್ದ ಕಾವೆ ಶಾಟಯಲೊಪ್ಪುವಾ
ಶ್ರೀ ಮುದ್ರಿ ಗಂಧಾಕ್ಷತೆಯಿಂದಾ
ಗಳದಲ್ಲಿ ಶ್ರೀ ತುಳಸಿ ಪುಷ್ಪಮಾಲೆಗಳಿಂದಾ
ಝುಗಝುಗನೆ ಮುಖಕಮಲಜ್ಲೋಳವೋದು ಯೆಂದಾ

ಋಜುಗಣದವರಹುದೆಂದು ಪೇಳುವಾನರನಿಂದಾ
ಮಾಡುವವರಿಗೆ ಕ್ರಿಮಿಕೀಟಗಳು ದುರುವುವುದೇಹದಿಂದಾ
ಬಂದ ಜನರಿಗ್ವರುಷ ಬಡಿಸುವದರಿಂದಾ ಮುದದಿಂದಾ ೧

ಏನುಪೇಳಲಿ ಗುರುವೆ ನಿನ್ನ ಮಹಿಮೆಯು
ನೋಡಲಾಶ್ಚರ್ಯವೋ ಭೂತರಾಜರಿಂದ
ಪೂಜೆಗೊಂಬುವ ಛಂದವೋ
ಧಿಂ ಧಿಮಿ ಧಿಮಿಕೆಂದು ಕುಣಿದಾಡುವಾನಂದವೊ
ಯಡಬಲದಿ ದ್ವಾರ ಪಾಲಕರಿರುವಾನಂದವೋ
ಬಂದ ಜನರು ಭಕ್ತಿಯಿಂದ ಭಜಿಸುವರಿಗೆ
ಮುಕ್ತಿಯನೆ ಕೊಡುವಾ ೨

ನಿನ್ನಂಥಾ ಕರುಣಿ ಗುರು ಇನ್ನಿಲ್ಲ ಧರೆಯೊಳು
ಮನ್ನೀಸಿ ಸಲಹಯ್ಯ ಮಹರಾಯ
ಘನ್ನ ಸಂಸಾರದೊಳು ಬನ್ನಪಟ್ಟು ಬಹಳ ನೊಂದೇನೀ
ಕೈಪಿಡಿದು ಎಂದು ನಿಂದೀನೀ
ಉದ್ಧಾರ ಮಾಡಬೇಕೆಂದು ಬಂದೀನಿ
ನಿನ್ನಂಥ ಮಂದ ಭಾಗ್ಯ ಜೀವನ
ಕುಂದುಗಳೆಣಿಸಿದಾಗೊದೊ ಇಂದು
ಅಡಿಗಡಿಗೆ ನಮೋ ಬೇಡುವೆನೋ ಬಂಧೊ ೩

ರುಕ್ಮಿಣಿ ಕಳುಹಿದಾ ವಾಲೆಯು ತಾನು
ಶ್ರಿ ಕೃಷ್ಣಗರ್ಪಿಸಿದನು ದ್ವಿಜನು
ಸಾಮಾನ್ಯವಲ್ಲವೋ ಈತ
ಗುರುರಾಜನೆಂದೆನಿಸೀದಾ
ದುರ್ವಾದಿಗಳು ಜಯಸೀದಾ
ಪವಮಾನರಾಯನೆಂದೆನಿಸಿದಾ
ಸುರರಿಗಮೃತವನುಣಿಸೀದಾ ವೃಂದಾವನ
ಚಾರ್ಯರಿಂದ ಸೇವೆ ಸ್ವೀಕರಿಸೀದಾ ಸುಖವಸುರಿಸೀದಾ ೪

ಸ್ವಾದೀಯಪುರದಲ್ಲಿ ಇರುವರೋ ಗುರುರಾಜರು
ಧವಳಗಂಗೆಯ ಸ್ನಾನ ಅಮೃತ ಪಾನ
ಬಂದ ಸೇವಕರಿಗಭೀಷ್ಟವ ಕರೆದು ತಾ ಕೊಡುವ
ಭ್ರಷ್ಟ ಜನರಾ ಫಲ್ಗಳ ಮುರಿವಾ
ಸರ್ವೇಶನಲ್ಲದೆಂಬೋರ ಅಳಿವಾ
ಮಧ್ವಮತವನ್ನುದ್ಧಾರ ಮಾಡುವ
ಕಾಳೀಮರ್ಧನಕೃಷ್ಣನೊಲಿವಾ ೫

## ೨೧

ವಾದಿರಾಜಾ ವಾದಿರಾಜಾ ವಾದಿರಾಜ
ನೀ ಕರುಣದಿ ಕಾಯಬೇಕೀ
ಮನ್ನಿಸಬೇಕು ಯನ್ನ ವಾಕು ಪ.

ನೀ ದೂರ ನೋಡದಿರು ಎನ್ನಾರು ಕರಪಿಡಿಯುವರಿಲ್ಲಾ
ಭವ ಮಡುವಿನೊಳಗಿರುವೆನು ದಡಕೆ ಸೇರಿಸು ನೀನು ಅ.ಪ.

ಆರು ಕಾಯುವರಿಲ್ಲಾ ಸೇರಿದೆ ನಿನಗಲ್ಲಾದೆ
ಸಂಸಾರ ಶರಧಿಯೊಳು ಈಸಲಾರೆನು
ಘಾಸಿಪಡಿಸಲಾಗದು ನೀನು
ಆಶಾ ತೋರಿಸಿ ಮೋಸ ಮಾಡುವದು ಇದು ತರವೇ ಗುರುವೇ ೧

ಯಂದಿಗೆ ಬರುತೀಯೋ
ಸುಂದರ ಮೂರುತಿಯೆ
ಪಂಚ ವೃಂದಾವನ ಛಂದಾನೋಳ್ಪರಿಗೆ
ಆನಂದಾ ಎನ್ನ ಹೃದಯಮಂದಿರದಲ್ಲಿ
ಸಂದರುಶನ ಕೊಡು ಇಲ್ಲಿ ೨

ಅನಾಥನು ನಾನು ಯನ್ನ ಪೊರೆವ ದಾತನು ನೀನು
ಋಜುಗಣಧ್ವರಿಯೇ ಕಾಳಿಮರ್ದನಕೃಷ್ಣನ ಮರಿಯೆ ೩

## ಅಷ್ಟಮಠದ ಯತಿಗಳು

### ೨೨

ನೋಡಿ ದಣಿದವೆನ್ನ ಕಂಗಳು ಉಡುಪಿಯಲ್ಲಿರುವ
ಅಷ್ಟಮಠದ ಶ್ರೀಪಾದಂಗಳವರ ಪ.

ಸುಧಿಂದ್ರತೀರ್ಥ ಗುರುವರ್ಯರು
ಬಂದ ಭಕ್ತರಿಗೆ ಕರುಣಾಮೃತ ಮಳೆಗರೆವರು
ಶ್ರೀಹರಿಯ ತೋರುವರು
ನೇಮದಿಂದಲಿ ಇವರ ನಾಮ ನೆನೆದರೆ
ಸ್ವಾಮಿ ಶ್ರೀರಾಮನು ಪ್ರಸನ್ನನಾಗುವನು ೧

ವಿಭುದಪ್ರಿಯತೀರ್ಥ ಗುರುವರ್ಯರು
ಬಂದಾ ದುರ್ಜನರ ಮನವನು ಜಯಿಸುವರು
ಮಹಾನುಭಾವರು ತರ್ಕನ್ಯಾಯ ವೇದಾಂತ ನಿಪುಣರು
ಮಹಾಗುಣವಂತರು ೨

ವಿದ್ಯಾಪುಣ್ಯತೀರ್ಥ ಶ್ರೀಪಾದಂಗಳವರು
ಬಂದ ಸೇವಕರಿಗೆ ಬ್ರಹ್ಮವಿದ್ಯಾ ಪಾಲಿಸುವರು
ದುರ್ಜನರ ದುರ್ಬುದ್ಧಿ ಒದ್ದಿ ಕೆಡಹುವವರು ೩

ವಿಶ್ವೇಂದ್ರತೀರ್ಥರು ಈ ಗುರುವರ್ಯರು
ಸೋದೆಯಲ್ಲಿರುವರು ಶ್ರೀ ಗುರು
ವಾದಿರಾಜರ ಪೂಜಿಸುವರು
ಜಗಕೆ ಸುಖವ ಸುರಿಸುವರು ಭೂತಪ್ರೇತಪಿಶಾಚಾದಿ
ಸರ್ವರೋಗಂಗಳ ದೂರದಿ
ಮಾಡುವರು ಭಕ್ತರಘ ಕಡಿವರು ೪

ವಿದ್ಯಾಸಮುದ್ರ ಶ್ರೀಪಾದಂಗಳವರು
ಇವರು ಭವಸಮುದ್ರವ ನೀಗಿಸುವರು

ಶಿಷ್ಯರಿಗ್ವರುಷ ಪಡಿಸುವುದು
ಆನಂದದಿಂದಲ್ಲಿ ಹೃನ್ಮಂದಿರದಲಿ ಇಂದಿರೇಶನ ನೋಡುವರು ೫

ರಘುಮಾನ್ಯತೀರ್ಥ ಗುರುವರ್ಯರು ಲೋಕಮಾನ್ಯರು
ಭಕ್ತರಿಗತಿಪ್ರಿಯರು ಮಹಾನುಭಾವರು
ಅನ್ನದಾನದಲಿ ದೈನ್ಯರು ಆನಂದ ಭರಿತರು ಸುರರಿವರು ೬

ಲಕ್ಷ್ಮೀಂದ್ರತೀರ್ಥ ಶ್ರೀಗಳವರು
ಇವರು ತಮ್ಮ ತುಷೆಯೊಳಗಿಟ್ಟುಕೊಂಡು
ರಕ್ಷಿಸುವರು ಲಕ್ಷ್ಮೀರಮಣನ್ನ ಪಾದಾ
ಅಪೇಕ್ಷೆಯ ಮಾಡುಸುವರು ಹರಿಯ ಭಜಿಸುವರು ೭

ವಿಶ್ವಮಾನ್ಯತೀರ್ಥ ಈ ಗುರುವರ್ಯರು
ಬಂದ ಭೂಸುರರಿಂದ ಅನುವಾದ ಮಾಡುವರು
ನೋಡುವರಿಗಾನಂದ ಪಡಿಸುವರು
ಸುಜ್ಞಾನ ಯತಿವರ್ಯರು ೮

ಅಷ್ಟಮಠದ ಯತಿಗಳ ಮಹಿಮೆಯನ್ನು
ನಿಷ್ಠೆಯಿಂದಲಿ ಪೇಳುವನು ಅವನು ಸುರನು
ಇವರ ದೋಷಿ ಎಂದವರನೇ ನರಕಾಧಿ ಬಾಧಿಸುವುದು
ಸಾಮಾನ್ಯವಲ್ಲವೊ ಇವರು ಕಾಳೀಮರ್ಧನ
ಕೃಷ್ಣನ ಪೂಜಿಸುವರು ೯

## ಆತ್ಮನಿವೇದನೆ

### ೨೩

ಇಂತು ಮರುಳಾದೆನು ಬಲು ಭ್ರಾಂತಿಗೊಳಗಾದೆನು
ಲಕ್ಷ್ಮೀಕಾಂತಾ ಸರ್ವಾಂತರ್ಯಾಮಿ ಪ.

ಕಾಮಪಾಶಕೆ ಶಿಲ್ಕಿದೆನು
ಬಾಯಾರಿ ಬಳಲಿದೆನು
ಓೀಸ ಮತವೆನ್ನದೆ
ಆಶಕೆ ಗುರಿಯಾದೆ ೧

ನಾನು ನನ್ನದು ಎಂದೆ
ಧರ್ಮಾಂಧಳಾದೆ ಮೆರೆದೆ
ಗುರುಹಿರಿಯರಿಗೆ ಎರಗದೆ
ಹರಿನಿನ್ನ ಮರೆದೆ ೨

ಒಂದೇಸುಜನ್ಮಗಳು ಬಂದು ಪೋದವು
ಮುಂದಿನ ಗತಿಯು ಎನಗೆ ತಿಳಿಯದು
ಬಂಧನದೊಳು ಸಿಗಿಬಿದ್ದೆನು
ಬಂದೆನ್ನ ಕಾಯೊ ಕಾಳಿಮರ್ಧನಕೃಷ್ಣಾ ೩

## ೨೪

ಎಂದಿಗು ಕಾಂಬುವೆನೋ ಶ್ರೀನಿವಾಸ
ಬಂಧನ ಬಿಡಿಸು ಶ್ರೀಶಾ ಇಂದಿರೇಶಾ ಪ.

ಇಂದು ಈ ಭವದಲ್ಲಿ ನೊಂದು ನೊಂದೆನೊ ದೇವಾ
ಗೋವಿಂದಾ ಪಾಲಿಸಬೇಕಯ್ಯಾ ಗೋಗಳರಾಯ ಅ.ಪ.

ಇಂದಿರೇಶನೆ ನಿನ್ನ ಒಂದಿನಾದಿ ನಾನು ದೈನ್ಯದಿ ಭಜಿಸದೆ
ಬ್ಯಾಸರದೇ ಮಂದಮತಿಯು ನಾನು
ಸುಂದರ ಮೂರುತಿ ನೀನು
ಯನ್ನ ಹೃದಯ ಮಂದಿರದಲ್ಲಿ ಸಂದರುಶನ ಕೊಡೊ ಇಲ್ಲಿ ೧

ಸದೋಷಿಯು ನಾನು ದೋಷರಹಿತ ನೀನು
ಶೇಷಶಯನ ನಿಮ್ಮ ನಾಮವೇ ಭೂಷಣ

ಸ್ವರಮಣನೀ ನಿನ್ನ ಸ್ಮರಣೆಯಾ ಮಾಡದೆ
ಹಾಳು ಮಾತುಗಳಿಂದ ಹೊತ್ತುಗಳದೆ ಮುಕುಂದಾ ೨

ಮತ್ಸ್ಯಾದ್ಯನಂತವತಾರ ನೀನು ತುಚ್ಛದೈತ್ಯರ ಸಂಹಾರ
ಇಚ್ಛಾದಿಂದಲಿ ನೀನು ಸುರರಿಗಾಧಾರ
ಕಾಳಿಯಮರ್ದನ ಕೃಷ್ಣಧೀರ ಗಂಭೀರಾಸುತಸುಕುಮಾರಾ ೩

## ೨೫

ಪುಟ್ಟಿಸಿದ್ದೇನು ಕಾರಣವೋ ಸೃಷ್ಟಿಗೋಡೆಯಾ ಪ.

ಶ್ರೀಕೃಷ್ಣ ಮೂರುತಿವೊಂದಿಷ್ಟು ತಿಳಿಯದೋ
ನಿನ್ನ ಮಾಯಾ ಜೀಯಾ ಅ.ಪ.

ಆವಾವ ಸಾಧನವಾಗಲಿಲ್ಲಾ ಯನ್ನಿಂದ ಶ್ರೀದೇವಾ
ಎನ್ನ ಕರವ ಬಿಡುವುದುಚಿತವೇನು ಮಾಧವಾ
ನಿನ್ನ ಮನದಣಿಯ ನೋಡಾದೆ ಹಾಗಾದೆ ೧

ಹರಿಮೂರ್ತಿ ನೋಡಲೊಲ್ಲಾದು ಯನ್ನಮನವು
ಪರಪುರುಷರ ನೋಡಿತು ಮನಸು
ಹೊಲೆಗೆಡಿಸಿತು ಪುರುಷೋತ್ತಮನ ಮರಿತಿತು ೨

ಹರಿಕಥಾ ಶ್ರವಣ ಕೇಳದು ಎನ್ನ ಕರ್ಣಂಗಳು
ಪರವಾರ್ತೆಗೆ ಹೊತ್ತು ಸಾಲದು ಸರ್ವೋತ್ತಮನೆ
ನಿನ್ನ ಮರೆತೆನು ಉನ್ಮತ್ತಳಾದೆ ೩

ಹರಿನಿರ್ಮಾಲ್ಯವ ಕೊಳ್ಳದು ಯನ್ನ ಮೂಗು
ಪರಪುರುಷರಾ ಮೈಗಂಧವಾ ಆಘ್ರಾಣಿಸುವುದು
ನಿನ್ನ ನಾಮ ಸ್ಮರಣೆಯನು ಮರೆತೆನು ೪

ಹರಿಯಾತ್ರೆಯಾ ಮಾಡಲಿಲ್ಲ ಯನ್ನ ಕಾಲು
ಜಾರಸ್ತ್ರೀಯರ ಮನೆಮನೆ ತಿರುಗುವೆನು
ಈ ಪರಿ ನೀಯನ್ನ ಮರೆಯುವುದುಚಿತವೆ ೫

ಎನ್ನ ಇಂದ್ರಿಯಗಳು ಈ ಪರಿವ್ಯರ್ಥವಾಯಿತು
ಸಾರ್ಥವಾಗಲಿಲ್ಲ ಪಾರ್ಥಸಾರಥಿ
ನಿನ್ನ ನೋಡಿ ಪವಿತ್ರಳಾಗಲಿಲ್ಲ
ಏಕಿನ್ನ ಈ ಪರಿಯ ಮರುಳು ಮಾಡುವಿದೇವಾ
ಧರೆಯೊಳಗೆನ್ನ ತಂದುದಕೆ ಬಂದಕಾರ್ಯವಾಗಲಿಲ್ಲ ೬

ಆವಬಾಧೆಯು ನಾನರಿಯೆ ಪರಜಾತಿಯ ಆ ಮನಸು
ಪೋಗುವುದು ಕೋತಿಯಂದದಿ
ಕುಣಿಸುವರು ಇದು ರೀತಿಯೆ ೭

ಭವಸಾಗರದೊಳು ಇದ್ದು ಸೊರಗಲಾರೆನೊ
ಘಾಸಿಗೊಳಿಸುವುದು ನಿನಗೆ ಧರ್ಮವೆ
ವಾಸುದೇವನೆ ನಿಮ್ಮ ನಾಮವನು ನೆನೆಯದೇ ೮

ಇರುಳು ಹಗಲು ಓಗೆ ದುರುಳತನದಲಿ
ತಿರುಗಿದೆನು ಗುರು ಹಿರಿಯರಂಘ್ರಿಗೆ
ಶಿರವ ಬಾಗದೆ ೯

ಎಷ್ಟು ಮೊರೆ ಹೊಕ್ಕರೇನು ಒಂದಿಷ್ಟು ದಯಪುಟ್ಟದು
ನಾನೀಗ ದ್ವೇಷಿಯೇನೋ ಶೇಷಶಯನನೆ
ನಮ್ಮ ಕಾಳೀಮರ್ಧನಕೃಷ್ಣನೆ ೧೦

## ೨೬

ಭೂಮಿಯನೆ ಬಿಡಿಸೋ ಭೂದೇವಿ ರಮಣಾ
ನಾ ಮಾಡುವೆ ನಿನಗೆ ಶರಣಾ ಪ.

ನಾನೊಲ್ಲೆ ನಾನೊಲ್ಲೆ ಈ ಕರಿ ಕರಿಯಾ ಸಂಸಾರ ಥೆರಿಯಾ ಅ.ಪ.

ಯನ್ನಿಂದ ದುಷ್ಟಕಾರ್ಯವನು ಮಾಡಿಸಿದಿಯೋ ನೀನು
ಇಷ್ಟು ನಾನೀಗ ಉದಾಶೀನಳಾಗಿ ಇರುವೊದುಕಿಂತಾ
ವೊಂದಷ್ಟು ಪ್ರಾಣವನು ಬಿಡಿಸೊ ಶ್ರೀಶಾ ಶ್ರೀನಿವಾಸಾ ೧

ಸರ್ವಜ್ಞರ ಮತದೊಳಗೆನ್ನ ಪುಟ್ಟಿಸಿದೆಯೋ
ಅಜ್ಞಾನ ಅಧಃಪತದಲಿ ಮಗ್ನಳಾಗಿರುವೆನು
ಸುಜ್ಞಾನವನು ನಾನರಿಯೆನು ಭವಾಬ್ಧಿಯನು ದಾಟಿಸು ನೀನು ೨

ದುರ್ಜನರ ಸಂಗವಾ ಕೊಡಬ್ಯಾಡ
ಸಜ್ಜನರ ಸಂಗವ ಕೊಡು ಬ್ಯಾಗ
ಮೂರ್ಜಗದೊಡೆಯನೇ ನೀಯನ್ನ ಪಾಲಿಸಯ್ಯ
ಕಾಳಿಮರ್ಧನ ಕೃಷ್ಣರಾಯ ೩

## ೨೭

ಸಾಧನದ ಚಿಂತೆ ಎನಗ್ಯಾಕೊ ಹರಿಯೇ ಪ.

ಮಾಧವಾ ನೀಯನ್ನಾ ಮನಸಿಲಿದ್ದು ಮಾಡಿಸುವಿ ಥೊರಿಯೇ ಅ.ಪ.

ಹಿಂದೇಸು ಜನ್ಮಗಳು ಬಂದು ಪೋದವು
ಒಂದು ತೃಣವಾದರೂ ನಾ ಗಳಿಸಲಿಲ್ಲ
ಮುಂದಿನ ಗತಿಯು ತಿಳಿಯದು
ಬಿಂದು ಮಾಧವಾ ಯಾದವಾ ೧

ನಿನ್ನ ಹೊರತು ಎನಗೆ ಮನ್ನಿಸುವರು ಯಾರೋ
ಬೇರೆ ಗತಿ ಕಾಣೆ ಪುಸಿಯಲ್ಲಿ ಯನ್ನಾಣೆ
ಪಾದಸ್ಮರಣೆ ಮಾಡಿಸುವ ಬಾರಾ
ಉದಾರ ಭಕ್ತರಾಧಾರಾ ೨

ಯೆಷ್ಟು ಪೊಗಳಿದರು ನಿನ್ನ ಕರುಣಕೆ
ಇನ್ನು ಕೇಡು ಉಂಟೇ ಸ್ವಾಮಿ
ದಯಾ ದೃಷ್ಟಿಯಿಂದಲಿ ನೋಡು ಪ್ರೇಮಿ
ದುಷ್ಟ ಅಘರಾಶಿ ದೂರ ಮಾಡೋ
ಕಣ್ತೆರೆದು ನೋಡೋ ಕಾಳಿಮರ್ದನ
ಕೃಷ್ಣನೆ ಮಧ್ವಮುನಿ ಪ್ರಿಯನೆ ೩

## ೨೮

ಸಹಿಸಲಾರೆನೊ ವ್ಯಥೆಯ ಪವಮಾನ ವಂದಿತನೆ ಪ.

ಅಹೋರಾತ್ರಿಲಿ ಮನ ಕಳವಳ ಪಡುವದೊ
ಆಹಾರ ನಿದ್ರೆಗಳು ತೊಲಗಿ ಪೋದವು ದೇವಾ
ಸಹಿತಾಗಿ ತಾಯಿಯ ಸರ್ವಬಾಂಧವರೆಲ್ಲಾ ಸ
ನ್ನಿಹಿತರಾಗಿ ಎನ್ನ ಬಳಗ ಇದ್ದರೂ ಕೂಡ ಅ
ಸಹ್ಯವಾದ ದುಃಖ ದೂರಾಗಲಿಲ್ಲವೊ
ಆಹಾ ಇರಲಾರೆ ಇರಲಾರೆ ಭಕ್ತ ಜನರ ಬಿಟ್ಟು
ಮಹಿದಾಸ ಮೂರ್ತಿಯ ನಿನ್ನ ಭಕ್ತರ ಪಾದ
ಸಹವಾಸ ಸುಧೆಯ ಸುರಿಸಿ ಬಲುಪರಿ
ಅಹಿಭೂಷಣ ತಾತ ಕಾಳಿಮರ್ಧನಕೃಷ್ಣಾ ೧

ಈಶಭಕ್ತರ ಕೂಡೆ ಕ್ಷಣಬಂದು ಕೂಡದಂಥ
ಏಸು ಜನ್ಮದ ಕರ್ಮ ಅಡ್ಡಬಂದು ಎನ್ನ
ಘಾಸಿ ಮಾಡುತಲಿದೆ ಅರಿಯದಾದೆನೊ ದೇವಾ
ಬ್ಯಾಸರವಾಗಿದೆ ಜನ್ಮವು ಮಹಿಯೊಳು
ಸಾಸುವೆ ಮಾತ್ರವು ಸ್ವತಂತ್ರವಿಲ್ಲದಿಹ
ದೋಷಿಜೀವನ ತಾನೇನು ಮಾಡಬಲ್ಲ
ಸಾಸಿರನಾಮಗುರು ಕಾಳೀಮರ್ಧನಕೃಷ್ಣ ೨

ಜಲದ ಮಧ್ಯದಿ ಇರುವ ಮೀನವನು ಕಾವ
ಮಳಲಿನೊಳಗೆ ತೆಗೆದು ಬಿಸುಟಿದಂತಾಯಿತು

ಹೊಳೆಯ ಈಜುವೆನೆಂದು ಬಲು ಹೆಮ್ಮೆಯಿಂದಲಿ
ಸೆಳೆವಿಗೆ ಸಿಕ್ಕು ಬಿದ್ದ ಮನುಜನ ತೆರನಾಯ್ತು
ಬಲವಾಗಿ ಛಾಯವ ಪೊಂದಿದ ಸ್ಥಾನದಲ್ಲಿ
ಸಲೆ ಕಾದ ಆಯಸ ಸೆಳೆಯನೆಳೆದಂತಾಯ್ತು
ಅಳಲನು ನಿನಗಲ್ಲದೆ ಇನ್ನಾರಿಗೆ ಪೇಳಲೋ
ಕೊಳಲಧರನೆ ಗುರು ಕಾಳಿಮರ್ಧನಕೃಷ್ಣಾ ೩

ನಿನ್ನ ಭಕ್ತರಾ ಮಾತು ಯನಗದು ಮನ್ನಣೆ
ನಿನ್ನ ಭಕ್ತರ ಕಥಾಶ್ರವಣ ಯನ್ನ ಕರಣಾಭರಣ
ನಿನ್ನ ಭಕ್ತರ ಸಮೂಹ ಎನ್ನಯ ಕಣ್ಣೆಳಕು
ನಿನ್ನ ಭಕ್ತರ ಪಾದದೂಳಿಯೆ ಶಿರೋಭೂಷಣವೆನೆಗೆ
ನಿನ್ನ ಭಕ್ತರ ಆಶೀರ್ವಾದವೇ ಸರ್ವ ಬಲವೈ
ಇನ್ನು ಈ ಬುದ್ಧಿಯು ಎಂದಿಗೂ ಕೆಡೆದಂತೆ
ಚೆನ್ನಾಗಿ ರಕ್ಷಿಸೊ ಗುರು ಕಾಳಿಮರ್ಧನಕೃಷ್ಣಾ ೪

ಪರಾಧೀನನೆಂದು ಪರಿಪರಿಯಿಂದಲಿ
ಕೊರಗಿಸುವುದು ನಿನಗೆ ಎಂದಿಗೂ ಸರಿ ಅಲ್ಲ
ಪರಾಧೀನನು ಅಹುದು ಪರತಂತ್ರನಾನಹುದು
ಸರ್ವತಂತ್ರ ಸ್ವತಂತ್ರ ನೀನೆಂಬುದು ಸಿದ್ಧ
ಶರಣಾಕರ ಆದರಿಷ್ಟು ಮಾತ್ರ ಕೇಳೋ
ನರನ್ಯಾವನಾದರೂ ಸತಿ ತನ್ನಧೀನಳೆಂದು
ಶಿರಶಿಡಿಯುವ ಊರಿ ಬಿಸಿಲಿನೊಳು ನಿಲ್ಲಪನೆ
ಸರಿಬಂದಿದ್ದು ಮಾಡೋ ಇದರ ಮೇಲಿನ್ನು ದೇವಾ
ಉರಗಶಯನ ಗುರು ಕಾಳೀಮರ್ಧನಕೃಷ್ಣಾ ೫

ನೀನು ನುಡಿಸಿದಂತೆ ನುಡಿದು ನುಡಿವೆನಯ್ಯ
ನಿನ್ನ ಚಿತ್ತವು ಗುರು ಕಾಳೀಮರ್ಧನಕೃಷ್ಣಾ

## ೨೯

ನಾಮ ಮುದ್ರೆಗಳ ಧರಿಸುವ ಕ್ರಮವನ್ನು
ನಾ ಮಂದನಾದರು ಸರಿ ಗುರುಗಳ ಕೃಪೆಯಿಂದ
ನಾ ಎಂಬುದ ಮರೆತು ಅರಿತಷ್ಟು ಪೇಳುವೆನು
ಕಾಮನಯ್ಯ ಕೇಶವನ್ನ ಸ್ಮರಿಸು ಲಲಾಟದಲ್ಲಿ
ಒಮ್ಮನಸಿನಿಂದ ಮೂಲವನ್ನು ಉದರ ಮಧ್ಯದಲಿ
ಸಾನುವಂದಿತಾದ ಮೇಶನನ್ನು ಹೃದಯದಿ ಉ
ಪಮೇರಹಿತನಾದ ಗೋವಿಂದನನ್ನು ಕಂಠ ಮಧ್ಯದಿ
ರಮ್ಮೆ ಪತಿ ಶ್ರೀ ವಿಷ್ಣುವಿನನ್ನುದಷೋದರದಿ
ಸಮ್ಮಾಧಿತ್ಯ ಶೂನ್ಯ ಮಧುರಿಪುವಿನ ದಕ್ಷಭುಜದಿ
ವಾಮ ಪ್ರತಿಕಂಠದಿ ತ್ರಿವಿಕ್ರಮನನ್ನು
ವಾಮನ ಉದರದಿ ವಾಮನ ಮೂರ್ತಿಯನ್ನು
ವಾಮ ಭುಜಕಂಠದಿ ಶ್ರೀಧರ ಹೃಷಿಕೇಶರನ್ನು
ಸ್ವಾಮಿಯಾಗದಿ ಪದ್ಮನಾಭನನ್ನು ಪುಷ್ಟಭಾಗದಿ
ನಿಮ್ಮ ಮಹಿಮ ಗುರು ಕಾಳೀಮರ್ಧಕೃಷ್ಣ ಭಿನ್ನ
ದಾಮೋದರನನ್ನು ಶಿರೋ ಭಾಗದಿ ನೆನೆಯೊ ೧

ಉದರ ಮಧ್ಯದಲಿ ಐದು ಚಕ್ರಂಗಳು
ಹೃದಯಾಕಾಶದಲ್ಲಿ ಮೂರು ಚಕ್ರಂಗಳು
ಹೃದಯ ಮೇಲಿನ ಕಂಠದಲ್ಲಿ ಒಂದು
ಉದರದಕ್ಷ ಕುಕ್ಷಿಯಲ್ಲಿ ಎರಡು
ಮಧುಸೂದನ ಸ್ಥಳದಿ ಮೇಲೆ ಎರಡು
ಅಧರ ಭಾಗದಿ ವಾಮ ಬಾಹುವಿನಲ್ಲಿ ಒಂದು
ಅದಲ್ಲದೆ ವಾಮಕಂಠದಿ ತಾ ಒಂದು
ಎದೆಯ ಬಲಪಕ್ಷ ಕಪೋಲದಿ ಮೂರು ಒಂದು
ಇದೇ ಇದೇ ತಿಳಿದು ಚಕ್ರಂಗಳ ಧರಿಸುವರು
ಸದಮಲಗುರು ಕಾಳೀಮರ್ಧನಕೃಷ್ಣನ ಕೊಂಡರು
ದಕ್ಷ ಬಾಹು ಕಂಠದಲ್ಲಿ ಕೆಳಗೆ ಒಂದು ಒಂದರಂತೆ

ಕುಕ್ಷಿವಾಮದಲ್ಲಿ ಭಂಧದಿಕೊಂದು ಪರಂಗಳ
ಪಕ್ಷಿವಾಹನನಾದ ಶ್ರೀಧರಸ್ಥಾನದ ಮೇಲೆ ಎರಡು
ದಕ್ಷವಲ್ಲದ ಕಪೋಲ ಸ್ತನಂಗಳಲಿ
ಒಂದು ಮೂರರಂತೆ ಕ್ರಮದಿ
ದಕ್ಷನಾಗಿ ಧರಿಸಿ ಗುರು ಕಾಳೀಮರ್ಧನ ಕೃಷ್ಣನನೆಯೆ ೩

## ೩೦

ಆವ ಮನುಜನು ಒಂದು ಗದೆಯನ್ನು
ಲಲಾಟದಲ್ಲಿ ಇಡುವನೋ
ಕಾವನು ಅವನನು ನಮ್ಮ ಪವಮಾನನೊಡೆಯನು
ಆವಾವನೂ ಒಂದು ಇದೇ ಆಯುಧವನ್ನು
ವಾಮ ಉದರದಲ್ಲಿ
ಯಾವಾನಲೂ ಇಟ್ಟು ಮೆರೆಯುವನೋ ಅವನ
ಗೊವತ್ಸ ನ್ಯಾಯದಿ ಕರವನು ಪಿಡಿವನು ಗಧಾಧರನು
ಹಾವನ್ನೆ ಹಾಸಿಗೆ ಮಾಡಿಕೊಂಡ ಶ್ರೀಧರನ ಸ್ಥಾನದ ಕೆಳಗೆ
ಪವಮಾನಿ ಮತಾನುಸಾರ ಎರಡು ಗಧಾಯುಧ ಧರಿಸಲು
ಪಾವನನಂತಾದವನು ಅವರ ದುರಿತಕಾನನಕೆ
ಸಾವು ಹುಟ್ಟಿಲ್ಲದ ಪರಮಪುರುಷನ ಈ ಆಯುಧವ
ಅವನು ವಾಮಸ್ತನದಿ ತಾನೊಮ್ಮೆ ಇಕ್ಕುವನೋ
ಸಾನು ಹುಟ್ಟುಗಳಿಂದ ದೂರಗೈಸುವ
ಗುರು ಕಾಳೀಮರ್ಧನಕೃಷ್ಣ ೭

ಪದ್ಮ ಮುದ್ರೆಯನ್ನು ಭಕುತಿ ಪೂರ್ವಕವಾಗಿ ಹೃತ್
ಪದ್ಮದಿ ಒಂದು ಧರಿಸಲುಬೇಕು ದಕ್ಷ ಭುಜದ ಕೆಳಗೆ
ಪದ್ಮಂಗಳೆರಡನ್ನು ದಕ್ಷ ಉದರಕೆಳಗೆ
ಪದ್ಮವೆ ಒಂದನ್ನು ವಕ್ಷಸ್ಥಾನದಿ ಒಂದು
ಪದ್ಮವ ಧರಿಸಲು ಭಕ್ತವತ್ಸಲನಾದ
ಪದ್ಮ ರಮಣಗುರು ಕಾಳಿಮರ್ಧನಕೃಷ್ಣ ಪೊಳೆವಾ ೫

೧

## ಗಣೇಶ ಪ್ರಾರ್ಥನೆ

ಕರಿವರದನೆ ನಿನ್ನ ವರಗಳ ಬೇಡುವೆ
ವರ ಮತಿ ಪಾಲಿಸೆನ್ನ ಕಾಪಾಡು ಪ.

ಅಂಬಾಸುತ ನಿನ್ನ ನಂಬಿದವರಿಗಿನ್ನು
ಸಂಭ್ರಮ ದೊರಕದಿಹುದೆ
ನಂಬಿದೆ ನಿನ್ನ ಪಾದ ಶ್ವೇತಾಂಬರೆ ಮೊಮ್ಮಗನೆ
ಕಂಬುಕಂಠಸುತನೆ ಸಂಭ್ರಮದಲಿ ಬಾ ೧

ಕಾಲ್ಗೆಜ್ಜೆ ಪೈಝಣ ಘಲ್ಲುಘಿಲ್ಲೆನುತಲಿ
ನಿಷ್ಕಾಮದನೆ ಬಾ ನಗುತ
ಪ್ರೇಮದ ಪಾರ್ವತಿ ಸುತ ನೀನಲ್ಲವೆ
ಕಾಮಿಸಿ ನಿನ ಪದ ಭ್ರಮಿಸಿ ಪ್ರಾರ್ಥಿಸುವೆ ೨

ಕಾಯಿಸಿ ಹಾಲುತುಪ್ಪ ಸಕ್ಕರೆಯೀವೆನೊ
ಮೂಷಕವಾಹನನೆ
ಸೋಸಿಲಿ ಚಿಗುಳಿ ತಂಬಿಟ್ಟು ತೆಂಗಿನಕಾಯಿ
ಶ್ರೀಶ ಶ್ರೀಶ್ರೀನಿವಾಸ ಭಕ್ತನಿಗರ್ಪಿಸುವೆ ೩

೨

ಕರುಣೆ ತೋರಿಸೊ ದೇವಾ ಕರಿವರದನೆ ಪ.

ಕರುಣ ತೋರಿಸೊ ದೇವ ಗರುಡಗಮನ ನಿನ್ನ
ಚರಣ ಕಮಲ ಧ್ಯಾನ ನಿರುತ ನೆನೆವ ಹರಿ ಅ.ಪ.

ಮುತ್ತಿನ ತಟ್ಟೆಯೊಳ್ ಅರಿಶಿನ ಕುಂಕುಮ
ಅರ್ಥಿಯಿಂದಲಿ ಇಟ್ಟು
ಚಿತ್ತದೊಲ್ಲಭನ ಸ್ತುತಿಸಿ ಬೇಡಿಕೊಂಡು
ಮತ್ತೆ ನಿಮಗೆ ಕರವೆತ್ತಿ ಪ್ರಾರ್ಥಿಸುತಲಿ ೧

ಗಂಧಪುಷ್ಪ ವಸ್ತ್ರಾಭರಣ ಆನಂದ ದೀಪಗಳಿಂದ
ಸುಂದರ ಪಾದವ ಇಂದು ನಾ ಪೂಜಿಪೆ
ಮಂದಿರದೊಳು ಆನಂದಭರಿತಳಾಗಿ ಬಾ ೨

ರುಕ್ಮೀಶವಿಠಲನ ಪಟ್ಟದ ರಾಣಿ
ವಕ್ಷಸ್ಥಳದಲಿನಿಂತು ನಲಿಯುತ ಬಾ
ಭಕ್ತಜನರ ಮನೋಭೀಷ್ಟವ ಸಲಿಸುತ ಬಾ ೩

೩

ಲೋಕಮಾತೆಯೆ ದಯಮಾಡೆ ತಾಯೆ
ಲೋಕಮಾತೆಯೆ ಈ ಪರಿ ಪೂಜಿಪೆ ಶ್ರೀಪತಿಯ ಸತಿಯೆ
ಪುಲ್ಲನಾಭನ ಕೂಡಿ ಮೆಲ್ಲಡಿ ಇಡುತಲಿ
ಉಲ್ಲಾಸದಿಂದಲಿ ಬಂದು ಕಾಯೆ ತಾಯೆ ೧

ನಿತ್ಯ ಮಂಗಳನಾಗೆ ಅಚ್ಚುತನರಾಣಿ
ನಿಚ್ಚದಿ ಭಕ್ತಿ ಜ್ಞಾನವಿತ್ತು ಕಾಯೆ ತಾಯೆ ೨

ವಕ್ಷಸ್ಥಳದಲಿ ನಿಂತೂ ಕಾಯೆ ತಾಯೆ
ಪಕ್ಷಿವಾಹನ ರುಕ್ಮಿಣೀಶ ವಿಠಲನ ರಾಣಿ ೩

೪

ಉಡಕ್ಷಯ ಮುಖ್ಯ ಪ್ರಾಣ ನಿನ್ನ ನೋಡಿ
ಹರುಷವಾಯಿತು ಮನಕೆ ಪ.

ನಿರುತದಿ ಎನ್ನಯ ಹೃದಯದಲ್ಲೇ ನಿಂದು ಶ್ರೀ
ಹರಿಯ ಸ್ಮರಣೆಯನು ಕರುಣಿಸು ಅನುದಿನ ಅ.ಪ.

ತ್ರೇತ್ರಾಯುಗದಲಿ ಜನಿಸಿ ರಘುಪತಿಯ ದಾಸನೆಂದೆನಿಸೆ
ಸೀತೆಗೆ ಉಂಗುರವಿತ್ತು ಶರಧಿಯ ಲಂಘಿಸಿ
ಮಾತೆಯ ರತ್ನ ರಘುನಾಥ ಗೊಪ್ಪಿಸಿದೆಯೋ ೧

ದ್ವಾಪರ ಯಗದಲಿ ಕುಂತಿಯ ಕುಮಾರನೆಂದೆನಿಸಿ
ಪಾಪಿ ರಕ್ಕಸರನು ಸಂಹಾರ ಮಾಡಿ
ಪ್ರಖ್ಯಾತಿಯ ಪಡೆದು ಭೀಮನೆಂದೆನಿಸಿ ೨

ಮೂರನೆ ಅವತಾರದಿ ಮುನಿ ಮಧ್ವರೆಂದೆನಿಸಿ
ಮಾರಮಣನ ಗುಣಗಳ ಪೊಗಳುತಲಿ
ಮೂರುತಿ ರುಕ್ಮಿಣೀಶ ವಿಠಲನ ಕರುಣದಿ ೩

೫

ಉಮಾದೇವಿಯೆ ನಿನ್ನ ನಮಿಪೆ ಅನುದಿನ
ಚರಣಕಮಲವ ತೋರಮ್ಮ ನಮ್ಮಮ್ಮಾ ಪ.

ಮನೋಭಿಮಾನಿಯೇ ಎನ್ನವಗುಣಗಳೆಣಿಸವೆ ತ್ವರಿತದಿ
ಬಂದು ಮುತ್ತಿನ ಗದ್ದಿಗೆಯನೇರಮ್ಮ ನಮ್ಮಮ್ಮಾ ಅ.ಪ.

ದಕ್ಷಕುವರಿ ದಾಕ್ಷಾಯಿಣಿ ಗೌರಿ ಪಕ್ಷಿವಾಹನನ ಸೋದರಿ
ಈಕ್ಷಿಸುತಿರುವೆನು ಉಪೇಕ್ಷಿಸದೆ ಎನ್ನ
ರಕ್ಷಿಸಿ ಕಾಯೆ ಪಾರ್ವತಿ ತಾಯೆ ೧

ಶಂಭುದೇವನ ರಾಣಿ ಹೃದಯಾಂಬರದೊಳು ನಿಂದು
ಬಿಂಬವ ತೋರೆ ಜಗದಾಂಬ ಅಂಬರ ಪೂಜಿತೆ
ನಂಬಿದ ಭಕ್ತರ ಪೊರೆವ ಸದ್ಗುಣ ಚರಿತೆ ೨

ಗೆಜ್ಜೆ ಪಾದಗಳಿಂದ ಘಲ್ ಘಲ್ ಎನುತ ಬಾರಮ್ಮ
ಹೆಜ್ಜೆಯನಿಡುತ ಮುಗುಳ್ನಗೆ ನಗುತ ಬಾರಮ್ಮ
ಸುಜ್ಞಾನ ಮತಿಯಿತ್ತು ಕಾಯುವ ತಾಯಿ ಬಾರಮ್ಮ ೩

ಉಟ್ಟ ಪೀತಾಂಬರ ತೊಟ್ಟ ಕಂಚುಕ ಪಟ್ಟೆಯ ಪದಕ
ಕಟ್ಟಿದ ಕಠಾಣಿ ಮುತ್ತಿನಮೂಗುತಿ ಪಚ್ಚೆಯ ಓಲೆ
ಇಟ್ಟ ಕಸ್ತೂರಿತಿಲಕ ಕೆತ್ತಿದ ಕಿರೀಟ ಹೊಳೆಯುತ ೪

ಬೇಡಿಕೊಂಬೆವೆ ತಾಯೆ ನೀ ಎನ್ನ ಆಪತ್ತು ಪರಿಹರಿಸಿ
ಪಾಡಿ ಪೊಗಳಿ ಕೊಂಡಾಡುವೆ ಕಾಯೆ ತಾಯೆ
ಬೇಡಿದ ವರಗಳ ರುಕ್ಮಿಣೀಶವಿಠಲನ ಕರುಣದೆ ನೀಡೆ ತಾಯೆ ೫

೬

ಮಧ್ವರಾಯರೆ ನಿಮ್ಮ ಮುದ್ದು ಪಾದಗಳಿಗೆ
ಬಿದ್ದು ಬೇಡಿಕೊಂಬೆ ಮನಶುದ್ಧಿಯ ಮಾಡೊ ಪ.

ಮಧ್ಯ ಗೇಹಮೊಳು ಜನಿಸಿ ಪಾಜಕಾ ಕ್ಷೇತ್ರದೊಳು
ಮುದ್ದು ರೂಪವ ತೋರಿ ಅ.ಪ.

ಪದ್ಮನಾಭನ ಭಜಿಸುತ ಇರುತ ಗುಹೆಯಲಿ
ಶುದ್ಧ ತಪವನೆ ಮಾಡಿ ಪ್ರಸಿದ್ಧಿಯಿಂದಲಿ
ಇದ್ದ ದೈತ್ಯನ ಕೊಂದು ಪೊರೆಯುತಲಿ ೧

ವಾದಿಗಳ ಭೇದ ಭೇದವ ಮಾಡಿ
ಸಾಧಿಸಿ ನುತವ ಬೋಧಿಸಿ ಸುಜನರಿಗೆ
ವ್ಯಾಧಿಗಳ ಕಳೆದು ಪೊರೆವ ಮರೆವ ೨

ಸುಜ್ಞಾನ ತೀರ್ಥರೆಂದೆನಿಸಿ ಮಹಿಯೊಳ್
ಅಜ್ಞಾನ ಪರಿಹರಿಸಿ ಪೊರೆವ ಗುರು
ಸುಜ್ಞಾನವೀವ ರುಕ್ಮಿಣೀಶವಿಠಲನ ಭಜಿಪ ೩

೭

ಬಾರೈ ಬಾರೈ ಗುರು ಸಾರ್ವಭೌಮನೇ ಪ.

ಉಟ್ಟವಸನವು ತೊಟ್ಟ ಆವಿಗೆ
ಇಟ್ಟ ದ್ವಾದಶ ಊರ್ಧ್ವ ಪುಂಡ್ರವು
ದಿಟ್ಟತನದಿ ಇಟ್ಟು ಕೊರಳೊಳು
ಕಟ್ಟ ತುಳಸೀ ಮಣಿ ಮನೋಭೀಷ್ಟವ ಸಲಿಸುತ ೧

ದಂಡಕ ಮಂಡಲ ಕೈಯಲಿ ಪಿಡಿದು
ಕಂಡ ಕಂಡದ ಪೂಜೆಗೊಂಬುವ
ಕೊಂಡ ಜನರ ಪರಿಪಾಲಿಸುತಲಿ
ಕಂಡ ಕಂಡವರ ಕಾಯುವ ಕರುಣೆ ೨

ಭೂತ ಪ್ರೇತ ಭಯ ನಾಶಗೊಳಿಸಿ
ಭೀತಿಯ ಬಿಡಿಸಿ ಮಂತ್ರಾಲಯದಿ
ಖ್ಯಾತಿವಂತ ರುಕ್ಮಿಣೀಶವಿಠಲನ ಕರುಣದಿ
ಪ್ರೀತಿಪ ಜನರ ಮನೋಭೀಷ್ಟವೊಲಿದ ೩

## ೧

ಎಂತು ಪೊಗಳಲಳವೇ ದ್ವಾರಾವತಿಯ ದೊರೆಯನ್ನು
ಕಂತುಪಿತ ಶ್ರೀಕೃಷ್ಣ ಮೂರುತಿಯಾ ಪ.

ಅಂತರಂಗದಲಿ ನಿಂತು ಪೊರೆಯುವ
ಏಕಾಂತ ಮೂರುತಿಯ ಕರುಣಾನಿಧಿಯಾ ಅ.ಪ.

ಆಲದೆಲೆಯ ಮೇಲೆ ಮಲಗಿದ ಸಿಂಧು
ನಲಿಯುತ ಕನಕನ ಕಿಂಡಿಯಲಿ ನಿಂದು
ಒಲಿದು ವರಗಳನೀವ ಗುಣಸಿಂಧು ೧

ಕಂಠದಲಿ ಮುತ್ತಿನಹಾರ ವಜ್ರದಂಗಿಯ ಅಲಂಕಾರ
ಕಂಟೀಪದಕ ವಿಸ್ತಾರ ಕರದಲಿ ವಜ್ರದುಂಗೂರ
ಸೊಂಟಪಟ್ಟಿಯ ಕಟ್ಟಿದಾ ಚಂದ ನಾಭೀ ಕಮಲದಾನಂದ ೨

ಕಡೆಕಣ್ಣು ಕಂಗಳಾ ನೋಟ ಕಸ್ತೂರಿ ಲಲಾಟ
ಕುಡಿಹುಬ್ಬುಗಳ ನೀಟಾ ವಜ್ರಮಾಣಿಕ್ಯದ ಕಿರೀಟ
ಪಿಡಿದಿರುವ ಕಡಗೋಲು ಕರದಿ ರುಕ್ಮಿಣೀಶ ವಿಠಲ ೩

## ೨

ಪೂಜಾ ಮಾಡೋಣ ಬಾರೆ ಶ್ರೀ ಲಕುಮಿಯ
ಪೂಜಾ ಮಾಡೋಣ ಬಾರೆ ಪ.

ವನಜನ ನೇತ್ರೆಯ ತ್ರಿಜಗನ್ಮಾತೆ ಪ್ರಖ್ಯಾತೆ ಅ.ಪ.

ವೇದಾಂತ ವೇದ್ಯ ನೀನೆ ಆದಿನಾರಾಯಣ
ಸಾಧುವಂದಿತನು ನೀನೆ ದೇವೇಶನೆ
ವೇದವ್ಯಾಸನು ನೀನೆ ಬಾದರಾಯಣ ನೀನೆ
ಬಾಧೆ ಕೊಡುವ ಭವ ಭಯಹರ ನೀನೆ ೧

ಚಿಂತೆ ಕೊಡುವ ನೀನೆ ಚಿಂತಿತಾರ್ಥನು ನೀನೆ
ಅಂತಕ ದೂತರಿಂದೆಳೆಸುವ ನೀನೆ ಸರ್ವ
ಅಂತರ್ಯಾಮಿ ಅಂತರಂಗದಿ ನಿಂತು ಪ್ರೇರಿಸಿ ನಿನ ಪಾದ
ಪಂಥದಿ ಸ್ತುತಿಗೊಂಡು ಸಂತಸ ಪಡುವವ ನೀನೆ ೨

ಮಾನುನಿ ದ್ರೌಪದಿಯಾ ಮೊರೆಯ ಕೇಳಕ್ಷಯ
ನೀನೆ ಪಾಲಿಸಲಿಲ್ಲವೆ ಶ್ರೀ ಕೃಷ್ಣ
ಸಾನುರಾಗದಿ ಅಜಮಿಳನಿಗೆ ಮುಕ್ತಿಯ
ನೀನಿತ್ತು ಸಲಹಿದ ಶ್ರೀ ಶ್ರೀನಿವಾಸ ದೊರೆ
ಗಾನಲೋಲನೆ ಭಕ್ತರ ಸಲಹುವೆನೆಂಬುವ
ಅಭಯ ಹಸ್ತವ ನೀನಿತ್ತು ಸಲಹೆನ್ನದೇವಾಧಿದೇವ ೩

೩

ಗಜಮುಖನೇ ನಿನ್ನ ಭಜಿಸುವೆ ನಾ ಮುನ್ನ
ತ್ರಿಜಗ ವಂದಿತನೆ ಸುಜನರ ಪೊರೆವಾ ಪ.

ಆಖುವಾಹನನೆ ಲೋಕ ಸುಪೂಜಿತ
ನೀ ಕರುಣಿಸಿ ಕೊಡು ಏಕಚಿತ್ತ ಹರಿಯೊಳು ೧

ಮಗುವೆಂದು ಭಾವಿಸಿ ನಗುತ ಬಂದೂ ಎನ್ನ
ಅಘವ ಕಳೆದು ನಿನ್ನಾಗಮನ ವರವ ಕೊಡೆನ್ನಾ ೨

ಎನ್ನಪರಾಧವ ಮನ್ನಿಸಿ ಗಣಪಾ
ಚನ್ನಿಗ ಶ್ರೀ ಶ್ರೀನಿವಾಸನ್ನ ತೋರೋ ಬೇಗಾ ೩

## ೪

ಪಾರ್ವತೀತನಯ ಪಾಲಿಸು ಎನ್ನಾ ಪ.

ಪಾರುಗಾಣಿಸುತೆನ್ನ ಮನದಲ್ಲಿನಿಂದು ಅ.ಪ.

ರಜತಾದ್ರಿವಾಸನ ರಮಣಿ ಪುತ್ರನೆ ನಿನ್ನ
ತ್ರಿಜಗ ಪೂಜಿಸುವುದೆಂದರಿತು ನಿನ್ನ
ಭಜಿಸದೆ ನೊಂದೆನೊ ಭುಜಗ ಭೂಷಣ ಸುತನೆ
ಕದನವ್ಯಾತಕೊ ದೇವಾ ಕಡೆಹಾಯಿಸೊ ಗಣಪಾ ೧

ಗಂಗಜನಕನ ನಾಮ ಹಿಂಗದಲೆ ನುಡಿಸೆನಗೆ ಭೂ
ಜಂಗುಳಿಗೆ ವಿದ್ಯಾಧಿದೇವದೇವಾ
ಹಿಂಗಿಸುತಲಜ್ಞಾನ ರಂಗನಾ ಮರಿಮಗನೆ
ಕಂಗಳಿಂದಲಿ ನೋಡಿ ಸಲಹೆನ್ನನು ದೇವಾ ೨

ಶ್ರೀ ಶ್ರೀನಿವಾಸನ್ನ ತೋರುತ ಮನದಲಿ
ಶ್ರೀಕರನೆ ಕರುಣಿಪುದು ಸ್ತುತಿಪ ಮತಿಯಾ
ಏಕಭಕುತಿಯಲಿ ಸ್ತುತಿಸುವಾ ನರರಿಗೆ
ಶ್ರೀಕಮಲನಾಭನ್ನ ತೋರುವಾ ಗಣಪ ೩

## ಶ್ರೀಹರಿಸ್ತುತಿ

## ೫

ಅಕ್ಕಾ ನೋಡೆ ಚಿಕ್ಕ ಕೃಷ್ಣನೂ
ಪೊಕ್ಕಿಹ ರಿಂದಾವನಕೀಗ ಬಾ ಪ.

ಸಿಕ್ಕನೆ ಪೋಗದಿರೆ ಲಕ್ಕುಮಿಯರಸ
ದಕ್ಕಿಸಿಕೊಳ್ಳೆವೆ ಸಿಕ್ಕದೆ ಬಿಟ್ಟಾರೆ ಅ.ಪ.

ಸದ್ದು ಮಾಡದೆ ಬನ್ನಿ ಇಲ್ಲಿದ್ದವರೆಲ್ಲ
ಮುದ್ದು ಶ್ರೀ ಕೃಷ್ಣನ ಬಳಸುವ ಬಾರೆ
ಹದ್ದು ವಾಹನ ಎದ್ದು ಅಭಯನೀವ
ಶುದ್ಧ ಕೋಲಾಟಕೆ ಸಿದ್ಧನಾಗುವನೆ ೧

ನವವಿಧ ಭಕುತಿಯೊಳ್ ನವನೀತ ಚೋರನ
ರವಿಶತಕೋಟಿ ಕಿರೀಟ ಪ್ರಕಾಶ
ಜವದಿ ಪೊಳೆವ ಗೋವಲಯಪಾಲನ
ಅವನೀಧವನೊಲಿಸಲು ಪೋಗುವ ಬಾ ೨

ಆರಿಗೂ ಸಿಗನೆ ನಾರದ ವಂದ್ಯನೆ
ತಾರಕೆಗಳ ಮಧ್ಯ ಚಂದ್ರನಂತಿಹನೆ
ನಾರಾಯಣ ಶ್ರೀ ಶ್ರೀನಿವಾಸನ
ಸೇರಿ ಸುಖವ ಸುರಿಸಲು ತವಕದಿ ೩

೬

ಅಂಗವ ಶಿಂಗರಿಸೊ ಶ್ರೀ ರಾಮಗೆ ಪ.

ರಥವೆಂದು ಮಂಗಳ ಮಹಿಮನ
ಉಂಗುಟದಿಂದ ಬಂದ ಗಂಗೆಯ
ಸ್ನಾನದಿ ಹಿಂಗಿಸು ಭವವೆಂದು ಅ.ಪ.

ಗಂಗಾಜನಕನ ಸ್ಮರಿಸುತ ನಿನ್ನ
ಅಂಗವನುಜ್ಜಿ ಕಲಿಮಲ ತೊಳೆದು
ರಂಗನ ಸ್ತುತಿಗೆ ಭಂಗ ತರದ ಪರಿ
ರಂಗುರಂಗುಗಳ್ವಸ್ತ್ರ ರಂಗಗೆ ಪೀತಾಂಬರವೆಂದು ೧

ಗೋಪೀ ಚಂದನ ಲೇಪಿಸುತಂಗಕೆ
ಶ್ರೀಪ ವಲಿವನೆಂದ್ಹರುಷದೊಳು
ಧೂಪಾರತಿ ಅಂಗಾರದಕ್ಷತೆ ಸೊಬಗ
ಶ್ರೀಪತಿ ನೋಟಕೆ ಭೂಪನಾಗಿಹನೆಂಥು ೨

ಶೃಂಗರ ಶ್ರೀ ಶ್ರೀನಿವಾಸಗರ್ಪಿಸಿ
ಮಂಗಳದನ್ನ ವೀಳ್ಯವ ಮೆದ್ದು ತನ್ನ
ಅಂಗನೆಯೊಳು ಅನಂಗಜನಕನ
ರಂಗನಲೀಲೆಯಂದದಿ ಹರುಷಿಸೀ ಇಂಥಾ ೩

೭

ಅಳಗಿರಿಯಲಿ ಬೆಳಗಿಹೆಯ ಕಳವಳಿಸುವ ಮನ
ಸುಳಿವದೆನ್ನಮಲ ಕಳೆದಭಯವನಿತ್ತು ನರಹರಿ ಪ.

ಅಳಗಿರಿ ಹತ್ತಲು ಝಳ ಝಳ ಮನಸಲಿ
ಸುಳಿದು ಭಯವ ಹರಿಸಿ ತೊಳಲಿದ ಭಕ್ತರಘ
ಕಳೆದು ಪೊರೆವೆನೆಂದು ಅ.ಪ.

ರಂಗನ ಮದುವೆಯೋಳ್ ವೆಂಕಟೇಶನು ಬೊಮ್ಮಗೆ
ಮುಂಗಡ ನಿನಗುಣಿಸೆನೆ ಉಂಡನು ಹರೆ
ರಂಗನ ಬೆಟ್ಟ ಬಾಷಿಂಗ ನರಸಿಂಗ ಹಿಂಗದೆ
ವೆಂಕಟನ ತೋರಿಸೋ ಎನ್ನ ಕಂಗಳಲಿ ನೋಡುವೆ ಮನದಣಿಯೆ ೧

ಬಂದ ಭಕ್ತರಿಗಭಯದಿಂದಲೇರಿಸಿ ಮುನ್ನ
ತಂದೆ ತೋರಿ ವೆಂಕಟನ್ನ ರನ್ನನ್ನ
ನಿಂದು ಶ್ರೀನಿವಾಸ ತಂದೆ ವರಪರಂತೆ
ಇಂದೆನ್ನ ಕುಲದೇವತೆ ತಂದು ತೋರಿದೆ
ನಿಮ್ಮ ಮೂವರ ರೂಹವ ೨

ನಾರದ ವಂದ್ಯನ ನಾರೇರಿಗೊಲಿದನ
ಶೂರ ಶ್ರೀ ಶ್ರೀನಿವಾಸನೆಂಬ ಪೆಸರಿನ ನೀ
ಸಾರಿರ್ಪೆ ಪೆಸರ್ವ ನಾಮದಲಿ
ನಾರಾಯಣನೆಂದ ಬಾಲನಿಗೆ ಒಲಿದನೆ
ಆರಿಗು ವಶವಲ್ಲ ದಾರುಣನಿನಾಮ ನರಸಿಂಹ ೩

೮

ಆಪನ್ನ ಆರ್ತ ಜನರ ಕಾವ ನೀನೆ ಹರಿ ಎಂಬರು
ಆಪತ್ತು ಬಂದರೂ ನಿನ್ನನೇ ನೆನೆವರು
ಸಂಪತ್ತು ಬಂದರೂ ನೀ ನಿತ್ತೆ ಎಂಬರು
ನಿನ್ನಾಪ್ತರು ಕೃಷ್ಣಾ ಎಂದೊದರುವರು
ಅನ್ಯ ದೇವರ ನೆನೆಯರೊ ನಿನ್ನವರು ನಿನ್ನರೂಹ
ಆ ಕರುಣಾ ಆ ಆಭರಣ ಆ ನಿನ್ನ ನಿಜರೂಪ
ಆ ಪರಮ ಪುರುಷ ನಿನ ಕಂಡು ನಲಿವರು
ನಿನ್ನಾಧೀನ ನಾನೆಂಬರು ನಿನ್ನ ಭಕ್ತರು ಶ್ರೀ ಶ್ರೀನಿವಾಸ

೯

ಆಲಿಸು ರಂಗನ ಮುರಳಿಯಾ ಕರೆ
ವನುತೆಯರೆ ಬೇಗ ತ್ವರೆ ತ್ವರೆ ಪ.

ಪಕ್ಕದ ನೆರೆಹೊರೆ ಅಕ್ಕ ತಂಗಿಯರೆ
ರಿಂಧಾವನಕೆ ತ್ವರೆ ತ್ವರೆ ಅ.ಪ.

ರಂಗನ ಮುರಳಿಯ ಧ್ವನಿಯಿದು ನೋಡಿ
ಕಂಗಳಿಗ್ಹಬ್ಬವು ತ್ವರೆ ತ್ವರೆ ನಮ್ಮ ೧

ಮಿಕ್ಕ ಕೆಲಸವೆಲ್ಲ ಲೆಕ್ಕದೊಳಿಡದೆ
ಲಕ್ಕುಮಿ ಪತಿಯೆಡೆ ತ್ವರೆ ತ್ವರೆ ೨

ಪರಮ ಪುರುಷ ಎಮ್ಮ ಕರೆದನು ನೋಡಿ
ಮುರಳಿಯ ಸ್ವರದೊಳು ತ್ವರೆ ತ್ವರೆ ೩

ಶ್ರೀ ಶ್ರೀನಿವಾಸನು ಪೋಷಿಪನೆಮ್ಮ
ದೋಷವೇನಿದ್ದರು ತ್ವರೆ ತ್ವರೆ ತಂಗಿ ೪

## ೧೦

ಈ ರಂಗಧಾಮ ಈ ಸುಂದರನು ಈ ರಂಗಧಾಮ ಪ.

ಕಂಚಿವರದ ರಾಜನಂತಿಹ ಮಿಂಚಿನಂತ್ಹೊಳೆವ
ಸಂಚಿತಾರ್ಥವೀವ ದೇವ ೧

ಪರಮ ಪುರುಷ ಪಾವನಾಂಗ ಭರದಿ ಭಕ್ತರನು ಪೊರೆವಾ
ಕರವ ಪಿಡಿದು ಪೊರೆವ ೨

ಸರ್ವತೋಮುಖ ಸರ್ವರಂಗ ಸಂಗದಲ್ಲಿರುವಾ
ಗರ್ವಾರಹಿತ ಶ್ರೀ ಶ್ರೀನಿವಾಸ ೩

## ೧೧

ಎಂಥಾ ಠೌಳಿಗಾರನಮ್ಮ ಗೋಪಮ್ಮ ನಿನ್ನ ಮಗ
ನ್ನೆಂಥಾ ಠೌಳಿಗಾರನಮ್ಮ ಪ.

ಎಂಥಾ ಠೌಳಿಗಾರ ಪಂಥಾದಿ ಬೆನ್ನಟ್ಟಿ ಬಂದು
ನಿಂತಲ್ಲೆ ನಾನಾರೂಪವೆಂತು ತಾಳುವ ನೋಡೆ ಎಂಥಾ ಅ.ಪ.

ನೀರೊಳು ಮೀಯಲು ಪೋದೆನೆ ಗೋಪಮ್ಮ
ಹಾರುತ ಮೀನನಾದನೆ
ಸಾರಿ ಪಿಡಿಯಲು ಹೋದೆ
ಆರು ಅರಿಯರೆಂದು ಪೊತ್ತು ಮರೆಯಾದನೇ ಗೋಪಮ್ಮ ೧

ತಾಳು ತಾಳೆಂದೆನೆ ಗೋಪಿ ಧೂಳು ಕೆದರಿ
ಕೋರೆ ತೋರುವನ ಖೂಳ ದೈತ್ಯನ ಸೀಳೆ
ಕೇಳಿ ಕಂದನ ನುಡಿ ಭಾಳ ಕ್ರೂರ ಮೃಗ
ಕೇಳಿದೊಡಲು ಭಯ ತಾಳಿ ಬಂದೆ ಇಂಥ ೨

ದೊರಕಿದನೆಂದೆ ತಿರುಕ ಬ್ರಹ್ಮಚಾರಿ
ತಿರುಗಿ ನೋಡೆ ಘೋರ ಕೊಡಲಿ
ಪಿಡಿದು ನಿಂತು ಮಾರುತಿ ಸೇವಿತನಾದ
ಗರುಡ ಗಮನ ದೇವನು ಎಂಥಾ ೩

ಚಿತ್ತಜನೈಯ್ಯನು ನಾನೆತ್ತ ಪೋದರು ಬಿಡ
ಸುತ್ತಿ ಬಹನೆ ಕೃಷ್ಣಾ ಮುತ್ತ ತಾರೆನುತ
ಕತ್ತಲೆಯೊಳು ಪೋದೆ ವಿಸ್ತರಿಸುವೆನೆಂತು
ಬತ್ತಲಾಗಿಸಿ ಕೆಣಕಿಪನೇ ಗೋಪಿ ಇಂಥಾ ೪

ಶ್ರೀಪತಿ ಶ್ರೀನಿವಾಸನ ಪಿಡಿದು
ಗೋಪಾಲನ ಎಳತಂದೆ ನಿನ್ನೆಡೆಗೆ
ತಾ ಪರಾರಿಯಾಗಿ ಗೋಪತಿ ಹಯನೇರಿ
ಏಪರಿ ಪೋದನೊ ತಾಪತಾಳಲಾರೆ ಎಂಥಾ ೫

## ೧೨

ಎಂಥಾ ಭಾಗ್ಯವೆ ಎಂಥಾ ಪುಣ್ಯವೆ
ಕಂತುಜನಕನಾಟ ನಿಂತು ನೋಡಿ ಸುಖಿಸೇ ಗೋಪಿ ಪ.

ಎಂತು ಸಾಕಲಿಂಥ ದುಷ್ಟನ
ಎಂತನಿಂತು ಚಿಂತೆಯಾಂತು ಅ.ಪ.

ಪುಟ್ಟಿದೇಳು ದಿವಸದಲ್ಲಿ ದುಷ್ಟಪೂತನಿ ಕೊಂದ ದೇವ
ದೃಷ್ಟಿವಂತನೆ ದಿಟ್ಟ ತೃಣ ಕೇಶೀಯರ
ಪುಟ್ಟಕಾಲಲಿ ಶಕಟನಳಿದ
ಕಟ್ಟಿ ಸಕಲ ದನುಜರನ್ನು
ಕಷ್ಟ ಪಟ್ಟನೆ ಪುಟ್ಟಕೃಷ್ಣ
ದೃಷ್ಟಿ ತಾಕಿತೆ ಕೃಷ್ಣಗೆನುತ ೧

ವಿಪ್ರನು ನಿನ್ನ ಮನೆಗೆ ಬಂದು
ಕ್ಷಿಪ್ರದಿ ಪೂಜೆ ಕೃಷ್ಣಗೆನಲು
ಅಪ್ರಮೇಯನು ವಿಪ್ರನ ಮುಟ್ಟೆ
ಕಟ್ಟಿ ಕಂಬಕೆ ಬರಲು ನಿಂದು
ಕೃಷ್ಣಗರ್ಪಿಸೆ ನೈವೇದ್ಯವಾಗ
ಸುಪ್ರಕಾಶದಿ ತೆಗೆದುಕೊಂಡ ಕೃಷ್ಣನನು ನೀನಪ್ಪಿ ಮುದ್ದಿಸೆ ೨

ಚಂದಿರನ ನೀ ತೋರು ಎನಲು
ಇಂದುವದನ ಕೇಳಲಾಗ
ಮಂದಿರದಿ ಕನ್ನಡಿಯ ತಂದು
ಮಂದಯಾನೆ ತೋರಿಸೆ ನೀನು
ಸುಂದರಾನನನಂದದಿ ಗೋವ
ಚಂದದಿಂದ ಕಾದು ಕಾಳಿಂಗನಂದದಿ ೩

ಸುರರು ಶ್ರೀ ಶ್ರೀನಿವಾಸನ
ಶಿರದಿ ಪುಷ್ಪ ಮಳೆಗರೆಯಲು
ನೆರೆದು ಗೋಪೇರ ಸೀರೆ ಸೆರಗ ಸೆಳೆದು
ವರಳನೆಳೆದು ಮುರಿದು ಮರವ
ಗರೆದು ಅಮೃತಸದೃಶ ವಾಣಿ
ನೆರೆದು ಗೋಪಿಯರೊಡನೆ ನಾಟ್ಯಗರೆದು
ರಾಸವಾಡೆ ರಂಗನಕರೆದೆರೆವೆ ಮಗುವೆನ್ನುವ ೪

## ೧೩

ಎಲ್ಲರಂತಲ್ಲ ಹರಿ ಜಗದೊಳಗೆಲ್ಲ ತಿಳಿಯಬೇಡಿರೊ ಪ.

ಪುಲ್ಲಲೋಚನ ತನ್ನಲ್ಲೇ ಮನವ ನಿಲ್ಲಿಸಿದಂಥ ತಾ
ಅಲ್ಲೆ ಆಟವಾತೋರಿದ ಅ.ಪ.

ಮಣ್ಣುತಿಂದನೆಂದ್ಹೊಡೆದರೆ ಗೋಪಿ
ಕಣ್ಣು ಮುಚ್ಚುತ ಅಳುವ
ಬೆಣ್ಣೆ ಬಾಯ್ತೆರೆಯೆನೆ ಸಣ್ಣ ಮೂರ್ ಲೋಕವೆ
ಕಣ್ಣಿಗೆ ತೋರಿದ ಗೋಪಿ ತಾ ಅಗ್ರಗಣ್ಯ ೧

ದುಷ್ಟತನಕೆ ಹಿರಿಯ ವರಳಿಗೆ
ಕಟ್ಟಲು ಹರಿ ಪೋಗಿ
ಥಟ್ಟೆರಡು ಮರದೊಳಿಟ್ಟು ವರಳನೆಳೆದು
ಇಷ್ಟ ಮೂರುತಿ ಕೃಷ್ಣ ಸಿಟ್ಟು ಮಾಡಿದನೇ ೨

ಶ್ರೀ ಶ್ರೀನಿವಾಸನನು ತನ್ನರಿ ವಾಸುದೇವನೆಂದು
ಘಾಸಿಮಾಡಲು ಕಂಸಾನೇಕ ಖಳರ ಅಟ್ಟೆ
ಶ್ರೀಶ ಸಂಹರಿಸಿ ಯಶೋದೆಯ
ತೋಷಪಡಿಸಿದನು ೩

## ೧೪

ಏನು ಸುಕೃತವ ಮಾಡಿ ಜನಿಸಿದಳೊ ಯಶೋದೆ
ದೀನಪಾಲಕ ನಿನ್ನ ಮಗನೆಂದು ಮನದಣಿಯೆ ಸೇವಿಪಳೊ ಪ.

ಅನುದಿನ ಜಪತಪಾನುಷ್ಠಾನದಿಂದಿರುತಾ
ನಿನ್ನ ಪಾದ ಸೇವಿಪ ಮುನಿಗಳಿಗೆ ದೊರೆಯುವ
ವನಜನಾಭನೆ ನಿನ್ನ ವನರುಹಾನನ ನೋಡಿ
ದಿನದಿನದಿ ಸುಖಿಸುವ ಘನ ಪುಣ್ಯ ಗಳಿಸಿದಳೋ ೧

ದುಷ್ಟರನು ಸಂಹರಿಸಿ ಮೈ ಎಷ್ಟು ನೋವೊ ಎಂದು
ಶ್ರೇಷ್ಠತರ ತೈಲವನೊತ್ತಿ ದಿಟ್ಟೆ ಬಿಸಿನೀರೆರೆಯುವಳೊ
ಇಷ್ಟ ಮೂರುತಿ ನಿನ್ನ ಶ್ರೇಷ್ಠತರ ಆಭರಣ
ದಿಟ್ಟ ಕೃಷ್ಣ ನಿನಗಿಟ್ಟು ನೋಡುವಳೊ ೨

ಕಸ್ತೂರಿ ತಿಲಕವನು ಶಿಸ್ತಿನಲಿ ಶೃಂಗರಿಸಿ
ಕಸ್ತೂರಿರಂಗ ಶ್ರೀ ಶ್ರೀನಿವಾಸ ನಿನ್ನೆತ್ತಿ ತೊಡೆಯಲ್ಲಿ
ಸ್ವಸ್ಥದೊಳು ಮಲಗೆಂದು ಪೊಂಬಟ್ಟಲೊಳು ಕ್ಷೀರವನು
ಹಸ್ತಿವರದನೆ ಕುಡಿಯೆಂದು ಜೋಗುಳವ ಪಾಡುವಳೊ ೩

## ೧೫

ಏಳು ಶ್ರೀನಿವಾಸ ಏಳು ಲಕ್ಷ್ಮೀರಮಣ
ಏಳು ಬೆಟ್ಟದೊಡೆಯ ಏಳು ಭಕ್ತರ ಪ್ರೀಯ
ಏಳಯ್ಯ ಬೆಳಗಾಯಿತು ಹರಿಯೇ ಪ.

ಆದಿಶೇಷನ ಮೇಲೆ ಅಪ್ರಮೇಯನು ನೀನು
ಆದರದಿ ಮಹಲಕ್ಷ್ಮಿಯೊಡನಿರಲೂ
ಕಾದು ಕೊಂಡಿದ್ದಾರೆ ಸುರರು ಸನಕ ಸನಂದನರು
ಆದರಿಸೆ ಬಾ ಬೇಗ ಬಾಗಿಲನು ತೆಗೆದು
ಆದಿಮೂರುತಿ ನಿನ್ನ ಮುಖ ದರ್ಶನವ ಮಾಡಿ
ಮೋದ ಪಡುತಲೆ ಭಕ್ತ ಕೋಟಿ ಸ್ತುತಿ ಮಾಡಲು
ಮಾಧವನೆ ಹಾಸು ಮಂಚವನಿಳಿದು ಬಾ ಕತ್ತಲೆ ಹರಿಪಾ
ದಿವಾಕರನ ತೆರದಿ ಹರಿಯೇ ಏಳಯ್ಯ ಬೆಳಗಾಯಿತು ೧

ಕಾಸಿದ್ದಾಲನೆ ತಂದು ಕಾವಡಿಯಲಿ ತುಂಬಿ
ಲೇಸಾಗಿ ನಿನ್ನ ಭಕ್ತರು ನಿಂತಿದಾರೆ
ವಾಸುದೇವನೆ ನಿನಗೆ ಮಲ್ಲಿಗೆ ಕುಸುಮ

ಭಾಸುರಾಂಗನೆ ತಂದು ಅರ್ಪಿಸಲು ಭಕ್ತರು
ಏಸು ಹೊತ್ತಿನಿಂದ ತುಳಸೀ ದಳ ತಂದು
ವಾಸುಕೀಶಯನಗೆಂದು ಭೂಸುರರು ನಿಂದಾರೆ
ವೇದ ಘೋಷದಿಂದ ಈಸು ನುಡಿಗಳು ನಿನ್ನ
ಕರ್ಣಕೇಳಲಿಲ್ಲವೆ ಏಸು ಮೆಚ್ಚಿಸಿವಳೋ ಲಕ್ಷ್ಮೀ
ನಿನ್ನ ಸರಸದೊಳು ವಾಸುಕೀಶಯನ
ಹಾಸಿಗೆಯಿಂದೇಳೋ ದೊರೆಯೆ ಏಳಯ್ಯ ಬೆಳಗಾಯಿತು ೨

ಕರುಣಾಸಾಗರ ನಿನಗೆ ಕರುಣೆ ಬರುವಾತೆರ
ಪರಿಪರಿಯ ಸ್ತೋತ್ರದೊಳು ನಾರಿಯೇರು
ಕರೆವರೋ ಕರಗತ ಕಾಮಧೇನು ನೀನೆಂದು
ಕರದೊಳಾರತಿಯ ಪಿಡಿದೂ
ತರತರದ ಉಡಿಗೆ ತೊಡಿಗೆ ನಿನಗೀಯಲು
ಸರಸರನೆ ದೇಶದೇಶದಿ ಬಂದು ನಿಂತಿದ್ದಾರೆ
ವರದ ಮೂರುತಿ ಕೈಯೊಳೆ ಶರಧಿ ಗಂಭೀರನೆ
ವರ ಶ್ರೀ ಶ್ರೀನಿವಾಸನೆ ಕರುಣೆ ತೋರುತ್ತ ನಿನ್ನ ಭಕ್ತರ ಮೇಲೆ
ವರ ನಾರಿಯರ ನಾಟ್ಯ ವೈಭವದಿ ವರದುಂದುಭಿ ವಾದ್ಯದಲಿ
ವರ ತಾಳ ಮೇಳದಿಂ ವರ ಶೇಷಾದ್ರಿವಾಸ ವೆಂಕಟೇಶನೆ
ಏಳಯ್ಯ ಬೆಳಗಾಯಿತು ೩

## ೧೬

ಒಂದೇ ಮತ ಹರಿಯ ಮತ ಒಂದೇ ಭಾವ ಸಿರಿಯರಸನ ಭಾವ
ಒಂದೇ ಮನಸಿನಲಿ ತಂದೆ ನಾರಾಯಣನ ನೆನೆದ ಕಂದನ
ಸಲಹಿದ ನರಹರಿ
ಒಂದೇ ಮನದಂಬರೀಷನ ಕಾಯ್ದ ಹರಿ
ಒಂದೇ ಮನದಿ ಧ್ರುವನ ಕಾಯ್ದ ಹರಿ ಒಂದೇ ಗಳಿಗೆಯಲಿ ತನ್ನುಂಗುಟದಿ

ಸೋಕಿಸೆ ಕಲ್ಲಾಗಿದ್ದಹಲ್ಲೆಯ ಪೆಣ್ ಮಾಡಿದ
ತಂದೆಯಂದದಿ ಭಕ್ತರ ಹಿಂದೆ ಕಾದಿದ್ದು ಕರುಣಾಸಿಂಧು
ಭಕ್ತರ ಬಂಧು ಸುಂದರಿ ಸಿಂಧುಸುತೆಯರಸನ
ಶ್ರೀ ಶ್ರೀನಿವಾಸನ ನಿತ್ಯ ನೆನಯಿರಿ ಹರಿ ಭಕ್ತರು ೧

ನಾಲ್ಕು ವೇದದ ಸಾರ ನಾಲ್ಕು ಯುಗದಾಧಾರ
ನಾಲ್ಕು ಮುಖದಲಿ ನೆಲಸಿ ಸೃಷ್ಟಿಕಾರ್ಯವ ನಡೆಸಿ
ನಾಲ್ಕು ಮುಖ ಬೊಮ್ಮನಲಿ ನಾನಿಲ್ಲವೆನಿಸಿ
ನಾಲ್ಕು ಯುಗದಲಿ ಜನಿಸಿದ ರಕ್ಕಸರಿಗೆ ತಿಳಿಸಿ
ನಾಲ್ಕು ಲೋಕದಿ ಮೆರೆದ ನಾಕಚಾರ ವಂದ್ಯ
ನಾಲ್ಕು ಹಸ್ತದಿ ನಾಲ್ಕು ವೇದತಂದಾ ಮೂರ್ತಿ
ನಾಲ್ಕು ವೇದದ ಸಾರದಮೃತ ಭಕ್ತರಿಗಿತ್ತು
ಹದಿನಾಲ್ಕು ಲೋಕಕೆ ನಾನೇ ಕರ್ತನೆಂದರಿಸಿ
ನಾಲ್ಕು ವಿಧದಲಿ ಕಾವ ಶ್ರೀ ಶ್ರೀನಿವಾಸನ ಭಕ್ತರಾದರೆ
ಈ ಕಲಿಯುಗದಿ ನಾಲ್ಕು ಜನರು ಮೆಚ್ಚುವರು ನಿಮ್ಮ
ಹರಿ ಭಕ್ತರೆ ಕೇಳಿ ೨

ನಿನ್ನ ಸಹವಾಸ ಜೈ ನಿನ್ನ ಒಡನಾಟ ಜೈ
ನಿನ್ನ ರೂಪ ಚತುರ ಬುದ್ಧಿ ಎನ್ನ ಜೈ ಎನ್ನಲಾಪರೆ
ನಿನ್ನ ಕೈ ಚಳಕವಿಲ್ಲದಲೆ ಜೈಸುವದೆಂತೀ ಕಲಿಕಾಲದಿ ಸ್ವಾಮಿ
ಜೈಲುವಾಸದಿ ಕೂತು ನಿನ್ನ ಕಲ್ಯಾಣವ ಕಟ್ಟಿದರೊ ನಿನ್ನ ಭಕ್ತರು
ಜೈ ಕರುಣಾಕರ ನಿನ್ನ ಭಕ್ತರ ಮಹಿಮೆ ನಾ ಪೊಗಳುವದೆಂತೊ
ಜೈ ಎನಿಸಿಕೊಳ್ಳಲು ನಿನ್ನೊಲುಮೆ ಕಾರಣವಲ್ಲವೆ
ಜೈವೆಂಕಟ ಶ್ರೀಶಾ ಶ್ರೀ ಶ್ರೀನಿವಾಸ
ನಿನ್ನ ಭಕ್ತರಿಗೆ ಜಯ ಅಪಜಯವೆಲ್ಲಿ ನಿನ್ನ ಭಕ್ತರಿಗೆ ಎಂದೆಂದಿಗೂ
ಜೈ ಹರಿಭಕ್ತರ ನೆನೆಯಿರಿ ಹರಿಭಕ್ತರು ೩

ಯನ್ನ ಯತ್ನವೇನಿಲ್ಲಿದರೋಳು ಪನ್ನಗಾದ್ರಿ ನಿವಾಸನಲ್ಲದೇ
ಯನ್ನ ಯತ್ನ ಸಲ್ಲುವುದೇ ಎನ್ನ ಮನಸಿಲಿ ಬಂದು ನಿಂದು
ತಾನೇ ನುಡಿಸಿದನಿಂದು
ಚೆನ್ನಗಿರಿಯರಸ ಭಕ್ತ ಜನ ಬಂಧು ಬಂದು ನಿಂದು
ಎನ್ನ ಮನದಭಿಲಾಷೆ ಸಲಿಸೆ ದೀನ ವತ್ಸಲನು
ಎನ್ನ ಕರದಲಿ ಬರೆಸಿ ನಲಿದಾಡಿದ ತನ್ನ ವಾಣಿಯನಿತ್ತು
ಎನ್ನ ಕುಲದೈವ ಶ್ರೀ ಶ್ರೀನಿವಾಸನ ಕೃಪೆ
ಎನ್ನ ಮೇಲೆಂತುಟೊ ಕಾಣೆ ಇನ್ನು ಈ ವಾಣಿ
ಹರಿಯದೆಂದು ನುಡಿವುದು ಹರಿಭಗವದ್ಭಕ್ತರು ೪

ಪಾಮರರಿಗೆ ಕಲ್ಪತರು ಪಾಮರರಿಗೆ ಜಗದ್ಗುರು
ವರವ ತೋರಿ ಪಾಮರರ ಪುನೀತರನು ಮಾಡೆ ಹರಿ
ಪಾಮರೆಂದು ಲೆಕ್ಕಿಸದೇ ತಾವಲಿದು ನುಡಿಸಿದ
ಪತಿತ ಪಾವನ್ನ ಶ್ರೀ ಶ್ರೀನಿವಾಸನದೇ
ಈ ಉಕ್ತಿಯಲ್ಲರ ನ್ಯತ್ರವಿಲ್ಲೆಂದು ತಿಳಿದು
ಪಾಮರರನ್ನುದ್ಧರಿಸಲು ಹರಿಭಕ್ತರು ಪಠಿಸುವುದು ಈ ನುಡಿಯ ೫

ಜತೆ

ಶರಣು ಭಕ್ತರ ಪಾಲ ಶರಣು ಶ್ರೀಲೋಲಾ
ಶರಣು ನಿನಗೆ ಸದಾ ಶ್ರೀ ಶ್ರೀನಿವಾಸ

## ೧೭

ಒಡೆದು ಬಂದೆಯ ಗೋಪಿ ಚಂದನದಿಂದ ಎ
ನ್ನೊಡೆಯ ಮಧ್ವಾರ್ಯ ಹೃದಯವಾಸಾ ಕೃಷ್ಣ ಪ.

ಮೃಡಸಖ ನಿನ್ನಯ ರೂಹವ ತೋರೆ
ಕಡಲಿಂದೊಡನೆ ಬಂದೆ ಆನಂದತೀರ್ಥರ ಮುಂದೆ ನಿಂದೆ ಅ.ಪ.

ಗೆಜ್ಜೆ ಕಾಲ್ ಕಡಗ ಸಜ್ಜೆನಿಂದಿಟ್ಟು
ಮಜ್ಜಿಗೆ ಕಡಗೋಲು ನೇಣು ಸಹ
ಸಜ್ಜನರ ಸಲಹಲು ಮಧ್ವಾರ್ಯರ ಮುಂದೆ
ಗೆಜ್ಜೆ ಧ್ವನಿ ಮಾಡಿ ಕುಣಿಯುತ ಕೃಷ್ಣ ೧

ಉಟ್ಟ ಪೀತಾಂಬರ ಉಡಿಗೆಜ್ಜೆ ವಡ್ಯಾಣ್ಯ
ಇಟ್ಟು ಕೌಸ್ತುಭಹಾರ ತುಳಸಿಮಾಲಾ
ಕೊಟ್ಟು ಅಭಯ ಹಸ್ತ ಸಲಹುವೆನೆಂಬಾ
ಬಿರುದಿಟ್ಟು ಕಂಕಣ ತೊಟ್ಟು ಶ್ರೀ ಕೃಷ್ಣ ೨

ಮಕರಕುಂಡಲ ಕಿರೀಟ ಶೋಭಿಸುತಲಿ
ಅಕಳಂಕ ಚರಿತ ಶ್ರೀ ಶ್ರೀನಿವಾಸ
ನಿಖಿಲ ಬ್ರಹ್ಮಾಂಡದೊಳೆಲ್ಲೆಲ್ಲು ಕಾಣೆ
ಸಕಲ ದೇವರ ದೇವಾ ಶ್ರೀ ಕೃಷ್ಣ ಪ್ರಭುವೆ ೩

## ೧೮

ಓಡಿ ಬಾರೋ ರಂಗಯ್ಯ ಓಡಿ ಬಾರೋ ಕೃಷ್ಣಯ್ಯ ಪ.

ನೋಡಿ ನಿನ್ನ ಮುತ್ತನೀಡುವೆ
ಹಾಡಿ ಜೋಗುಳವ ಪಾಡುವೆ ಅ.ಪ.

ಮೊಸರು ಭಾಂಡ ಒಡೆದು ಬೆಣ್ಣೆ
ಹಸುಳೆ ಮೆದ್ದು ಬಾಯೆಲ್ಲಾ
ರಸಿಕಸಿಯಾಗಿರುವ ಮೈಗೆ
ಬಿಸಿ ನೀರೆರೆವೆನೊ ರಂಗ ೧

ಹೊಸ ಬೆಣ್ಣೆ ಕಾಸಿದ ತುಪ್ಪ
ಬಿಸಿ ದೋಸೆಯ ಕೊಡುವೆನೆ
ಮೊಸರೋಗರವ ಉಣಿಸಿ ನಿನಗೆ
ಹಸುರಂಗಿಯ ತೊಡಿಸುವೆ ಕೃಷ್ಣಾ ೨

ಮುದ್ದು ಮುದ್ದಾದ ಪಾದ
ಹೆಜ್ಜೆನಿಟ್ಟು ಬಾರೆಲೊ
ಮುದ್ದೆ ಬೆಣ್ಣೆ ಹಣ್ಣು ಕೊಟ್ಟು
ಮುದ್ರೆಯುಂಗುರವನಿಟ್ಟು ನೋಡುವೆ ೩

ಅಣ್ಣ ಬಲರಾಮನೊಡನೆ
ಚಿಣ್ಣ ಆಡಬಾರೆಲೊ
ಚಿಣ್ಣಿಕೋಲು ಚಂಡು ಬುಗುರಿ
ಚಿಣ್ಣ ಕೊಡುವೆನೋ ಕೃಷ್ಣಾ ೪

ಶೃಂಗಾರವ ಮಾಡುವ ಶ್ರೀ
ಶ್ರೀನಿವಾಸ ಬಾರೆಲೊ ಮುದ್ದು
ಕಂಗಳಿಗೆ ಕಪ್ಪನ್ಹಚ್ಚಿ
ರಂಗ ನಿನ್ನ ನೋಡುವೆದಣಿಯ ೫

## ೧೯

ಕಂಡಿರೆ ಶ್ರೀ ಕೃಷ್ಣನ ಪ.

ಪುಂಡರಿಕಾಕ್ಷ ಪುರುಷೋತ್ತಮನ
ಅಂಡಜವಾಹನ ಅಸುರಾಂತಕನ ಅ.ಪ.

ಅರುಣ ಕಿರಣ ಸೋಲಿಪ ಚರಣ
ವರ ಗೆಜ್ಜೆಯ ಧರಿಶಿಹನ
ಕಿರುನಗೆಯಿಂದಲಿ ಬೆರಳಲಿ ಮುರಳಿಯ
ಸ್ವರ ಊದಿದ ಮುರಹರನ ೧

ಕೋಟಿ ಸೂರ್ಯ ಕಿರೀಟ ಧರಿಸಿ
ಹಾಟಕಾಂಬರಧರ ನಮ್ಮ

ಊಟ ಮಾಡಿ ಪಾಲ್ ಬೆಣ್ಣೆಯ ಮೆದ್ದು ವಾರೆ
ನೋಟದಿ ಮನ ಸೆಳೆಯುವನ ೨

ಅಂಗಿಯ ತೊಡಿಸಿ ಉಂಗುರವಿಟ್ಟು
ಅಂಗಳದೊಳು ಬಿಟ್ಟೆನಮ್ಮ
ರಂಗ ಶ್ರೀ ಶ್ರೀನಿವಾಸನ ಕಾಣೆ ನಿ
ಮ್ಮಂಗಳದೊಳು ಇಹನೇನಮ್ಮ ಇಹನೇನಮ್ಮ ೩

## ೨೦

ಕಡೆಗೋಲ ತಾರೆನ್ನ ಚಿನ್ನವೆ ಮೊಸ
ರೊಡೆದರೆ ಬೆಣ್ಣೆ ಬಾರದೊ ಮುದ್ದು ಕೃಷ್ಣಯ್ಯ ಪ.

ಅಣ್ಣ ಬಲರಾಮನು ಚಿಣ್ಣರ ಸಹಿತಾಗಿ
ಬೆಣ್ಣೆ ಹಣ್ಣನು ಮೆಲುವಿಯಂತೆ
ಯನ್ನಣ್ಣನೆ ಸಣ್ಣವನಾಗಿ ಎನ್ನೊಡನಾಟವೆ
ಕಣ್ಣಿಗೆ ಕಾಡಿಗೆ ಇಡುವೆ ಬಾ ರಂಗಯ್ಯ ೧

ಹಸುರಂಗಿ ಕೊಡಿಸುವೆ ಹಸುಳೆ ಬಾ ಕಂದನೆ
ಹೊಸಪರಿಯಾಭರಣಗಳನಿಡುವೆ
ಹಸನಾದ ಹಸುವಿನ ತುಪ್ಪದ ದೋಸೆಯ
ಹಸುಳೆ ನಿನಗಾರೋಗಣೆಗೆ ಹೊತ್ತಾಯಿತೊ ೨

ಪಡೆದ ಜನನಿಯಲ್ಲೆ ಎನ್ನೊಡೆಯ ಶ್ರೀ ಶ್ರೀನಿವಾಸ ನಿನ್ನ
ಕಡೆಹಾಯಿಸೊ ಕಡೆಗೋಲನಿತ್ತು ಎನ್ನ
ವಡನೆ ಪಿಡಿದು ಗೋಪಿ ಕಡುಮುದ್ದು ರಂಗನ
ಬಿಡದೆತ್ತಿ ಮುದ್ದಿಸಿ ಸಡಗರದಿಂದಲಿ ೩

## ೨೧

ಕಮಲನಾಭ ಕ್ಷಮೆಯಳೆದ ಪಾದ
ರಮೆಯರಸನೆ ರಮ್ಯ ಚರಿತ
ವಿಮಲ ಕಮಲ ಪಾದವ ತೋರೋ ಅ.ಪ.

ಕೋಟಿ ಸೂರ್ಯ ತೇಜ ಪೊಳೆವ ಶೇಷಶಯನ ತಲ್ಪದಿ
ಹಾಟಕಾಂಬರಧರ ಕಿರೀಟ ಮಾಲ ಶೋಭ ಕೃಷ್ಣನೆ
ಸಾಟಿಯಿಲ್ಲದ ಕರದಿ ಲಕುಮಿ ಧಾಟಿಯಿಂದ ವೊತ್ತುವ ಪಾದ
ಸಾಟಿಯಿಲ್ಲದೆ ನಿನ್ನ ಭಕ್ತರ ಪೊರೆವ ದೇವ ನಿನ್ನ ಪಾದವು ೧

ದುಷ್ಟರನ್ನು ಮೆಟ್ಟಿ ತುಳಿದ ದಿಟ್ಟ ಕೃಷ್ಣನ ಪಾದವು
ಮೆಟ್ಟಿ ಕಾಳಿಂಗನ ಹೆಡೆಯ ದಿಟ್ಟ ರಂಗನ ಪಾದವು
ಕಟ್ಟಿದ ವರಳನೆಳೆದು ಮತ್ತಿ ಮರವ ಮುರಿದ ಪಾದವು
ಕೊಟ್ಟ ಅಭಯ ಭಕ್ತರ ಪೊರೆವಡಿಟ್ಟ ಪಾದವು ೨

ಮತ್ಸ್ಯ ಕೂರ್ಮ ವರಹ ನರಹರಿ ಅಚ್ಚವಾಮನ ಪಾದವು
ಸಯಿಚ್ಚೆ ಪರಶುಧರ ಶ್ರೀರಾಮ ಕೃಷ್ಣ ನಿನ್ನ ಪಾದವು
ಅಚ್ಚವರವನಳಿದು ತೇಜ ಹತ್ತಿ ಮೆರೆವ ಪಾದವು
ಅಚ್ಚುತ ಶ್ರೀ ಶ್ರೀನಿವಾಸ ಕೃಷ್ಣ ನಿನ್ನ ಪಾದವು ೩

## ೨೨

ಕರುಣಾನಿಧಿ ನೀ ಶ್ರೀರಾಮ ನಿನ್ನ
ಚರಣ ಸೇವಿಪರಾನತ ಪ್ರೇಮ ಪ.

ಕರುಣ ತೋರುತ್ತೆನ್ನ ಪೊರೆ ರಾಮ ನಿನ್ನ
ಸ್ಮರಣೆ ನಿರುತ ನೀಡೆಲೊ ಶ್ರೀರಾಮ ಅ.ಪ.

ಆಶ್ರಿತ ಜನರಿಗೆ ನೀನಲ್ಲದೆ ನಿ
ನ್ನಾಶ್ರಯಗೊಡದಿರೆ ಗತಿ ಕಾಣೆ
ಸ್ತೋತ್ರದಿ ಸ್ತುತಿಸುವೆ ನಿನ್ನಾಣೆ
ಜಗತ್ರಯ ಸಲಹೊ ಕೋದಂಡಪಾಣಿ ೧

ಭವಭಯಭಂಜನ ಶ್ರೀರಾಮ ಎನ್ನ
ಭಯವ ಬಿಡಿಸೊ ಜಾನಕಿ ರಾಮ
ಕವಿಗೇಯ ನೀನೆ ಜಗದಭಿರಾಮ ಎನಗೆ
ಜವನ ಬಾಧೆಯ ಬಿಡಿಸೊ ರಘುರಾಮ ೨

ತಂದೆ ಶ್ರೀ ಶ್ರೀನಿವಾಸ ನೀನೆ ಎನಗೆ
ಬಂದ ಕಷ್ಟದಿ ಸಲಹುವ ನೀನೆ
ಮುಂದೋರಿ ಸಲಹೋ ತಾಯಿ ಗುರು ನೀನೆ
ಇನ್ನೂ ಸಂದೇಹವಿಲ್ಲ ಕೇಳೆಲೊ ರಾಮ ೩

## ೨೩

ಕೃಷ್ಣ ಕೃಷ್ಣ ಕೃಷ್ಣ ಕೃಷ್ಣ ಕೃಷ್ಣ ನಿನ್ನ ನೋಡುವೆ ಪ.

ವೈಷ್ಣವಾರ ಹೃದಯವಾಸ ಉತ್ಕೃಷ್ಟ ನಿನ್ನ ನಾಮ ಪಾಡುವೆ
ಹಾಡಿ ದಣಿಯುವೆ ಅ.ಪ

ಅನುದಿನದಿ ನಿನ್ನ ನಾಮ ನೆನೆಯುವಂತೆ ಜಿಹ್ವೆಯಲ್ಲಿ
ಯನಗೆ ಕರುಣಿಸೈಯ್ಯ ದೇವ ಅನುದಿನದಲಿ ನೆನವೆ ನಿತ್ಯ ೧

ಹರುಷದಿಂದ ನಿನ್ನ ನಾಮ ಸ್ಮರಿಸುವೆನೋ ದೇವ ದೇವ ಎನ್ನ
ಮರಣ ಸಮಯದಲ್ಲಿ ನಿನ್ನ ಸ್ಮರಣೆ ಇತ್ತು ಕಾಯೋ ೨

ಮೊದಲಿನಿಂದ ಭಜಿಸಿದೆನಾ ಹೃದಯದಲ್ಲಿ ನೋಯುತಿರುವೆ
ಮುದದಿ ಬಂದು ಎನ್ನ ಜಿಹ್ವೆಗೊದಗೊ ಆಗ ಶ್ರೀ ಶ್ರೀನಿವಾಸ ೩

## ೨೪

ಕೃಷ್ಣನ್ನ ಶ್ರೀ ಕೃಷ್ಣನ್ನ ಕೊಳಲಿನ ಧ್ವನಿಯ ಕೇಳಿ ನಾ
ಮರುಳಾಗಿಹೆನೇ ಕೇಳ್ ಸತಿ ಪ.

ಮಧುರ ಮಧುರ ಸ್ವರ ಸುದತಿಯೆ ಕೇಳೆ
ಚದುರನು ಊದುತಲಿಹನೆ
ಸದನದಿ ನಿಲ್ಲಲು ಹೃದಯವು ಒಲ್ಲದು
ಚದುರೆಯೆ ಕರೆದೊಯ್ ಎನ್ನಾ
ಮನಮೋಹನ ಮದಸೂದನ ಕೃಷ್ಣನ್ನೆಡೆಗೆ
ಪೋಗದೆ ನಿಲ್ಲಲು ತಾಳಲಾರೆನೆ ಕೇಳ್ ಸಖಿ
ಪೋಗುವ ಬಾರೆ ಚಂದ್ರಮುಖಿ ೧

ಕಂದ ಕರುಗಳ ಆನಂದದಿ ಕಾಯ್ವ
ಆನಂದವ ನೋಡುವ ಬಾರೆ
ಸುಂದರ ಕೊಳಲಿಗೆ ಚೆಂದದಿ ಸರ್ಪಾ
ನಂದದಿ ತಲೆತೂಗುವುದೆ
ಖಗ ಮೃಗ ಜಡತೆಯಿಂ ನಿಂತು ಕೇಳುವ ಗಾನ
ನೋಡುವ ಬಾರೆ ಎನ ಮನಸೆಲ್ಲಿಹುದೆ ಕೇಳ್ ಸಖಿ
ಶ್ರೀ ಶ್ರೀನಿವಾಸನೊಳ್ ಚಂದ್ರಮುಖಿ ೨

## ೨೫

ಕೊಟ್ಟರೂ ಸರಿ ನೀನು ಕೊಡದಿದ್ದರೂ ಸರಿ
ಕೆಟ್ಟ ಮನುಜರ ಕಾಲಕಟ್ಟರು ನಿನ್ನ ಭಕ್ತರು
ನೀ ಕೊಟ್ಟುದೆ ಎಮಗಧಿಕವೆಂದು ತಿಳಿದು
ನೀ ಕೊಟ್ಟಷ್ಟಕ್ಕೆ ಸಂತಸದಿ ಸ್ವೀಕರಿಸುವರು
ಕಟ್ಟಕಡೆಗವರು ನಿನ್ನ ಕಾಲ ಕಟ್ಟುವರು ಶ್ರೀ ಶ್ರೀನಿವಾಸ
ಏಳು ಬೆಟ್ಟದೊಡೆಯ ವೆಂಕಟೇಶ

## ೨೬

ಕೊಡು ಕೃಷ್ಣನೇ ಎನ್ನ ಸಾಲವ ಬೇಗ
ಕೊಡದಿದ್ದರೆ ಬಿಡೆನೋ ದೃಢ ಭಕುತಿಯ
ಕೊಡದಿದ್ದರೆ ಬಿಡೆನೊ ಪ.

ತಡ ಮಾಡಿದೊಡೆ ನಿನ್ನಾಟದ ಬೆಡಗನು
ಪೊಡವಿಗೆ ತಿಳಿಸುವೆನು ಜೋಕೆ ಅ.ಪ.

ನೀರ ಪೊಕ್ಕರು ಬಿಡೆ ನಿನ್ನ ಭವ
ವಾರಿಧಿ ದಾಟಿಸುವೆಂಬೆ
ಭಾರ ಪೊತ್ತರೆ ನೀನೇ ಎನ್ನ ಸಂಸಾರ
ಭಾರಕೆಂಬೇ ದೇವ
ಕೋರೆ ತೋರಲು ಅಂಜುವೆನೆ ಭೂಮಿಯ
ಮೇರೆ ಸಿಲಿಕದೋಡಿದರೂ ದೃಢವನು
ಕೊಡದಿದ್ದರೂ ಬಿಡೆ ನಾ ೧

ಕಂಬದೊಳಡಗಲು ಬಿಡೆನು ನಿನ್ನ
ಡಿಂಬ ಭಜಿಪೆ ನರಹರಿಯೆ
ಸಂಭ್ರಮದೊಳು ಬ್ರಹ್ಮಚಾರಿಯಾಗಲು
ನಿನ್ನ ಹಂಬಲು ಬಿಡೆ
ಕೊಡಲಿಯನು ತೋರಲು ಕದಂಬ
ಬಾಹು ಛೇದಿಸಲು ರಾಮ
ಕೊಡದಿದ್ದರೆ ದೃಢನಾ ದೇವ ೨

ಒಂದು ಸ್ಥಳದಿ ಪುಟ್ಟಿ ತಿಳಿಸದೆ ಇ
ನ್ನೊಂದು ಸ್ಥಳಕೆ ಪೋಗೆ ಕೃಷ್ಣಾ
ಅಂದದ್ವಸನ ಬಿಟ್ಟು ಸುಂದರಿಯರ ವ್ರತ

ಛಂದದಿ ಕಳೆದುನೀ ತೇಜೀಯೇರಲು
ಸುಂದರ ಶ್ರೀ ಶ್ರೀನಿವಾಸ ನಿನ್ನಡಿ
ದೃಢ ಕೊಡದಿದ್ದರೆ ಬಿಡೆನಾ ೩

## ೨೭

ಗೋಕುಲನಂದಾ ಗೋಪಿಯ ಕಂದಾ
ಶ್ರೀಪತಿ ನಿಂದಾಡುವ ಚಂದ ನಮ್ಮ ಪ.

ರಿಂದಾವನದಿ ನಿಂದು ಮುಕುಂದಾ
ನಂದದಿ ಕೊಳಲೂದುವ ಚಂದಾ, ಕೃಷ್ಣಾ
ರಂಗಾನಂದದಿ ಎಮ್ಮೆಯ ಕರೆವುದು, ಬಲು ಚೆಂದಾ ೧

ಅರುಣನ ಕಿರಣ ಸೋಲಿಪ ಚರಣದಿ
ಕಿರುಗೆಜ್ಜೆಯ ಧರಿಸುತ ಭರದಿ ರಂಗಾ
ವರ ನಾಟ್ಯವ ತೋರುವುದಾನಂದಾ, ಬಲುಚೆಂದಾ ೨

ಕಸ್ತೂರಿ ತಿಲಕ ಶಿಸ್ತಿಲಿ ಪೊಳೆಯುತಾ
ಭಕ್ತವತ್ಸಲ ಶ್ರೀ ಶ್ರೀನಿವಾಸನ್ನ ನೋಡೆ ರಂಗನ
ಭಕ್ತರಿಗೆಲ್ಲ ಆನಂದ, ಬಲು ಚೆಂದಾ ೩

## ೨೮

ಗೋಪಾಲಕೃಷ್ಣ ಬಾರೊ ಗೋವಿಂದ
ಗೋಪಾಲಕೃಷ್ಣ ಬಾರೊ ಪ.

ಗೋಪಿಯ ಕಂದ ಬಾರೊ ಮಾಧವ
ಗೋಪಿಯ ಕಂದ ಬಾರೊ ಅ.ಪ.

ನಂದಕುಮಾರ ನವನೀತ ಚೋರ
ಸುಂದರ ಮೂರುತಿ ಬಾ ಕೃಷ್ಣ
ಸುಂದರ ಚಂದನ ಗಂಧ ಲೇಪಿತಾನಂದ
ಅಂದದಿ ಮೋಹಾಕಾರ ಮುಕುಂದ ೧

ಮುರಳೀಧರನೆ ಮುರಮರ್ಧನನೆ
ಚಂದ್ರವಂಶನೆ ಬಾ ಕೃಷ್ಣ
ಹರುಷವ ಬೀರಿ ಚರಣವ ತೋರಿ
ವರಗೆಜ್ಜೆ ನಾದದೊಳು ಸುಂದರ ೨

ಚಂದಿರ ಸದೃಶಾನಂದನೆ ಬಾ ಬಾ
ಕುಂದರದನೆ ಬಾ ಶ್ರೀಕೃಷ್ಣ
ಅಂದದ ಪದುಮಿಣಿವಲ್ಲಭ ಶ್ರೀ ಶಾ
ಶ್ರೀ ಶ್ರೀನಿವಾಸನೆ ಬಾ ಗೋವಿಂದಾ ೩

## ೨೯

ಗೋಪಿ ಕೇಳೆ ನಿನ್ನ ಮಗನಾ ಚರಿಯ ಪೇಳುವೆನು
ಕೃಷ್ಣನ ಚರಿಯ ಪೇಳುವೆವು ಪ.

ಕೃಷ್ಣ ಬಂದೆಮ್ಮಾಲಯದೊಳು ಲೂಟಿಗೈದಿಪನೆ ಅ.ಪ.

ಗುಲ್ಲು ಮಾಡದೆ ಫುಲ್ಲ ಲೋಚನ ಮೆಲ್ಲಡಿ ಇಡುತ ಬಂದೂ
ಗಲ್ಲಕೆ ಮುತ್ತು ಕೊಟ್ಟು ಎಮ್ಮಾ ಗಲ್ಲ ಪಿಡಿಯುವನೆ
ಶ್ರೀಕೃಷ್ಣ ಗುಲ್ಲು ಮಾಡುವನೆ ಯಶೋದೆ ೧

ನೆಲುವಿಲಿದ್ದ ಬೆಣ್ಣೆ ಕದ್ದ ಚೆಲುವ ಕೃಷ್ಣನೆ ದೇವಾ
ಛಲದಿ ಪಿಡಿಯಾಪೋದರೆಮ್ಮಾ ಅಣಕ ಮಾಡುತ್ತಾ
ಮುರಾರಿ ಪರಾರಿಯಾದನೇ ಯಶೋದೆ ೨

ಹಿರಿಯಕಾಲದ ಸಾಲಿಗ್ರಾಮ ಕರಿಯ ಕಲ್ಲೆಂದು ಶ್ರೀ ಕೃಷ್ಣ
ಭರದಿ ಬಾಯೊಳ ನುಂಗಿ ಜಗಕೆ ತಾನ್ಹಿರಿಯನೆಂಬುವನೆ
ಯಶೋದೆ ಹಿರಿಯನೆಂಬುವನೆ ೩

ಗೊಲ್ಲಸತಿಯೇರೊಡನೆ ಪೋಗಿ ಮೆಲ್ಲ ಮೆಲ್ಲನೆ ಶ್ರೀಕೃಷ್ಣ
ಚೆಲ್ಲಿಮೊಸರ ಗಡಿಗೆಯೊಡೆದು ಸಲ್ಲಾಪತೋರೆಂಬುವನೆ
ಯಶೋದೆ ಸರಸತೋರೆಂಬುವನೆ ೪

ಸಿರಿರಮಣನ ಕರೆದು ನೀನು ಬರೆಯ ಬೇಕಮ್ಮಾ ಬುದ್ಧಿ
ಥರವೆಯಮ್ಮಾ ಕೂಡಿ ತರಳಾ ಸರಸವಾಡುವುದು
ಶ್ರೀ ಶ್ರೀನಿವಾಸ ೫

## ೩೦

ಜಯ ಜಯ ಜಯ ಜಯ ಜಯ ವಿಷ್ಣುಪಾದ
ಜಯ ಶೇಷಗಿರಿಯಲ್ಲಿ ಮೆರೆವಂಥಾ ಪಾದ
ಜಯ ಭಕ್ತಕೋಟಿ ಜೀವರ ಸಲಹುವ ಪಾದ
ಜಯ ಸಿರಿ ಅರಸನ ಪಾದ ೧

ಧ್ವಜ ವಜ್ರಾಂಕುಶ ಪದ್ಮ ಪಾದ
ನಿಜದಿ ಸಲಹುವ ಗಂಗಾಜನಕನ ಪಾದ
ಮದಗಜಗಮನನ ಪಾದ
ದಿವ್ಯ ಪದದಿ ನೂಪುರ ಗೆಜ್ಜೆ ಪಾಡಗವಿಟ್ಟ ಪಾದ ೨

ಪೀತಾಂಬರಧರನ ಪಾದ
ಪಾತಕಹರ ಜಾನುಜಂಘೆಯಲಿ ಮೆರೆವಂಥ ಪಾದ
ಸೀತಾಪತೆ ದಿವ್ಯಹನುಮಾನುತ ಪಾದ
ಅನಾಥ ರಕ್ಷಕ ಬ್ರಹ್ಮಪಿತನ ದಿವ್ಯ ಪಾದ ೩

ಹಾರ ಪದಕವಿಟ್ಟ ಪಾದ
ತನ್ನ ನಾರಿ ಲಕುಮಿ ಸಹ ಮೆರೆವಂಥ ಪಾದ
ಪಾರುಗಾಣಿಪ ದಿವ್ಯ ನೋಟದ ಪಾದ
ವಾರುಧಿಶಯನನ ಪಾದ ಭವವಾರುಧಿ ದಾಟಿಸುವ ದಿವ್ಯಪಾದ ೪

ಮಕರ ಕುಂಡಲಧರನ ಪಾದ
ತನ್ನ ಸಖ ಪಾಂಡವರಿಗೆ ಒಲಿದಂಥ ಪಾದ
ಶಿಖೆಯೊಳು ಮಾಣಿಕ್ಯ ಕಿರೀಟನ ಪಾದ
ಅಕಳಂಕ ಚರಿತ ಮಹಿಮ ದಿವ್ಯ ಪಾದ ೫

ಮತ್ಸ್ಯಾವತಾರನ ಪಾದ ಪಾದ
ಅಚ್ಯುತಾನಂತ ಮುಕುಂದ ಹೆಚ್ಚಿನ ಅಮೃತ ತಂದ ಪಾದ
ಅಚ್ಚ ಭೂಮಿಯ ತಂದ ಪಾದ
ಸಚ್ಚ ಭಕ್ತ ಪ್ರಲ್ಹಾದಗೊಲಿದ ನರಸಿಂಹ ಪಾದ ೬

ಭೂಮಿಯನಳೆದಂಥ ಪಾದ
ಭೂವ್ಯೋಮ ತ್ರಿವಿಕ್ರಮ ವಾಮನ ಪಾದ
ಸ್ವಾಮಿ ಪರಶುಧರನ ಪಾದ
ರಮಣೀಯವಾದ ಶ್ರೀ ರಾಮನ ಪಾದ ೭

ಗೋಕುಲನಂದನ ಪಾದ
ಶ್ರೀಪತಿ ಬೌದ್ಧನ ಪಾದ
ಈ ಪರಿ ನೆನಯಲಿ ಶ್ರೀಪ ಕಲ್ಕಿ ಪಾದ
ಭೂಪ ವೆಂಕಟ ಕರುಣದಿ ತೋರಿದ ಪಾದ ೮

ಹತ್ತಾವತಾರ ಎತ್ತಿದ ಪಾದ
ಭಕ್ತರನೆಲ್ಲಾ ಸಲಹುವ ಪಾದ
ಮುಕ್ತಿದಾಯಕ ಕೃಷ್ಣನ ಪಾದ
ನಿತ್ಯದಿ ಮುನಿಗಳು ಸ್ತುತಿಸುವ ಪಾದ ೯

ಮೂರು ಹೆಜ್ಜೆ ಭೂಮಿ ಬೇಡಿದ ಪಾದ
ತನ್ನ ಹಾರೈಸಿದ ಭಕ್ತರಿಗೋಸುಗ
ಊರಿ ವೆಂಕಟಗಿರಿಯೊಳ್
ಮೆರೆವಂಥಾ ಭಕ್ತ
ಆರು ಸ್ತುತಿಸಿದರೂ ಓಡಿ ಓಡಿ ಬರುವಂಥಾ ಪಾದ ೧೦

ಕಸ್ತೂರಿ ತಿಲಕನ ಪಾದ
ಮಸ್ತಕದಿ ರಾರಾಜಿಸುವ ಕಿರೀಟನ ಪಾದ
ಕಸ್ತೂರಿ ರಂಗನ ಪಾದ
ಭಕ್ತವತ್ಸಲ ಶ್ರೀ ಶ್ರೀನಿವಾಸನ ಪಾದ ೧೧

## ೩೧

ತೋರು ತೋರೆಲೊ ರಂಗಯ್ಯ ನಿನ್ನ ಪಾದ
ತೋರು ತೋರೆಲೊ ಕೃಷ್ಣಯ್ಯ ಪ.

ಇಂದಿರಾದೇವಿ ಆನಂದದಿ ಸೇವಿಪ
ಮಂದರಧರ ನಿನ್ನ ಸುಂದರ ಚರಣವ ೧

ಮತಿಹೀನಹಲ್ಯೆಯ ಪತಿವ್ರತೆಯೆನಿಸಿದ
ಪತಿತ ಪಾವನ ಶ್ರೀರಾಮ ನಿನ್ನ ಪಾದ ೨

ಎಳೆದಳಿರನು ಪೋಲ್ವ ಚೆಲುವ ಕೃಷ್ಣನ ಪಾದ
ತಿಳಿದು ಭಕ್ತರು ನಿನ್ನ ನಲಿದು ಪೂಜಿಪ ಪಾದ ೩

ಮಗುವೆಂದು ಗೋಪಿಗೆ ಜಗದ ಆಟಗಳಲ್ಲಿ
ನಗುತ ತೋರಿಸೆ ಬಂದ ನಗಧರ ನಿನ್ನ ಪಾದ ೪

ಅಂದಿಗೆ ಪಾಡಗದಿಂದಲೊಪ್ಪುವ ದಿವ್ಯ
ಅಂದದಿ ಪೊಳೆಯುವ ಶ್ರೀ ಶ್ರೀನಿವಾಸನ ಪಾದ ೫

## ೩೨

ದೇವಾದಿದೇವನಿಗೆ ಹರಸಿದಳು
ದೇವಿ ಯಶೋದೆಯು ದೇವ ಶ್ರೀ ಕೃಷ್ಣಗೆ ಪ.

ಅಷ್ಟು ಬ್ರಹ್ಮಾಂಡವ ಪೊಟ್ಟೆಯೊಳಿಂಬಿಟ್ಟ
ದಿಟ್ಟ ಶ್ರೀ ಕೃಷ್ಣಗೆ ಸೃಷ್ಟಿಯೊಳ್ ಸುಖಿಸೆಂದು ೧

ದಿಟ್ಟಡಿಯಿಡುತಲಿ ದಿಟ್ಟ ಲೀಲೆಗಳನ್ನು ನೀ
ನಷ್ಟು ತೋರಿಸು ಎಂದು ಪುಟ್ಟ ಶ್ರೀ ಕೃಷ್ಣನ ೨

ಸೃಷ್ಟಿಕರ್ತ ಗೋವಿಂದ ಮುಕುಂದ
ಅಷ್ಟೈಶ್ವರ್ಯದಿ ದಿಟ್ಟ ಶ್ರೀ ಶ್ರೀನಿವಾಸ ಸುಖಿಸೆಂದು ೩

## ೩೩

ನಂದ ಕುಮಾರ ಆನಂದ ಬಾ ಬಾ ಪ.

ಚಂದಿರ ಸದೃಶ ನಂದನೆ ಬಾ ಬಾ
ಎನ್ನಾನಂದ ಬಾ ಬಾ ಅ.ಪ.

ನಿನ್ನ ಕಾಣದೆ ನಾ ನಿಲ್ಲಲಾರೆ ಕೃಷ್ಣಾ
ನಿನ್ನ ಮುಖಬಿಂಬ ನೋಡಲೆಂತಾನಂದವೊ
ನಿನ್ನ ಸುಳಿಪಲ್ಲಿನ ನಗೆ ಬೀರೋ ಕೃಷ್ಣಾ
ನಿನ್ನ ನೋಡುವೆ ಪಾಡುವೆ ಆನಂದ ಬಾ ಬಾ ೧

ಕರುಣಾಕರ ನೋಟವ ಬೀರೋ ಕೃಷ್ಣಾ
ಕೊರಳ ವೈಜಯಂತಿ ಮಾಲಾ ಶೋಭಾ ಕೃಷ್ಣಾ
ಚರಣದಂದಿಗೆಯ ಗೆಜ್ಜೆ ನಾಟ್ಯದೊಳು ನಲಿದಾಡೊ ಕೃಷ್ಣಾ
ಕುಣಿದಾಡೊ ಕೃಷ್ಣಾ ೨

ಚೆಂದ ಮಾಮನ ನೀ ಕೇಳೆ ತೋರುವೆನು
ಅಂದ ಕನ್ನಡಿಯೊಳ ರೂಪ ನೋಡುವೆನು
ಸುಂದರಾಂಗ ಮುತ್ತನಿಟ್ಟು ನಲಿಯುವೆನು
ಚಂದ್ರಬಿಂಬಧರಾ ಶ್ರೀ ಶ್ರೀನಿವಾಸ ೩

## ೩೪

ನವರತ್ನದ ಮಂಟಪದಿ ಮೆರೆವೊ ಸುಖಾಸನಕೆ ಈಗ
ನವಮೋಹನ ರಘುರಾಮನೆ ನೀನು ಬಾ ಬೇಗ ಪ.

ದಶರಥನುದರದಿ ಜನಿಸಿ ಅಸುರ ತಾಟಕಿಯನು ಸಂಹರಿಸಿ
ಋಷಿಗಳ್ಯಾಗವ ಕಾಯ್ದದು ನೀನು ಋಷಿ ಪತ್ನಿಯರನು ಉದ್ಧರಿಸೀ
ಪತಿವ್ರತೆಯೆನಿಸಿದ ಅತುಳ ಮಹಿಮ ಶ್ರೀರಾಮ ಬಾ ಬೇಗ
ಅತುಳ ಮಹಿಮ ಶ್ರೀರಾಮ ಬಾ ಬೇಗ ೧

ಶಿವಧನುವೆತ್ತಿದ ಧೀರ ಸೀತಾದೇವಿಯ ಕರವನೆ ಪಿಡಿವಾ
ಜವದಿ ಪರಶುರಾಮನ ಗರ್ವವನು
ತವಕದಿ ಮುರಿದಾಯೋಧ್ಯಯಾಳಿದ
ಶ್ರೀ ಶ್ರೀನಿವಾಸನೆ ನೀನು ಬಾ ಬೇಗ ಸುಖಾಸನಕೆ ೨

## ೩೫

ನಾಟ್ಯವಾಡಿದನು ರಂಗ ಮಂಗಳಾಂಗ ಪ.

ನಾಟ್ಯವಾಡಿ ಶಕಟಾಂತಕ ಕೃಷ್ಣ
ನೋಟಕರಿಗೆ ತನ್ನಾಟ ತೋರಿ
ಕಾಳಿಂಗ ಭಂಗ ಜಗದಂಗ ಧಿಕಿಟದಿಂ
ತದಾಗಿಣ ತೋಂ ತರನಾನಂದದಿ ಸುಂದರನಾಟ್ಯ ಅ.ಪ.

ಅನುಪಮ ಚರಿತ ಅಪ್ರಮೇಯ ಹರಿ
ತನುಭವ ಬಲರಾಮರ ಜತೆ ಸೇರಿ

ಅನುನಯದಲಿ ಗೋವನು ಕಾಯುತಲಿರೆ
ಪೀತಾಂಬರಧರನಾಟವ ನೋಡುವೆನೆಂದು
ಸಾಟಿಯಿಲ್ಲದ ವಿಷಮಡುವಿಲಿ ಕಾಳಿಂಗ
ನೀಟಿಲಿ ಕುಳ್ಳಿರೆ ಓಟದಿ ಪಶುಗಳು
ನೀರಾಟದಿ ಕುಡಿಯಲು ನಾಟಿ ಗಾರಾದ
ನೆಲಕುರುಳಲು ರಂಗ ಕೋಟಿಪ್ರಕಾಶ
ಕಾಳಿಂಗನಾಟ ತೋರುವೆನೆಂದೂ ಧಿಕಿಟ ೧

ದುಷ್ಟನ ವಿಷಮಯ ನೀರನು ಕುಡಿದು
ಉತ್ಕೃಷ್ಟ ಗೋವು ಮೂರ್ಛೆಯ ಪೊಂದೆ
ಪುಟ್ಟ ಬಾಲಕರು ಕೃಷ್ಣಗೆ ಪೇಳಲಾ
ತಟ್ಟನೆ ಕಡಹದ ಮರವೇರುತ ಧುಮುಕೆ
ಪುಟ್ಟ ರಂಗನೆಂದು ಬಿಟ್ಟನೆ ದುಷ್ಟನು
ಸುತ್ತಿ ಬಾಲ ಕುಟ್ಟುಪ್ಪಳಿಸಿದನು
ಕಷ್ಟವೆ ರಂಗಗೆ ನಿಷ್ಟುರ ಭಕ್ತರು
ಶಿಷ್ಟಾಚಾರದಿ ಮೆಟ್ಟಿ ಬಾಲ ಕೈಗಿಟ್ಟು ತವಕದಿ
ದಿಟ್ಟ ಶ್ರೀ ಕೃಷ್ಣ ಥಕಥೈ ತದಿಗಿಣಝಂ ಆನಂದ ನಾಟ್ಯ ೨

ಅಂಬುಜೋದ್ಭವನ ನಾಟ್ಯವ ನೋಡೆ
ಕುಂಭಿಣಿ ತಳದಾಕಾಶದಿ ಸುರರು
ತುಂಬುರು ನಾರದ ಸಂಭ್ರಮಗಾನ
ರಂಭಾದ್ಯಪ್ಸರ ಸ್ತ್ರೀರಂಭರ ನಾಟ್ಯ
ಅಂಬರದಿಂ ಪೂಮಳೆ ರಂಗಗೆರೆಯೆ
ಜಗಂಗಳು ನೋಡೆ ಶ್ರಿಂಗರ ಶ್ರೀ ಶ್ರೀನಿವಾಸಗೆ ಗೋಪಿ
ರಂಗ ಬಾರೆನುತಲೆ ಮಂಗಳಾರುತಿ
ಓಂಗದಲೆತ್ತೆ ಮಂಗಳ ಮೂರ್ತಿ ಕಾಳಿಂಗಭಂಗ ನಾಟ್ಯ ೩

೩೬

ನಾಮ ಧರಿಸಿಹೆಯಾ ಮೂರು
ನಾಮ ಧರಿಸಿಹೆಯಾ ಶ್ರೀನಿವಾಸ ಪ.

ನೀನೆ ಕರ್ತನೆಂದಾ ಮನುಜರಿಗೆಲ್ಲಾ
ನಾನೆ ಸಲಹುವೆನೆಂಬ ಬಿರುದಿನ ಮೂರು ಅ.ಪ.

ಅಂಬೆಯ ವಕ್ಷದಿ ಇಂಬಿನೊಳಿಟ್ಟು
ಸಂಭ್ರಮದೊಳು ಕುಡಿ ನೋಟದಿಂದಾ
ಅಂಬುಜಾಕ್ಷ ಬಡವರ ಧನ ಸೆಳೆಯುತ್ತವರ
ಬೆಂಬಿಡದೆ ಕಾವೆನೆಂಬ ಬಿರುದ ೧

ಸಿರಿ ಅರಸಾನೆಂಬೊ ಬಿರುದು ಥರವೇ ನಿನಗೆ
ಹೊರವೊಳಗಿದ್ದು ಜನವ ನಂಬಿಸಿ
ಥರಥರದಾಭರಣ ಸುಲಿಗೆಯಗೊಂಬ
ತಿರುಪತಿ ತಿರುಮಲರಾಯ ದೊರೆ ೨

ನಿನ್ನ ಧ್ಯಾನ ಮಾಳ್ಪ ಭಕ್ತರು ಬಲೆಗೆ ಸಿಕ್ಕುವರೇನೊ
ನಿನ್ನ ಪಾದಧ್ಯಾನವನ್ನೆ ಬಯಸುತ್ತ
ನಿನ್ನನೆ ಭಕ್ತಪಾಶದಿ ಕಟ್ಟಿ ೩

ಚಾರು ಚರಿತನೆ ಚಾರು ಮುಖನೆ ವಂದ್ಯ ನಿನ್ನ
ಹಾರೈಸುವ ಭಕ್ತರ ವೃಂದ
ಸಾರಿ ಬಂದು ನಿನ್ನ ನಾಮದ ಸ್ಮರಣೆಯ
ಹಾರ ಹಾಕಿ ಮನ ಸೂರೆ ಕೊಟ್ಟು ೪

ಭಕ್ತರ ಕಟ್ಟಿಗೆ ಸಿಕ್ಕಬೇಕಲ್ಲದೆ
ಭಕ್ತವತ್ಸಲನೆಂಬೊ ಬಿರುದಿಟ್ಟ ಕಾರಣವೇಕೊ
ಯುಕ್ತಿಲಿ ನಿನ್ನ ನೆನೆದು ಸಿಕ್ಕಿಸೀ
ಭವ ಕಷ್ಟಕಳೆವರೊ ಶ್ರೀ ಶ್ರೀನಿವಾಸ
ನಿನ್ನ ಭಕ್ತರಿಷ್ಟಾ ೫

## ೩೭

ನಾರಾಯಣ ಎನ್ನಿರೊ ನರಹರಿ
ನಾರಾಯಣ ಎನ್ನಿರೊ ಪ.

ನಾರದ ವಂದಿತ ನಗೆಮೊಗ ಚನ್ನಿಗ ಅ.ಪ.

ಆದಿ ಪ್ರಹ್ಲಾದನ ಮೋದದಿ ಪೊರೆದನ
ಸಾಧಿಸಿ ಅಂತ್ಯದಿ ಅಜಮಿಳನಂತೆ ೧

ಕರುಣವ ಬೀರುತ ಕರೆದು ಮಾರುತಿಯನ್ನು
ಶರಣನ ಮಾಡಿದ ನಿರುತ ಶ್ರೀರಾಮನ ೨

ಮುದ್ದು ಭೀಮಾರ್ಜುನರಲ್ಲಿದ್ದು ರಣದೊಳಾಗ
ತಿದ್ದಿ ತಾ ಹೃದಯದೊಳಗಿದ್ದ ಶ್ರೀ ಕೃಷ್ಣರನ್ನ ೩

ಮಧ್ವಮುನಿಯೊಳಗಿದ್ದ ಮನ ಮಧ್ವಮತವ ಗೆದ್ದ
ಮುದ್ದು ಮಧ್ವಪತಿಯ ನೀವು ೪

ಅಖಿಳಾಂಡನಾಯಕ ಸಖನಾದ ಪಾಂಡವರಿಗೆ
ನಿಖಿಳಲೋಕದ ಪ್ರಿಯ ಭಕ್ತರ ಸಖನಾಗುವ ಶ್ರೀ ಶ್ರೀನಿವಾಸನೆಂದು ೫

## ೩೮

ನಿಂತು ಸ್ತುತಿಸೆ ನೀ ಸಂತಸ ಪಡುತಿ
ನಿನ್ನವರ ಕಂಡು ಹರಿ
ಕಂತು ಜನರ ನೀನೆ ನಿಂತವರ ಪರಿಪಾಲಿಪೆ
ಶ್ರೀ ಶ್ರೀನಿವಾಸಾನಂತ ಮಹಿಮ ನೀನೆಂದು
ಸಂತಸದಿ ನೆನೆವ ಭಕ್ತರಿಗೆ ನೀ ಕಲ್ಪತರು
ಕಾಮಧೇನು ವೆಂಕಟೇಶಾ ಶ್ರೀಶಾ

## ೩೯

ನಿಂದಿಸಿದ್ದು ಕುಂದಾದದ್ದೇನೊ
ಮಂದಮತಿಗಳು ನಿಂದು ಸುಜನರಿಗೆಲ್ಲ ಪ.

ಅಂದನುವಾಗಿಲ್ಲೆ ಇಂದಿರೇಶನು
ಮಂದಗಮನೆ ದ್ರೌಪದಿಗೆ ಅ.ಪ.

ಕಂದನೆಂದು ಕೌರವನ ಸೇವೆಗೆ ಆ
ನಂದದಿಂದ್ಯವರ ಬೇಡೆಂದ ಮುನಿ
ಬಂದರತ್ನವ ಬಿಟ್ಟನ್ನವ ಬೇಡಿಬಾರೆನೆ
ಇಂದು ಮುಖಿ ಕೈಯಿಂದಿಡಿಸಿದ ಕೃಷ್ಣ ೧

ಖಡ್ಗ ತೋರಿ ಬಳ ಪ್ರಹ್ಲಾದನಂಜಿಸೆ
ಗುಡ್ಡ ಪೊತ್ತ ನರಹರಿಯಾಗ
ಹೆಡ್ಡನೆ ತೋರುವೆನೆಂದು ಕಂಬದಿ
ದೊಡ್ಡ ಮೃಗರೂಪದಲಂಜಿಸಿದ ೨

ತೊಡೆಯನು ಬಿಡು ಎನುತೊಡನೆ ನೂಕಲು
ಪೊಡವಿಯಲ್ಲಿಹುದು ನಡೆ ಬಾಲಕನೆನೆ

ಕಡುಭಯದಲಿ ಧೃವ ಒಡನೆ ಹರಿಯ ಪಾದ
ಬಿಡದೆ ಧ್ಯಾನಿಸೆ ದೃಢವರವಿತ್ತ ಹರಿ (ಕಡೆ ಹಾಯಿಸಲು) ೩

ಕರಿಯ ಕಂಬದ ತೆರದಿ ನಿಲಿಸೆ ನಕ್ರ
ಪೊರೆದವನಾರೋ ಹರಿಯಲ್ಲದೆ
ಶರಣಾಗತ ಚಿಂತಾಮಣಿ ಎನೆ ಕರಿ
ಪರಿದು ಚಕ್ರನಿ ನಕ್ರನ ಬೇಗ ೪

ಏಕಾದಶಿವ್ರತ ಏಕಭುಕ್ತನ ನೀರೆಡಿಸೆ
ಮಾನುನಿ ಬರಲು ಹರಿತಾ ಕರುಣಿಪನೆಂದು
ತರಳನ ಶಿರಕೆ ಕೈಹಾಕೆ ಶ್ರೀ ಶ್ರೀನಿವಾಸನ
ಸುತತಾ ಕರುಣಿಸಿದ ೫

## ೪೦

ನಿನ್ನ ನೆನೆಯುವುದೆ ಭಾಗ್ಯ ನಿನ್ನ ನೋಡುವುದೇ ಕಂಗಳಿಗೆ ಹಬ್ಬ
ನಿನ್ನ ಬಳಿ ನಲಿದಾಡುವುದೇ ಭಕ್ತರಿಗಿಷ್ಟ
ನಿನ್ನಗಲಿ ಇಹದೊಂದು ಘಳಿಗೆಯೂ ಅವರ ಮನಸಿನಲಿ
ಪನ್ನಗಾದ್ರಿನಿವಾಸ ಆಪನ್ನರಕ್ಷಕ ಅಖಿಳ ದೇವೇಶ
ನಿನ್ಹೊರತು ಗತಿಯಮಗಾರೆಂಬರೊ ನಿನ್ನ ಭಕ್ತರು ಶ್ರೀ ಶ್ರೀನಿವಾಸ

## ೪೧

ನಿನ್ನ ಪದ ಧ್ಯಾನಿಪರು ಪಗಲಿರುಳು ನಿನ್ನ ಭಕ್ತರು ಹರಿ
ನಿನ್ನ ರೂಪ ನೆನೆನೆನೆದು ಸ್ಮರಿಸಿ ಮನದಲಿ ನಿಲಿಸಿ ಸ್ತುತಿಸಿ
ನಿನ್ನ ಪಾದ ಧೂಳು ಶಿರದಲ್ಲಿ ಧರಿಸುವರು ಭಕ್ತರು
ನಿನ್ನ ರೂಹವ ಮನಸಿನ ಜಗಲಿಯಲಿ ನಿಲಿಸುವರು ಭಕ್ತರು
ನಿನ್ನ ನಂಬಿ ಸಕಲಕಾರ್ಯ ನಿರ್ವಹಿಸುವರು ಭಕ್ತರು ಹರಿ
ನಿನ್ಹೊರತು ಅನ್ಯರನು ನೆನೆಯರೊ ಪನ್ನಗಾದ್ರಿನಿವಾಸ ಶ್ರೀ ಶ್ರೀನಿವಾಸ
ನಿನ್ನ ಭಕ್ತರ ಸಂಗಕೊಡೊ ಎನಗೆ ಸರ್ವೇಶ

## ೪೨

ನಿನ್ನ ವಲಿಸುವ ಭಾಗ್ಯ ನಿನ್ನ ಭಕ್ತರಿಗೆ ನೀ ಕೊಟ್ಟು
ಮನ್ನಿಸುತಲವರಪರಾಧ ಸನ್ನುತ ಚರಿತರಿಗೀವೆಯಲ್ಲದೆ
ನಿನ್ನ ಮಹಿಮೆಯ ತೋರುವ ಅನ್ಯರಿಗೆ ಈ ಭಾಗ್ಯವುಂಟೆ
ನಿನ್ನ ವಲಿಸಲು ಸಂಪನ್ನ ಶ್ರೀ ಶ್ರೀನಿವಾಸ ೧

ಸೂರ್ಯ ತೇಜಕೆ ಪ್ರತಿ ಕೋಟಿಸೂರ್ಯ ತೇಜ ಧರಿಸಿ
ಆರ್ಯ ರಾಮರಾಯರಾ ಕರಗತದಿ ಮೆರೆದೊ ಜಗತ್ಸಿರಿಯೆ ಆ
ಆರ್ಯರಾ ಮಡದಿ ಸೀತಾಬಾಯಿ ಎಂಬುವರಾ ಆ
ಈರ್ವರಾ ಸೇವೆಯಲಿ ಮೆರೆದ ಸುರತರುವೆ ಶ್ರೀ ಶ್ರೀನಿವಾಸ ೨

ನಿನ್ನ ಸೇವಾಕಾರ್ಯ ಆವಾವುದೆಂದ್ಯೋಚಿಸದೆ
ನಿನ್ನ ಸೇವಾಕಾರ್ಯದಲಿ ನಿರುತ ತಪವನೆಗೈಯೆ
ಮಾನವ ವೇಷಧಾರಿಣಿಯರಾಗಿ ಪುಟ್ಟಿಹರೂ ಜಗದಿ
ಬಕುಳಾವತಿಯ ತೆರದಿ ನಿನ ಸೇವ ನಿರತದಿ ಶ್ರೀ ಶ್ರೀನಿವಾಸ ೩

ಸಕಲವೇದದ ಸಾರ ಗುರುಮುಖದಿಂದ ತಿಳಿದು ನಿ
ನ್ನಖಿಲ ಮಹಿಮೆನರಿಯೆ ಬಿಲ್ವದಳದ
ಲಕುಮಿ ಆವಾಹಿಸಿದ ಬಿಲ್ವರಸವ ನಿನಗರ್ಪಿಸಿ
ಅಕಳಂಕ ಮಹಿಮರು ಸೇವಿಸಿ ಸೌಳ ವರುಷ
ತಪವಗೈದಿಹರೊ ಗುರುವಾಜ್ಞೆಯಲಿ ನಿನ್ನ ಸೇವಿಸೆ ಶ್ರೀ ಶ್ರೀನಿವಾಸ ೪

ನಿನ್ನ ಸೇವಕರಾದ ಆ ಮಾನುನಿಯರನುದ್ಧರಿಶೆ
ನಿನ್ನ ಇಂಥ ಆಟಗಳ ಗೋಪಿಗೆ ಕೃಷ್ಣ ತೋರಿದಂದದಲಿ
ಸನ್ನುತಾಂಗನೆ ತೋರಿ ಭಕ್ತರಭೀಷ್ಟವನು
ಉನ್ನತದಿ ಸಲಿಸೆ ಜಗದಿ ಘನ್ನ ಸಂಪನ್ನ
ಬೆಟ್ಟವನಿಳಿದು ಬಂದಿಹೆಯೊ ನೀ
ಲೀಲೆನೋಡಲು ಶ್ರೀ ಶ್ರೀನಿವಾಸ ೫

ಗಂಗಾಜನಕನೆ ನಿನ್ನುಂಗುಟದಿಂ ಬಂದ ಗಂಗೆಯ
ನೆರೆಯೆ ನಿನ್ನ ಶಿರದಿಂದ ನಿನ್ನಂಗದಿಂ ಬಂದ
ಕೇಸರಿತೀರ್ಥದಾ ಸೊಬಗೇನೆಂದು ಬಣ್ಣಿಪೆನೊ
ಶ್ರೀ ರಂಗನಾಥಾ ಸರ್ವರಿಗೆ ದಾತಾ ರಂಗನಾಥನೇ ನಿನ್ನ
ಪಂಚಾಮೃತದ ಅಭಿಷೇಕ ಕಂಗಳಿಗ್ಗಬ್ಬವೊ
ಜಗದ ಜಂಗುಳಿ ಭಕ್ತರಿಗೆನುತೆ ಶ್ರೀ ಶ್ರೀನಿವಾಸಾ ೬

ತನ್ನ ತೊಡೆಯೊಳಗಿಟ್ಟು ಉನ್ನತದ ಆಭರಣ
ಸನ್ನುತಾಂಗನೆ ಗೋಪಿ ಇಡುವ ತೆರದಿ
ಇನ್ನು ನಿನಗಲಂಕಾರ ಮಾಡುವದೇನ ಬಣ್ಣಿಪೆನೋ
ಸನ್ನುತ ಚರಿತರವರ್ನೈಸೇ ನಿನ್ನ ನೇವೇದ್ಯ
ಘನ್ನ ಮಂಗಳಾರುತಿ ಬೆಳಗಿ ನಿನ್ನ ಸ್ತುತಿ ಮಾಡುತ್ತ
ನಿನ್ನ ತೀರ್ಥವನ್ಹಂಚುವರೊ ಭಕ್ತರಿಗೆಲ್ಲ ಶ್ರೀ ಶ್ರೀನಿವಾಸ ೭

ಏನು ಸುಕೃತವ ಮಾಡಿ ಈ ಮಾನುನೀಯರು ಪುಟ್ಟಿಹರೊ
ಗಾನಲೋಲನೆ ನಿನ್ನ ಲೀಲೆ ಜಗಕೆ ಬೇರೆ ತೋರೆ ಮನಸಾರೆ
ಸಾನುರಾಗದಿ ಬಂದು ನಿನ್ನ ಭಕ್ತರಾ ಮಂದಿರಕೆ
ದೀನನಾಥನೆ ನಿನ್ನ ಸಹಿತದಲಿ ಮಾನುನಿಯು
ದಾನವಾಂತಕ ನಿನ್ನ ಮಹಿಮೆ ತೋರುವರೊ
ಏನೆಂದು ಬಣ್ಣಿಸಲಿ ಎನ್ನಳವೇ ಶ್ರೀ ಶ್ರೀನಿವಾಸ ೮

ಒಬ್ಬೊಬ್ಬ ಭಕ್ತರಲಿ ಒಂದೊಂದು ಮಹಿಮೆಯನು
ಅಬ್ಬರದಿ ತೋರುವರೊ ನಿನ್ನ ಮಹಿಮೆಯ ದೇವ
ಮತ್ತೊಬ್ಬರಾ ಮನೆಯಲ್ಲಿ ಪ್ರಸಾದದಾ ಮಹಿಮೆಯನು
ಮತ್ತೊಬ್ಬರಾ ಮನೆಯಲಿ ತೀರ್ಥದಾ ಮಹಿಮೆ ತೋರಿ
ಅಬ್ಬರದಿ ಮೆರೆಸುವರೋ ಶ್ರೀ ಶ್ರೀನಿವಾಸ ೯

ಗಾನ ಪ್ರಿಯನೆ ನಿನ್ನ ಕಲ್ಯಾಣಮುತ್ಸವವು
ಏನೇನು ಮಾಡುವ ಕಾರ್ಯ ನಿನ್ನದೇ ಎಂದು
ಆನಂದದಿಂದ ಮಾಡುವರೊ ಹರಿಯೆ ದೊರೆಯೆ
ದೀನನಾಥ ಎನ್ನ ಹೃದಯದಲಿ ನೀನಿಂತು ನುಡಿದಂತೆ
ನುಡಿದಿರುವೆ ಅನಾಥ ಬಂಧು ಶ್ರೀ ಶ್ರೀನಿವಾಸಾ ಶ್ರೀಶಾ ೧೦

## ೪೩

ನೀಲಮೇಘಶ್ಯಾಮಾ ಬಾರೊ ನೀವೊಂದು ಮುತ್ತ ತಾರೋ ಪ.

ನೀರಜಾಕ್ಷ ನಲಿದು ಬಾರೊ ನಗೆಮೊಗವನ್ನೆ ತೋರೊ ಅ.ಪ.

ನಿನ್ನ ಸಮರ್ಯಾರೊ ಕೃಷ್ಣಾ ಸನ್ನುತಾಂಗ ಓಡಿ ಬಾರೋ
ಬೆಣ್ಣೆಕೋಲು ಬೆಂಡು ಬುಗುರಿ ಚಿನ್ನ ರನ್ನ ಕೊಡುವೆ ಬಾರೋ ೧

ಮುತ್ತಿನಂಗಿ ಕೊಡಿಸುವೇನೂ ರತ್ನತಿಲಕವಿಡುವೆ ಬಾರೋ
ವತ್ತಿ ನಿನ್ನ ಬಾಯೊಳೂದೆ ರತ್ನ ಕೊಳಲ ಕೊಡುವೆ ಬಾರೋ ೨

ಸ್ವರ್ಣಮಯೂರಂಗವ ತೋರೊ ನೀಲವರ್ಣಾ ಚಂದ್ರಬಿಂಬ
ಕರ್ಣಕುಂಡಲ ಬೆಳಕಾ ತೋರೊ ಕಣ್ಣ ತುಂಬಾ ನೋಡುವೆ
ಬಾರೋ ೩

ಭಕ್ತಿ ಸುರಧೇನುಬಾರೊ ಮುಕ್ತಿದಾತ ಶ್ರೀ ಶ್ರೀನಿವಾಸ
ನಿನ್ನ ನೋಡಿ ಧನ್ಯಳಾದೆ ಎನ್ನಕಂದಾ ಮಾಧವ ಬಾರೋ ೪

## ೪೪

ನೋಡಿ ದಣಿಯೆನೊ ರಂಗ ನಾ
ಹಾಡಿ ದಣಿಯೆನೊ ನಾ
ಜೋಡು ಕುಂಡಲಧರ ನೀನಾಡಿದಾಟಗಳೆಲ್ಲ ಪ.

ದೇವಕಿ ನಿನ್ನ ಬಾಲಲೀಲೆ ತೋರೆನಲಾದೇವ
ಮೊಸರ ಭಾಂಡವನೊಡೆದ
ಭಾವಜನ್ನಯ್ಯ ಕಡೆಗೋಲು ನೇಣಿನ ಸಹ
ರುಕ್ಮಿಣೀದೇವಕಿಗ್ಗರುಷವನಿತ್ತು ೧

ಅಂದು ಯಶೋದೆ ನಿನ್ನ ಅಂದದ ಮದುವೆಯ
ತಂದು ತೋರೆನೆ ವೇಂಕಟನಾಗಿ
ಕಂದನೆನಿಸಿ ಬಕುಳೆಗೆ ಮದುವೆಯ
ಅಂದದಿ ತೋರಿದೆ ತಂದೆಯಾದವ ಕೃಷ್ಣ ೨

ತೊಡೆಯಲೆತ್ತಿ ನಿನ್ನ ಸಡಗರದಿಂದಲಿ
ಇಡುವಳೊ ಸಕಲಾಭರಣಗಳ
ಮೃಢಸಖ ಶ್ರೀ ಶ್ರೀನಿವಾಸನೆ ಎನ್ನನು
ಕಡೆಹಾಯಿಸೆಂದು ಬಿಡದೆ ಧ್ಯಾನಿಪಳೊ ೩

## ೪೫

ನೋಡೆಲೆ ಸುಮತಿ ಪೆಣ್ಮಣಿಗೊಲಿದ
ಗಾಡಿಗಾರ ಚೋರ ರೂಢಿಗೆ ರಂಗ ಪ.

ಈಡುಂಟೇ ಶತ ಜೋಡಿಶೆ ಶಿಶುಗಳ
ಬೇಡ ಪಂಥ ನಿನ್ನ ಬೇಡಿಕೊಂಬೆನೆ ಕುಮತಿ ಅ.ಪ.

ಅಪ್ರಾಮೇಯನ ಗುಡಿಯೊಳಗಿದನೆ
ಸುಪ್ರಕಾಶ ಎನ್ನಪ್ಪಾ ಮುಂಗುರುಳುಗಳೊ
ಳೊಪ್ಪುತಲಿಹನೆ ಬೆಡಗಿಂದೊಡನೆ
ಅಪ್ಪನ ಬ್ರಹ್ಮಗಂಟುಡಿದಾರ ಉಡುಗೆಜ್ಜೆ ಬೊಮ್ಮ
ನಪ್ಪ ಅಂಬೆಗಾಲಿಕ್ಕಿ ನೆಲಸಿಹನೆ ಕಂ
ದರ್ಪ ಕೋಟಿ ತೇಜದಿ ಮೆರೆವನ ೧

ಅರವಿಂದದಳ ವೆಂಕಟನಿರುವಲ್ಲೆ
ತಿರುಮಲ ನಾರಾಯಣ
ಚರಿತಾಪ್ರಮೇಯ ಚೆನ್ನಪಟ್ಟಣ ತೀರ ಮುಳೂರಲ್ಲೆ
ಸರಸ ಸಂಚರಿಸುವ ವರ ಚೈತ್ರದ ರಥ
ಅರಿವಿಲ್ಲವೆ ಕಣ್ತೆರೆದು ನೋಳ್ಪರಿಗೆ
ದುರಿತ ದೂರ ಕಣಿ ವರಪ್ರದ ದೇವ
ಅರಿದವರಿಗೆ ಕಣ್ ತೆರೆವನು ದೇವ ನೋಡೆ ೨

ಅಪ್ಪ ಕೃಷ್ಣಗೆ ಬೆಣ್ಣೆ ಹಣ್ಣನುಗೊಡಲು
ಇಪ್ಪನೆ ತನಯರನು
ಸುತ್ತೇಳು ಲೋಕದಿ ನೋಡಲು ಇಲ್ಲೆಲ್ಲೆಲ್ಲೂ
ಶಿಶು ಇವನಲ್ಲೇ ಅಪ್ಪ ಶ್ರೀ ಶ್ರೀನಿವಾಸ ಒಪ್ಪನೋ
ತಪ್ಪನೆಲ್ಲವಪ್ಪಿಪ್ಪನೊ ಕರುಣವ
ಸರ್ಪಶಯನ ತಿಮ್ಮಪ್ಪನ ಕರುಣ
ಒಪ್ಪ ತೆರದಿ ಸ್ತುತಿ ಮಾಡುವ ಬಾರೆ ೩

೪೬

ಪಯಸಾಗರ ಶಯನನೆ ಭಜಿಪೆನು ನಿನ್ನ
ಭವಸಾಗರದಾಟಿಸು ಶ್ರೀಹರಿ ಎನ್ನ ಪ.

ಹಿಂದೆ ಮುಂದೆ ಗತಿ ನೀನೆಂದು ನಂಬಿರುವೆ
ಇಂದಿರೆಯರಸನೆ ಎಂದಿಗಾದರು ಕಾಯೊ ತಂದೆ
ಬಂದು ಎನ್ನ ಬಂಧನ ಬಿಡಿಸೊ ೧

ಕರುಣಾಸಾಗರ ವರದಮೂರುತಿ ನಿನ್ನ
ಸ್ಮರಣೆಯೆನಗೆ ನೀ ನಿರುತದಿ ನುಡಿಸು
ಪರಮಪಾಮರನಿಗೆ ನಿನ್ನ ಚರಣವ ತೋರೊ ೨

ಪುಟ್ಟಿಸಿದವನೀ ಕಷ್ಟ ಪಡಿಸುವುದು
ಇಷ್ಟವೆ ನಿನಗದು ಕೃಷ್ಣಮೂರುತಿ
ಸೃಷ್ಟೀಶ ಶ್ರೀ ಶ್ರೀನಿವಾಸ ದೊರೆಯೆ ೩

## ೪೭

ಪಾಹಿ ಶ್ರೀ ನರಸಿಂಹಾ ಪಾವನ್ನ ಮಾಡೆನ್ನಾ ನರಹರಿ ಪ.

ಅತಿಶಯವಾದ ಪಿತನ ಬಾಧೆಗೆ ಸುತ ಪ್ರಹ್ಲಾದ
ಖತಿಯಿಂದ ಕೂಗೆ ದಿತಿಸುತನ ಅಸುನೀಗೆ ಉದಿಸಿದೆಯೊ ೧

ಸ್ಥಂಭದಿಂದುದಿಸ್ಯವನ ಡಿಂಭವ ಬಗೆದು
ಅಂಬುಜಾಕ್ಷ ಕರುಳಾ ಹಾರವ ಧರಿಸೇ
ಅಂಬರದೀ ಸುರರೆಲ್ಲಾ ಸ್ತುತಿಗೈಯ್ಯೆ ೨

ಕಂದನ ಸಲಹಿದ ತಂದೆ ಶ್ರೀ ಶ್ರೀನಿವಾಸ
ನಿಂದು ನಾ ಪ್ರಾರ್ಥಿಪೆ ಬಂಧನ ಬಿಡಿಸಿ
ಬಂದು ನೀ ಕಾಯೊ ಶ್ರೀ ಹರಿಯೆ ೩

## ೪೮

ಪೀಠಕೀಗ ಬಾರೊ ದೇವನೆ ಆದ ಪಾಠ ಸಾಕೊ ಕೃಷ್ಣನೆ ಪ.

ಮುತ್ತಿನಾಭರಣವ ತೊಡಿಸುವೆನು
ಕಸ್ತೂರಿ ತಿಲಕವ ತಿದ್ದುವೆನೊ ಕೃಷ್ಣ
ಮಸ್ತಕದರಳೆಲೆ ಮಾಗಾಯಿ ಪೊಳೆಯುತ
ಕಸ್ತೂರಿ ರಂಗ ಬಾರೊ ೧

ಕಂಗಳಿಗೆ ಕಪ್ಪು ಹಚ್ಚುವೆನೊ
ರಂಗಗೆ ಪೀತಾಂಬರುಡಿಸುವೆನೊ
ಮಂಗಳಾಂಗಗೆ ನಾ ಶೃಂಗಾರ ಮಾಡಿ
ಕಂಗಳಿಂ ನೋಡುವೆನೊ ೨

ಕಾಲಲಂದಿಗೆ ಗೆಜ್ಜೆ ಘಳಿರೆನುತ
ನೀಲಮೇಘ ಶ್ಯಾಮ ಶ್ರೀ ಶ್ರೀನಿವಾಸ
ಬಾಲ ಗೋಪಾಲ ಸುಶೀಲ ಮುರಳಿಧರ
ರಮಾಲೋಲ ಶ್ರೀ ಕೃಷ್ಣ ಬಾರೋ ೩

## ೪೯

ಪೂರ್ವದಲಿ ಸೂರ್ಯಾಂತರ್ಯಾಮಿಯಾಗಿ
ನಾರಾಯಣ ಉದಿಸುವನೆಂದು
ಪೂರ್ವಜರು ಎದ್ದು ಹರಿಧ್ಯಾನ ಮಾಡುವರು
ಆ ಪೂರ್ವಾಂತರ್ಯಾಮಿ ಅವರ ಸಲಹಲು ಸರ್ವದಾ ಅಪೂರ್ವ
ತೇಜೋವಂತನಾಗಿ ಅವರ ಹೃದಯದಿ
ಸೂರ್ಯತೇಜದಿ ಮೆರೆಯುತಿರುವ ಸರ್ವದಾ ಎಂದು
ಅಪೂರ್ವ ಜ್ಞಾನದಿ ನೆನೆಯುತಿರಿ
ಶರ್ವಾದಿವಂದಿತ ಶ್ರೀ ಶ್ರೀನಿವಾಸನ್ನ ನೆನದು ಸುಖಿಯಾಗಿ
ಹರಿಭಕ್ತರು ೧

ಎದ್ದು ಮುಖ ತೊಳೆದು ನಿಮ್ಮಲ್ಲಿದ್ದ ಕಲ್ಮಷ ತೊಳೆದು
ನಿಮ್ಮ ಶುದ್ಧ ಮನದಲಿ ನೆನೆದು ನಿಲಿಸಿ ಹರಿ ಧ್ಯಾನದಿ
ಸ್ನಾನಾನ್ಹಿಕಬದ್ಧಕಂಕಣರಾಗಿ ಬ್ರಾಹ್ಮೀಮುಹೂರ್ತದಲಿ ಗೈಯೆ
ನಿಮ್ಮಲ್ಲಿದ್ದ ಕಲ್ಮಶವೆಲ್ಲ ಕಳೆದತಿ ಹರ್ಷವೀವ
ನಿಮ್ಮ ಶುದ್ಧಾಚರಣೆಗೆ ಮೆಚ್ಚಿ ನಿಮ್ಮ ಭಕ್ತಿಗೆ
ಶ್ರೀ ಶ್ರೀನಿವಾಸನೆಂದರಿತು ನಿತ್ಯ ಬದ್ಧ ಕಂಕಣರಾಗಿ ಸ್ತುತಿಸೆ
ನಿತ್ಯ ಹರಿ ಭಕ್ತರು ೨

ಮಧ್ಯಾನ್ಹದಲಿ ಯಿಂದು ಮಣಿಕರ್ಣಿಕೆಯ ನೆನೆದು
ಮಾಧ್ಯಾನ್ಹಿಕಾದಿಗಳಾಚರಿಸುತ ಹರಿಯ
ಮಧ್ಯವರ್ತಿಯನೆನಿಸಿ ಆ ಸೂರ್ಯನಂತರ್ಯಾಮಿ ನಾರಾಯಣನಿ-
- ಗರ್ಘ್ಯಪಾದ್ಯವನಿತ್ತು ಸುಭೋಜನವ ಮಾಡಿ

ನಿಮ್ಮ ಪೂರ್ವಜರನುಗ್ರಹದಿ ಮಜ್ಜನ್ಮಸಾರ್ಥಕವೆಂದಾವನರಿವನೋ
ಅವನ ಹೃದಯ ಮಧ್ಯವರ್ತಿಯಾಗಿದ್ದು ಕಾವ
ಸದ್ಗುಣೋಪೇತ ಭಕ್ತರ ಕೈ ಬಿಡ
ಮಧ್ವಾಂತರ್ಗತ ಶ್ರೀ ಶ್ರೀನಿವಾಸ ಅವನ ಮನದಿ ನೆನೆಯಿರಿ
ಹರಿ ಭಕ್ತರು ೩

ಜವನ ಬಾಧೆಯು ಇಲ್ಲ ಹರಿ ಭಕ್ತರಿಗೆ
ಯವನ ರೂಪದ ಕಲ್ಕಿ ಹರಿಯ ನೆನೆವರಿಗೆ
ಜವದಿ ಯಮನಾಳ್ಗಳು ಮುಟ್ಟಲಂಜುವರು ಹರಿಭಕ್ತರನು
ಕವಿ ನಾರಾಯಣನ ಧ್ಯಾನಿಪರಿಗೆ ಅವನಿಯೊಳು ಭಯವಿಲ್ಲ
ಅವರಿಗೆ ಸಮನಿಲ್ಲ ಅವರಲ್ಲಿ ಹರಿಯಿದ್ದ ಕಾರಣದಿ
ಜವದಿ ಹರಿ ದಾಸರೆಲ್ಲ ಶ್ರೀ ಶ್ರೀನಿವಾಸನ ಭಕ್ತರ
ಸಂಗದೊಳಿರಿ ಹರಿಭಕ್ತರು ೪

ಯಾರ ಭಯವಿಲ್ಲ ಹರಿ ನಾಮಕೆ
ದಾರಿ ಹೋಕರು ಬಾರರಿದಕೆ
ಭಾರವಿಲ್ಲವು ಮನಕೆ ಸಂಸಾರಭಯವಿಲ್ಲವರಿಗೆ
ಹರಿ ಎಂಬುದನೆ ಸಕಲ ಕಾರ್ಯವ ನಿರ್ವಹಿಸುವನೆಂದರಿತವರಿಗೆ
ಯುಕುತಿ ಬುದ್ಧಿಯು ಯಾತಕೆ ಯಾರ ಭಯವೇಕೆ
ಹರಿಸಖರಾಗಿರಲವರಿಗೆ ಅಂಜಿಕೆಯಾಕೆ
ಯಾರನಾಶ್ರಯಿಸುವ ಶ್ರಮವಿಲ್ಲ ಇದನರಿತು ಹರಿಭಕ್ತರು
ಶಕುನ ಅಪಶಕುನವೆನ್ನರು ಮನದಿ
ಯುಕುತಿಯ ಮಾಡರು ಪರರ ಬೇಡೆ ಶ್ರೀ ಶ್ರೀನಿವಾಸ ಭಕ್ತರು
ಅವರ ಮತ ಹಿಡಿದು ಬದುಕಿ ಹರಿಭಕ್ತರು ೫

ಜತೆ

ಕರುಣಾಕರ ಹರಿಭಕ್ತರಭಿಮಾನಿ ವರದಭಯ
ಹಸ್ತವ ಕೊಡುವ ಶ್ರೀ ಶ್ರೀನಿವಾಸ

## ೫೦

ಪೆಪ್ಪರ್ ಮೆಂಟ್ ಪೆಪ್ಪರ್ ಮೆಂಟ್ ಪೆಪ್ಪರ್ ಮೆಂಟ್
ವರ ಪೆಪ್ಪರ್ ಮೆಂಟ್
ಚಪ್ಪರಿಸಲು ಬೇಕಾದವರು ಬನ್ನಿ
ಇಪ್ಪುದು ಮಧ್ವಾಚಾರ್ಯರಲ್ಲಿದು ಪೆಪ್ಪರ್ ಮೆಂಟ್ ಪ.

ಚೀಪೂತಲಿದ್ದರು ಸವೆಯುವದಲ್ಲವು
ಆಚಾರ್ಯರವರ ಪೆಪ್ಪರ್ ಮೆಂಟ್
ಜಾತಿ ಭೇದವಿಲ್ಲ ಇದಕೆ ಭಕ್ತಿ ಕಾರಣ
ನೀತಿ ಶಾಸ್ತ್ರಾಮೂಲಾಧಾರದ ಪೆಪ್ಪರ್ ಮೆಂಟ್ ೧

ಕಾಸಿಗೆ ಸಿಗದು ಪೆಪ್ಪರ್ ಮೆಂಟ್
ಸೂಸಿ ಉಕ್ಕುವೊ ಪೆಪ್ಪರ್ ಮೆಂಟ್
ಸಾಸಿವೆಯಷ್ಟೊತ್ತು ನೆನದರೆ
ಸಾಕೆಂಬ ಕಲಿಯುಗ ಮಹಿಮೆಯ ಪೆಪ್ಪರ್ ಮೆಂಟ್ ೨

ಆಕುಲ ಈಕುಲ ಇಲ್ಲವೆಂಬುದನರಿಸಲು
ಬೇಕಾದಂತಹ ಪೆಪ್ಪರ್ ಮೆಂಟ್
ನಾಲ್ಕು ವೇದವನೊಂದೇ ಬಾರಿಗೆ
ನಾಲ್ಕು ಹಸ್ತದಿ ತಂದ ಪೆಪ್ಪರ್ ಮೆಂಟ್ ೩

ನಾಕಚಾರವಂದ್ಯನ ಸ್ತುತಿಗೊದಗುವ
ಅನೇಕ ರೂಪದ ಪೆಪ್ಪರ್ ಮೆಂಟ್
ಸಾಕುವ ಭಕ್ತರಿಗಮೃತನೆರೆವ
ಸಾಕಾರ ರೂಪದ ಪೆಪ್ಪರ್ ಮೆಂಟ್ ೪

ಭೂಮಿಯ ತಂದ ಸೂಕರ ರೂಪ
ದ ದಿವ್ಯ ಪೆಪ್ಪರ್ ಮೆಂಟ್
ಭುವಿಯೊಳ . . . . . .
ಮೊರೆಯ ತೋರಿದ ಪೆಪ್ಪರ್ ಮೆಂಟ್ ೫

ಧರಣಿಯ ಪಾದದಿಂದಾಕಾಶಾಪಾತಾಳಾತ್ವರ
ಮೂರು ಪಾದದ ಪೆಪ್ಪರ್ ಮೆಂಟ್
ಧರಣಿ ಪಾಲರ ಉರುಳಿಸಿ ಕೆಡಹಿದ
ಕೊಡಲಿ ಮಹಿಮೆಯ ಪೆಪ್ಪರ್ ಮೆಂಟ್ ೬

ಮಂಗನ ಜೊತೆಯಲಿ ಸೇರಿ ನಾರಿಯ
ಇಂಬನರಿತ ದಿವ್ಯ ಪೆಪ್ಪರ್ ಮೆಂಟ್
ಭೂಜಂಗುಳಿ ನಡುಗಲು ಭೋರ್ಗರೆಯಲು ಮಳೆ
ಪುಟ್ಟ ಕಿರು ಬೆರಳಲಿ ಮಂದರ ನೆಗಹಿದ ಪೆಪ್ಪರ್ ಮೆಂಟ್ ೭

ತ್ರಿಪುರ ಸತಿಯರ ವ್ರತವಳಿಯಲು ತಾ
ಸುಖಮಯ ವಸನರಹಿತದಾ ಪೆಪ್ಪರ್ ಮೆಂಟ್
ಸ್ವಪರಿವಾರ ಸಹಿತ ಹೆಗಲೇರಿದ
ಪರಿಮಿತದ ರುಚಿ ಪೆಪ್ಪರ್ ಮೆಂಟ್ ೮

ಕತ್ತಲೆಯನ್ನು ಹರಿಸುವ ದಿವ್ಯಸೂರ್ಯತೇಜ
ಶತಕಿರಣ ಶೋಭ ಪೆಪ್ಪರ್ ಮೆಂಟ್
ಸಿಕ್ಕದು ಅಧಮರಿಗೆಂದಿಗು ಶ್ರೀ ಶ್ರೀನಿವಾಸನೆಂಬ ಪೆಪ್ಪರ್ ಮೆಂಟ್
ಅರ್ಥಿಲಿ ಬುಧರು ಚಪ್ಪರಿಪ ದಿವ್ಯ ಪೆಪ್ಪರ್ ಮೆಂಟ್ ೯

## ೫೧

ಬಂದಿದ್ದನೆ ರಂಗ ಬಂದಿದ್ದನೆ ಕೃಷ್ಣ ಬಂದಿದ್ದನೆ ಪ.

ಬಂದಿದ್ದನೆ ನಮ್ಮ ಮಂದಿರದೊಳು ಬೆಳ
ದಿಂಗಳ ತೆರದೊಳು ಬಂದಿದ್ದನೆ ಅ.ಪ.

ಗೆಜ್ಜೆ ಕಾಲ್ಕಡಗ ಸಜ್ಜೆನಿಂದಿಟ್ಟು
ಅರ್ಜುನಸಖಕೃಷ್ಣ ಅಜ್ಜಿ ಶಬರಿಗೂಡಿ ರಾಮ
ಯತಿ ಕರ ಪೂಜಿತ ಕ್ಷಿತಿ ತಳ ವಂದಿತ
ಸತಿ ಪದುಮಾವತಿ ಲಕುಮಿ ಸಹಿತ ಕೃಷ್ಣ ೧

ರವಿಯ ಕಾಂತಿ ಕೋಟಿ ಪ್ರಭೆ ಕಿರೀಟವು
ಕಿವಿಯಲಿ ಕರ್ನಕುಂಡಲವು
ಅವನ ವಕ್ಷದಿ ಲಕ್ಷ್ಮಿ ಪೊಳೆವ
ವರದ ಮಾಧವನು ೨

ಚತುರ ಹಸ್ತದಿ ಶಂಖ ಚಕ್ರಗದಾ ಪದ್ಮ
ಸತಿ ತುಳಸಿಯ ಮಾಲಧರನೆ
ಜತೆ ತನ್ನ ಭಕ್ತರ ಹಿತದ ಪೂಜೆಯಗೊಂಡು
ವಿತತ ವೈಭವದಿಂದ ೩

ವರಪ್ರದ ವೆಂಕಟ ವರಗಳ ನೀಡುತ ತನ್ನ
ಚರಣ ತೋರುತ ಭಕ್ತರಿಗೆ
ವರ ಅಭಿಷೇಕದೊಳು ಕೇಸರಿ ತೀರ್ಥವ
ಕರುಣದಿ ತೋರುತ ಕರಿವರದ ಕೃಷ್ಣ ೪

ಪಂಚಾಮೃತದಭಿಷೇಕವ ಕಂಡೆನೆ ಎನ್ನ
ಸಂಚಿತಾರ್ಥದ ಪುಣ್ಯದ ಫಲದಿ
ಮಿಂಚಿದ ಪಾಪವ ಕಳೆದರತಿಹರುಷದಿ
ಹಂಚಿ ವರದ ಹಸ್ತ ಕಂಚಿ ವರದ ತೋರೆ ಬಂದಿದ್ದನೆ ೫

ಕಂಕಣ ಕೈಯೊಳು ಧರಿಸಿಹನೆ ದಿವ್ಯ
ಅಲಂಕೃತ ಹೇಮ ಶೋಭಿತನೆ
ಕಿಂಕರ ವರದ ಮಾಂಗಲ್ಯ ಕಟ್ಟಿದ ಸತಿ
ಶಂಕರಾದಿ ಸ್ತುತ ವೆಂಕಟರಮಣನು ೬

ಸುರವರ ವಂದ್ಯಗೆ ಆರತಿ ಎತ್ತಲು
ವರ ಕೇಸರಿ ತೀರ್ಥವ ನೀಡಿದನೆ
ವರ ಪ್ರಸಾದದ ಮಹಿಮೆಯ ತೋರುತ
ವರದ ಮೂರುತಿ ಶರಧಿ ಗಂಭೀರನು ೭

ಉರುಟಣೆಯ ಮಾಡಿದ ವರಸತಿ ಜತೆಯಲಿ
ವರ ಶೇಷಾಚಲನು ತಾನೆ
ಹರುಷವ ಬೀರುತ ವರ ಶೇಷನ ಮೇಲೆ
ಮೆರೆವ ಶಯನಗೊಂಡು ಹರುಷದಿ ೮

ಗಂಧ ಪುಷ್ಪ ತಾಂಬೂಲವಗೊಂಡನೆ
ತಂಡ ತಂಡ ಭಕ್ತರ ವಡೆಯ
ದಿಂಡುಗೆಡಹುವಂಥ ಉದ್ದಂಡ ಭಕ್ತರಿಗೆ
ತೊಂಡನಾದ ಉದ್ದಂಡ ವೆಂಕಟ ೯

ನಾಟಕಧಾರಿ ತಾ ವಧೂಟಿ ಭೂಪ ಲಕ್ಷ್ಮಿ ಸಹ
ನೋಟಕರಿಗೆ ಆನಂದ ತೋರಿದನೆ
ಧಾಟಿಧಾಟಿ ರಾಗದಿ ಭಕ್ತರು ಸ್ತುತಿಸೆ
ಸಾಟಿಯಿಲ್ಲದ ವೈಭವವ ತೋರುತ ಕೃಷ್ಣ ೧೦

ಕರವ ಮುಗಿದು ಸ್ತೋತ್ರವ ಮಾಡಿದೆನೆ ಎನ್ನ
ಕರೆದಾದರಿಸು ಹರಿಗೆ ನಿರುತ ಎಮ್ಮನು
ಪೊರೆ ಶ್ರೀ ಶ್ರೀನಿವಾಸಗ ದೊರೆಗೆ ಚನ್ನ ಸಿರಿಗೆ ವಂದಿಸಿದನೆ
ಹಯನೇರಿದನೆ ಭಯಕೃದ್ಭಯ ಹಾರಿ ೧೧

## ೫೨

ಪೋಗದಿರೊ ಗೋಪಿಯರ ಮನೆಗೆ
ಬಾ ಬೇಗ ಶ್ರೀ ಕೃಷ್ಣನೆ ನಮ್ಮ ಮನೆಗೆ ಪ.

ನಾಗವೇಣಿಯರಲ್ಲ ಕೂಡುತ ನಿನ್ನ
ಜಾಗು ಮಾಡದೆ ಹಿಡಿವರೊ ಕೇಳ್ ಮುನ್ನ
ಸೋಗಿ ನವಿಲು ಕುಣಿತದ ಸೊಬಗನ್ನ
ಭೋಗಿಸಿ ನಿನ್ನ ಸೆಳೆವರೊ ಮುನ್ನ ೧

ಜಾರ ಚೋರನೆಂದು ಬಹುವಿಧದಿಂದ
ನಾರಿಯರೆಲ್ಲ ದೂರುತಲಿಹರು ಮುನ್ನ
ಸಾರಸಾಕ್ಷ ಕೃಷ್ಣ ಬಾರೆಲೊ ಮುನ್ನ
ಸಾರಿ ಪೋಗಬೇಡವೊ ಎ ಚಿನ್ನ ೨

ಮುದ್ದೆ ಬೆಣ್ಣೆ ಕೊಡುವೆನೊ ನಾ ನಿನಗೆ
ಹದ್ದಿಲ್ಲದ ಗೋಪೇರ ಗೊಡವ್ಯಾಕೊ
ಸುದ್ದಿಯ ತರುವರೊ ನಿನ ಮೇಲೀಗದೂರಿ
ಸದ್ದು ಮಾಡದೆ ಬಾ ಮುದ್ದು ಶ್ರೀ ಶ್ರೀನಿವಾಸ ೩

## ೫೩

ಪೋಗುವೆನೆ ರಂಗ ಪೋಗುವೆನೆ ಕೃಷ್ಣ
ಈಗ ಕರೆ ಬಂದಿದೆ ಮಧುರಾ ಪುರಕ್ಕೆ ಪ.

ಮದಿಸಿದ ಕಂಸನು ಚದುರ ಅಕ್ರೂರನ
ಮುದದಿ ಕಳಿಸಿದ ಮಧುರ ವೇಣಿಯೆ ಕೇಳೆ ೧

ಬಿಲ್ಲು ಹಬ್ಬವಂತೆ ಮಲ್ಲರ ಗೆಲ್ಲಬೇಕಂತೆ ಸಖಿ
ಪುಲ್ಲಲೋಚನ ಕೃಷ್ಣಾ ಇಲ್ಲಿ ನಮ್ಮನು ಬಿಟ್ಟು ೨

ಕಂಗೊಳಿಸುವ ಬೆಳದಿಂಗಳ ಸೊಗವಿಲಿ
ಪೊಂಗೊಳಲೂದೆಮ್ಮಂಗಕೆ ಹರುಷವಿತ್ತ ೩

ನಲಿವಿಲಿ ಮೀಸಲು ಬೆಣ್ಣೆಯನಿಡಲು
ನಿಲುಕಿತ ಮೆದ್ದೆಮ್ಮ ಒಲವಿತ್ತುದ್ಧರಿಸಿದ ೪

ಗೋಕುಲವೇತಕೆ ಆ ಕಮಲಾಕ್ಷನಾ
ಕಟಾಕ್ಷವಿಲ್ಲದೀಪರಿ ಸಹಿಸುದೆ ೫

ಯಮುನೆಯ ತೀರದೊಳ್ ಎಮ್ಮಯ ವಸ್ತ್ರವ
ಕ್ಷಮೆಯಿಂದಿತ್ತ ಕಮಲನಯನ ಕೃಷ್ಣ ೬

ರಥಬಂದಿದೆ ನೋಡೆ ಅತುಳ ಮಹಿಮಗೆಂದು
ಜತೆಯೊಳು ಬಲರಾಮ ಹಿತದಿ ಅಕ್ರೂರ ಸಹ ೭

ಬಿಟ್ಟಿರಲಾರೆವೆ ಪುಟ್ಟ ಕೃಷ್ಣನ ಪಾದ
ದಿಟ್ಟ ಶ್ರೀ ಶ್ರೀನಿವಾಸಗಿಷ್ಟವಂತೆ ಕೇಳೆ ೮

ಭಕ್ತವತ್ಸಲನೆಮ್ಮ ಭರ್ತನೊಳನುರಾಗವಿತ್ತು
ಬಾಳಿರೆಂದು ಇತ್ತು ವಚನವನ್ನು ೯

## ೫೪

ಬಾರೆಲೋ ಬೇಗನೆ ಭಾರತೀಪತಿ ಪ್ರಿಯ
ಸಾರುತ ಬೇಗ ಶ್ರೀ ನಾರಾಯಣ ಪ.

ನಾರದಾದಿ ವಂದ್ಯ ಪಾರುಗಾಣಿಸೆ ಭವ
ಗಾರು ಮಾಡದೆ ಶ್ರೀಶ ಸರ್ವೇಶ ಅ.ಪ.

ಸುಮನಸರೊಡೆಯನೆ ನೀನಾಗಮಿಸಲು
ಸಕಲವು ಸುಗಮವಹುದೆ
ಕಮನೀಯ ರೂಪ ಕಮಲದಳಾಕ್ಷನೆ
ಕಮಲೆಯ ಪ್ರೀಯನೆ ನಿನ್ನಾಗಮನವನೆ ಬಯಸುವೆ ೧

ಭಕ್ತರ ಕಾಯುವ ಯುಕ್ತಿ ನಿನಗೆ ಸರಿ
ಭಕ್ತವತ್ಸಲನೆಂಬೊ ಬಿರುದಿನ ದೇವ
ಶಕ್ತಿ ಸ್ವರೂಪನೆ ಅಶಕ್ತರ ಪೊರೆವಾ
ಸಕ್ತಿಯ ತೋರಿಸೆ ಭಕ್ತರಿದ್ದೆಡೆಗೆ ೨

ಎನ್ನಪರಾಧ ಎಣಿಸಲೆನ್ನಳವೆ
ಪನ್ನಗಾದ್ರಿನಿವಾಸ ಕೃಪೆತೋರೊ
ಸನ್ನುತಚರಿತ ನಿನ್ನ ಪೊರತು ಎನ
ಗನ್ಯರ ಕಾಣೆನಾ ಶ್ರೀ ಶ್ರೀನಿವಾಸ ದೊರೆ ೩

## ೫೫

ಬಾರೋ ಮನೆಗೆ ರಂಗಾ ಕರುಣಾ ಪಾಂಗ ನರಸಿಂಗ ಪ.

ಬಾರೋ ನಿನ ಪರಿವಾರ ಸಹಿತಲಿ ವಾರೆರೊಡಗೂಡಿ ನೀರಜಾಕ್ಷನೆ
ದೂರ ನೋಡದೆ ಎನ್ನ ನೀ ಭವ ಪಾರುಗಾಣಿಸೊ
ಕರುಣಾಂಬುದೆ ಅ.ಪ.

ಪಿಡಿದು ಖಡ್ಗವ ನಿನ್ನ ವಡೆಯನ ತೋರೆಂದು
ಘುಡುಘುಡಿಸಲು ಕಂದ ವಡನೆ ಕೂಗೆ
ಸಿಡಿದು ಕಂಬದಿ ಬಂದು ಅಸುರನ
ವಡಲ ಬಗೆದು ಕರುಳ ಮಾಲೆಯ ಪಿಡಿದು ಧರಿಸುತ
ವಡನೆ ಭಕ್ತನ ಬಿಡದೆ ಸಲಹಿದ ಕಡು ದಯಾನಿಧೆ ೧

ಪಿತನ ತೊಡೆಯಿಂದ ಭೂಪತಿಸತಿ ನೂಕಲು
ಅತಿಭಯದಲಿ ಧ್ರುವ ಖತಿಗೊಳ್ಳುತ
ಪತಿತ ಪಾವನ ನಿನ್ನ ಕಾಣಲು ಮುನಿ
ಪತಿಯು ಪೇಳಿದ ಪಥದಿ ಪುಡುಕೆ
ಅತಿಶಯದಿ ಬಂದ್ವಿತವ ಕೋರಿದ ಗುಣಾನ್ವಿತ ದಯಾಂಬುಧೆ ೨

ಕರಿ ಮೊರೆಯಿಡೆ ಸಿರಿಗ್ಹೇಳದಲೆ ಬಂದು
ಗರುಡ ಗಮನನಾಗಿ ತ್ವರಿತದಿಂದ
ಶರಣಪಾಲಕ ನಿನ್ನ ಚಕ್ರದಿ ತರಿದು
ನಕ್ರ ನಕರಿಯ ಪೊರೆದ ತೆರದೊಳೆನ್ನ
ವಗುಣಗಳೆಣಿಸದೆ ಹರುಷದಲಿ ಶ್ರೀ ಶ್ರೀನಿವಾಸ ೩

## ೫೬

ಬಾರೋ ವೆಂಕಟೇಶ ಬೇಗ
ಬಾರೋ ಎನ್ನ ಮನೆಗೆ ಈಗ ಪ.

ಬಾರೋ ಲಕ್ಷ್ಮೀರಮಣ ಶ್ರೀಶಾ
ಬಾರೋ ಸರ್ವರ ಹೃದಯವಾಸ ಅ.ಪ.

ಸರ್ಪಶಯನಾಗಿ ಬೇಗ ಕ್ಷಿಪ್ರದಿ ಲಕ್ಷ್ಮೀಸಮೇತ ಇರಲೂ
ವಿಪ್ರ ಬಂದೊದೆಯಲಾಗ ವಿಪ್ರನ ಪಾದ ತೊಳೆದ ದಯಾಳೂ ೧

ಕುಂದನೊಂದೆಣಿಸದಂತೆ ಬಂದು ಕಾಯ್ದಜಮಿಳನಿಗೊಲಿದೆ
ತಂದೆ ಬಾಧೆಗೆ ತರಳ ಕೂಗೆ ಬಂದೆ ಸ್ತಂಬದಿ ನಾರಸಿಂಹ ೨

ಕರಿಯು ಕೂಗೆ ಸಿರಿಗ್ಹೇಳದೆಲೆ ಭರದಿಬಂದು ಕಾಯ್ದ ಹರಿಯೆ
ತರುಳೆ ದ್ರೌಪದಿಗಕ್ಷಯವಿತ್ತಾ ಕರುಣವಾರಿದೆ ಶ್ರೀ ಶ್ರೀನಿವಾಸ ೩

## ೫೭

ಬೆಳಗಿಂಝಾವದಿ ಬಾರೊ ಹರಿಯೆ ನಿನ್ನ
ಕಳೆಕಳೆ ರೂಪ ನೋಡುವೆ ಮುಕುಂದ ಪ.

ಭಕ್ತರ ಭಯ ನಿವಾರಣನೆ
ಭಕ್ತಿಲಿ ಕರೆವೆ ಗೋವಿಂದ ನಿನ್ನನೆ
ಭಕ್ತವತ್ಸಲ ನೀನಲ್ಲವೇ ಸ
ದ್ಭಕ್ತರ ಸಲಹೆ ಕಂಕಣ ಧರಿಸಿಹನೆ ೧

ಶ್ರೀ ತುಳಸಿಯ ವನಮಾಲ
ಶ್ರೀ ಕೃಷ್ಣ ನಿನ್ನ ದರ್ಶನದ ಲಾಭ
ಶ್ರೀಶನೆ ಬಯಸುವೆ ದೇವ
ಶ್ರೀರಮೆಯರಸ ದಯಪಾಲಿಸೊ ಕೃಷ್ಣ ೨

ಒಮ್ಮೆಯಾದರೂ ತೋರೋ ರೂಪ ಎನ್ನ
ಕರ್ಮ ಖಂಡನವಹ ತೆರೆದೊಳು ಶ್ರೀಪ
ಬೊಮ್ಮನೈಯ್ಯ ನಿನ್ನ ನೋಡ್ವೆ
ಸುಮ್ಮಾನವ್ಯಾಕೊ ಶ್ರೀ ಶ್ರೀನಿವಾಸ ೩

## ೫೮

ಬೇಕಿಲ್ಲ ಬೇಕಿಲ್ಲ ಇಹಲೋಕಾಡಂಬರವು
ಸಾಕೀ ನಿನ್ನನು ಧ್ಯಾನಿಪ ಪರಲೋಕ ಜ್ಞಾನವನು ಪ.

ಶ್ರೀಪ ಕರುಣಿಸಿ ನಿನ್ನ ಸ್ವಂತ ಜನರನ್ನೂ
ಕಾಪಾಡೊ ದೊರೆಯೆ ಅ.ಪ.

ನಿನ್ನ ಭಕ್ತರ ಸಂಗವನ್ನು ಕೃಪೆದೋರಿ ಸಲಹೊ
ಚನ್ನ ಕೇಶವರಾಯ ಇನ್ನು ಕೃಪೆ ಮಾಡೊ ೧

ಯನ್ನಪರಾಧಗಳನ್ನು ಎಣಿಸುವರೆ ದೇವ
ಸನ್ನುತ ಚರಿತ ಭಕ್ತ ಸನ್ಮಾನಯುತ
ನಿನ್ನ ಮಹಿಮೆಗಳನ್ನು ವರ್ಣಿಸಲಳವೆ
ಮುನ್ನ ಶೇಷಾನಿಂದ ಸೇವ್ಯವಾಗಿರಲೂ
ಯನ್ನಿಂದಾಡಿಸಿ ನೀನು ಸನ್ಮಾನಕೊಂಡು
ನಿನ್ನಾ ಭಕ್ತಳೆಂದು ಸ್ತುತಿಗೊಂಡು ನಲಿನಲಿದೆ ೨

ಯೆನ್ನಿಂದೇನಹುದೋ ಮನ್ಮನದೊಡೆಯ
ಚನ್ನ ಶೇಷಾದ್ರಿನಿವಾಸ ಘನ್ನ ಶ್ರೀ ಶ್ರೀನಿವಾಸ
ನೀನೇ ಆಡಿಸುತ ನೀನೇ ಮಾಡಿಸುತ
ದಾಸಿ ನೀನಾಗಿರೆ ನಾನೇನ ಬಲ್ಲೆನೊ ೩

## ೫೯

ಭೂರಿ ಕರುಣಾಕರನೋ ಸಾರುವ ತೆರೆದೊಳು
ತೋರಿಹ ಭಕ್ತರ ಪ.

ಅಗಣಿತ ಮಹಿಮನ ಪೊಗಳುವೆ ನಾನೆಂತು
ಬಗೆ ಬಗೆ ರೂಪದಿ ಸಿಗದೆಸಿಗುವ ಹಾಂಗೆ
ಪೊಗಳಿಸಿಕೊಂಡು ತಾ ಝಗಝಗಿಸುತ ಬಹ
ನಗೆಮೊಗ ಚೆನ್ನಿಗ ನಿಗಮಗೋಚರ ಕೃಷ್ಣಾ ೧

ಭಕ್ತ ಪ್ರಹ್ಲಾದಗೆ ಅತ್ಯಧಿಕ ಹಿಂಸೆ
ಯಿತ್ತ ಪಿತನ ಕೊಂದು ಇತ್ತ ಮುಕುತಿ ಅವ
ನತ್ಯಪರಾಧವನೆತ್ತಾಡಿದನೇ
ಚಿತ್ತಜನೈಯ್ಯನು ಭಕ್ತವತ್ಸಲ ದೇವ ೨

ಅಣುರೇಣು ತೃಣಕಾಷ್ಠ ಪರಿಪೂರ್ಣ ನೀನೆಂದು
ಕ್ಷಣ ಬಿಡದಲೆ ಗಜರಾಜನು ಸ್ತುತಿಸೆ
ಅನುವಿಲಿ ಚಕ್ರದಿ ನಕ್ರನ ಹರಿಸಲು
ದಣಿದ ಹರಿಗೆ ಗಜರಾಜನೇನಿತ್ತನೋ ೩

ಭಕ್ತರ ಮನದಘ ನಿತ್ಯದಿ ಕಳೆದನೋ
ಅಶಕ್ತ ಅಜಮಿಳನೆಮ ಭೃತ್ಯರೆಳೆಯಲು
ಇತ್ತು ನಾರಗನುಡಿ ಮತ್ತೆ ಯಮಭಟರ
ಇತ್ತ ಮುಕುತಿ ದೇವ ಅತ್ಯಧಿಕ ೪

ಮೂಗುತಿ ನೇವದೊಳು ಸಾಗಿಸಿ ಭಾಗ್ಯವ
ಜಾಗರ ಮೂರುತೆ ಯೋಗಿಗಳರಸನು
ಬಾಗಿಸಿ ತನ್ನವರಾಗಿಸಿ ದಾಸರ
ಭೋಗಿಶಯನ ಶ್ರೀ ಶ್ರೀನಿವಾಸನು ದೇವ
ಸರ್ವರ ಅನುರಾಗದಿ ಸಲಹುವ ೫

## ೬೦

ಮಂಗಳಾಂಗನ ಭಜಿಸೆ ಹಿಂಗಿಸುವ ಭವವ
ಎನ್ನಂಗದೊಳಡಗಿಹನೊ ಶ್ರಿಂಗಾರ ಮೂರುತೀ ಪ.

ಧ್ಯಾನಕೆ ತಂದು ನಿಧಾನದಲಿ ಯೋಚಿಸು
ಜ್ಞಾನಿಗಳರಸನ ಮಾನಸದೊಳಗೆ
ಕಾನನದೊಳು ವೃದ್ಧ ಶಬರಿಯೆಂಜಲನುಂಡು
ದಾನಶೀಲನು ರಾಮ ಕೈವಲ್ಯವನಿತ್ತಾ ೧

ದುಷ್ಟ ಕಂಸನ ಹರಿಸಲು ಉತ್ಕೃಷ್ಟ ಕೃಷ್ಣ ಬರೆ
ಸೃಷ್ಟಿಗೊಡೆಯಗೆ ಗಂಧವಿತ್ತಳಾ ಕುಬ್ಜಿ
ದಿಟ್ಟ ರೂಪವ ಉಂಗುಷ್ಠದಿಂದೊತ್ತುತ್ತ ಭಕ್ತ
ರಿಷ್ಟವನು ಸಲಿಸಲು ಕಷ್ಟವೇ ಹರಿಗೆ ೨

ಯಾವಾಗ ಸ್ತುತಿಸಿದರು ಮತ್ತಾವಲ್ಲಿ ಕರೆದರೂ
ಧಾವತಿಗೊಂಡು ಬಹ ಶ್ರೀ ಶ್ರೀನಿವಾಸ
ಹಾವಭಾವದ ತೆರದಿ ದೇವ ಬಂದೊದಗುವ
ಮತ್ತಾವ ದೇವರ ಕಾಣೆ ಶ್ರೀವರನಲದೇ ೩

## ೬೧

ಮಂದರೋದ್ಧಾರಾನಂದನ ಕಂದ ಬಾ ಬೇಗಾ
ನಿನ್ನ ಸುಂದರಾನನಾನಂದದಿ ನೋಳ್ಪೆ ಬಾ ಬೇಗಾ ಪ.

ಮದನ ಮೋಹನ ಚದುರ ಶ್ರೀ ಕೃಷ್ಣ ಬಾ ಬೇಗ
ಸುದತಿಯೇರ ಮುದವಿಹಾರ ಮದಸೂದನ ಕೃಷ್ಣ ಅ.ಪ.

ಕಸ್ತೂರಿತಿಲಕ ಶಿಸ್ತಲಿ ಪೊಳೆಯೆ ಬಾ ಬೇಗಾ, ನಿನ
ಮಸ್ತಕದರಳೆಲೆ ಶಿಸ್ತನು ನೋಳ್ಪೆ ಬಾ ಬೇಗಾ

ಹಸ್ತದಿ ಕಡಗ ಕಂಕಣ ಶೋಭಾ ಬಾ ಬೇಗಾ
ಶಿಸ್ತಿನಿಂದ ಕೊಳಲನೂದೆ ಹಸ್ತಿವರದನೆ ೧

ಕೊರಳೊಳು ತುಲಸಿಮಾಲಾ ಶೋಭಾ ಬಾ ಬೇಗಾ
ನಿನ ಮುಂಗುರುಳು ಕೂದಲೊಳು ಮೆರೆವ ಕಿರೀಟ ಬಾ ಬೇಗಾ
ಸರ ವೈಜಯಂತಿ ಮಾಲಾ ಶೋಭಾ ಬಾ ಬೇಗಾ
ಸರಿಯಾರೊ ಜಗದಿ ನಿನಗೆ ವರ ಶ್ರೀ ಶ್ರೀನಿವಾಸ ೨

## ೬೨

ಮುರಳಿಯನೂದುವನಾರೆ ಸಖಿ ಇವ
ನಾರೆ ಸಖಿ ಪ.

ಪರಮಪುರುಷನಿವ ಕೇಳೆ ಸಖಿ ಅ.ಪ.

ಕೆಂದಾವರೆಯಾ ಕರೆದೊಳು ಕೊಳಲಾ
ನಂದದೊಳೂದುವನಾರೆ ಸಖಿ ಇವ
ಚಂದ್ರವಂಶೋದ್ಭವ ಗುಣಸಾಂದ್ರ ಶ್ರೀ ಕೃಷ್ಣಾ
ನಂದನ ಕಂದನಿವ ಕೇಳೆ ಸಖಿ ೧

ಕಂಗೊಳಿಸುವ ಬೆಳದಿಂಗಳ ಸೊಬಗಿಲಿ
ಶ್ರೀಂಗಾರ ಪುರುಷನಾರೆ ಸಖಿ ಇವ
ಮಂಗಳ ಮೂರುತಿ ಜನಂಗಳಿಗೊಡೆಯ
ರಂಗನಾಥನಿವ ಕೇಳೆ ಸಖಿ ೨

ಕೊರಳೊಳು ಧರಿಸಿಹ ವರ ತುಳಸಿಯ ಸರ
ವರ ಕೌಸ್ತುಭಧರನಾರೆ ಸಖಿ ಇವ
ಕರೆದಾದರಿಶಿ ಭಕ್ತರ ಸಲಹುವ
ವರದ ಶ್ರೀ ಶ್ರೀನಿವಾಸ ಕೇಳೆ ಸಖಿ ೩

## ೬೩

ಯಮುನಾತೀರದಿ ಕೊಳಲೂದಿ ಕೃಷ್ಣಾ ಪ.

ರಮಣಿಯರ ಮನ ಸೆಳೆವನೆ ಕೃಷ್ಣಾ ಅ.ಪ.

ಮನೆಗೆಲಸವು ಕೈ ಜಾರುತಲಿಹುದೇ
ಸುಮಶರನ್ಹೈಯ್ಯನು ಕೊಳಲೂದೆ ಸಖಿ ೧

ತನ್ನಯ ಕರದೊಳ್ ರನ್ನದ ಕೊಳಲೊಳ್
ಚನ್ನಿಗರಾಗದೊಳೂದೆ ಸಖಿ ೨

ಭೋಗಿಶಯನೆ ಶ್ರೀ ಶ್ರೀನಿವಾಸ ಧೊರೆ
ಅನುರಾಗದಿ ಕರೆವಾ ಕೊಳಲೂದಿ ಸಖಿ ಎಮ್ಮ
ಅನುರಾದಿ ಕರೆವಾಕೊಳಲೂದಿ ಸಖಿ ೩

## ೬೪

ರಘುರಾಮಗೆ ಬೆಳೆಗಿರೆ ಬೇಗ ಆರತಿ ಪ.

ದಶರಥಪುತ್ರಗೆ ಪಶುಪತಿ ಮಿತ್ರಗೆ
ಋಷಿಗಳ್ಯಾಗವ ಕಾಯ್ದವಗೆ
ಶಶಿಮುಖಿ ಅಹಲ್ಯೆ ಶಾಪವ ಕಳೆದ
ಅತುಳ ಮಹಿಮ ಶ್ರೀಹರಿಗೆ ೧

ಶಿವನ ಧನುವ ಮುರಿದವನಿಜೆಯಳ ತಂದು
ಜವದಿ ಪರಶುರಾಮನಿಗೆ
ತವಕದಿ ಗರ್ವವ ಮುರಿದವನೀಶಗೆ
ಕಮಲಾಕ್ಷಿಯರೀಗ ಬೇಗಾ ೨

ಅನುಜನವಡಗೂಡಿ ವನಿತೆ ಸಹಿತಲೀ
ವನಕೆ ಪೊರಟು ಅಂಜನೆಯ

ತನುಜನಗೂಡಿದನುಜನ ಮುರಿದ
ಘನದ ಶ್ರೀ ಶ್ರೀನಿವಾಸನಿಗೆ ೩

## ೬೫

ರಾಮದೂತನಪಾದ ತಾಮರಸವ ಕಂಡ
ಆ ಮನುಜನೆ ಧನ್ಯನು ಪ.

ದೇಶ ದೇಶದಿ ಭಕ್ತರು ಬಂದು ನಿನಗೆ
ಸೋಸಿಲಿ ಹರಕೆಗಳ ಸಲಿಸುವರೊ
ಏಸು ಮಮತೆಯಿಂದವರ ಕಷ್ಟಗಳನು
ಘಾಸಿ ಪಡಿಸದಲೆ ಪರಿಹರಿಪ ವೆಂಕಟನ ೧

ಎಷ್ಟೆಂದು ಪೊಗಳಲೊ ದಿಟ್ಟ ಮೂರುತಿ ನಿನ್ನ
ಉತ್ಕೃಷ್ಟ ರೂಪ ಲಾವಣ್ಯಗಳಾ
ಇಷ್ಟ ಮೂರುತಿ ಶ್ರೀ ಶ್ರೀನಿವಾಸ ಧೊರೆ
ಶ್ರೇಷ್ಟ ಭಕ್ತರನೆಲ್ಲ ಪೊರೆವ ವೈಕುಂಠಪತಿ ೨

## ೬೬

ರಾಮ ನಿನ್ನಯ ಚರಿತೆ ರಘು
ರಾಮ ನಿನ್ನಯ ಚರಿತೆ ಪ.

ಪ್ರೇಮದಿ ಭಜಿಸಲು ಕ್ಷೇಮವಹುದು ರಘುರಾಮ ಅ.ಪ.

ದಶರಥ ಪುತ್ರ ಕೌಶಿಕನ್ಯಾಗ ಕರ್ತ
ಪಶುಪತಿ ಧನುಭಂಗ ಜಾನಕೀಪತಿ ರಘು ೧

ಪರಶುರಾಮನ ಗರ್ವಮುರಿದ
ವರ ಮಾತೆ ವಾಕ್ಯವ ಸಲಿಸೆ ಕಾನನಕೈದ ರಘುರಾಮ ೨

ದಶಶಿರ ಸೀತೆಯ ಕದ್ದೊಯ್ಯಲು ಅರಸುತ
ಭಾರತಿ ಪತಿ ಹನುಮಗುಂಗುರವಿತ್ತ ಧೀರ ೩

ಶರಧಿಯ ಲಂಘಿಸಿ ವರಹನುಮನು ತನ್ನ
ಕರದಲಿಯದ ವರ ಜಾನಕಿಗಿತ್ತ ೪

ಸತಿ ಚೂಡಾಮಣಿ ಮಾರುತಿಗೊಡೆ ಸೇತುವೆ
ಅತಿಶಯದಲಿ ಬಂಧಿಶಿ ದಶಶಿರನಳಿದಾ ರಘುರಾಮ ೫

ನಿನ್ನಡಿ ನೆನೆವರೆ ಧನ್ಯರು ನಿತ್ಯ
ಸನ್ನುತ ಚರಿತ ಶ್ರೀ ಶ್ರೀನಿವಾಸ ರಘುರಾಮ ೬

## ೬೭

ಲಾಲಿ ರಘುಕುಲತಿಲಕ ಲಾವಣ್ಯ ಗುಣಧಾಮ ಪ.

ಲಾಲಿ ಸುರವರ ವಿನುತ ಲಾಲಿ ಸುಜನರ ಪಾಲ ಅ.ಪ.

ಅಸುರ ಕುಲ ಬಾಧಿಸಲು ವಸುದೇವ ಸುತ ರಕ್ಷ
ಹಸನಾಗಿ ಪ್ರಾರ್ಥಿಸಲು ನಿನ್ನ ದೇವತೆಗಳಾಗ
ವಸುಧೆ ಭಾರವ ಇಳುಹೆ ಶಿಶುವಾಗಿ ದಶರಥಗೆ
ದಶ ದಿಗ್ವಲಯ ಬೆಳಗೆ ದಶಮ ಬಲರಾಮ ೧

ಶಿವನ ಧನುವನು ಮುರಿಯೆ ಅವನಿಜೆಯು ಹಾರವನು
ಜವದಿ ಹಾಕಲು ಪರಶುರಾಮನ ಗರ್ವ
ತವಕದಲಿ ಮುರಿದಯೋಧ್ಯೆಯ ಪಾವನ ಮಾಡೆಂ
ದವನಿ ಜಾಲವು ಕೂಗೆ ಸವಿಗಾನದಿಂದ ೨

ಮಾತೆ ವಾಕ್ಯವ ಕೇಳಿ ಸೀತೆ ಸಹಿತಲೆ ವನಕೆ
ಆತ ಲಕ್ಷ್ಮಣನೊಡನೆನೀತನೀ ತೆರಳೆ
ದೂತ ರಾವಣನ ಹತವಾತಸುತ ದೂತ ಸಹ
ಖ್ಯಾತಿಲಯೋಧ್ಯೆಗೆ ಬಂದ ಶ್ರೀನಾಥ ಶ್ರೀ ಶ್ರೀನಿವಾಸಾ ಲಾಲಿ ೩

## ೬೮

ಲಾಲಿ ಶ್ರೀ ಕೃಷ್ಣ ಬಾಲ ಲಾಲಿ ನಂದ ಯಶೋದೆ ಲೀಲ
ಲಾಲಿ ಗೋಕುಲ ಚಂದ್ರ ಶೀಲ ಲಾಲಿ ಶ್ರೀ ಕೃಷ್ಣ
ವೇಣುಗೋಪಾಲ ಪ.

ವಸುದೇವ ಸುತನಾಗಿ ಬಂದು
ಎಸೆವೂ ಗೋಕುಲದಲಿ ನಿಂದು
ಅಸುರಕುಲ ಸಂಹಾರಕೆಂದು
ನಸುನಗುತ ಗೋಪಿಯರ ವಶವಾಗ್ವೆನೆಂದು ೧

ಪುಟ್ಟಿದಾ ಶಿಶುವನ್ನ ನೋಡಿ
ನಕ್ಷತ್ರ ರೋಹಿಣಿ ಎಂದು ತಿಳಿದು
ಅಷ್ಟಜನ ಸಹಿತ ಗೋಕುಲದಿ
ಸಂತುಷ್ಟಿಯೊಳು ನಾಮಕರಣವ ಮಾಡಿ ನಲಿದೂ ೨

ವೇದ ಘೋಷಗಳಾಗುತಿರಲೂ
ಆದಿ ಮೂರುತಿಗೆ ಮೋಹದಲಿ ಕೃಷ್ಣನೆಂದ್ಹೆಸರನಿಡಲೂ
ಸಾದರದಿ ಗೋಪ ದಕ್ಷಿಣೆ ತಾಂಬೂಲ
ಅಗಾಧದಲಿ ಬ್ರಾಹ್ಮಣರಿಗೆ ಕೊಟ್ಟು ನಲಿದೂ ೩

ಚತುರ ವೇದದ ನಾಲ್ಕು ಸರಪಣಿಯ ಹೂಡಿ
ಚತುರ ದಿಕ್ಕನೆ ನಾಲ್ಕು ಚೌಕ ತೊಟ್ಟಿಲನೆ ಕಟ್ಟಿ
ಚತುರ್ಮುಖನಯ್ಯನ ತೊಟ್ಟಿಲೊಳಗಿಟ್ಟು
ಅತಿಶಯದಿ ನಾರಿಯರು ತೂಗಿದರು ಹರಿಯಾ ಲಾಲಿ ೪

ಮಚ್ಛಕೂರ್ಮನೆ ವರಹ ಲಾಲಿ
ತುಚ್ಛ ದೈತ್ಯನ ಕೊಂದ ನರಹರಿಯೆ ಲಾಲಿ
ಅಚ್ಛವಾಮನ ಭಾರ್ಗವ ಕೃಷ್ಣ ಲಾಲಿ
ಸಚ್ಚ ಬೌದ್ಧಕ ಶ್ರೀ ಶ್ರೀನಿವಾಸನೆ ಲಾಲಿ ೫

## ೬೯

ವೃಂದಾವನದಿ ನಿಂದಾಡುತಿಹ ಸುಂದರ ಮೂರುತಿ ಇವನಾರೆ ಪ.

ನಂದಕಂದ ಮುಕುಂದ ಮುರಾರಿ ಚಂದಿರಾನನ ಕೃಷ್ಣ
ಇವ ನೋಡೆ ಅ.ಪ.

ಕಡಗಕಂಕಣ ಬೆಡಗಿಲಿ ಹೊಳೆಯುತ
ಸಡಗರದಿಂದಿಹ ಇವನ್ಯಾರೆ, ಸಖಿ
ಮೃಡಸಖ ಎಮ್ಮಯ ಒಡೆಯನೆಂದಿಸುವ
ಜಡಜಮುಖಿ ಇವನೋಡೆ ೧

ಹರವಿದ ಕೇಶದಿ ಶಿರದ ಕಿರೀಟವು
ವರಗೋವುಗಳ ಕಾಯ್ವ ಇವನ್ಯಾರೆ, ಸಖಿ
ವರ ಕಾಳಿಂಗನ ಭಂಗವ ಮಾಡಿದ
ಶರಧಿ ಗಂಭೀರ ಇವನೋಡೆ ೨

ಪೊಂಗೊಳಲೂದುತ ಕಂಗೊಳಿಸುತಿಹ
ಮಂಗಳಮೂರುತಿ ಇವನಾರೆ, ಸಖಿ
ಭಂಗಬರದ ಪರಿ ಭಕುತರ ಸಲಹುವ
ರಂಗ ಶ್ರೀ ಶ್ರೀನಿವಾಸ ಇವ ನೋಡೆ ೩

## ೭೦

ವೃಂದಾವನದಿ ನಿಂದಿಹನ್ಯಾರೆ ಗೋವಿಂದನಲ್ಲದೆ
ಚಂದಿರವದನೆ ನೋಡುವ ಬಾರೆ ಪ.

ಕೋಟಿಸೂರ್ಯ ಪ್ರಕಾಶ ಕಿರೀಟದ ಬೆಳಕಿದು
ಹಾಟಕಾಂಬರಧರನ ನೋಟದಿ ಸುಖಿಸೆ
ಕೋಟಲೆ ಸಂಸಾರ ದಾಟಿ ಪೋಗಿ ಕೃಷ್ಣ

ನಾಟ ನೋಡಿ ಮನ ಕವಾಟವ ಬಿಚ್ಚೆ
ಪೂರ್ಣ ನೋಟದಿ ನೋಡುವ ೧

ರಂಗನಾ ಕೊಳಲ ಬೆಳದಿಂಗಳ ಸೊಗವಿಲೆ
ಮ್ಮಂಗವ ಅಂಗಜನ್ನೈಯ್ಯಾಗೀಯುತೆ
ಕಂಗಳಿಗ್ಹಬ್ಬವೆ ರಂಗನ ನೋಡುತೆ
ಗಂಗಾಜನಕನ ವಲಿಸಲು ನಮಗೆ
ಹಿಂಗದ ಮುಕುತಿಯ ರಂಗಗೊಡುವ ಬಾರೆ ೨

ಜಯ ಜಗದೀಶನ ಜಯ ರಮಕಾಂತನ
ಜಯ ಕರ್ಮನೀಯನ ಜಯ ಶ್ರೀ ಶ್ರೀನಿವಾಸನ
ಜಯ ಯದು ತಿಲಕನ ಜಯ ಕೂಡಾಡುವ
ಜಯಪ್ರದನಾಗುತೆ ಜಗದಿ ಪೊರೆವ ಬಾರೆ ೩

## ೭೧

ವಾಲೆ ಬಂದಿಹುದೇ ತಂಗೀಯನ
ವ್ವಾಲೆ ಬಂದಿಹುದೆ ಪ.

ವಾಲೆ ಬರೆದ ಭಕ್ತ ಪಾಲ ಶೀಲ ಕರುಣಾಲ
ವಾಲ ರಮಾಲೋಲ ಕೃಷ್ಣನ ವಾಲೆ ಅ.ಪ.

ಅಂಬುರುಹೋದ್ಭವ ಅಖಿಲ ಸುರಾ
ರಂಬರದಲಿ ಸ್ತುತಿಸೆ
ಶಂಬರಾಸುರ ಸಂಹರನ್ನೈಯ್ಯನ ಹಡಗು
ಅಂದು ಮಾರುತನಿಲ್ಲದೆ ಗೋಪಿ
ಚಂದನಸಹಿತನಿಲ್ಲೇ ಮಧ್ಯದಿಂದಲೀ
ಅಂದದಿ ಮುನಿಗಳ ನಿಂದು ಸ್ತುತಿಸುತಾ
ನಂದದಿಂದಾನಂದಕಂದನ
ಮುಂದೆ ಕರೆಯೆ ಮುನಿ
ದಂದುಗ ಹರಿಸುತ ಬಂದೆನೆಂದು ಇಂಥಾ ೧

ಬಂದೆನೆಂದು ತೋರನೆ ಹರಿ
ನಿಂದಿರುವನೆ ಬದಿಲಿ
ಇಂದುಧರನ ಆಣೆ ಎನ್ನ ಮಂದಿರದಲಿ ತೋರುತ
ಬಂದ ಭಕ್ತರ ಸೇವಿಸೆಂದು ಬರೆದಿಹ
ಬಂಧು ನಾನೆಂದು ತಿಳಿ
ಎಂದು ಹೇಳುವತೆರ ಬರಹವ
ಇಂದಿರೇಶ ತಾ ಬಂದು ನಿಂದು ಕೈ ಪಿಡಿದ
ನೆಂದು ತಿಳಿ ಎಂದು ಭರದಿ ಇಂಥಾ ವಾಲೆ ೨

ಶ್ರೀ ಶ್ರೀನಿವಾಸನ ತೋರುವೆ ವಾಸವಾಗುತ ಮನದಿ
ಕ್ಲೇಶವ ಕಳೆ ಮನದಾಸೆ ಬಿಟ್ಟರೇನು ಶ್ರೀಶನಾಜ್ಞೆಯೆಂದು ಎನ್ನ
ಸೋಸಿಲಿ ಸ್ತುತಿಸೆಂದು ಈ ಶುಭ ಪತ್ರವ
ದಾಸಳಾದ ಎನ್ನ ಮನದಾಸೆ ಪೂರೈಸುವ
ಶ್ರೀಶನಿಂದ ಇಂಥಾ ವಾಲೆ ವಾಸುದೇವನ ೩

## ೭೨

ವೆಂಕಟೇಶನ ಧ್ಯಾನ ಮಾಡಲಾದಿಯೊಳು ಹರಿ
ಕಿಂಕರರು ಗಣಪನ್ನ ಧ್ಯಾನಿಸಿ ಪ.

ಪಾರ್ವತಿಯ ಪಾದ ಪಂಕಜವನೆ ನೆನೆಯುವುದು ಮನದೊಳು
ಶಂಕರನ ಪ್ರಾರ್ಥಿಸುತ ಹರಿಯನಾತಂಕವಿಲ್ಲದೆ ೧

ಮನ ನೆನೆವ ಪರಿ ಭಾರತಿಗೆ ವಂದಿಸಿ
ಶಂಕೆಯಿಲ್ಲದೆ ಹರಿ ಮಹಿಮೆ ಪೊಗಳಲು ೨

ಸರಸತಿಯ ಧ್ಯಾನಿಸಿ ನಿಮ್ಮ ಮಂಕಿನಜ್ಞಾನವನು
ಕಳೆಯಲು ಪವಮಾನಗೆ ವಂದಿಸಿ ೩

ಪಂಕಜಾಕ್ಷಿ ರಮಾದೇವಿ ಶ್ರೀ ಶ್ರೀನಿವಾಸನ
ಪಾದ ಪಂಕಜವ ನೆನೆದು ಹರುಷದಿ ೪

ಹರಿಕಿಂಕರು ಇರಿ ಎಂದರುಹಿದ
ಪುರಂದರದಾಸರ ನೆನವೆನನುದಿನವೂ ೫

## ೭೩

ವೆಂಕಟಾದ್ರಿಯಲ್ಲಿ ಮೆರೆವ ವೆಂಕಟೇಶನು ಪ.

ವೆಂಕಟೇಶನು ನಮ್ಮ ಸಂಕಟಹರನು
ಮಂಕುಬುದ್ಧಿಯನ್ನು ಬಿಡಿಸಿ ತನ್ನ ಕಿಂಕರರ ಸಲಹುವ ನಮ್ಮ ಅ.ಪ.

ಮಘಮಘಿಸುವ ದಿವ್ಯ ಕಿರೀಟ ಶೋಭನು
ಜಗದೊಳೀತನ ಮಹಿಮೆ ಪೊಗಳಲೊಶವೇ ನಮ್ಮ ೧

ಕಸ್ತೂರಿಯ ತಿಲಕ ಫಾಲ ಕಮಲನೇತ್ರ ಶೋಭನು
ಸಿಸ್ತಿನ ನಾಸಿಕ ಚಂಪಪುಷ್ಪದಂತೆ ಪೊಲ್ವ ನಮ್ಮ ೨

ಕನ್ನಡಿ ಕಪೋಲ ಕರ್ಣಕುಂಡಲವನು
ಚನ್ನ ಕರ್ಪೂರದ ಕರಡಿಗೆಯನ್ನು ಪೋಲ್ವ ವದನ ನಮ್ಮ ೩

ದಂತ ದಾಳಿಂಬಬೀಜದಂತೆ ಪೊಳೆವನು
ಕಂತುಪಿತನ ಮೃದುಜಿಹ್ವೆ ಶಾಂತಮೂರುತಿಯ ಕಂಡೆ ೪

ಉಭಯ ಪಾರ್ಶ್ವದ ಭಾಜಕೀರ್ತಿ ಅಭಯಹಸ್ತವು ದೇವ
ಉಭಯ ಪಾರ್ಶ್ವದಿ ಶ್ರೀ ಭೂಸಹಿತ ಭಕ್ತರಿಗಭಯ ಕೊಡುವೊ ೫

ಶ್ರೀ ವತ್ಸಾಂಕಿತ ನಾಭಿ ಕಮಲ ಹಾರಶೋಭನು
ಶ್ರೀ ಕೃಷ್ಣಂಗೆ ಸಾಲಿಗ್ರಾಮ ಹಾರ ಮೆರೆವೋದ ಕಂಡೆ ೬

ಥಳ ಥಳಿಸುವಂಥ ದಿವ್ಯ ಥಳಕಿನ ಹಾರ
ಬೆಳಕಾದ ರತ್ನದ ಪದಕ ವಲಿವ ಏಕಾವಳಿಯ ಕಂಡೆ ೭

ಮೆರೆವ ಪೀತಾಂಬರ ವಡ್ಡಾಣ್ಯ ಕರಡಿ ಕಂಜರಿಗೆ ಶಲ್ಯ
ಧರೆ ಮೇಲೊಲಿವ ಶರಧಿ ಗಂಭೀರನ ಕಂಡೆ ೮

ಕಂತುಪಿತ ತನ್ನ ಏಕಾಂತ ಭಕ್ತರ ಶಾಂತ ನೋಟದಿಂದ ನೋಡಿ
ಭ್ರಾಂತಿ ಬಿಡಿಸಿ ಪೊರೆವೊದ ಕಂಡೆ ೯

ಭಕ್ತರನ್ನು ಪೊರೆವ ಬಿರುದಿನ ಪಾಡಗ ಧರಿಸಿ
ದಿವ್ಯ ಅಶಕ್ತಜನ ಪೋಷ ಶ್ರೀ ಶ್ರೀನಿವಾಸ ದೊರೆಯ ಕಂಡೆ ೧೦

## ೭೪

ಶ್ರೀನಿವಾಸಗಾರುತೀಯ ಮಾನುನೀಯರು ಬೆಳಗಿರೀಗ ಪ

ಗಾನಲೋಲ ದೀನಪಾಲ ಆನಂದಕಂದ ಸುಂದರಾಂಗ ಅ.ಪ

ಭಕ್ತಪಾಲಾಸಕ್ತಶೀಲಾ ಮುಕ್ತೀಶ ರಮಾಲೋಲಗೀಗ
ಮುತ್ತಿನಾರುತೀಯನೆತ್ತೀರೆ ಭಕ್ತವತ್ಸಲ ದೇವಗೆ ಬೇಗ ೧

ಆದಿಮೂಲನೆ ವೇದೋದ್ಧಾರನೆ ಸಾಧುವಂದ್ಯ ಗಿರಿಧರನೆ
ಮೋದದಿಂದ ಭೂಮಿ ತಂದ ಆದರದಿ ಕರೆದ
ಕಂದಗೊಲಿದಾನಂದ ೨

ಭೂಮಿ ಅಳಿದ ಭೂಪರ ಕೊಂದ ಭೂಮಿಜೆ ಅರಸ ಭೂಪ ಕೃಷ್ಣಾ
ಭಾಪುರೆ ಬೌದ್ಧ ಭೂಪ ಕಲ್ಕಿ ಶ್ರೀಪ ಶ್ರೀಶ್ರೀನಿವಾಸನಾದ ೩

## ೭೫

ಶ್ರೀನಿವಾಸನೆ ನಿನ್ನ ಮಹಿಮೆಯ ಏನ ಪೇಳ್ವೆನಾ ಜ್ಞಾನರಹಿತಳು
ಸಾನುರಾಗದಿ ನಿನ್ನ ಸ್ತುತಿಸಿ ಪಾಡಲು ನೀನೆ ನುಡಿಸೆಲೊ
ಗಾನಲೋಲನೆ ೧

ಮಂಕುಮಾನವರಿಂದ ಸಾಧ್ಯವೆ ಶಂಕರಾದಿ ವಂದಿತನ ಸ್ತುತಿಸಲು
ನಿನ್ನ ಪಾದ ಪಂಕಜ ಧ್ಯಾನಿಸೆ ನಿನ್ನ ಕೃಪೆಯನಾತಂಕವಿಲ್ಲದೆ ೨

ನಿನ್ನ ಭಕ್ತರಾ ಕಾಯ್ವೆಯೆಂಬುವುದನ್ನು ಅರಿತೆಹೆ ಪನ್ನಗಾಚಲ
ಸನ್ನುಕಾಂಗನೆ ನಿನ್ನ ಮಹಿಮೆ ಪೊಗಳಲು
ಚಿನ್ನಬೊಮ್ಮನಿಂದಳವೆ ದೇವನೆ ೩

ಚೆನ್ನ ಮಸ್ತಕಾದೊಳು ಪೊಳೆಯುವೊ ರನ್ನ ಮಾಣಿಕ್ಯ
ಕಿರೀಟಶೋಭನ
ಸನ್ನುತಾಂಗ ಮೂರು ನಾಮ ಸೊಬಗನೊ ಇನ್ನು
ವರ್ಣಿಪೆ ಕರ್ಣಕುಂಡಲ ೪

ಪದ್ಮನಾಭಗೆ ಪದ್ಮದಕ್ಷಿಯ ತಿದ್ದಿದ ಚಂಪಕದ ನಾಸಿಕ
ಮುದ್ದುದಂತ ಪಂಕ್ತಿಗಳ ಕಂಡೆನೊ ಪೂತನಿಯ ಅಸುಹೀರಿದ ಆ
ಜಿಹ್ವೆಯ ಶ್ರೀನಾಥ ಕಂಡೆನಾ ಕಂಠಮಾಲೆಯ ಸಹಿತ ನಿನ
ಭುಜಕೀರ್ತಿಗಳ ಕಂಡೆನು
ಭಕ್ತಪಾಶ ನಿನ್ನ ಹಸ್ತ ಕಂಕಣವಾ ಕಂಡೆನು ೫

ಬೆರಳ ಮುದ್ರಿಕೆ ಕೊರಳೊಳ ಸಾಲಿಗ್ರಾಮದ ಸರ
ವೈಜಯಂತಿ ಮಾಲೆಗಳ ಕಂಡೆನು ೬

ವರ ಶ್ರೀ ತುಳಸಿಯ ಹಾರಗಳ ಮಧ್ಯದಿ
ಮೆರೆವ ರಮಾದೇವಿಯಳ ಕಂಡೆನು
ಜಾನು ಜಂಘೆಯೊಳ ಮೆರೆವ ಪೀತಾಂಬರ ಕಂಡೆನು ೭

ಆಜಾನುಬಾಹು ನೀನ್ನೊದ್ದವಲ್ಲಿ ವಜ್ರದ್ವಡ್ಯಾಣಕಂಡೆನು
ಸಾನುರಾಗದಿ ಸ್ತುತಿಸಿ ಹಿಗ್ಗುತ ನಾನುಸ್ತುತಿಪ ನಿನ್ನಂಘ್ರಿ ಕಮಲವ ೮

ಚರಣಕೊಪ್ಪುವೊ ಗಗ್ಗರಿಪಾಡಗ ವರಗೆಜ್ಜೆ ಪೈಜಣಿ ಕಂಡೆ ದೇವನೆ
ನಿನ್ನ ಚರಣ ಸೇವಕರನ್ನು ಪೊರೆಯುವ ಬಿರುದು ಪೊತ್ತ
ಶ್ರೀವೆಂಕಟೇಶನೆ ೯

ಬನ್ನ ಬಡಿಸದೇ ಇನ್ನೀ ಭವದೊಳು ಸನ್ನುತಾಂಗನೆ
ಕಾಯ ಬೇಕೆಲೊ
ಮನ್ಮನೋಜಯ ಶ್ರೀ ಶ್ರೀನಿವಾಸನೆ ಎನ್ನ ತಪ್ಪುಗಳೆಲ್ಲ
ಕ್ಷಮಿಸೊ ದೇವನೆ ೧೦

## ೭೬

ಸರ್ವಾಂತರ್ಯಾಮಿ ಸಲಹೊ ಎನ್ನ
ಸರ್ವಕಾಲದಲಿ ಭಕ್ತರ ಅಂತರಂಗದಿ ನಲಿವೆ ಪ

ಭಕ್ತರನು ತೋಷಿಸಲು ಹತ್ತವತಾರದಿ
ಯುಕ್ತಿಯಲಿ ಖಳರ ವಧಿಸಿದೆಯಲ್ಲವೆ
ಭಕ್ತವತ್ಸಲನೆಂಬೊ ಬಿರುದು ಹೊತ್ತಿಹೆ ದೇವ
ಭಕ್ತರಾಧೀನ ನಾನೆಂದು ನಿನ್ನ ಭಕ್ತರೊಳು ನಲಿವೆ ೧

ಅಂತ್ಯದೊಳು ಅಜಮಿಳನ ಅಂತರಂಗದಿ ಪೊಕ್ಕು
ಸಂತ ಆತ್ಮಜನ ನಾರಗನೆಂದು ನುಡಿಸಿ ನಿನ್ನ
ಸ್ವಂತ ಲೋಕಕೆ ಕಳಿಸಿ ಅಜಭವಾದಿಗಳಿಂದ ಅ
ತ್ಯಂತ ಹೆಚ್ಚಿನ ಸ್ತುತ್ಯನಾದೆ ಗೋವಿಂದ ೨

ಆವಾವ ಕಾಲದೊಳು ಆವಪರಿ ಕಷ್ಟದೊಳು
ಕಾವ ನಿನ್ನಯ ನಾಮ ಮರೆಯದಂತೆ
ದೇವ ಶ್ರೀ ಶ್ರೀನಿವಾಸ ಝಾಮಝಾಮದಿ ನುಡಿಸೊ
ಶ್ರೀವರ ನೀನಲ್ಲದೆ ಮತ್ತಾರಿಹರೊ ದೇವ ೩

## ೭೭

ಸಾಧಿಸಿ ನಿನ್ನ ನಾಮ ನಿತ್ಯ ಸೋಧಿಸಿ ಭಕ್ತಿ ರಸ
ಸ್ವಾದ ಮಾಡುವ ಸಾಧುಗಳೊಳಗಿಡೊ ಶ್ರೀಶಾ ರಮೇಶ ಪ

ಬೋಧಿಸಿ ತತ್ತ್ವರಸ ಸ್ವಾದ ನೀಡುವ
ಆದರದಲಿ ತೋರೋ ಮಾಧವ ಶ್ರೀಶನೆ
ಮೋದ ಬೀರುತ ನಿನ್ನ ಪಾದವ ತೋರುವ
ಸಾಧುಗಳೊಳಗಿಡೊ ಅಗಾಧ ಮಹಿಮನೆ ಅ.ಪ

ಭವಸಂಸಾರದೊಳಿರಲು ಸಜ್ಜನರು
ಅರುಣೋದಯದೊಳೆದ್ದು ನಿನ್ನ ಚರಣಪಲ್ಲವವನ್ನು ಕೃಷ್ಣಾ
ಸ್ಮರಿಸುತಲಿರುವರೊ ಪರಮಪುರುಷಕೇಳೊ ಅಂಥಾ
ವರ ಭಾಗವತರನು ಕರುಣದಿ ತೋರೋ ಶ್ರೀಶಾ
ವರ ನೂಪುರಗೆಜ್ಜೆ ಧರಿಸಿ ಮೆರೆವ ದೇವಾ
ವರ ಭಕ್ತರು ಕರೆ ಕರೆದಲ್ಲಿಗೆ ಬಹ
ಶರಧಿ ಶಯನ ನಿನ್ನ ಬಿರುದಲ್ಲವೆ ಕೃಷ್ಣಾ
ತ್ವರಿತದಿ ನಿನ್ನಡಿ ಸ್ಮರಿಸುವರನೆ ತೋರೊ ೧

ಅಗರು ಚಂದನ ಗಂಧ ಸೊಗವಿಲಿ ಧರಿಸುತ
ಮಿಗೆ ಪೀತಾಂಬರದುಡಿಗೆಯನುಟ್ಟು ಕೃಷ್ಣಾ
ಮಿಗೆ ಅನಂತಾಸನದೊಳು ಸಿರಿ ಸಹಿತಿರೆ
ಸೊಗವಿಲಿ ಕರಿರಾಜನ ಸ್ವರ ಆಲಿಸಿ
ಅಗಪರ ಸಿರಿಗ್ಹೇಳದೆ ಬಂದೆ ಶ್ರೀಧರ
ಝುಗಝುಗಿಸುತ ನಿನ್ನ ಪದರುಹಗಳನಿಟ್ಟು
ಮಿಗೆ ವೇಗದಿ ಬಂದು ಕರಿಯನುದ್ಧರಿಸಿದೆ
ಈಗ ಬೇಗ ನಿನ್ನ ಭಕ್ತರ ಸೊಗವಿಲಿ ತೋರೋ ಕೃಷ್ಣಾ ೨

ಕ್ಷಿತಿಯೊಳು ನಿನ್ನಯ ಸತತದಿ ನೆನೆಯುವ
ಯತಿ ಮುನಿ ಹೃದಯಾನಂದ ಶ್ರೀಕೃಷ್ಣ
ಸತತದಿ ನಿನ್ನ ನಾಮ ಜತನ ಮಾಡುತ ತಮ್ಮ
ಮತಿಭ್ರಮಣೆಯಿಲು ನಿನ್ನಾಕೃತಿ ನೋಡುತ ಸ್ತುತಿಪ

ಯತಿಕುಲ ತಿಲಕಾಗ್ರಣಿ ಶ್ರೀ ಶ್ರೀನಿವಾಸ ಎನ್ನ
ಮತಿಭ್ರಮಣೆಯನು ನೀಗಿಸುವಂಥಾ ಸುಜನರ
ಸತತದಿ ತೋರಿಸೋ ಕ್ಷಿತಿಯೊಳು ವೆಂಕಟ
ಪತಿತ ಪಾಮರರನು ಗತಿಕಾಣಿಸೆ ಕೃಷ್ಣಾ ೩

## ೭೮

ಹರಿನಾಮದರಗಿಳಿಯು ದೊರಕಿತಿಂದು
ವರ ಹಿರಿಯರಾ ಕರುಣದಿಂದೆನಗೆ ಪ.

ವೇದ ಶಾಸ್ತ್ರದ ಮರ್ಮ ಆದಿ ಕೇಶವನೆಂಬ
ವೇದ ವೇದಾಂತದ ಸಾರ ನಾರಾಯಣ
ಹಾದಿಯಲಿ ವರದ ಮಾಧವನೆಂಬ
ಸಾಧಿಸಿ ಕಂಸನ ಗೆದ್ದ ಗೋವಿಂದ ೧

ದುಷ್ಟರನು ಶಿಕ್ಷಿಪ ವಿಷ್ಣುವಿನ ನಾಮವು
ಕಷ್ಟವನು ಪರಿಹರಿಪ ಮಧುಸೂಧನ
ಇಷ್ಟ ಮೂರುತಿ ತ್ರಿವಿಕ್ರಮನ ನಾಮವು
ಉತ್ಕೃಷ್ಟ ವಾಮನನೆಂಬ ಕಠ್ಠಾಣಿ ಮುತ್ತಿನ ೨

ಬಂಧನವ ಪರಿಹರಿಪ ಸುಂದರ ಶ್ರೀಧರನ ಭವ
ಬಂಧನವ ಕಡಿವ ಋಷಿಕೇಶನ
ಎನ್ನ ಬಂಧೂ ಪದ್ಮನಾಭನ
ಚಂದಿರಾನನನಾದ ದಾಮೋದರನಾ ೩

ಸಂಸಾರ ನಾವಿಕ ಸಂಕರ್ಷಣನೆಂಬುವನ
ಸಂಪತ್ತುಗಳ ಕೊಡುವ ವಾಸುದೇವ ಎಂಬ
ಸಂಕಟವ ಪರಿಹರಿಪ ಪ್ರದ್ಯುಮ್ನನೆಂಬುವನ ಎನ್ನ
ಸಂಕುಚಿತ ಮಂಕನಳಿವ ಅನಿರುದ್ಧನ ೪

ಪರಮ ಪದವಿಯನಿತ್ತು ಪೊರೆವ ಪುರುಷೋತ್ತಮನ
ಪರರ ಬೇಡಿ ಸದ್ವಸ್ತು ಅಧೋಕ್ಷಜನಾ
ವರ ಜ್ಞಾನಿಗಳ ಮಾನಸ ನಾರಸಿಂಹನ
ಪರಮಪುರುಷನೆಂಬ ಅಚ್ಯುತನ್ನಾ ೫

ಮುದ್ದು ಮುಖದೊಳು ತಿಲಕ ತಿದ್ದಿದ ಜನಾರ್ಧನನ
ಹದ್ದುವಾಹನನಾದ ಉಪೇಂದ್ರನ
ಬದ್ಧಕಂಕಣ ಭಕ್ತ ಪರಿಪಾಲ ಹರೆ ಕೃಷ್ಣನ
ಮುದ್ದು ರಮೆಯರಸ ಶ್ರೀ ಶ್ರೀನಿವಾಸನೆಂಬುವನ ೬

೭೯

ಹರಿ ಸಂಕಲ್ಪದ ಕೃಪೆಯಲ್ಲದೆ ಬೇರಿನ್ನಿಲ್ಲವಯ್ಯ ಪ.

ಈ ನರವೆಂಬ ದೇಹಕ್ಕೆ ದೃಢ ಭಕುತಿ ಬರಲಿಕೆ ಅ.ಪ.

ಮುನ್ನ ಮಾಡಿಸಿ ಸುಕೃತ ಚನ್ನಿಗ ಹರಿ
ಬನ್ನ ಬಡಿಸಿ ಅಜಮಿಳನ
ತನ್ನ ಸುತನ ನಾರಗನೆಂದು ಕರೆಸಿ
ಉನ್ನಂತ ಪದವಿತ್ತ ಚನ್ನಕೇಶವ ಹರಿ ೧

ರುಕ್ಮಾಂಗದನೇಕಾದಶಿ ವ್ರತವನ್ನು
ಚಕ್ರಧರನು ನೇಮದಿ ಮಾಡಿಶಿ
ತಕ್ಕ ,ಮಾನಿನಿ ಗಂಟಿಕ್ಕೆ ಜಗದಲವನ
ಪ್ರಖ್ಯಾತಿಗೊಳಿಸಿದ ಲಕ್ಕುಮಿರಮಣ ಹರಿ ೨

ಮಾನುನಿ ದ್ರೌಪದಿಯನು ಸಭೆಗೆಳಸಿ
ಕೃಷ್ಣಾ ನೀನೇ ಗತಿಯೆಂದಾ ತರುಣಿಯೊಳ್ ನುಡಿಸಿ
ಅನುಮಾನವಿಲ್ಲದೆ ಜಗದಿ ಪಾಂಡವರಕ್ಷ
ನಾನೆಂದಕ್ಷಯವಿತ್ತ ಶ್ರೀ ಶ್ರೀನಿವಾಸ ಹರಿ ೩

## ೮೦

ಆರುತೀಯ ಬೆಳಗಿರೀಗ ನಾರಿಯೇರು ಶ್ರೀನಿವಾಸಗಾರುತೀಯ ಪ.

ಆರುತೀಯ ಬೆಳಗಿರೀಗ ಸಾರಸಾಕ್ಷ ಪದ್ಮಿನೀಯ
ಸೇರಿ ಲಕುನಿಯಿಂದ ಮೆರೆವೊ
ಮೂರುಲೋಕದೊಡೆಯ ಕೃಷ್ಣಾ ಅ.ಪ.

ಮೀನನಾಗಿ ವೇದ ತಂದು ದಾನವರ ವಂಚಿಸುತ್ತ
ಯಾನದಲ್ಲಿ ಭೂಮಿ ತಂದ ದೀನರಕ್ಷಕ ನಾರಸಿಂಹಗೆ ೧

ಚಲುವ ಬ್ರಹ್ಮಚಾರಿಯಾಗಿ ಛಲದಿ ಕ್ಷತ್ರಿಯೇರ ಕೊಂದು
ಒಲಿವ ಶಿವನ ಬಿಲ್ಲ ಮುರಿದು ನಲಿದು ಬಂದ ಗೋಪಿಕಂದಗಾ ೨

ನಾರಿಯೇರ ವ್ರತವನಳಿದು ತೇಜಿಯೇರಿ ಮೆರೆವ ಧೀರ
ವಾರವಾರ ಪೂಜೆಗೆಂದು ಶೂರ ಶ್ರೀ ಶ್ರೀನಿವಾಸಗಾರುತೀಯ ೩

## ೮೧

### ತ್ರಿಮೂರ್ತಿಗಳ ಲಾಲಿ

ಜೋಜೋ ಬಾಲಕೃಷ್ಣ ಜೋಗುಳವ ಹಾಡುತ್ತ ತೂಗುವೆ ನಾ ಪ.

ನವರತ್ನ ಖಚಿತದ ತೊಟ್ಟಿಲ ಕಟ್ಟಿ
ನಾಗಸಂಪಿಗೆ ಜಾಜಿ ಮಾಲೆಯನ್ಹಾಕಿ
ನಾಲ್ಕುವೇದದ ಸರಪಣಿ ಬಿಗಿದು
ನಾಗಶಯನನ ಮಲಗಿಸಿ ಬೇಗ
ರಾಗದಿ ಅನುಸೂಯ ಪಾಡಿ ತೂಗಿದಳು ಜೋ ೧

ಮುತ್ತು ಮಾಣಿಕ್ಯದ ತೊಟ್ಟಿಲ ಕಟ್ಟಿ
ಮುತ್ತು ಪವಳದ ಸರಪಣಿ ಬಿಗಿದು
ಮುದದಿ ಮಲ್ಲಿಗೆ ಜಾಜಿ ಪುಷ್ಪವ ಕಟ್ಟಿ

ಮುಕ್ತ ಬ್ರಹ್ಮನ ಮಲಗಿಸಿ ಬೇಗ
ಅರ್ತಿಲಿ ಅನಸೂಯ ತೂಗಿದಳಾಗ ೨

ನೀಲ ಮಾಣಿಕ್ಯದ್ವಜ್ರತೊಟ್ಟಿಲ ಕಟ್ಟಿ
ಮೇಲೆ ಕೆಂಪಿನ ಸರಪಳಿ ಬಿಗಿದು
ಮಾಲತಿ ಮಲ್ಲಿಗೆ ಮಾಲೆಯ ಕಟ್ಟಿ
ನೀಲಕಂಠನ ಮಲಗಿಸಿ ಬೇಗ
ಬಾಲನ ಅನಸೂಯ ತೂಗಿದಳಾಗ ೩

ಈ ಪರಿಯಿಂದಲಿ ತೂಗುತಿರೆ
ತಾಪಸ ಅತ್ರಿಋಷಿಯಾಗ ಬರೆ
ಭೂಪರ ತೊಟ್ಟಿಲು ಕಾಣ ಬರೆ
ಈ ಪರಿ ಶಿಶುಗಳು ಯಾರೆನ್ನುತಾ
ಶ್ಚರ್ಯದಲಿ ಸತಿಯ ಕೇಳುತಾ ೪

ನಮ್ಮ ಪುಣ್ಯದ ಫಲ ವದಗಿತೆಂದು
ಮುನ್ನ ತ್ರಿಮೂರ್ತಿಗಳು ಶಿಶುರೂಪದಿ ಬಂದು
ತನ್ನ ಪತಿಯ ಕೂಡ ಅರುಹುತಲೆ
ಚಿನ್ನರ ತೂಗುತ್ತ ಹರುಷದಿ
ಚೆನ್ನ ಶ್ರೀ ಶ್ರೀನಿವಾಸನ್ನ ತೂಗಿದಳು ೫

## ೮೨

## ಲಕ್ಷ್ಮೀ ದೇವಿ

ಕಾದಿರುವಳು ರುಕ್ಮಿಣಿ ಕೃಷ್ಣ ಬರುವನೆಂದು ಪ.

ತನ್ನ ಕರವ ಪಿಡಿವನೆಂದು ಅ.ಪ.

ವಿಪ್ರನ್ನ ಕಳುಹಿರುವೆನು
ಕ್ಷಿಪ್ರದೊಳು ಗುಡಿಯೊಳಿಹೆನು
ಅಪ್ರಮೇಯ ನಿನ್ನಡಿಗಳನ್ನು
ಸುಪ್ರಕಾಶ ನಂಬಿರುವೆನೆಂದು ೧

ಶಿಶುಪಾಲನೊಲ್ಲೆನೆಂದು
ವಸುಧೀಶ ನೀನೆ ಗತಿಯೆಂದು
ಹಸುಳೇಯ ಸಲಹು ಎಂದು
ಬೆಸಸಿಹೆನು ಪತ್ರವೆಂದು ೨

ರಥವೇರಿ ಬರುತಲಿಹನೊ
ಪಥದೊಳು ಕಾದಿರುವನೊ
ರತಿಪತೀ ಪಿತನ ಪದವ
ಅತಿಶಯದಲಿ ಕಾಣುವ ತವಕದಿ ೩

ಶಂಕಾತುರಂಗಳಿಂದ
ಶಂಕರೀಯಪೂಜೆಗೈದು
ಕಿಂಕಿಣಿಯ ನಾದದಿಂದ
ಶಂಕರಾದಿವಂದ್ಯ ಬರುವ ಪಥದಿ ಬಂದು ೪

ಬಂದಾನೋ ಬಾರನೋ ಎನುತಾ
ಇಂದಿರೆಯ ಅರಸನ್ಹೊರತು
ಪೊಂದಲಾರೆನನ್ಯರನೆನುತ
ಸುಂದರೀಮಣಿ ಕೃಷ್ಣನಾಗಮ ನೋಡುತ ೫

ದ್ವಾರಕಿಯಾ ನಾಥ ಬಂದು
ಪಾರುಗಾಣಿಸುವನೆಂದು
ಚಾರುಕರದೊಳೆತ್ತಿ ಎನ್ನ
ದ್ವಾರಕೆಗೊಯ್ವ ಶ್ರೀ ಶ್ರೀನಿವಾಸನೆಂದು ೬

## ೮೩

ಕೊಡು ತಾಯೆ ವರವ ಧೃಡವಾಗಿರುವ
ಕೊಡು ತಾಯೆ ವರವಾ ಪ.

ಕೊಡೆ ವರ ತಡಮಾಡದೆ ಧೃಡ ಭಕ್ತಿ ಎಂಬ ಮಾಂಗಲ್ಯ ಭಾಗ್ಯ
ಧೃಡವಾಗಿರುವಂತೆ ಅ.ಪ.

ಪರಿಪರಿ ಧ್ಯಾನಿಸೆನ್ನ ಮನಮಂದಿರವೆಂಬ
ವರಗೃಹದಲಿ ಯೆನ್ನಯ ಭಕ್ತಿಮಂಟಪದಿ
ಹರದಿ ಲಕುಮಿ ನಿನ್ನ ಪೂಜಿಸಿ ನಮಿಸಲು
ವರ ಅರ್ಘ್ಯಪಾದ್ಯ ಆಚಮನವಿತ್ತು ನಲಿವೆ ೧

ನವವಿಧ ಭಕ್ತಿಯೆಂಬ ನವರತ್ನ ಮಂಟಪದಿ
ನವವಧು ಹರಿಗೆ ನೀನೆಂದು ಕುಳ್ಳಿರಿಸಿ
ನವವಿಧ ಪಂಚಾಮೃತ ಸ್ನಾನಗೈಸಿ
ನವನೀತಚೋರ ನಿನಗೆ ವಸ್ತ್ರಾಭರಣವನಿಟ್ಟು
ನವವಿಧ ಭಕುತಿಲಿ ಪೂಜಿಪೆ ೨

ಜಾಜಿ ಮಲ್ಲಿಗೆ ರೋಜ ಸಂಪಿಗೆ
ಮೂರ್ಜಗಜ್ಜನನಿಗೆ ಕೇತಕಿ ಜಡೆಹೆಣೆದು
ರಾಜಿಪಲಕ್ಷ್ಮಿಗೆ ಮಲ್ಲಿಗೆ ದಂಡೆ ಮುಡಿಸಿ ಜಡೆಗೆ
ರಾಜಿಪ ಕಮಲ ಕೆಂಪಿನ ತಿರುಪಿನ ಹೂವ ತಿರುಗಿಸಿ ೩

ಅರಿಶಿನ ಕುಂಕುಮ ಪರಿಮಳ ಗಂಧದಿ
ವರಮಹಾಲಕ್ಷ್ಮಿಗೆ ಪೂಜಿಸುವೆ
ವರಲಕ್ಷ್ಮಿಗೆ ಪರಿಪರಿ ಪುಷ್ಪ ಅಷ್ಟೋತ್ತರಗಳಿಂದರ್ಚಿಸೆ
ಕೊಡು ವರ ದೃಢಭಕ್ತಿಯೆಂದು ಬೇಡುವೆ ೪

ಷಡ್ರಾಸಾನ್ನ ಪಾಯಸ ಭಕ್ಷ್ಯಗಳ
ಷಡ್ವಿಧ ದದಿಘೃತ ಪಾಲು ಸಕ್ಕರೆ ಬಗೆಬಗೆ ಉಂಡೆಗಳ
ಷಡ್ವಿದ ಫಲಗಳನರ್ಪಿಸಿ ಧೂಪ ದೀಪದಿ
ವರ ಅಷ್ಟಲಕ್ಷ್ಮಿ ಶ್ರೀ ಶ್ರೀನಿವಾಸನ ಸಹ
ವರ ಅಷ್ಟ ಮಂಗಳಾರತಿ ಬೆಳಗಿ ಪಾಡುತ ನಮಿಸುವೆ ೫

## ೮೪

ನಂಬಿದೆನೇ ನಿನ್ನ ಅಂಬುಜನಯನೆ
ನಂಬಿದೆ ನಿನ್ನ ಪ.

ನಂಬಿದೆ ನಿನ್ನನು ಅಂಬುಧಿಶಯನನೆನ್ನ
ಡಿಂಬದಿ ನಿಲುವಂಥ ಸಂಭ್ರಮ ಕೊಡು ತಾಯೆ ಅ.ಪ.

ಆರು ಮೂರೆರಡೊಂದು ಮೇರೆ ಇಲ್ಲದೈದು
ಜಾರರು ಸೇರಿದರೆ ತಾಯಿ
ತೋರುತ ಕರುಣವ ಬೀರುತ ವರ ಸಂಗ
ದೂರಮಾಡಿಸಿ ಪಾರುಗಾಣಿಸು ತಾಯೇ ೧

ಅಗಣಿತ ಮಹಿಮನ ಬಗೆಬಗೆ ಪೂಜಿಸಿ
ಜಗದಾಖ್ಯಾನ ನೀ ಮಿಗೆ ವಲಿಸಿಹೆ ತಾಯೆ
ಮಗುವೆಂದು ಭಾವಿಸಿ ಚಿಗಿದು ಕಂಬದಿ ಬಂದ
ನಗಧರ ನರಹರಿ ಸಿಗುವ ಪರಿಯ ತೋರೆ ೨

ಕಲಿಯುಗದಲಿ ಶ್ರೀ ಶ್ರೀನಿವಾಸನ ಜ್ಞಾಯೆ
ವಲಿದು ಭಕ್ತರ ಕೊಲ್ಹಾಪುರ ಮೆರೆಸಿಹೆ ತಾಯೆ
ಕಲಿಮಲ ಕಳೆದು ನಲಿದು ಭಕ್ತರ ಕಾಯೆ
ಛಲವ್ಯಾಕೆ ಹರಿ ಸಹ ನಲಿಯುತೆ ಬಾರೆ ೩.

## ೮೫

ನಡೆದು ಬಾರೆ ಹರಿಯ ರಮಣಿ
ನಡಮುಡೀಯ ಹಾಸುವೆ
ನಡಮುಡೀಯ ಹಾಸಿ ನಿನಗೆ
ಕರವ ಮುಗಿದು ಬೇಡುವೇ ಪ.

ಚರಣಕೆ ಪಾದ್ಯವನಿತ್ತು
ವರ ಕ್ಷೀರದಧಿ ಘೃತ
ವರ ಮಧು ಶರ್ಕರಾದಿಂ
ಹರುಷದುಡಿಗೆ ತೊಡಿಸುವೆ ೧

ರನ್ನ ಪೀಠದಲ್ಲಿ ಇರಿಸಿ
ನಿನ್ನನರಿಶಿನ ಕುಂಕುಮ
ಚನ್ನ ಗಂಧ ಪುಷ್ಪದಿಂದ
ಸಂಪನ್ನೆ ನಿನ್ನ ಪೂಜಿಪೆ ೨

ಘನ್ನ ನೈವೇದ್ಯವರ್ಪಿಸಿ
ರನ್ನದಾರುತಿ ಬೆಳಗುವೆ
ಇನ್ನು ಎನ್ನ ತಪ್ಪ ಮನ್ನಿಸೆ
ನಿನ್ನ ರಮಣ ಶ್ರೀ ಶ್ರೀನಿವಾಸನರಸಿಯೇ
ಇನ್ನು ತೋರಲು ಬೇಗದಿ ೩

## ೮೬

ನಲಿನಲಿದರು ದ್ವಾರಕಾಪುರದಿ
ನಳಿನನಾಭ ಶ್ರೀ ರುಕ್ಮಿಣಿ ಕಲ್ಯಾಣದಿ ಪ.

ಜಲರುಹಲೋಚನೆ ಚೆಲುವೆ ಶ್ರೀ ರುಕ್ಮಿಣಿ
ಸಲಲಿತಾಂಗನ ನೋಡಿ ವಲುವಿನಲಿ ಕುಳಿತಿರೆ ಅ.ಪ.

ಅಂಬರದಲಿ ಭೇರಿ ವಾದ್ಯಗಳೆಸಗೆ
ತುಂಬುರು ನಾರದರು ಗಾನವ ಪಾಡೆ
ಸಂಭ್ರಮದೊಳು ಮಾಂಗಲ್ಯ ಬಂಧನ ಮಾಡೆ
ಅಂಬುಜೋದ್ಭವ ರುಕ್ಮಿಣಿ ಕಂಠದೊಳು ೧

ವಿಪ್ರರು ವೇದ ಮಂತ್ರವ ಪಠಿಸೆ
ಸ್ವ ಪ್ರಕಾಶ ರುಕ್ಮಿಣಿ ಕರಪಿಡಿಯೆ ಕೃಷ್ಣ
ಅಪ್ರಮೇಯನೆಂದು ಸ್ತುತಿ ಪಾಠಕರು ಪೊಗಳೆ
ಕ್ಷಿಪ್ರದಿ ವಿಪ್ರರಿಗೆ ದಕ್ಷಿಣೆ ತಾಂಬೂಲವೀಯೆ ೨

ದೇವಕಿ ವಸುದೇವನಿಗ್ಹರುಷವನಿತ್ತು
ದೇವ ಶ್ರೀ ಶ್ರೀನಿವಾಸ ಭಕ್ತ ಜನಾಶ್ರಿತ
ಕಾವ ಸಕಲ ಜೀವರ ಹೃದಯನಿವಾಸ
ದೇವ ಯಶೋದೆ ನಂದ ಕಂದನ ನೋಡಿ ೩

## ೮೭

ಪೂಜಿಪೆ ನಾ ಪರಮಪುರುಷನರಸಿ ಲಕ್ಷ್ಮಿಗೆ ಪ.

ತೇಜಮಾದ ಭದ್ರಪೀಠದಿ ರಾಜೀವಾಕ್ಷಿ ಲಕುಮಿಯ ಅ.ಪ.

ಧ್ಯಾನಮಾವಾಹನವ ಮಾಡಿ ಸ್ನಾನ ವಸವ ತೊಡಿಗೆ ತೊಡಿಸಿ
ಮಾನನಿಧಿಯಾ ಭದ್ರ ಪೀಠದೊಳಟ್ಟು ಧ್ಯಾನನುಷ್ಠಾನದಿಂದ
ಪೂಜಿಸುವೆನು ೧

ಅರಿಶಿನ ಕುಂಕುಮವನರ್ಚಿಸಿ ಭರದಿ ಗಂಧಾಕ್ಷತೆಗಳಿಂದ
ಮರುಗ ಮಲ್ಲಿಗೆ ಜಾಜಿ ಕುಸುಮ ಥರ ಥರ ಸುಮ
ಮಾಲೆಯಿಂದ ೨

ಕದಳೀ ಖರ್ಜೂರ ದ್ರಾಕ್ಷಿ ಮಧುರ ದಾಳಿಂಬ ನಾರಿಕೇಳ
ಮುದದಿ ಅರ್ಪಿಸಿ ಕರ ಚರಣ ತೊಳೆದು ಸದಮಲೆಗಾರುತಿ
ಬೆಳಗುವೆನು ೩

ಸಿಸ್ತಿಲಿ ಚಾಮರವ ಬೀಸಿ ಸ್ವಸ್ತಿ ಪೇಳುತ ವರಗಳ ಬೇಡಿ
ಮುಕ್ತಿದಾತೆ ಮಾಂಗಲ್ಯ ಭಾಗ್ಯವನಿತ್ತು ಪಾಲಿಸೆಂದು
ಕರವ ಮುಗಿದ ೪

ಅಷ್ಟೈಶ್ವರ್ಯದಿಂದ ಮೆರೆವ ದಿಟ್ಟ ಮೂರುತಿ ಶ್ರೀ ಶ್ರೀನಿವಾಸನ
ದಿಟ್ಟ ಮನದೊಳಿಟ್ಟು ಧ್ಯಾನಿಪ ದಿಟ್ಟ ವರವ ಕೊಟ್ಟು ನೀ
ಕರುಣಿಸೆಂದು ೫

## ೮೮

ಬಂದಳು ಭಾಗ್ಯನಿಧಿ ಶ್ರೀಧರನರಸಿ ಪ.

ಪೊಂದಿದ ಭಕ್ತರಾನಂದದ ಸ್ತುತಿಗಾ
ನಂದ ಪಡುತ ಒಂದೊಂದ್ಹೆಜ್ಜೆನಿಡುತಾ ಅ.ಪ.

ಕಡಗ ಕಂಕಣ ತೋಳ್ಬಂದಿಯ ಧರಿಶಿ
ಬಡನಡು ಬಳುಕುತ ದೃಢಭಕ್ತರೆಡೆಗೆ ೧

ಹೆರಳು ಬಂಗಾರದ ಶಿರದ ಮಲ್ಲಿಗೆ ಮುಡಿ
ಸರಸದಿಲುದರುತ ವರಪ್ರದ ಮಾತೆ ೨

ವರದ ಶ್ರೀ ಶ್ರೀನಿವಾಸ ಸ್ವರ ರಮಣಿಯು ತಾ
ಥರಥರದ್ವರಗಳ ಕರುಣಿಸಲೆಮಗೆ ೩

## ೮೯

ಬಂದಳು ಭಾಗ್ಯನಿಧಿ ಶ್ರೀವರನಿಧಿ
ಬಂದಳು ಭಾಗ್ಯನಿಧಿ ಪ.

ಅರಿಶಿಣ ಕುಂಕುಮ ಪರಿಮಳ ಗಂಧವು
ನಿನಗರ್ಪಿಸುವೆನು ತಾಯೆ ಶ್ರೀವರನಿಧಿ ೧

ಜಾಜಿ ಮಲ್ಲಿಗೆ ರೋಜಾ ಸಂಪಿಗೆ
ಸೋಜಿಗಮಾಗಿಹ ಸುರಗಿ ಅರ್ಪಿಸುವೆನು ೨

ಜರಿಯ ಪೀತಾಂಬರ ಝುಗಝುಗಿಸುತಲಿ
ಜಗದೊಡೆಯನ ರಮಣಿ ಶ್ರೀ ವರಲಕ್ಷ್ಮಿ ೩

ಕದಳಿ ಖರ್ಜೂರವೂ ಬದಳಿ ದಾಳಿಂಬವು
ಮುದದಿ ತೆಂಗಿನಕಾಯಿ ಫಲವ ಅರ್ಪಿಸುವೆನು ೪

ಶುಕ್ರವಾರದಿ ಭಕ್ತರ ಮನೆಯೊಳು
ನಿತ್ಯ ಪೂಜೆಯಗೊಳ್ವ ಶ್ರೀ ವರನಿಧಿ ೫

ಶ್ರೀ ಶ್ರೀನಿವಾಸನ ಪ್ರೀತಿಯ ಲಕ್ಷ್ಮಿ
ನೀ ಕರುಣದಿ ಸಲಹೆ ಶ್ರೀ ವರಲಕ್ಷ್ಮಿ ೬

## ೬೦

ಬಾ ಭಾಗ್ಯಲಕ್ಷ್ಮಿ ನಿನ್ನ ನಾ ಸೇವೆಗೈಯ್ಯುವೆ
ನಾ ನಿನ್ನ ಪ್ರಾರ್ಥಿಸಿ ಬೇಡಿಕೊಂಬುವೆ ಪ

ನಿನ್ನೇ ನಂಬಿದೆ ಪನ್ನಗವೇಣಿ
ನೀಯೆನ್ನ ಕೈಯ ಬಿಡಬೇಡ ತಾಯೆ
ಸನ್ನುತ ಚರಿತೆ ನಿನ್ನೇ ನಂಬುವೆ
ಮುನ್ನಿನಘ ಕಳೆದು ನಿನ್ನ ಪಾದ ತೋರೆ
ಸಂಪನ್ನೆ ನಿನ್ನ ಸದಾ ಸೇವೆಗೈವ ಚಿದಾನಂದವೀಯೆ ೧

ಸಾರವಾದ ಸಂಸಾರದಲಿ ನೀರೆ ನೀನಲ್ಲದಿನ್ನಾರೆ
ತೋರಿ ಕರುಣವ ನೀ ಸಾರೆ ಬಂದು
ಪೊರೆ ಕರುಣಾಸಿರಿಯೆ ಎನ್ನ ಸೇವೆಯನು ಕೈಗೊಂಡು
ಲಕುಮೀತಾಯೆ ಸದಾನಿನ್ನ ಸೇವೆ ಚಿದಾನಂದವೀಯೆ ೨

ಪತಿ ಪಾದಸೇವೆ ಸತಿಗೆ ನೀನುಳಿಸಿ
ಸತತದಿ ಮಾಂಗಲ್ಯ ಭಾಗ್ಯವ ನೀಡೆ

ಪತಿತ ಪಾವನ ಶ್ರೀ ಶ್ರೀನಿವಾಸ ಸತಿ ನೀನೆಂದು
ಸ್ತುತಿಪೆ ಸತತ ಎನ್ನ ಮೊರೆಯಾಲಿಸಿ ಕಾಯೆ
ಸದಾ ನಿನ್ನ ಸೇವೆ ಚಿದಾನಂದವೀಯೆ ೩

೯೧

ಬಾರಮ್ಮಾ ಬಾರಮ್ಮಾ ಭಾಗ್ಯದನಿಧಿಯೇ
ತೋರಮ್ಮಾ ತೋರಮ್ಮಾ ಕರುಣಾನಿಧಿಯೇ ಪ.

ಬಾರಮ್ಮಾ ಮಹಲಕ್ಷ್ಮಿ ತೋರುತ ಕರುಣವ
ಬೀರುತ ತವಕದಿ ಸೇರುತ ಪತಿಸಹ ಅ.ಪ.

ಶ್ರೀ ರಮಾದೇವಿ ಇನ್ನಾರು ಸಮನಾಗರೇ
ಭೂ ರಮೇಶನ ಸೇವೆಗೆ ನಿಲ್ಲಲು
ಬಾರಮ್ಮಾ ಭಕ್ತರುದ್ಧಾರ ಮಾಡಲು ಎಲ್ಲಾ
ಕಾರಳು ನೀನಾಗಿ ವಾರುಧಿಶಯನಗೆ ಸೇವಿಸಲು
ಘೋರತರ ಸಂಸಾರ ಸಾಗರ ಪಾರುಗಾಣಿಪ
ಹರಿಯು ನಿನ್ನೊಳು ಸೇರಿಯಿರುತಿಹನೇ
ತೋರಿ ಭಕ್ತರಿಗೆ ಚಾರುಕಮಲ ಕರಾರವಿಂದದಿ
ಧೀರೆಯೆತ್ತುಪಕಾರ ಮಾಡಲು ವಾರಿಜಾಕ್ಷಿಯೆ ಸಾರುತೀಗಲೆ ೧

ಪುಲ್ಲಲೋಚನೆ ನಿನ್ನ ಗಲ್ಲ ಮಿಂಚಿನ ಸೊಬ
ಗೆಲ್ಲ ನೋಡುತ ನಿನ್ನ ಒಡನಾಡುವ
ಪಲ್ಲವಾಧರೆ ನಿನ್ನ ವಲ್ಲಭ ಹರಿಯಲ್ಲಿ
ಎಲ್ಲ ಭಕ್ತರ ಮನಸಲ್ಲ ಅರುಹು ತಾಯೆ
ನಿಲ್ಲದೆಲೆ ಕಾನಲ್ಲಿ ಇಹ ಹರಿ ಎಲ್ಲಿ ಭಕ್ತರು ಕರೆ
ದಲ್ಲಿ ಬರುತಿಹನೆ ಮಲ್ಲಮರ್ಧನ ಶ್ರೀ ನಲ್ಲ ಕೃಷ್ಣನು
ಚೆಲ್ಲಿ ಕರುಣವ ಬಲ್ಲೆ ನಿನಪತಿ ಗುಣಗಳನೆಲ್ಲ ಕಾಯೆ ೨

ರಂಗನರ್ಧಾಂಗಿಯೆ ಮಂಗಳ ಮೂರುತಿ ನಿ
ನ್ನಂಗಜನಯ್ಯನ ಕಾಣೆ ಕಾಯೆ
ಗಂಗಜನಕ ಸಹ ಸರ್ವರಂಗದೊಳಿದ್ದು ನೀ
ರಂಗನ ಲೀಲೆಯತಿಸಂಭ್ರಮದಲಿ ನೋಳ್ಪೆ
ತುಂಬುರು ನಾರದರು ಪಾಡಲು
ರಂಭೆ ಊರ್ವಶಿ ನಾಟ್ಯವಾಡಲು
ಸಂಭ್ರಮದಿ ಶ್ರೀ ಶ್ರೀನಿವಾಸನ್ನ ಇಂಬತೋರಿಸೇ
ಅಂಬುಜಾಕ್ಷಿಯೇ ಬೆಂಬಿಡದೇ ಎನ್ನ
ನಂಬಿರುವೇ ನಿನ್ನ ಕಂಬುಕಂಧರೆ
ಕುಂಭಿಣೀಪತಿ ಸಹಿತ ಬೇಗನೆ ೩

## ೯೨

ಬಾರೆ ನೀ ಹಂಸಗಮನೆ ಮಾರನ ಪೀಠಕ್ಕೆ
ಸಾರಿ ಕರೆವೆ ಲಕ್ಷ್ಮೀದೇವಿಯೇ ಪ.

ಕಮಲ ಪುಷ್ಪದೊಳು ನೆಲಸಿದ ಲಕ್ಷ್ಮಿಯೆ
ಕಮಲದ ಹಾಸಿಗೆ ಕಾಮಜನಕನ ಸಹಿತ ೧

ಮುತ್ತು ಮಾಣಿಕ್ಯವು ಕೆತ್ತಿದ ಹಾಸಿಗೆ
ಮುತ್ತೈದೆರೆಲ್ಲರೂ ಮುದದಿಂದ ಕರೆಯುವೊರು ೨

ಶ್ರೀ ಲಕ್ಷ್ಮೀದೇವಿಯೆ ಶ್ರೀ ಕೃಷ್ಣನರಸಿಯೆ
ಶ್ರೀನಿವಾಸನ ಕೂಡಿ ಪ್ರೀತಿಯಿಂದ ಸರಸನಯನೆ ೩

## ೯೩

ಹಾರವ ಕಟ್ಟಿ ಕೊಡುವೆ ಲಕ್ಷ್ಮೀ
ವರ ಭಕುತಿಯ ಪ.

ಮಾರರಮಣನಿಗೆ ಹಾರ ಹಾಕಿ ತೋರಿಪೆ ಪಥವೆಂದು ಅ.ಪ.

ರಾಮ ಅಮೃತವೆಂಬ ನೇಮದ ಗಂಗೆಯ
ಕಾಮಿಸಿ ತಂದು ನಿರಾಮಯ ಕೃಷ್ಣಗೆಂದು
ಪ್ರೇಮದ ನಾರನು ಕಾಮಿತ ಪುಷ್ಪ
ಮಂದಾರ ಮಲ್ಲಿಗೆಯನು ಸ್ವಾಮಿಗೆ ಸಲಿಸೆಂದು ೧

ಅಗಣಿತ ಮಹಿಮಗೆ ಸೊಗವಿನ ತುಳಸಿಯ
ಚಿಗರಿನ ಹಾರವ ಜಗಿದಾನಂದದಿ
ಸೊಗಸಿನ ರೋಜವ ಬಗೆಬಗೆ ಭೋಗಗ
ಲೊಗೆದುಗೆಂಡಸಂಪಿಗೆ ಚಿಗಿಚಿಗಿದಾಡುತ ೨

ಭಕ್ತಿಯ ಸುರಗಿ ವಿರಕ್ತಿ ಪಚ್ಚೆಯ ತೆನೆ
ಯುಕ್ತಿಯ ಮರುಗ ಶಕ್ತಿ ಸ್ವರೂಪಳೆ
ಭಕ್ತ ವತ್ಸಲನಿಗೆ ಇತ್ತಪೆ ನಾನೀಗ
ಸ್ತುತ್ಯ ಶ್ರೀ ಶ್ರೀನಿವಾಸ ದೇವಕ್ಕಳಿಂ ನೀನೆಂದು ೩

೯೪

## ಹನುಮ - ಭೀಮ - ಮಧ್ವರು

ಆದರ್ಶಕನೋ ಹರಿ ತನ್ನಾಧರಿಸಿದವರಿ
ಗಾದರ್ಶಕನೋ ಹರಿ ಪ.

ಈ ಧರೆಯೊಳು ತನ್ನಾಧರಿಸಿದ
ಪಾದ ಸೇವಕ ಪಾಂಡವರಿಗೆ ಹರಿ ಅ.ಪ.

ತನುಮನಧನ ನಿನದೆನೆ ಹರುಷಿಪ
ಹನುಮನೇನಿತ್ತನೋ ಘನರಾಮ ರಾಘವಚಂದ್ರಗೆ
ವನರುಹಲೋಚನ ಇನಕುಲಚಂದ್ರನ
ತನ ಹೃದಯದಿ ದಿನ ನೆನೆದನಲ್ಲದೆ ೧

ಕುರುಕುಲ ಧ್ವಂಸನು ಕುರುಹು ಕೃಷ್ಣನೇ
ಎನೆ ಭೀಮ ನೆರೆದಾ ನೃಪ ನಿಸ್ಸೀಮನನ
ಕರಿಬಲ ಸಮ ಕರುಣಿಸಿ ಭೀಮಗೆ
ಕರೆದಾದರಿಶಿದ ರಣ ಅಧ್ವರದಲಿ ಹರಿ ೨

ಮಧ್ವಾಂತರ್ಗತ ಮುದ್ದು ಶ್ರೀ ಶ್ರೀನಿವಾಸ
ಇದ್ದ ಸ್ಥಳವು ಶುದ್ಧ ಎನುತ ಪೇಳಿ
ಸದ್ವೈಷ್ಣವರ ಉದ್ಧರಿಸಲವರ
ಹೃದ್ಗಮಲದಿ ಕೃಷ್ಣ ಇದ್ದಾನೆಂದು ೩

## ೯೫

ಕರುಣ ಪಡೆಯಬೇಕು ಮನುಜ ಗುರುಗಳಾ ಪ.

ಕರುಣ ಪಡೆಯಿರೊ ಗುರು ಮಧ್ವರಾಯರ
ಹರುಷದಿ ಹರಿಯನು ನಿರುತದಿ ಸ್ಮರಿಸುವ ಗುರು ಅ.ಪ.

ಸ್ಮರಿಸಿದ ಮಾತ್ರದಿ ಶರಧಿಯ ದಾಟುತ
ವರಪ್ರದ ರಾಮನ ತರುಣಿಗುಂಗುರವಿತ್ತು
ಹರಿ ಕರುಣಾಮೃತವೆರಡು ರಾಮರ
ಚರಣ ಸ್ಮರಣೆಯನು ನಿರುತ ಕೊಡುವ ಗುರು ೧

ಕಂತುಜನಕನ ಅಂತರವರಿತು
ನಿಂತು ಕೌರವ ಕುಲ ಸವರುತಲೆ
ಅಂತಕಗಿತ್ತಾ ಕಾಂತೆ ದ್ರೌಪದಿಯ
ಪಂಥವ ಸಲಿಶಿದ ಕುಂತಿತನುಜ ಗುರು ೨

ಮಧ್ವ ಮುನಿಗಳಾದ್ವರ ಪಾಲಕ
ಮುದ್ದು ಕೃಷ್ಣನ ಹೃದ್ಗಮಲದೊಳಿಟ್ಟ
ಅದ್ವೈತಿಗಳ ಸುವಾದಿಸಿ ಗೆದ್ದು
ಶುದ್ಧ ಶ್ರೀ ಶ್ರೀನಿವಾಸನ ಭಕ್ತರ ಗುರು ೩

## ೯೬

ನೆನೆಮನವನುದಿನ ಹನುಮದೀಶನ
ಕನಸಿನಲಿ ತನುಸುಖವನು ಬಯಸದೆ ನಿ ಪ.

ಮನಸಿಜ ಪಿತನನೆ ನೆನೆನೆನೆದ್ಧಿಗ್ಗುತ
ನಿನ ಹೃದಯದಲ್ಲರಿಯನು ನಿಲಿಸುತಲೆ
ತನುಮನವರ್ಪಿಸೆ ಜನುಮ ಜನುಮದಘ
ವನು ಕಳೆವನು ರಾಮನುಮಾನವೇಕೆ ೧

ಆರು ಅರಿಯದ ತೋರಿ ಭಕ್ತಿಯೇ
ಬಾರಿ ಪಾಶದಿ ಕಟ್ಟಿಹ ಹನುಮ
ವಾರಿಜನಾಭನು ಹಿಗ್ಗಿ ನಿಲುತಲೆ
ಚಾರುಸೇವೆಗೆ ಬಹೆ ಎನೆ ರಾಮನ ನೆನೆ ೨

ಕಲ್ಲಾಗಿದ್ದ ಅಹಲ್ಯೆಯ ರಾಮನು
ನಲ್ಲೆಯ ಮಾಡಿದನರಿಯೆಯ ಮನವೆ
ಚೆಲ್ಲುತ ಕರುಣವ ಶಬರಿಯ ಎಂಜಲನುಂಡ ರಮಾ
ವಲ್ಲಭ ಶ್ರೀ ಶ್ರೀನಿವಾಸ ಕರುಣಿಯೊ ನೆನೆ ೩

## ೯೭

### ತುಳಸಿ

ತುಳಸಿ ಪೂಜೆ ಮಾಡಿ ಹರಿ ಪ್ರೇಮದ ಪ.

ಹಳದಿ ಕುಂಕುಮ ಪರಿಮಳದ ಗಂಧದಿ
ಅಂಗಳದಿ ಶೋಭಿಪ ಹರಿಸತಿ ಅ.ಪ.

ಆದಿಯಲಿ ತಾ ಮೋದದಿಂದಲೆ
ಮಾಧವ ಪ್ರಿಯೆಯನು ದ್ರೌಪದಿ ಪೂಜಿಸೆ

ಮೋದದಿಂದಕ್ಷಯ ಪಾತ್ರೆಯೊಳ್ ಪಾಕವ
ಸಾಧುವ ದಣಿಸಿದ ಆದಿ ಕೃಷ್ಣನ ಸತಿ ತುಳಸಿ ೧

ಪರಿಪರಿ ಭಾಗ್ಯಕೆ ಹಿರಿಮೆ ಶ್ರೀ ತುಳಸಿ ಯೆಂ
ದರುಹಿದ ನಾರದ ವರ ವಚನವು ಎಂದು
ಪರಮಾದರದೊಳು ಪೂಜಿಸಿ ತುಳಸಿಯ
ಹರಿಗೆ ಅರ್ಪಿಸೆ ಹರುಷವ ಕೊಡುವ ೨

ಉದಯ ಕಾಲದಿ ಮುದದಿ ಪೂಜಿಸಿ
ಮಧುರ ಸ್ವರದಿ ಮಾಘದ ಮಾಸದಲಿ
ಮುದದಲೊಂದಿಸೆ ವದಗಿದಾಪತ್ತನು
ಚದರಿಸಿ ಕಳೆದು ಶ್ರೀ ಶ್ರೀನಿವಾಸನ
ಮುದದಿ ತೋರುವ ಶ್ರೀ ತುಳಸಿ ೩

## ೯೮

ದಯವ ತೋರೆ ತುಳಸಿ ಹರುಷವೆರಸಿ
ಪರಾಂಬರಿಸಿ ಹರಿಯ ಸ್ಮರಿಸಿ ಪ.

ನಿನ್ನ ಬಿಟ್ಟು ನಾನನ್ಯರ ಪೂಜಿಸೆ
ಬೊಮ್ಮನೈಯ್ಯನ ರಾಣಿ ನಮ್ಮ ಕಷ್ಟಗಳ ಹರಿಸಲು
ಬಾರಮ್ಮ ನಿರ್ಮಲ ಶ್ರೀ ತುಳಸಿ ಕರ್ಮಗಳನೆ ಕಳೆದು
ಭವ ದಯಾವೆರೆದು ಪ್ರೇಮಗರೆದು ತಾಯೆ ನೀ ೧

ಮಲ್ಲೆ ಮಲ್ಲಿಗೆ ಜಾಜಿ ಮರುಗ ಸೇವಂತಿಕೆ
ಎಲ್ಲ ಪೂಜೆ ಮಾಡೆ ಸಲ್ಲಲಿತದಲಿ
ನೀನಿಲ್ಲದ ಪೂಜೆಯ ವಲ್ಲನು ಶ್ರೀ ಹರಿಯು
ಎಲ್ಲರಿಗಧಿಕಳೆಂದು ಪೂಜೆಗೊಂಡು ದಯಾಸಿಂಧು ತಾಯೆ ನೀ ೨

ಶ್ರೀ ಶ್ರೀನಿವಾಸನೊಳು ವಾಸಿಪೆ ಸರ್ವದಾ ಪೋಷಿಪೆ ಭಕ್ತರನು
ವಾಸುದೇವನ ತೋರಿ ಪೋಷಿಸೆ ಬಾರಮ್ಮ

ಕೃಪಾರ್ಣವ ಭಾರ್ಗವ ಸುಪ್ರಭಾವ
ಕೋಪಜಿತ ಭೂಪಾಲ ದೇವದೇವ
ತಾಪಹರ ಶೇಷಾದ್ರಿ ನಿಲಯ ಸದಯ
ಶ್ರೀಪರಂಧಾಮ ಸತ್ಕೀರ್ತಿ ಕಾಮ

೯

ನೀಲಮೇಘಶ್ಯಾಮ ನಿಖಿಲಸದ್ಗುಣಧಾಮ
ಫಾಲಾಕ್ಷನುತನಾಮ ಪೂರ್ಣರಾಮ
ಸರಸಿಜಾಸನವಿನುತ ಸರಸ ಕರುಣಾಭರಿತ
ಪರಮಪಾವನ ಚರಿತ ಪುಣ್ಯಗಾತ್ರ
ಭಾರ್ಗವ ಮದಾಪಹ ಭುವನ ಮೋಹಕ ದೇಹ
ಭಗರ ಕಾರ್ಮುಕಭಂಗ ಮಂಗಳಾಂಗ
ಇನಕುಲಾರ್ಣವ ಸೋಮ ತ್ರಿನಯನ ಮನಃ ಪ್ರೇಮ
ಜನನಿಲಯ ಸುವಿರಾಮ ದಿವ್ಯನಾಮ

ಪಾಕಾರಿನುತನಾಮಪರಂಧಾಮರಾಮ
ಸಾಕೇತಪುರಧಾಮ ಕಾಕುತ್ಸ್ಥರಾಮ
ರಾಕೇಂಧು ನಿಭವದನ ದುರಿತದಮನ
ಶ್ರೀಕಾಂತ ಶೇಷಾದ್ರಿನಿಲಯ ಸದಯ

೧೦

ಗೋವರ್ಧನೋದ್ಧಾರ ಗೋಪಿಕಾಜನಜಾರ
ದೇವಕೀ ಸುಕುಮಾರ ಸೂಕ್ತಿಕಾರ
ರುಕ್ಮಿಣೀ ಮನೋಹರ ರುಕ್ಮಗರ್ವನಿವಾರ
ಚಕ್ರಧರ ಶ್ರೀರಂಗ ಶ್ಯಾಮಲಾಂಗ
ಪಾಂಡುಸುತ ಸನ್ಮಿತ್ರ ಮಾಂಡವ್ಯಸನ್ನುತಾ

ಪರಿಪರಿ ಭಾಗ್ಯಕೆ ಸರಿಮಿಗಿಲಾದ
ಪರಿಮಳ ತುಳಸಿಯ ಸುರಮುನಿ ಧರಿಸುತ
ಸ್ಮರಿಸುತ ಹರಿಯನು ವರದ ಶ್ರೀ ಶ್ರೀನಿವಾಸ
ಪೊರೆವನೆಂದ್ವರದಿಹ ೩

## ೧೦೧

ಶ್ರೀ ತುಳಸಿ ಜಯ ತುಳಸಿ ಜಯ ಜಯಾ ಜಯತು ತುಳಸಿ
ಶ್ರೀ ಕೃಷ್ಣನ ಅರಸಿ ಜಯತು ಜಯತು ಜಯ ಶುಭಕರಿ ಪ.

ಪಾಲಗಡಲನು ಮಥಿಸೆ ಶ್ರೀಲೋಲ ಅಮೃತವನ್ನಂಚೆ
ಬಾಲ ಶ್ರೀ ಕೃಷ್ಣನ ಲೋಲ ಲೋಚನದಿ
ಬಾಲೆ ನೀನುದಿಸಲುತ್ಸವದಿಂದ ಸುರರೆಲ್ಲ
ಮೇಲೆ ಅಂಬರದಿಂದ ಪುಷ್ಪವೃಷ್ಟಿಯನು ಕರೆಯೆ
ಜಯ ಜಯ ವಾದ್ಯದಿ ೧

ದ್ವಿಜರೆಲ್ಲ ವೇದ ಘೋಷದಿ ನಿನ್ನ ಸ್ತುತಿಸಲು
ಅಜಭವಾದಿಗಳೆಲ್ಲ ಸ್ತೋತ್ರವನು ಗೈಯ್ಯೆ
ಭುಜಗಭೂಷಣಸಖನು ತ್ರಿಜಗವಂದಿತ ನಿನ್ನ
ಭಜಕ ಜನರಾಪ್ತ ಶ್ರೀ ಕೃಷ್ಣ ವರಿಸಿದನೆ
ಜಯ ಜಯ ಕಲ್ಯಾಣಿ ೨

ದೇವಸ್ತ್ರೀಯರು ಬಂದು ದೇವ ಉಡುಪ ತಂದು
ದೇವಕಿತನಯನ ಸಹಿತ ನಿನ್ನ
ಪಾವನದರಿಶಿಣ ಕುಂಕುಮ ಪರಿಮಳ ಗಂಧದಿ
ದೇವಿ ಪುಷ್ಪಮಾಲೆಯ ಪೂಜಿಸಿದರು
ಶ್ರೀ ಶ್ರೀನಿವಾಸನ ಸತಿ ೩

## ೧೦೨

### ಸರಸ್ವತಿದೇವಿ

ಕಮಲಜಭವ ರಾಣಿ ಫಣಿ ವೇಣಿ
ನಮಿಪೆ ನಿನ್ನ ಮನಶುಕವಾಣಿ
ಸುಮನಸರೊಡೆಯನ ಗಮನದೊಳಿಡುತೆ
ಪವನ ಮತದಲಿಡು ತಾಯೆ ಕಾಯೆ ಪ.

ವಾಣಿ ಬ್ರಹ್ಮನ ರಾಣಿಯೆನೀ
ಗಾಣಿಸು ಮನದಿ ಸುವಾಣಿಯನು
ಮಾಣದೆ ಜಪಸರ ಕಲ್ಯಾಣಿಯು ನೀನು
ಪ್ರಾಣದೇವನ ಸತಿ ಜಾಣೆ ಭಾರತಿಯೆ ೧

ವಾರಿಜಭವ ಸತಿಮತಿ ತೋರುತ ಮನದಿ
ನೀರೆ ಎನ್ನ ಮನ ಸೂರೆಗೊಳುತಲಿ
ಸಾರುತ ಹರಿನಾಮಾಮೃತವನು ಕೊಡು
ಮಾರಮಣ ಸ್ತುತಿ ಮಾಡಿಸುತ ೨

ಅಸುರ ಮರ್ದನ ಹರಿ ನಿನವಶದಲ್ಲಿಹನೆ
ಸುಸ್ವರದ ಮಧುರದಿ ಪಾಡುತಲಿರುವೆ
ವಶವಲ್ಲದಲಾನಂದದಿಂದ ಶ್ರೀ ಶ್ರೀನಿವಾಸನ
ಕುಸುಮಶರನಪಿತನ್ವಶದಲಿ ನಿಲಿಸೆ ೩

## ೧೦೩

ವಾಣಿ ಬಾರೆ ಬೇಗ ವದನದಿ
ವಾಣಿ ಬಾರೆ ಬೇಗ ಪ.

ಜಾಣೆ ಕಲ್ಯಾಣಿ ಬ್ರಹ್ಮನ ರಾಣಿ ಭಾರತಿ ವಾಣಿ ಅ.ಪ.

ಹೃದಯ ಮಂದಿರದಿಲಿದು ಸುವರ್ಣದ
ಪದುಮ ಮಂಟಪಕೆ ಮುದವ ಬೀರುತೆನ್ನ
ವದನದಿ ಸೇರುತ ಮುದ ಸುವಾಣಿಯ
ಚದುರೆ ನುಡಿಸುವ ಶುಕವಾಣಿ ೧

ಮಂಗಳ ಮಹಿಮನ ಅಂಗುಟದಿಂ ಬಂ
ದಂಬರದಿಂದುದಿಶಿದಾಮರ ತರಂಗಿಣಿ
ಗಂಗಾಸ್ನಾನವ ಮಾಡಿಶಿ ನಿನಗೆ
ರಂಗನ ದಯಸ್ಯೆತ ಪೀತಾಂಬರನುಡಿಸುವೆ ವಾಣಿ ೨

ಭಕ್ತಿಯರಿಶಿಣ ಯುಕ್ತಿಯ ಕುಂಕುಮ
ಶಕ್ತಿಯ ಗಂಧವ ಪರಶಕ್ತಿಯ ಪೂವನು
ಮುಕ್ತಿದಾತೆ ಪೂಜಿಪೆ ಶ್ರೀ ಶ್ರೀನಿವಾಸ
ಮುಕ್ತಿಪಥದಪೂರ್ವ ಮುತ್ತಿನರಗಿಣಿ ವಾಣಿ ೩

## ೧೦೪

ಸ್ತುತಿಸಿ ಪ್ರಾರ್ಥಿಪೆ ನಿನ್ನನು ಸರಸ್ವತಿ
ಸ್ತುತಿಸಿ ನಮಿಪೆ ನಿನ್ನನು ಪ.

ಸ್ತುತಿಸಿ ನಮಿಸಿ ನಿನ್ನ ಜತನ ಮಾಡುತ್ತ ವದನದಿ
ಸ್ತುತಿಸುವ ಭಾಗವತರನು ತೋರಮ್ಮಾ ಅ.ಪ.

ಅಕ್ಷರಕ್ಷರ ರೂಪದಿ ಶ್ರೀಹರಿಯಾ
ಅಕ್ಷಯ ನಾಮವನು ಸ್ತುತಿಯ ಮಾ಼ಫ಼
ಸುಕ್ಷೇಮ ಪಡೆದಿಹ ಮಾತೆ ಸರಸ್ವತಿ ಪ್ರತಿ
ಅಕ್ಷರವನು ಅರಿವಾ ಭಾಗ್ಯವ ತೋರೆ ೧

ರಾಗರಾಗದಿ ಭಜಿಪೆ ಶ್ರೀ ಹರಿಯಾ ಅನು
ರಾಗಕೆ ಪಾತ್ರಳಾಗಿ ವಲಿಸಿಹೆ

ಭಾಗವತಾಗ್ರಣಿ ಶ್ರೀಹರಿ ನಾಮವ
ಶೀಘ್ರದಿ ಸ್ತುತಿಸುವ ಭಾಗವತರ ತೋರೆಂದು ೨

ಅಗಣಿತ ಮಹಿಮೆಯನೂ ಬಲ್ಲವಳು ನೀ
ಸುಗುಣಿ ಸರಸ್ವತಿಯೆ ಶ್ರೀ ಶ್ರೀನಿವಾಸನ
ಅಗಣಿತ ಗುಣಗಳ ಪೊಗಳುವ ಮತಿಯಿತ್ತು
ಅಘಹರ ಹರಿಭಕ್ತರಾ ಲಗುಬಗೆಯಲಿ ತೋರೆ ೩

## ೧೦೫

## ರುದ್ರದೇವರು

ಗಂಗಾಧರ ಮಹಾದೇವ ಶಂಭೊಶಂಕರ ಪ.

ಗಂಗಾಧರಾ ನಿನ್ನ ನಂಬಿದ ಭಕ್ತರಘ
ದ್ದಂಬ ಕಡಿದು ಹರಿ ಇಂಬ ತೋರೆ ಜಗ
ಕಂಬಾರಮಣ ನಿನ್ನ ಸಂಭ್ರಮದಿ ಸ್ತುತಿಪೆ ಅ.ಪ.

ಚಾರು ಚರ್ಮಾಂಬರ ಧೀರ ಧರಿಶಿ ಮೆರೆವ
ಸಾರಸ ತ್ರಿನೇತ್ರ ಚಾರು ಭೂತಗಣ ಸಂಚಾರ ಭಸ್ಮಧರಾ
ಹಾರ ಕೇಯೂರ ಮಧ್ಯ ಘೋರ ಸರ್ಪ ಭೂಷ ನಿನ್ನ
ಚಾರು ರೂಪ ವರ್ಣಿಸಲಳವೆ ಸಾರಸಾಕ್ಷ ಪಾರ್ವತಿಪ್ರಿಯ
ಕರುಣಾಕರಸ ದೊರಕದೆ ಶ್ರೀರಮಣನು ಸಿಗ ಕೋರೆ
ಹರಿಯ ನಿನ್ನ ಪಾದಪಂಕಜ ಹಾರೈಸುವೆ ಸಂಸಾರ ಶರಧಿಂ ೧

ಪರಮಪುರುಷ ಶ್ರೀ ರಾಮನ ತಾರಕ ವರಮಂತ್ರ ಜಪಿಸುವ
ವರ ಪಾರ್ವತಿಗರುಹಿ ಧರೆಯೊಳು ಮನುಜರ ವರಮನ
ಪರಿಪರಿ ಬೇಡುವೆ ಹರಿಸ್ಮರಣೇಯ ಎನಗೀಯೋ
ಕರುಣದಿ ಮಾರ್ಕಂಡೇಯಗೆ ವರವಿತ್ತು

ಚಿರಂಜೀವತ್ವವ ಪರಿಪಾಲಿಸಿದಂತೆ ಪರಿಪರಿ ಭಕ್ತರ
ಪೊರೆದಂತೆ ಪೊರೆಯೆನ್ನ
ಹರಿಸರಸಿಜ ಪರಮನ ಮರೆಯದ ಪರಿ ಇತ್ತು ೨

ಪಾಶಾಂಕುರಧರ ಪರಮಪವಿತ್ರನೆ
ಈಶ ಭಕ್ತರ ಭವಪಾಶದಿಂದುದ್ಧರಿಪೆ
ಶ್ರೀಶ ಶ್ರೀ ಶ್ರೀನಿವಾಸನಾಸಕ್ತಿಯಲಿ ಭಜಿಪ
ದೋಷರಹಿತ ಮನ ಭಾಸಿ ಪಂಥದಿ ಈವೆ
ಕಾಶೀಶ್ವರ ನಿನ್ನ ಲೇಸು ಭಕ್ತಿಲಿ ಸ್ತುತಿಪಾ
ದಾಸ ಸಂಗದೊಳಿರಲು ಲೇಸು ಮನವ ಕೊಡು
ವಾಸುಕಿಶಯನ ಸುತನ ಸುತನೆ ನಿನ್ನ
ವಿಸು ದಿನದಿ ಸ್ತುತಿಸುತ ಹಾರೈಸುವೆ ೩

## ೧೦೬

ನಂದಿಯನೇರಿ ಬರುತಿಹ ಸುಂದರನ್ಯಾರೆ ಪೇಳಮ್ಮಯ್ಯ ಪ.

ಚಂದ್ರಚೂಡ ಗಂಗಾಧರ ಶಂಕರ
ಸುಂದರ ಗೌರೀರಮಣ ಕಣಮ್ಮಾ ಅ.ಪ.

ಕರದಿ ತ್ರಿಶೂಲ ಧರಿಸಿದನಾರೆ ಪೇಳಮ್ಮಯ್ಯ
ವರ ಡಮರುಕಪಾಲ ಪಿಡಿದಿಹನಾರೆ ಪೇಳಮ್ಮಯ್ಯಾ
ಕರುಣವ ತೋರುತ ಸಕಲರ ಮನ ಮಂದಿರದಲಿ
ಪೊಳೆಯುವ ಗಿರಿಜಾ ರಮಣ ಕಣಮ್ಮ ೧

ಗಜ ಚರ್ಮಾಂಬರ ಧರಿಸಿಹನಾರೆ ಪೇಳಮ್ಮಯ್ಯ
ತ್ರಿಜಗನ್ಮೂರುತಿ ನೊಸಲಿಗೆ ಭಸ್ಮವ ಧರಿಸಿಹನಾರೆ ಪೇಳಮ್ಮಯ್ಯ
ಋಜುಗುಣದೊಡೆಯಗೆ ರಜತಾದ್ರಿನಿಲಯ
ನಿಜ ಪಾರ್ವತೀರಮಣ ಕಣಮ್ಮಾ ೨

ಶೇಷನಾಭರಣವ ಧರಿಸಿಹನಾರೆ ಪೇಳಮ್ಮಯ್ಯ
ಸೋಸಿಲಿ ಮೂಗಣ್ಣವನಾರೆ ಪೇಳಮ್ಮಯ್ಯ
ವಾಸುಕಿಶಯನ ಶ್ರೀ ಶ್ರೀನಿವಾಸನ ವಾಸ
ಶಂಭೋ ಶಂಕರನು ಕಣಮ್ಮಾ ೩

## ೧೦೭

ಪಾರ್ವತೀಶ ಎನ್ನಿರೋ ಮನಸಾರೆ
ಪಾರ್ವತೀಶ ಎನ್ನಿರೊ ಪ.

ಪಾರ್ವತೀಶನ ಭಜಿಸಿ ನಿಮ್ಮನು
ದ್ಧಾರ ಮಾಡುತ ಹರಿಯ ಮಹಿಮೆಯ
ಸಾರಿ ಭಜಿಸಲು ಮನವನೀಯುವ
ಕಾರ್ಯ ದುರಂಧರ ಈಶನನ್ನು ಅ.ಪ.

ತರುಣಿ ಅಸ್ತಂಗತನಾಗುತಿರೆ
ಹರುಷದೊಳೊಮ್ಮೆ ಶಂಭೊ ಎಂದು
ವರ ಉಚ್ಚಾರವ ಮಾಡಲಾಕ್ಷಣ
ತರಿದು ನಿಮ್ಮಯ ಸಕಲ ಪಾಪವ
ಪೊರೆವ ಕರುಣಿ ಈಶನೆನ್ನುತ
ಸ್ಮರಿಸಿ ಸುಖದೊಳು ಬಾಳಿ ಜಗದೊಳು ೧

ಶ್ರೀಶ ಶ್ರೀರಾಮ ಪಾದ ನೆನವ ಶಂಭೋ ಎಂ
ದೀ ಸುನುಡಿಯ ತಿಳಿದು
ಭಾಸುರಾಂಗನ ಮೊಮ್ಮಗನ ಸ್ತುತಿ ಲೇಸು
ಎಂದು ಧ್ಯಾನವ ಮಾಡಲು
ಸೂಸಿ ಕರುಣವ ಬೀರಿ ನಿಮಗೆ
ಲೇಸು ಮಾಡುತ ಹರಿಯ ತೋರುತ ೨

ಪಾಶಾಂಕುಶಧರನೆನಲು ನಿಮ್ಮಯ ಪಾಪ
ರಾಶಿ ಖಂಡಿಸಿ ಪೊರೆದು
ಶ್ರೀ ಶ್ರೀನಿವಾಸ ಪದವನು
ಈಶ ಧ್ಯಾನಿಪ ಮನವನೀವನು
ಸೂಸಿ ಭಕ್ತಿಯೊಳ್ ಶ್ರೀಶ ಭಕ್ತರು
ವಿಶ್ವಾಸದಿಂದಲಿ ಈಶ ಎನ್ನಿರೋ ಈ ಸಂಸಾರ ಈಸಲೋಸುಗ ೩

## ೧೦೮

ವರಗೌರೀರಮಣ ಶರಣಾಗತರಜತಾದ್ರಿಗೆ
ದೊರೆಯೆ ಪೊರೆವರ ಪ.

ಹರಿಯನು ಧ್ಯಾನಿಪ ಪರಿಯನು ಮನಕೆ
ವರೆದಾದರದೊಳು ಕರುಣಿಪುದು ೧

ಭ್ರಮರವು ಪರಿಮಳ ಭ್ರಮಿಸುವಂತೆ ಮನ
ಕಮಲನಯನನಲಿ ಒಲಿವಂತೆ ೨

ಪಾರ್ವತೀರಮಣ ಪಾಲಿಸು ಎನ್ನನು (ಪಾರುಗಾಣಿಸು ಭವ)
ಶ್ರೀವರ ಶ್ರೀ ಶ್ರೀನಿವಾಸನ್ನ ತೋರಿ ೩

## ೧೦೯

### ಪಾರ್ವತಿದೇವಿ

ಕರುಣದಿ ಕಾಯೆ ತಾಯೆ ಕರುಣಾಭರಣೆ ವಿಶ್ವಂಭರಣೆ ಪ.

ಕರುಣಿಸಿ ಕಾಯೆ ತಾಯೆ ಮರೆಯದೆ ನಿನ್ನಯ
ಚರಣಸ್ಮರಣೆಯಿತ್ತು ಭರದಿ ಕಾಪಾಡೆ ಅ.ಪ.

ಅಂಬಾ ಲೋಕೇಶ್ವರಿ ಅಂಬಿಕೆ ನಿನಪಾದ
ನಂಬಿದವರಿಗೆ ಕಷ್ಟಗಳುಂಟೆ ತಾಯೆ ನಿನ್ನ

ಕಂಬುಕಂಠನರಾಣಿ ಬೆಂಬಿಡದಲೆ ಕಾಯೆ
ಸಂಭ್ರಮದಲಿ ನಿನ್ನ ಇಂಬ ತೋರಿಸುತ ೧

ಅಖಿಳಾಂಡನಾಯಕಿ ಸುಖಪ್ರದಾಯಕಿ
ಸಖಿ ಶಂಕರನೊಳು ಸುಖಿಪ ಕಲ್ಯಾಣಿ
ಅಕಳಂಕ ಮಹಿಮಳೆ ಸಕಲಕಾಲದಿ ನಿನ್ನ
ಭಕುತಿಯೊಳ್ ಪೂಜಿಪ ಸಖರೊಳಗಿರಿಸೆ ೨

ಭಕ್ತ ಮಂದಾರೆ ಭಕ್ತಿ ಮುಕ್ತಿಯನೀಯೆ
ಭಕ್ತವತ್ಸಲ ಶ್ರೀ ಶ್ರೀನಿವಾಸ ಸಹೋದರಿ ಕಾಯೆ
ಭುಕ್ತಿಗೋಸುಗ ನಿನ್ನ ಸ್ಮರಣೆ ನಾನೊಲ್ಲೆನೆ
ಶಕ್ತಿ ಸ್ವರೂಪಿಣಿ ಶಂಕರಿ ಶುಭಕರಿ ೩

## ೧೧೦

ಕರುಣಿಸಮ್ಮಾ ತಾಯೆ ಕರುಣಿಸಮ್ಮಾ ಪ.

ಕರುಣಿಸಮ್ಮಾ ಭರದಿ ವರಪ್ರಸಾದವ ತ್ವರದಿ
ವರ ಶಂಕರನ ಜಾಯೆ ತ್ವರಿತದಿ ಕಾಯೆ ಅ.ಪ.

ಇಷ್ಟ ಮೂರುತಿ ಶಿವನ ದಿಟ್ಟ ತೊಡೆಯಲಿ ಮೆರೆವ
ದಿಟ್ಟ ರೂಪವ ತೋರೆ ದಿಟ್ಟ ಸುಂದರಿಯೆ
ಅಷ್ಟ ಅಪರಾದಗಳ ಎಣಿಸದಲೆ ನಿನ ಪಾದ ಎನ್ನ
ದಿಟ್ಟತನದಲಿ ಭಜಿಪ ಇಷ್ಟಕೊಡು ಮಾತೆ ೧

ಭಜಿಪರ ಮನದಾತೆ ಸುಜನರಾಪ್ತೆಯೆ ನಿನ್ನ
ಭಜಿಪ ಮನವನು ಇತ್ತು ಕಾಪಾಡು ತಾಯೆ ನಿನ್ನ
ಸುಜನ ಸಂಗವನಿತ್ತು ದುರ್ಜನ ಸಂಗವ ಬಿಡಿಸಿ
ಸ್ವಜನರೊಡನೆ ನಿನ ಪಾದ ಭಜಿಪ ಭಾಗ್ಯವ ನೀಡೆ ೨

ಭಾಗ್ಯದೇವತೆ ನೀನು ಸೌಭಾಗ್ಯ ಮಾಂಗಲ್ಯದಾ
ಭಾಗ್ಯವನು ಕೊಟ್ಟು ಕಾಪಾಡು ತಾಯೆ ಕಾಯೆ
ಯೋಗ ಮೂರುತಿ ಶ್ರೀ ಶ್ರೀನಿವಾಸ ಸಹೋದರಿಯೆ
ಅನುರಾಗದಿಂ ಹರಿಪದವ ಭಜಿಪ ಭಾಗ್ಯವನಿತ್ತು ೩

## ೧೧೧

ಕರುಣಿಸಮ್ಮಾ ಶಂಕರಿ ಮಾತೆ
ಕರುಣಾವಾರಿಧೆ ಶಂಕರನರಸಿ ಪ.

ಫಾಲನೇತ್ರನ ತೊಡೆಯನೇರಿ
ಲೀಲೆಯಿಂದ ಮೆರೆವೊ ದೇವಿ
ಪಾಲಿಸಮ್ಮ ನಿಮ್ಮ ಮುಡಿಯ
ಪಾರಿಜಾತವನ್ನು ಅಂಬಾ ೧

ಜರಿಯ ಪೀತಾಂಬರವ ಧರಿಸಿ
ವರ ರತುನದ ಕಂಚುಕ ತೊಟ್ಟು
ಸರಿಗೆ ಸರ ನಾಗಮುರಿಗೆನಿಟ್ಟು
ಕರದಿ ಕಂಕಣ ಧರಿಸಿ ಅಂಬಾ ೨

ಮರುಗ ಮಲ್ಲಿಗೆ ಸುರಗಿ ಸಂಪಿಗೆ
ವರ ಪಾದರಿ ಪಾಟಲಿ ಪುನ್ನಾಗೆ
ವರದ ಶ್ರೀ ಶ್ರೀನಿವಾಸ ಸೋದರಿ
ಹರುಷ ಬೆರೆಸಿ ವರವ ಅಂಬಾ ೩

## ೧೧೨

ಕರುಣಿಸು ವರಗೌರಿ ಭರದಿಂದ ವರವನ್ನೂ
ಶರಣಾಪ್ತ ಬೇಡುವೆ ನಿನ್ನಾ ಪ.

ಪಾರ್ವತೀ ತಾಯೇ ಪಾಮರರಿಗೆ ಪರಮಪಾವನ್ನೆ
ಪರಿಪಾಲಿಸುತ್ತ ವರವಿತ್ತು ನೀ ಕಾಪಾಡೆ ೧

ಪತಿಪಾದ ಸೇವಾ ಸತತದೊಳಿತ್ತು ಸತಿಗೆ ಮಾಗಲ್ಯ
ನಿರತವೀಯೆ ತಾಯೆ ಸಕಲಕೆ ಶ್ರೀ ಗೌರಿ ೨

ಶ್ರೀಶ ಶ್ರೀ ಶ್ರೀನಿವಾಸನ ಪಾದ ಸೋಸಿಲಿ ಭಜಿಪೆ
ವರವೀಯೆ ತಾಯೆ ಶಂಕರಿ ಕಾಯೆ ದೇಹಿಮೆ ೩

## ೧೧೩

ಪಾಲಯಮಾಂ ಪಾರ್ವತಿಯೆ ಪಾಪ ವಿನಾಶಿನಿ ತಾಯೆ
ಶೀಲ ಮೂರುತಿ ಶಿವೆ ಈ ಜಾಲ ಸಂಸಾರದಿ ಪ.

ರಜತಾದ್ರಿ ನಿವಾಸಿ ತ್ರಿಜಗ ಪೂಜಿತೆ ನಿನ್ನ
ಭಜಿಸೂವಾಮನವಿತ್ತು ಸುಜನರಾಪ್ತೆಯೆ ಎನ್ನಾ ೧

ರಾಗ ರಾಗದಿ ನಿನ್ನ ಅನುರಾಗದಿಂ ಪೂಜಿಪೆ
ಭಾಗ್ಯವನು ಕೊಟ್ಟು ನೀ ವೈರಾಗ್ಯ ಭಕ್ತಿಯನು ೨

ಅರಿಶಿಣ ಕುಂಕುಮವನ್ನು ವರ ಮಾಂಗಲ್ಯದಾ ಭಾಗ್ಯ
ನಿರುತದಿ ನೀಡುತ ಪೊರೆಯೆ ಶ್ರೀ ಶ್ರೀನಿವಾಸ ಸಹೋದರಿಯೆ ೩

## ೧೧೪

ಪಾಲಿಸು ಪಾಲಿಸು ಪಾಲಿಸು ಸುಮನಾ
ಪಾರ್ವತಿ ತಾಯೇ ಪ.

ಪಾಲಿಸು ಶ್ರೀ ರಜತಾದ್ರಿನಿವಾಸಿ ಶೀಲಮೂರುತಿ
ಶಿವಶಂಕರಿ ದೇಹಿಮೆ ಅ.ಪ.

ಮನಕಭಿಮಾನಿ ಮಾನುನಿರನ್ನೆ ಸರ್ವ
ತನುಮನನಿನಗರ್ಪಿಸಿಹೆನೆ ತಾಯೆ ಕಾಯೆ
ಅನುದಿನ ನಿನ್ನಯ ಚರಣವ ಪೂಜಿಪ
ಮನವಿತ್ತು ಕರುಣದಿ ನಿನ್ನ ತನುಜರಿಗೇ ನೀಡೆ ೧

ಪಂಕಜಗಂಧಿನಿ ಪಂಕಜಾಕ್ಷಿಯೆ ಶಿವ
ನಂಕದಿ ಅಲಂಕೃತ ಮಾತೆ ಸುಗೀತೆ ತಾಯೆ
ಅಂಕುರವಾಗುವ ತೆರ ನಿನನಾಮವ
ಕಿಂಕರರಿಗೆ ನೀಡಿ ದಯಮಾಡೆ ತಾಯೆ ೨

ಶ್ರೀಶ ಶ್ರೀ ಶ್ರೀನಿವಾಸ ಸಹೋದರಿ
ಈಶನ್ನೈಯ್ಯನ್ನೈಯ್ಯನೊಲಿಸುವ ಮರೆಯ
ಲೇಸು ಮಮತೆಯಿಂದ ಪಾಲಿಸೆ
ಶಂಕರಿ ಶುಭಕರಿ ೩

## ೧೧೫

ಪೂಜಿಪೆ ಜಗದಂಬಿಕೆಯಾ ಅಂಬಿಕೆಯ
ಮಾನಸ ಮಂದಿರದಲಿ ಭಕ್ತಿಯಿಂದ
ಮಾ ಪತಿಸೇವಾ ನೀ ನಿರುತದಿ ನೀಡೆ ಪ.

ವರ ಗಂಗಾಜಲದಿಂದಭಿಷೇಕ
ಜರಿ ಪೀತಾಂಬರ ಕಂಚುಕದಿಂದ
ಪರಿಮಳ ಪುಷ್ಪ ಸುರೋಜದಿಂದ
ಅಲಂಕರಿಸುವೆನೀಗಾ ನಾ ಅಲಂಕರಿಸುವೆ ೧

ಅರಿಶಿಣ ಕುಂಕುಮ ಚಂದ್ರದಿಂದ
ಪರಿಪರಿ ಪತ್ರಹೂಗಳಿಂದ ಅರ್ಚಿಪೆ ಮುದದಿಂದ ೨

ಕದಳಿ ಖರ್ಜೂರ ದ್ರಾಕ್ಷಾದಿಗಳ
ಬದರಿ ದಾಳಿಂಬ ನೈವೇದ್ಯಗಳಿಂ
ಅರ್ಪಿಪೆ ಅಂಬಿಕೆಗೆ ನಾ ಅರ್ಪಿಪೆ ಅಂಬಿಕೆಗೆ ೩

ಆರುತಿ ಬೆಳಗುವೆ ಗೌರೀಗೀಗ
ಆ ರಜತಾದ್ರಿನಿವಾಸಿಗೀಗಾ
ಶ್ರೀ ಶ್ರೀನಿವಾಸನ ಸೋದರಿಗೀಗಾ
ಆರುತಿ ಬೆಳಗುವೆ ೪

## ೧೧೬

ಭಾಗ್ಯವ ಕೊಡೇ ನಿರುತದಿ ದೇವಿ ಪ.

ನಿರುತದಿ ಪತಿಪಾದ ಚರಣವ ಸೇವಿಪ ಅ.ಪ.

ವೈರಾಗ್ಯವೆಂಬುವ ಚಂಪಕಪುಷ್ಪ
ವರಪದ ತೋರುವ ವರಪ್ರದ ಮಲ್ಲಿಗೆ ೧

ಚರಣದಂದುಗೆ ಗೆಜ್ಜೆ ಪಾಡಗನಿಟ್ಟ ನಿನ್ನ
ಚರಣ ಕಮಲವ ನಿರುತದಿ ಪೂಜಿಪ ೨

ಶ್ರೀ ಶ್ರೀನಿವಾಸನ ಸ್ಮರಣೆಯನಿತ್ತು
ಪಾವನಳನು ಮಾಡ್ಯೆ ಪರ್ವಂತದೇವಿ ೩

## ೧೧೭

### ಸುಭದ್ರೆ

ಸುಖದಿಂದ ಬಾಳೌ ಸತಿ ಸುಭದ್ರಾ
ಸತಿ ನಿನ್ನ ಸಲಹಲಿ ಲಕ್ಷ್ಮೀಲೋಲಾ ಶ್ರೀ ಲಕ್ಷ್ಮೀಲೋಲಾ ಪ.

ಭಾವ ಮೈದುನ ಅತ್ತೆಗೆ ಅತಿ ಹಿತಳಾಗಿ ನೀ
ಭಾವ ಶುದ್ಧದಿ ಹರಿ ಗುರು ಸೇವೆಯ ಮಾಡಿ ೧

ಪತಿಸೇವೆಯ ಅತಿಹಿತದಿಂ ನೀ ಮಾಡೆ
ಪತಿವ್ರತೆಯಾಗಿ ನೀ ಸುತರನು ಪಡೆಯುವೆ ೨

ಭಕ್ತವತ್ಸಲನ ಭಗಿನಿಯೆಂದೆನಿಸಿದಿ
ಸತತ ಶ್ರೀ ಶ್ರೀನಿವಾಸನ ನೆನಯುತ ನೀ ಬಾಳೌ ೩

## ೧೧೮

### ರಾಘವೇಂದ್ರಯತಿಗಳು

ಗುರುರಾಯರ ನಂಬಿರೋ ರಾಘವೇಂದ್ರ
ಗುರುರಾಯರ ನಂಬಿರೋ ಜಗದೊಳು ಪ.

ಗುರುರಾಯರ ನಂಬಿ ವರಗಳ ಬೇಡಿರೊ
ನರಹರಿ ಪದ ಧ್ಯಾನಿಪ ಕರುಣವ ಬೀರುವಂಥ ೧

ಆದಿ ಪ್ರಹ್ಲಾದರು ಮೋದದಿ ಹರಿಪದ
ಆದರದಿಂದ ಜಗಕೆ ಸಾಧಿಸಿ ಬೀರಿದರೊ ೨

ದ್ವಿತೀಯ ವ್ಯಾಸರಾಜ ಸ್ತುತ ಬ್ರಹ್ಮಣ್ಯಾರ್ಯ ಕರ
ಗತಪುರುಷೋತ್ತಮ ಗುಹ ಪಥದೊಳಗಿಪ್ಪರ ೩

ತೃತೀಯ ರಾಘವೇಂದ್ರ ಪತಿತ ಪಾವನ ನಾಮ
ರತ್ನ ಖಚಿತವಾಗಿದೆ ಭಕ್ತ ಸುಚರಿತರೆಲ್ಲ ಬೇಗ ೪

ಭೂತ ಪ್ರೇತಗಳ ಪ್ರೀತಿಯೊಳಳಿದು
ಶ್ವೇತ ಕುಷ್ಠಗಳ ದೂರ ಮಾಳ್ಪವರ ೫

ಸ್ಮರಣೆ ಮಾಡುತ ನರಹರಿ ಪಾದ ಪಂಕಜ
ದುರಿತ ದೂರ ಶ್ರೀ ಶ್ರೀನಿವಾಸನ ಭಜಿಪ ಗುರು ೬

## ೧೧೯

### ಆತ್ಮನಿವೇದನೆ

ಅಂಬುಜೇಕ್ಷಣ ನಂಬಿದೇ ನಿನ್ನ ಪ.

ಅಂಬುಜೇಕ್ಷಣ ನಿನ್ನ ನಂಬಿದ ಭಕ್ತರಘ
ದ್ಹಂಬನು ಕಡಿದು ನಿನ್ನಿಂಬನು ತೋರುವೆ ಅ.ಪ.

ಅನುಪಮ ಚರಿತ ಅಪ್ರಮೇಯನೆ ಕೃಷ್ಣ
ತನುಮನಧನಗಳಾ ನಿನಗರ್ಪಿಸುವೆ ಎನ್ನ
ಚಿನುಮಯ ರೂಪನೆ ಮನುಮಥ ಪಿತನೆ
ನಿನ್ನ ಸರಿಯಾರೋ ಹನುಮದೀಶ ಕೃಷ್ಣ ೧

ಉತ್ತಮರುಗಳನು ನಿತ್ಯದಿ ಸೇವಿಪ
ಚಿತ್ತವೆನಗೆ ಕೊಡೋ ಉತ್ತಮೋತ್ತಮನೆ
ತೆತ್ತೀಸ ಕೋಟಿ ದೇವರ್ಕಳು ನಿನ್ನನು
ಸುತ್ತಿ ಸ್ತುತಿಪರೋ ನರ್ತನ ಗೈಯ್ಯುತ ೨

ಪದುಮ ಸಂಭವ ಪಿತ ಪದುಮಿಣಿಯರಸನೆ
ಒದಗುತ ಭಕ್ತರಾಪ್ತನು ನೀನಲ್ಲೆ
ಸದನದಿ ಕಾಯುತ ಮುದವನು ಬೀರುತ ನೀ
ಚದುರ ಶ್ರೀ ಶ್ರೀನಿವಾಸ ಕದನವಿಖ್ಯಾತಕೋ ರಾಮ ೩

## ೧೨೦

ಆವ ಬಗೆಯಲಾದರು ಕರುಣದಿ
ದೇವ ಕೃಪೆದೋರೋ ಪ.

ಭಾವ ಭಕುತಿಯಲಿ ತೋಯಜಾಕ್ಷನೆ ನಿನ್ನ
ಕಾವ ಕರುಣಿಯೆಂದು ಭಾವಿಸಿ ಕರೆವೆನು ಅ.ಪ.

ವಿಪ್ರರಾಗಮವಾದರೂ ಸರಿ
ಕ್ಷಿಪ್ರದೊಳವನ ಸಂಗದಿ
ಅಪ್ಪಾ ನೀ ನೆರೆಯುವ ಸಪ್ಪಳಾ ತೋರುತ
ಬಪ್ಪೆ ಎಂದೆನೆವೆನು ಅಪ್ಪ ತಿಮ್ಮಪ್ಪನೇ ೧

ಮಕ್ಕಳೊಳಗಾದರೊ ನಿನ್ನಯ ಆಟ
ಪಕ್ಕನೆ ತೋರೋ ದೇವನೆ

ಚಿಕ್ಕ ಕೃಷ್ಣನೆ ನಿನ್ನ ರೂಪವ ನೆನೆಯುತ
ಪಕ್ಕನೇ ನಿನ್ನಯ ನಾಮ ಉಕ್ಕಿ ನೆನೆಯುವ ಪರಿ ೨

ಮನೆಗೆಲಸದೊಳು ನಿನ್ನಯ ಧ್ಯಾನ
ತನು ಮನ ನೆನೆಯುತಲಿ
ದಿನದಿನದಲಿ ಸುಖ ದುಃಖದೊಳು
ಮನಸಿಜಪಿತ ನಿನ್ನ ನೆನಸುವ ಪರಿಯಲಿ ೩

ಹಿರಿಯರಾಗಮವಾಗಲು ನಾನವರೊಳು
ಕಿರಿಯಳಂದದಿ ಇರುವ ಪರಿ
ಮನವನಿತ್ತೂ ಪೊರೆ ಕರುಣಾಳು
ಕರಣ ಶುದ್ಧಳಾ ಮಾಡಿ ಕರೆ ನಿನ್ನ ಬಳಿಗೆ ೪

ಕನಸಲಾದರೂ ನಿನ್ನ ಮನಸಿಜಪಿತನೆ
ಮನನ ಮಾಡುತ ನೆನೆಯುವ
ಘನಕೃಪೆಯಿತ್ತು ಎನ್ನ ಜನುಮ ಸಾರ್ಥಕಗೊಳೆ
ಈತನು ನಿನಗರ್ಪಿಸಿಹೆ ದಿನಮಣಿ ಶ್ರೀ ಶ್ರೀನಿವಾಸ ೫

## ೧೨೧

ಇದು ಥರವೇ ಥರವೇ ದೇವಾ ಥರವೇ
ನಿನ್ನವರ ವಂಚಿಸಿ ನೀ ಮರೆಯಲ್ಲಿ ಇರುವುದು ಥರವೆ ಪ.

ಪರಿಪರಿಯಲಿ ಸ್ತುತಿಗೈಯುತಲಿ ನಿನ್ನ
ಪರಮ ಮಂಗಳ ಪಾದಗಾಣದೆ
ಮರುಗುತಿರುವಾ ವರ ಭಕುತರಿಗೆ
ಕರುಣದೋರದೆ ಇರುವೆ ವೆಂಕಟ ಅ.ಪ.

ಅಜಭವಾದಿಗಳು ಸ್ತುತಿಸಿ ಪೂಜಿಸಿದ ಪಾದ
ತ್ರಿಜಗವಂದಿತ ಕೃಷ್ಣ ನಿನ್ನಪಾದ
ಭಜನೆಯನು ಮಾಡುತ ನಿನ್ನ ತ್ಯಜಿಸದನುದಿನ
ಸುಜನರೆಲ್ಲರು ಸ್ತುತಿಸಿ ಪಾಡುತಿರೇ
ತ್ರಿಜಗ ಪೂಜಿತನಾಗಿ ಭಕುತರ
ಭಜನೆ ನಿನಗರಿವಿಲ್ಲೇ ದೇವನೆ
ಸ್ವಜನರನು ಪಾಲಿಸುವ ಬಿರುದನು
ತ್ಯಜಿಸುವರೆ ಸಿರಿಯರಸ ವೆಂಕಟ ೧

ಮಚ್ಛಕೂರ್ಮವರಾಹನಾಗಿ ದೈತ್ಯರ
ಸ್ವಚ್ಛಭಕುತರ ಸಲಹೆ ಸಂಹರಿಸಿ
ಅಚ್ಛಪ್ರಲ್ಹಾದನಿಗೊಲಿದ ನರಹರಿಯಾಗಿ
ಅಚ್ಛವಾಮನನಾಗಿ ಬಲಿಯ ತಲೆಯ ತುಳಿದು
ಸ್ವಚ್ಛಗಂಗೆಯ ಇಂಬಿಡದೇ
ದುಷ್ಟ ರಾಜರನಳಿದ ಭಾರ್ಗವ
ದುಷ್ಟ ತಾಟಕಿ ಸಂಹರಿಸಿದನೆ
ಕೃಷ್ಣರೂಪದಿ ಗೋಪೆರಿಗ್ವಲಿದನೆ
ಉತ್ಕೃಷ್ಟ ಬೌದ್ಧ ಕಲ್ಕಿ ವೆಂಕಟ ೨

ಪರಮಪುರುಷ ಬಾ ವರದ ಮೂರುತಿ ಬಾ
ಪರಿಪರಿ ಸ್ತುತಿಸಿ ವಂದಿಪೆ ಸಿರಿವರದ ಬಾ
ಶರಧಿಶಯನ ನಿನ್ನ ಚರಣ ಸ್ಮರಣೆಯೀಯೆ
ಶರಣಾಗತ ರಕ್ಷಾಮಣಿ ಬೇಗ ಬಾ
ಸಿರಿಗೆ ಪೇಳದೆ ಬಂದು ಕರಿಯ ಪೊರೆದ
ದೊರೆ ಶ್ರೀ ಶ್ರೀನಿವಾಸ ಬಾ
ಗರುಡ ಗಮನನೆ ಶರಣಜನರನು
ಮರೆಯದಲಿ ನೀ ಕರುಣ ವೆಂಕಟ ೩

## ೧೨೨

ಇಷ್ಟುದಯ ಮಾಡಿದ್ದೆ ಅತಿ ಸೋಜಿಗ
ಶೀಷ್ಟೇಷ್ಟದಾತ ಭ್ರಷ್ಟಮಾನವನಲ್ಲಿ ಪ.

ಉದಯಕಾಲದಲೆದ್ದು ಪದುಮಸಂಭವ ಪಿತನ
ವದನದಲಿ ನೆನೆಯದಲೆ ಮಾನುನಿಯರ
ಚದುರತೆಗೆ ಮೆಚ್ಚುತಲೆ ಉದರ ಪೊರೆದನ ಮೇಲೆ
ಚದುರ ಶ್ರೀಕೃಷ್ಣ ಬದಿಗನಾಗಿದ್ದು ೧

ಕರುಣಾಸಮುದ್ರನ ಸ್ಮರಣೆ ಸಾಲದೆ ಎಂಬ
ಪರಮ ಗುರುಗಳ ವಚನ ಮರೆತು ನಿನ್ನ
ಸ್ಮರಿಸದೆಲೆ ನಿರುತದಿ ಪರರ ಬಾಗಿಲಿಗ್ಹೋಗಿ
ಚರಣ ಧಣಿವುತ ಮನದಿ ಮರುಗಿದೆನೋ ಕೃಷ್ಣಾ ೨

ಇನ್ನಾದರೆನಮನದಿ ಪನ್ನಗಾದ್ರಿನಿವಾಸ
ನಿನ್ನ ಸ್ಮರಣೆಯ ಕೊಟ್ಟು ಮನ್ನಿಸೆನ್ನ
ಘನ್ನ ಅಪರಾಧಗಳ ವರ್ಣಿಸಲಳವಲ್ಲ
ಚೆನ್ನಿಗ ಶ್ರೀ ಶ್ರೀನಿವಾಸ ಘನ್ನ ಸಂಪನ್ನ ಸರಿಯಾರೋ ೩

## ೧೨೩

ಈ ದೇಹ ನಿನ್ನ ಒಳಗೊಂಡಿತೊ ಇಷ್ಟಾದ ಮೇಲೆ ಪ.

ದೇಹ್ಯ ಬಾಹ್ಯ ವ್ಯಾಪಾರವ ನೀ ಪರಿಹರಿಸಿದೇ ದೇವ ಅ.ಪ.

ದೇಹದೊಳಗಿದ್ದವರು ಬಾಹ್ಯ ವ್ಯಾಪಾರಕ್ಕೆಳೆಯೆ
ಈ ದೇಹ ಬಾಂಧವರು ಎಲ್ಲ ಎನ್ನ ದೇಹ ಕೀಳು ಮಾಡಿ ನೋಡೆ
ದಾಹ ಹತ್ತಿತೋ ನಿನ್ನಲ್ಲಿ ದೇಹ ಸಾರ್ಥಕವಾಗಲು ೧

ರಂಗ ನಿನ್ನ ಸ್ತುತಿಮಾಡೆ ಹಂಗಿಸುವರೆಂದು ಇದ್ದೆ
ಹಂಗಿಸಿ ಭಂಗಿಸಿ ರಂಗಕ್ಕೆಳಸಿ ಎನ್ನ ನಿನ್ನ
ಅಂತರಂಗಕ್ಕೆ ಎಳೆತಂದೆ ಹರಿ
ರಂಗಾ ನಿನ್ನ ಸಿರಿಯಾರೋ ಮಂಗಳ ಮಹಿಮ ೨

ಪಂಥದಿಂದ ನಿನ್ನ ತಿಳಿದೆ ಕಂತು ಜನಕನೆ ನಾ
ನೆಂದು ಸ್ತುತಿಸಲು ನಿನ್ನ ಅಂತರದಂತಿರಲಿ
ಪಂಥ ಬೇಡ ಎನ್ನ ಮೇಲೆ ಇಂತು ಕೃಪೆ ತೋರಿಸುತ ನಿಂತು
ಅಂತರಂಗಕೆ ಬಾ ಲಕ್ಷ್ಮೀಕಾಂತ ಶ್ರೀ ಶ್ರೀನಿವಾಸ ೩

## ೧೨೪

ಎಚ್ಚರಿಕೆ ಎಚ್ಚರಿಕೆ ಅಚ್ಚುತ ಮೆಚ್ಚನು ಎಚ್ಚರಿಕೆ ಪ.

ಇಚ್ಛಿಸದಿಹ ಸುಖ ಸ್ವಚ್ಛ ಭಕುತಿಯಲಿ ಹರಿ ಇಚ್ಛೆಯಲಿರು ಮನವೆ ಅ.ಪ.

ಹಗಲು ಹಸಿ ಮುಂದಿರುಳು ನಿದ್ರೆ
ಹಗೆಯಹುದೆಂದು ಬಗೆಯದೆ ನೀ
ಜಗದೊಡೆಯನು ಸಿಗ್ಯಮಿಗೆ ಧ್ಯಾನಿಸದೆ
ಅಘ ಪೋಗುವುದೆ ಮನವೆಚ್ಚರಿಕೆ ೧

ಯಾಕೆಂತು ನೀ ಪರರ ಯಾಚಿಸುವೆ ನಿನ
ಸಾಕುವನ್ಯಾರೆಂದು ಯೋಚಿಸದೆ
ಆ ಕೈವಲ್ಯಾಧಿಪನೆಂದು ತಿಳಿ ಅ
ನೇಕ ರೂಪಿಲಿಹ ಎಚ್ಚರಿಕೆ ೨

ಪರಸುಖನ ಎನಗೆ ಹರಿಯೆಂದ
ತರಳನ ಸಲಹಿತು ನಾರಾಯಣ ನಾಮ
ಗರುಡಗಮನ ಶ್ರೀ ಶ್ರೀನಿವಾಸನೆ
ನಿರುತ ಮರೆಯದಿರು ಮನವೆಚ್ಚರಿಕೆ ೩

## ೧೨೫

ಎನ್ನ ಪಾಲಿಸೋ ಆಪನ್ನ ರಕ್ಷಕ ಎನ್ನ ಪಾಲಿಸೊ ಪ.

ಪನ್ನಗಾದ್ರಿನಿವಾಸ ಸಂಪನ್ನ ಶ್ರೀಶಾ ಶ್ರೀನಿವಾಸ ಅ.ಪ.

ಆದಿ ಮೂರುತಿ ವೇದ ವಂದ್ಯ
ಮೋದದಿಂದ ನಿನ್ನ ಪಾದ ನಂಬಿದೆ
ಅಗಾಧರೂಪ ನಾರಸಿಂಹ ಆದರದಿಂದ
ಮೋದ ಕೊಡುತ ಎನ್ನ ಪಾಲಿಸು ೧

ನೊಂದೆನಯ್ಯ ಈ ಭವದಿ ಸಿಲುಕಿ
ತಂದೆ ಎನ್ನ ಕಾವರಿಲ್ಲ
ಬಂಧ ಬಿಡಿಸಿ ಈ ಭವದಿಂದ ನಿನ್ನ
ಸಂದರುಶನವಿತ್ತು ಸಲಹಿ ಎನ್ನ ೨

ನಿನ್ನ ನಂಬಿದ ಭಕ್ತರ ಪೊರೆಯೆ
ಇನ್ನು ಸಂಶಯವ್ಯಾಕೊ ದೇವಾ
ಚೆನ್ನಗಿರಿಯ ವೆಂಕಟೇಶಾ
ಮನ್ನಿಸೆನ್ನ ಶ್ರೀ ಶ್ರೀನಿವಾಸ ಎನ್ನ ೩

## ೧೨೬

ಏನನಿತ್ತಪೆ ನಿನಗೆ ಶ್ರೀನಿವಾಸ
ಶ್ರೀನಿಧಿಯು ನೀನಾಗಿರಲು ಸರ್ವೇಶ ಪ.

ಅನುದಿನದಿ ನಿನ್ನ ಪದ ಅನುವಿನಲಿ ಸ್ತುತಿಪೆನೆನೆ
ಅನುದಿನದಿ ನಿನ್ನಾದಿಶೇಷ ಸ್ತುತಿಪ
ಘನಮಹಿಮ ನಿನ್ನನರ್ಚಿಪೆನೆಂದೊಡೆ ಆ
ಘನ ಮಹಾ ಶ್ರೀದೇವಿ ನಿನ್ನರ್ಚಿಸಿ ಮೆಚ್ಚಿಸಿಹಳರಿಯೆ ೧

ಭಕ್ತಿರಸವನು ಭಕ್ತ ಪ್ರಹ್ಲಾದ ನಿನಗಿಂತಧಿಕ
ಭಕ್ತಿಯನು ಮಾಡಲರಿಯನೋ ದೇವ ದೇವ
ಯುಕ್ತಿಯಲಿ ನಿನ್ನ ಸ್ತುತಿ ಮಾಳ್ಪೆನೆಂದರೆ ನಿನ್ನ
ಭಕ್ತ ನಾರದ ಮಾಳ್ಪ ಸ್ತುತಿಗಧಿಕವೇ ಕೃಷ್ಣ ೨

ನಿನ್ನ ಪದ ಸೇವಿಪೆನೆನೆ ನಿನ್ನ ಭಕ್ತ ಹನುಮ
ಇನ್ನು ನಿನ್ನಡಿ ಬಿಡನೊ ನಿನ್ನರಿವತನಕ
ಪನ್ನಗಾದ್ರಿನಿವಾಸ ಸಂಪನ್ನ ಶ್ರೀ ಶ್ರೀನಿವಾಸ
ನಿನ್ನ ಕೃಪೆಯನೆ ತೋರೋ ಶ್ರೀ ರಮೇಶ ೩

## ೧೨೭

ಕರುಣಿಸು ಕಮಲೇಶ ಸರ್ವೇಶ
ಕರುಣಿಸು ಕಮಲೇಶ ಪ.

ಶರಣಾಗತ ರಕ್ಷಕ ವೆಂಕಟೇಶ
ನಿರುತದಿ ಪ್ರಾರ್ಥಿಪೆ ಲಕ್ಷ್ಮೀಶ ಅ.ಪ.

ವೇದ ಶಾಸ್ತ್ರ ಪುರಾಣವನರಿಯೆ
ಆದಿ ಮೂರುತಿ ಪ್ರಹ್ಲಾದವರದನೆ
ಆದರದಲಿ ನಿನ್ನ ಸ್ತುತಿಸುವೆ ದೇವ
ಮೋದದಿಂದಲಿ ಕಾಯೋ ಪಾದಸೇವಕರಾ ೧

ಜಪವ ನಾನರಿಯೆ ತಪವ ನಾನರಿಯೆ
ಉಪವಾಸ ವ್ರತಮೊದಲರಿಯೆ ದೇವಾ
ಅಪರಿಮಿತ ಪಾಪ ಗಳಿಸಿಹೆನೋ
ಸುಪವಿತ್ರನನು ಮಾಡೊ ಅಪಾರ ಮಹಿಮಾ ೨

ನಿನ್ನ ನಂಬಿಹೆನೊ ಅನ್ಯರನರಿಯೆನೊ
ಎನ್ನಪರಾಧವ ಮನ್ನಿಸೊ ದೊರೆಯೆ
ಚೆನ್ನಿಗ ಶ್ರೀ ಶ್ರೀನಿವಾಸನ ಸ್ತುತಿಪೆನೊ
ಇನ್ನು ಸಂಶಯವ್ಯಾಕೊ ಪನ್ನಗಾದ್ರಿವಾಸ ೩

## ೧೨೮

ತಾಳು ತಾಳೆಲೆ ಮನವೆ ತಾಳ್ಮೆಯ
ತಾಳು ತಾಳೆಲೆ ಮನವೆ ಪ.

ತಾಳು ತಾಳು ನಿನ್ನಾಳುವ ದೊರೆಯಿಹ ಅವ
ಗಾಳಾಗಿ ನೀ ಬಾಳಲು ಕಾಳು ಮಾಡನು ಹರಿ ಅ.ಪ.

ದುರ್ಜನರಾಡಿದ ನುಡಿ ಮನಕದ
ಸಜ್ಜುಗೊಳಿಸಬೇಡ
ಅರ್ಜುನ ಸಖನೇ ನಿನ್ನ ಪರೀಕ್ಷಿಸೆ
ನಿರ್ಜರೇಶನೀಪರಿ ಮಾಡಿಹನೆಂದ ೧

ಅಳಕು ಮನವ ಬಿಡು ನಿ
ನ್ನಳದು ನೋಡುವ ಹರಿಯು
ಅಳವಲ್ಲವನ ಲೀಲೆ ಕಂಡ್ಯಾ
ಝುಳ ಝುಳ ಮನದಲಿ ಕಳೆ ಕಲೆ ಹರಿರೂಪ
ಪೊಳೆದು ನಿನ್ನ ಮನದಳಕನೆ ದೂಡುವ ೨

ಅಂಜದಿರಭಯವ ಅಂಜನಾಸುತ ಸೇವ್ಯ
ಶ್ರೀ ಶ್ರೀನಿವಾಸ ಶ್ರೀರಾಮ ನಿ
ನ್ನಂಜಿಸುವರನು ಅಂಜಿಸೆ ಕಾದಿಹ
ಸಂಜಯ ಪ್ರಿಯ ಕಂಜನಾಭ ಹರಿ ೩

## ೧೨೯

ನಿನ್ನ ನಂಬಿದವರಿಗೆ ಇನ್ನು ಕೊರತೆಗಳುಂಟೆ
ಪನ್ನಗಾದ್ರಿನಿವಾಸ ಶ್ರೀ ವೆಂಕಟೇಶ ಪ.

ಬನ್ನ ಬಡಿಸದೆ ಎನ್ನ ಧ್ಯಾನವನ್ನು ಮರೆವರು ಭಕ್ತರೆಂದು
ಚನ್ನ ಸಂಪನ್ನ ಭಕ್ತರನ್ನು ಬನ್ನ ಬಡಿಸಿ ಪೊರೆವೆ ಕರುಣದಿ ಅ.ಪ.

ಅಧಿಕ ಸಂಸಾರದಿ ಪದೆಪದೆಗೆ ತೊಡರುಗಳ
ಬದಿಗನಾಗಿದ್ದವರಿಗೆ ಕೊಟ್ಟು
ಸದಮಲಾನಂದ ಪರೀಕ್ಷಿಸುವೆ ತವಕದಿ
ಚದುರಿಸುತ ಮನವನ್ನು
ಅದುಭುತನೆ ನಸುನಗುತ ನೀನೋಡುತ್ತ
ಹೆದರಿ ಬೆದರಿ ನಿನ್ನ ಧ್ಯಾನಕ್ಕೊದಗಲಿ ಮನವೆಂಬೆಯಲ್ಲದೆ
ಮಧುರವಾಣಿಯ ತೋರಿ ಸಲಹಲು
ವದಗಿ ಕಾಯುವೆ ಭಕ್ತರನ್ನು
(ಚದುರ ನಿನಗೆಣೆಗಾಣೆ ಜಗದೊಳು) ೧

ಜಾಣರೊಳತಿ ಜಾಣತನ ತೋರುತ್ತ
ಕಾಣಿಸಿ ಕಾಣದಂತಿರುತ ಭಕ್ತರೊಳು
ಗಾಣಕೆ ಸಿಲ್ಕಿದ ಎಳ್ಳು ಸಚ್ಚದೆಣ್ಣೆ
ಮಾಣದೆ ಬರುವ ತೆರ ತೋರುವೆ ಜನಕೆ
ಕಾಣದಿಹ ಕಾಮಕ್ರೋಧದ್ವಿಂಡಿಯ
ಮಾಣದೆ ಬೇರ್ಪಡಿಪೆಯಲ್ಲದೆ ಇದು
ಕಾಣ್ಬರು ನಿನ್ನ ಚರಣದಂಘ್ರಿಯ
ಕಾಣುತಲೆ ಸ್ತುತಿಮಾಡಿ ಓಗ್ಗುತಲಿಪರು ೨

ದಿಟ್ಟಮೂರುತಿ ಕೇಳೊ ಕೊಟ್ಟರೊಳ್ಳಿತು ಕಷ್ಟ
ಉತ್ಕೃಷ್ಟವಾಗಲಿ ಹರಿಯೆ ಎನ್ನ ದೊರೆಯೆ
ಕಟ್ಟಕಡೆ ನಿನ ಧ್ಯಾನ ಕೊಟ್ಟು ಕಾಯುವ ಭಾರ

ಘಟ್ಟಿ ಕಂಕಣ ಕಟ್ಟಿ ನಿಂತಿಹೆ ಶ್ರೀ ಶ್ರೀನಿವಾಸ ಎನ್ನ
ದುಷ್ಟತನವೆಲ್ಲ ಕುಟ್ಟಿ ಕೆಡಹುವೆ
ಕಟ್ಟಕಡೆಗೆ ನಿನ್ನ ಪಾದಾಂಗುಷ್ಠ ಸೇರಲಿಯೆಂದಾ ಭಕ್ತರ
ಬೆಟ್ಟದೊಡೆಯನೆ ಸಲಹುತಿರುವೆ
ಉತ್ಕೃಷ್ಟ ಮೂರುತಿ ಭಕ್ತರಿಷ್ಟದಾಯಕ ೩

## ೧೩೦

ಪಾಲಿಸೈಯಪಾರ ಮಹಿಮ ಪತಿತ ಪಾವನ ಪ.

ಪಾಲವಾರುಧಿಶಯನ ಕೃಪಾಲವಾಲ ನೀಲ ಎನ್ನ ಅ.ಪ.

ಇಂದಿರಾ ಮನೋಹರ ಆನಂದ ಮೂರುತಿಯೆ ನಿನ್ನ
ವಂದಿಸಿ ಬೇಡುವ ಎನಗೆ ಸಂದರುಶನವೀಯ ರಾಯ
ತಂದೆ ಮುಕುಂದ ಮನ್ನಿಸೆಲೊ ಕಂದನಾದೆನ್ನ ಮರೆಯದೆ
ಬಂದು ನಿಂದು ಮುಖವ ತೋರೊ ಸುಂದರ ಅರವಿಂದನಯನ ೧

ತಾತನಾಗಿ ಎನ್ನೊಳೊಂದ ಮಾತನಾಡದಿರುವರೇನೊ
ನಾಥ ನೀನೇ ಕಾಯದಿರಲು ಖ್ಯಾತಿವಂತರನ್ನು ಕಾಣೆ
ಏತರ ಖಾತಿ ಎನ್ನೊಡನೆ ಸೋತು ಬಿನ್ನೈಸಿದರೊ ಹರಿ
ನೀ ತೊರೆವರೆ ಮದನಪಿತ ಪಾರ್ಥಸಾರಥಿ ಪರಾಕು ೨

ಕೇಶವ ಮಹಾನುಭಾವ ವಾಸುದೇವ ಕೈಯ ಬರದೆ
ಪೋಶಿಸಯ್ಯ ಮುರವಿರೋಧಿ ಶ್ರೀಶ ಶ್ರೀನಿವಾಸ ದೇವ
ದೋಷವ ನಾಶಮಾಡಿ ನಿನ್ನ ದಾಸನೆಂದೆನಿಸೊ ನಿನ್ನ
ಬೇಸರಿಸದೆ ಶೇಷಗಿರಿವಾಸ ವೆಂಕಟೇಶ ಪೊರೆಯೊ ೩

## ೧೩೧

ಬಡವರ ಭಾಗ್ಯನಿಧಿಯೆ ನಿನ್ನ
ಅಡಿಗಳಿಗೆರಗುವೆ ಪ.

ದೃಢಮತಿ ಕೊಡು ಎಂದು
ಬಿಡದೆ ಧ್ಯಾನಿಸುವೆ ಅ.ಪ.

ಗುರುಗಳ ಕರುಣವೊ ಹಿರಿಯರ ಬಲವೊ ನಾ
ನರಿಯೆ ನನ್ನಯ ಚರಿಯ ದೇವಾದಿದೇವ ೧

ವೃಷಭಾಚಲವಾಸ ವಶವಲ್ಲ ನಿನ್ನ ಧ್ಯಾನ
ತೃಷೆಯಿಂದ ನುಡಿವೆನೊ ನಿನ್ನ ವಶವಲ್ಲವೇ ನಾನು ೨

ಭಕ್ತರಹಂಕಾರ ಯುಕ್ತೀಲಿ ಕಳೆಯುವ
ಶಕ್ತ ನೀನಲ್ಲದೆ ಮುಕ್ತೀಶ ಶ್ರೀ ಶ್ರೀನಿವಾಸ ೩

## ೧೩೨

ಭಕ್ತಿ ಪಾಶದಿ ಕಟ್ಟುತ ಹರಿಯನು
ನಿತ್ಯದಲಿರು ಮನವೇ ಪ.

ಭಕ್ತಿಗೆ ಮೆಚ್ಚುತ ಅಚ್ಚುತ ತಾನೆ ಬಹ
ನಿಶ್ಚಯವಿದು ಮನವೆ ಅ.ಪ.

ಅನುದಿನ ನಾರಾಯಣನೆಂದಣುಗಗೆ
ಕ್ಷಣದಿ ಕಂಬದಿ ಬಂದ ದನುಜನ ಮುರಿದ
ಗುಣನಿಧಿಯನು ನೀ ಕ್ಷಣ
ಬಿಡದನುದಿನ ನೆನೆ ಮನವೇ ೧

ಕಲ್ಲಾಗಿದ್ದಹಲ್ಲೆ ಪೊರೆದು ಶಿವ
ಬಿಲ್ಲ ಮುರಿದ ರಾಮನ ಸಲ್ಲೆ
ಕುಬ್ಜೆಯ ಡೊಂಕನೆ ತಿದ್ದಿದ
ಖುಲ್ಲ ಕಂಸನ ಗೆದ್ದಾ ಕೃಷ್ಣನ ೨

ಅಂಬರೀಷ ದ್ವಾದಶಿ ವ್ರತವನು ಮಾಡೆ ಮುನಿ
ಪುಂಗವ ಜರಿಯುತಿರೆ
ರಂಗನ ಚಕ್ರದಿಂದ್ದುಟ್ಟಿದನರಿಯ ದೇವ ಈ
ಅಂಗ ಭಂಗರಕೆ ಚಾಟಿ ಶ್ರೀ ಶ್ರೀನಿವಾಸನು ೩

## ೧೩೩

## ಲೋಕನೀತಿ

### ೧

ಕಾಮಧೇನು ಕಲ್ಪತರು ಕಾಮಿತಾರ್ಥವನೀವ ಹರಿಯೇ ಎನಗಿರೆ
ಎನಗ್ಯಾತಕೆ ಚಿಂತೆ
ಕಾಮಿತಾರ್ಥವನೀವ ದೊರೆಯಿರಲು ಯನಗ್ಯಾತರ ಕೊರೆತೆ
ಹರಿಕಾವದೇವ ನೀನಿರಲು
ಕೋಳಿ ತನ್ನ ಮರಿಗೆ ಹಾಲುಕೊಟ್ಟು ಸಾಕುವದೆ
ಕಾಳ ರಾತ್ರಿಯು ಕಳೆದು ಹರಿ ಉದಿಸುವನೆಂದು
ಕೋಳಿಕೂಗಿದರೂ ಏಳದೆ ಮಲಗಿ ಕಾಲಕಳೆವರು ಮನುಜರುಹರಿಯೆ
ಕಾಲಕೂಟ ಸಮ ಕಾಮಿತಾರ್ಥವ ಬೇಡುವರು
ಕಾಲದೂತರು ಬರುವ ವ್ಯಾಳೆತನಕ ನಿನಧ್ಯಾನಿಸದೆ
ಕಾಲಕಳೆವರು ಮನುಜರು ಕಾಲಮೂರುತಿ ನೀನೆ ಎಂದರಿಯರು ಹರಿ
ಕಾಲ ಅಕಾಲ ನಿನಗುಂಟೆ ಎನಗುಂಟೆ ದೇವ ನೀ ಎನಗೆ ಇಂಥಾ
ಕೀಳು ಬುದ್ಧಿಯ ಕೊಡದಿರೊ, ಏಳು ಬೆಟ್ಟದ ಒಡೆಯ ಶ್ರೀ ಶ್ರೀನಿವಾಸ

೨

ಬೆಳಗೆದ್ದು ಹರಿ ನಿನ್ನ ಧ್ಯಾನಿಸದೆ ಪರಧ್ಯಾನ ಪರನಿಂದೆಯಲ್ಲಿಹರು
ಈ ಜಗದಿ ಪರಿಪರಿಯ ಬವಣೆಗೊಳಗಾಗುವರು ನಿತ್ಯ ನಿನ್ನ
ಧ್ಯಾನ ಬಿಟ್ಟು ಬೆಳಗಾಗೆ ನಿನ್ನ ಸೂರ್ಯರಶ್ಮಿ ಬಿದ್ದರೂ
ಏಳರು ಶಯನ ಬಿಟ್ಟು ಈ ಜಗದಿ
ದೇವ ಈ ಕಲಿ ಜನರು ಇಂಥಾ ಬೆಳಗ ಎನಗೀಯದೆ
ನೀ ಎನ್ನೊಳಗಿದ್ದು ಬೆಳಗಿನ ಜಾವದಿ ನಿನ್ನ ಕಳೆಕಳೆರೂಪ
ಎನಗೆ ತೋರೋ ಘಳಿರನೆ ಶ್ರೀ ಶ್ರೀನಿವಾಸ

೩

ಎರಡನೆ ಜಾವದಲಿ ಹುಂಜ ಹರಿಪೂರ್ವದಲಿ ಬರುವ
ಏಳಿರೆಂದು ಕೂಗಲು
ಎರಗಿ ಸತಿ ಸಹಿತ ಕಾಮಕೇಳಿಯಲಿಹರು
ಮೂರನೆ ಝಾವದಲಿ ಹರಿ ಉದಿಸಿ ಬ್ರಾಹ್ಮೀಮುಹೂರ್ತದೊಳು
ಹರಿ ಬೆಳಕೀವ ಲೋಕಕೆ ಎಂದು ಕೂಗುವುದು ಕೋಳಿ
ಕೇಳಿ ಕರ್ಣದಲಿ ಶಯನ ಬಿಟ್ಟೇಳರೊ ಈ ಜಗದಿ
ಮೂರೆರಡು ಶತಶ್ವಾಸ ಜಪ ಮಾಡಿಸುವ ಹರಿಭಕ್ತ
ಹನುಮನೆಂದರಿಯದೆ ಮಲಗಿ
ಕಾಲ ಎರಗಿ ಬರುವುದು ಆಯುಷ್ಯವೆಂದರಿಯದೆ
ಭಾರತೀಪತಿ ಅಂತರ್ಯಾಮಿ ನಿನ್ನಧ್ಯಾನಿಸದೆ ಇಹರಲ್ಲೋ ಈ ಜಗದಿ
ಶ್ರೀ ಶ್ರೀನಿವಾಸ ಎನ್ನ ನೀನವರ ಸಂಗ ಸೇರಿಸದೆ ಕಾಯೊ
ಹರಿಯೆ ಎನ್ನ ದೊರೆಯೆ

೪

ಸೂರ್ಯನಂತರ್ಯಾಮಿ ನೀನಲದೆ ಮತ್ಯಾರಿಹರು ಹರಿ
ಸೂರ್ಯಾಂತರ್ಗತ ಸೂರ್ಯನಾರಾಯಣ ಸೂರ್ಯಕೋಟಿ
ತೇಜದಿ ಮೆರೆವೆ

ಪ್ರತಿ ಸೂರ್ಯ ಸಹಸ್ರ ಉದಿಸಿದಂತೆ ಬರುವೆ
ಭಕ್ತರ ಮನದಿ ನಿಂದು ಸಕಲ ಕರ್ಮ ನೀ ಮಾಡಿಸಿ
ಪೆರ್ಮೆಯಿಂದವರ ಕಾಯ್ವ ಶರ್ವಾದಿವಂದಿತ ಗರ್ವರಹಿತ
ವೈಕುಂಠಪತಿ ನೀ ನಿನ್ನವರ ಕಾಯಲು ಸರ್ವದಾ ಅವರಿಗೆ
ವಲಿದು ಕಾವೆ ಆದಿನಾರಾಯಣ ಶ್ರೀ ಶ್ರೀನಿವಾಸ ಕಾಯೆನ್ನ
ಸೂರ್ಯಾಂತರ್ಗತ ವೆಂಕಟೇಶಾ

೫

ಹಗಲಿರುಳು ಎನ್ನದೆ ನಿನ್ನ ಸ್ತುತಿಪರು ಭಕ್ತರು
ಅಘಹರನೆ ನಿನ್ನ ಪ್ರೇರಣೆಯಿಂದಲವರಿರಲು
ಬಗೆಬಗೆಯ ರೂಪದಿ ಬಂದವರ ಸಲಹುವೆ
ನಗೆ ಮೊಗದ ಶ್ರೀ ರಮೆಯರಸ ಲಕ್ಷ್ಮೀಶ
ನಿನ್ನ ಬಗೆ ಅರಿತಿಹರಾರಿರೀಜಗದಿ
ಪಗಲಿರುಳೆನ್ನದೆ ನೀನವರಲ್ಲಿದ್ದು ಸಲಹಲು
ಬಗೆವರೆ ಅನ್ಯರಿಗೆ ಅಲ್ಪರಿವರೆ ನಿನ್ನವರು
ಜಗದಾಖ್ಯ ವೃಕ್ಷನೀನಿರಲು ನಿನ್ನ ಭಕ್ತರು ನಿನಗಲ್ಲದೆ
ಜಗದೊಡೆಯ ಶ್ರೀ ಶ್ರೀನಿವಾಸ

೧೩೪

ಪರರ ಮನೆಗೆ ಪೋಗಿ ತಿರುಗುವೆ ಯಾತಕೆ
ಸುರತರುವಿರುವದ ಅರಿಯದೆ ಮನುಜ ಪ.

ವರದಿಹ ಸುರಮುನಿ ಗುರುವರ ನಾರದ
ಪೊರೆವ ಹರಿ ಎಂದ ಪುರಂದರದಾಸರ ಅ.ಪ.

ವರ ದಿವಕರನೇಳದ ಮುನ್ನ ಸ್ಮರಿಸುತ
ಹರಿಯ ನೀನೇಳೆಂದು ಕರುಣಸಾಗರ
ಹರಿಚರಣಕೆ ನಿನ್ನಯ ಹರಣವ ಬಾಗುತೆ
ಪೊರೆವ ನಿನ್ನ ಜೀವವೆಂದರುಹಿದ ಮರೆತು ನೀನನುದಿನ ೧

ಅಂಗನೆ ದ್ರೌಪದಿ ಗಂಗ ಸ್ನಾನಕೆ ಪೋಗೆ
ರಂಗನ ಚರಣವ ಸ್ಮರಿಸುವಂಥ ಶುಕರು
ಹೆಂಗಳೆಯನು ಮಾನಂಗಳ್ವಸ್ತ್ರವ ಬೇಡೆ
ಮಂಗಳೆ ಕೈಯಿಂದ ರಂಗನ ಕೊಡಿಸಿರೆಂದು ಮರೆತುನೀನನುದಿನ ೨

ಆರು ಸ್ತುತಿಶಿದರು ಪೊರೆವೆಂಬ ಬಿರುದನು
ತೋರಿದ ಜಗಕೆ ಕೃಷ್ಣನೆಂಬೋ
ನಾರಿ ಸೊಲ್ಲ ಕೇಳಿ ಭೋರೆಂಬೊ ಸಭೆಗೆ ತಾ
ಕೋರಿದಕ್ಷಯ ಶೀರೆ ಶ್ರೀ ಶ್ರೀನಿವಾಸನು ಮರೆತು ನೀನನುದಿನ ೩

## ೧೩೫

ಸಂಗರಹಿತನಾಗಬೇಡವೊ ಮನುಜ ನಿನ್ನಂಗದಲ್ಲಿ
ಸಜ್ಜನರ ಪಾದ ಭಜನೆ ನಡೆಸು ನಿತ್ಯ ೧

ವಾಸುದೇವ ನಿನಗೆ ಒಲಿವ ತಾ ಭಾಸುರ ಕೀರ್ತಿ ತರುವ
ಬೇಸರಿಸದೆ ಭಾಸಿ ಪಂಥದಿ ವಾಸುದೇವದಾಸರ ಸೇವಿಸು ೨

ಕರುಣ ತೋರಿ ಸಲಹುವಂಥ ಗರುಡಗಮನನಿರಲು ನೀನು
ಅರಿಯದಂತೆ ಇರಲು ನಿನ್ನ ಮರುಳು ಮನವೆ ಕಾರಣೆದಕೆ ೩

ಕೂಡು ಸಜ್ಜನ ಸಂಗ ತವಕದಿ ಜಾಡುಕೋರ್ವ ಹರಿಭಕ್ತರ
ನೋಡು ನಿನ್ನಕ್ಷಿ ತೆರೆದು ಮನುಜ ೪

ಜಗಜನ್ಮಾದಿ ಕಾರಣ ಅಘಟನಘಟನಾದ ಹರಿಯ
ಮಿಗೆ ಧ್ಯಾನವಿಟ್ಟು ಮನವೆ ೫

ಸಲ್ಲ ದುರ್ಜನರಾಸಂಗವು ಸಜ್ಜನರಿಗೆ ಅಲ್ಲ ತಿಂದ ತಿಮ್ಮನಂದದಿ
ಬೆಲ್ಲ ಬೇವಿನಂತೀ ಸಂಸಾರದಲ್ಲಿ ಸಿಲುಕಬೇಡ ಮನವೆ ೬

ಹರುಷದಿಂದ ಜಡದೇಹದೊಳಗಿಹ ಶ್ರೀ ಹರಿ ಎಂದರಿದು
ಪರರ ವಾರ್ತೆ ಆಡದೆ ಪರಮಪುರುಷ ಹರಿಯ ನೆನೆ ಮನುಜ ೭

ಹದಿನಾಲ್ಕು ಲೋಕದೊಡೆಯ ಒದಗಿರಲು ನಿನ್ನ ಸಾಕೆ
ಬರಿದೆ ಚಿಂತೆ ಮಾಡಬೇಡ ಸ್ಮರಿಸು ಹರಿಯ ಚರಣವನ್ನು ೮

ಸ್ವಕಾರ್ಯ ಸ್ವಾಮಿಕಾರ್ಯ ನಿನ್ನ ಅಖಿಲ ಕಾರ್ಯಾಂಗತನು ಹರಿಯು
ಸಖನಂತೆ ಸಲಹುತಿರಲು ಸುಖಿಸು ಅವನ ದಾಸನೆಂದು ೯

ಕಮಲೆಯರಸ ಕಮಲನಾಭನು ನಿನ್ನ ಕೈಬಿಡನು ಆ ರಮೆಯರಸನ
ಮನಸಿನಲ್ಲಿ ಕನಸಿನಲ್ಲಿ ನೆನಸು ಹರಿಯ ಪಾದ ನಿತ್ಯ ಸಂಗ ೧೦

ಅಖಿಲಾಂಡ ನಾಯಕ ನಿನಗೆ ರುಕುಮಿಣೀಶ ಸಲಹುವನು
ಸಕಲರಲ್ಲು ಅವನೇ ನಿಂತು ಸಲಹುವನೆಂದರಿತು ನೀ ೧೧

ಜ್ಞಾನಿಗಳಲಿ ಪೋಗಿ ನಿತ್ಯ ಅಜ್ಞಾನವನ್ನು ಪರಿಹರಿಸುತ
ಮನವಲಿ ಮನದಿ ಹರಿಯಪಾದ ಜಾಡು ಅರಿತು ನಿತ್ಯ
ವಂದಿಸು ಮನದಿ ೧೨

ದಾಸದಾಸರ ದಾಸನು ನಾನವರ ಪಾದ ಧ್ಯಾಸದಿಂದ ಅರಿತೆನಲದೆ
ಹರಿಯ ಚರಿತೆ ಈ ಅಭ್ಯಾಸ ಮಾನವಗೆ ದೊರಕುವುದೆ
ಎಂದರಿತು ೧೩

ಗುರುಗಳಿಲ್ಲದೆ ಹರಿ ದೊರೆಕನೊ ನಮ್ಮವರ ಗುರು ಮುಖ್ಯ
ಪ್ರಾಣನಾಥನೊ
ಹರಿ ಶ್ರೀ ರಾಮಚಂದ್ರನೆಂದು ಅರುಹಿಕೊಟ್ಟು ಸಲಹುವರ ೧೪

ತ್ರಿವಿಧ ಜೀವರಿಗೆ ಹರಿಪರದೈವನೆಂದರುಹಿದ ಪರಮಗುರು
ಶ್ರೀ ಶ್ರೀನಿವಾಸನ ಪದವ ತ್ರಿವಿಧದಿಂದಲರುಹಿ ಸಲಹುವಂಥ
ಮತವ ಬಿಟ್ಟು ೧೫

## ೧೩೬

ಸಕಲಕಾರ್ಯಾಂತರ್ಗತನಾಗಿ ಹರಿ ಭಕುತರ ಹೃದಯದಲಿ ನೆಲಸಿ
ಭಕುತರ ಮನ ಬಂದಂತೆ ಕುಣಿಸೆ ಅವರನು ಹರಿ
ಸಕಲಕಾಲದಲ್ಲೂ ಕಾದು ಕೊಂಡಿದ್ದು ಸಲಹುವ ಶ್ರೀ ಶ್ರೀನಿವಾಸ ಪ.

ಯಾವಾಗ ಬರುವನೋ ಭಕ್ತರೆಡೆಗೆ ಹರಿ
ಹರಿ ಆವಾಗಲಾಗಮಿಸುವುದೇ ಪರ್ವಕಾಲ
ಹರಿಯ ಆವಾಗಲೇ ನೆನದು ಮಿಂದು ಧ್ಯಾನಿಸೆ
ಆವಾಗಲೇ ಸಂಧ್ಯಾಸಕಲ ಕರ್ಮವ ನಡೆಸೆ
ಯಾವಾಗಲೂ ಹರಿ ತಾ ತನ್ನ ಭಕ್ತರ ಕೈ ಬಿಡ
ಯಾವ ಕಾಲದಲ್ಲೂ ಶ್ರೀ ಶ್ರೀನಿವಾಸ ೧

ನಾನು ದೊಡ್ಡವ ನೀನು ದೊಡ್ಡವನೆಂದು ಹೊಡೆದಾಡದೇ
ನಿಮಗೂ ನಮಗೂ ಮತ್ತೊಬ್ಬನಿಹನು ಹರಿ
ನಿಮಗ್ಯಾತಕೀ ಛಲದ ವಾದ ಮನುಜರೇ
ಅನುದಿನವೂ ನೆನೆಯಿರಿ ಶ್ರೀಹರಿ ಶ್ರೀ ಶ್ರೀನಿವಾಸನ್ನ
ಸಕಲರಿಗೂ ದೊಡ್ಡವನವನೇ ಕೇಳಿ ಸಜ್ಜನರೇ ೨

ಈ ಕಾಲ ಆ ಕಾಲವೆಂದಿಲ್ಲ ಹರಿಗೆ ತನ್ನ ಭಕ್ತರ ಸಾಕಲು
ಈ ಸಮಯ ಆ ಸಮಯವೆಂದು ನೋಡನು ಹರಿ
ಇಂಥಾ ಈ ಕರುಣದೊರೆಯಲ್ಲಾದರುಂಟೆ ಜಗದಿ
ಈ ತನುವಿರುವ ತನಕ ಈ ಪರಮ ಪುರುಷನನು
ಬೇಕಾದ ಕಾಲದಲಿ ಈ ಮನುಜ ಜಪಿಸುತಿರೆ
ಕಮಲನಾಭ ಶ್ರೀ ಶ್ರೀನಿವಾಸ ಸಲಹದಿರನೇ
ನಿನ್ನ ಆಪತ್ತಿಗಾಹ ಶ್ರೀಶ ಶ್ರೀ ವೆಂಕಟೇಶಾ ೩

ಜಾಗರದಲೂ ಹರಿ ಕಾವ ನಿದ್ರೆಯಲೂ ಹರಿಕಾವ
ಜಾಗರ ಸುಷುಪ್ತಿಯಲಿ ಹರಿ ಜಾಗರಮೂರುತಿ ನಿನ್ನ ಕಾವ
ಜಾಗು ಮಾಡದೆ ಭಜಿಸು ಜಾನಕಿರಮಣ ಶ್ರೀ ರಾಮಚಂದ್ರನ್ನ
ಅಜಾಗೂರಕತೆ ಸಲ್ಲ ನಿನಗೆ ನಿತ್ಯ ಜಪದಿನೆನೆ
ಶ್ರೀ ಶ್ರೀನಿವಾಸನ್ನ ಮನವೆ ೪

ಬುದ್ಧಿ ಬಂದಿದ್ದು ಅವನಿಂದ ಬುದ್ಧಿ ಅರಿವುದು ಅವನಿಂದ
ಅಪ್ರಬುದ್ಧನಾಗದೇ ಬುದ್ಧಿ ಪೂರ್ವಕ ನೀ ನೆನೆದರೆ
ಹರಿ ಬದ್ಧಕಂಕಣ ತೊಟ್ಟಿಹನು ಭಕ್ತರ ಕಾಯೆ
ಆ ಶ್ರೀ ಶ್ರೀನಿವಾಸನ ಶುದ್ಧ ಮನದಿ ನೆನೆಮನವೆ ೫

ಮೊದಲು ನಿನ್ನ ಹೃದಯದ ವೈರಿ ಗೆಲ್ಲು
ಮೊದಲು ನೀನವರ ವಶವಾಗದೆ ನಿನ್ನ ಮನ
ಶುದ್ಧಮಾಡಿಕೊ ಮೊದಲು ನಿನ್ನ ಮನಸಿನಶ್ವಕ್ಕೆ
ಬುದ್ಧಿಲಗಾಮು ಹಾಕು ನಿನ್ನ ಬುದ್ಧಿಯಲಿ
ಮೊದಲನೆ ಕಾರ್ಯವಿದು ಎಂದರಿ
ಈ ಮೊದಲು ನನಿಕಾರ್ಯ ನೋಡಿ ಶ್ರೀ ಶ್ರೀನಿವಾಸ
ಒಲಿವ ನಿನಗೆಂದೆಂದು ಮನವೆ ೬

ಈ ತನವು ಈ ನುಡಿ ಈ ಕಾರ್ಯ ಈ ವಾರ್ತೆ
ಈ ಕೃಪೆಯು ಶ್ರೀ ಶ್ರೀನಿವಾಸಗಲದೆ ಅನ್ಯತ್ರವಿಲ್ಲ
ಹರಿ ಭಕ್ತರ ಸುಳಾದಿ ಭಕ್ತವತ್ಸಲ ಶ್ರೀ ಶ್ರೀನಿವಾಸಗರ್ಪಿತವೆಂದು
ತಿಳಿ ಮನವೆ ೭

## ೧೩೭

### ತತ್ತ್ವ ಪ್ರತಿಪಾದನೆ

ದೂಡಿಸುವ ಸಂಸಾರ ದೇವ
ರೂಢಿಯೊಳು ಭಕ್ತರೊಡನಾಡಿ ರಂಗ ಪ.

ಈ ನಾಡಿನೊಳ್ ಭಕ್ತರ ಭವ ನಾವಿಕನಾಗಿ
ಗಾಢನೆ ನಡೆಸುತ ಜೋಡು ಕುಂಡಲಧರ ಅ.ಪ.

ಭಕ್ತಿರಸವೆಂಬ ತೊಗಲನ್ನು ಹೂಡಿ
ಯುಕ್ತಿಲಿ ಮಣ್ಣಿನ ಬೊಂಬೆಯೊಳಗಾಡಿ ಪರ
ಶಕ್ತಿಯೆಂಬ ಹೊಲಿಗೆಯನ್ನು ಕೂಡಿ
ಭಕ್ತಿಲಿ ಸ್ತುತಿಸುವ ಭಕ್ತರೊಳಾಡಿ ೧

ಗುರುಹಿರಿಯರ ಸೇವೆಯೆಂಬ ಮನಕೊಟ್ಟು
ಸರಸದಿ ಮನೆಗೆಲಸವ ಗುಟ್ಟಿಲಿಟ್ಟು
ಸರಸಿಜನಾಭನ ಮನಸಿನೊಳಿಟ್ಟು
ಹರುಷದಿ ಸ್ತುತಿಪರ ಸಲಹುವನೆಂಬೊ ಬಿರುದಿಟ್ಟು ೨

ಕರುಣಾಮಯನೆಂಬೊ ಪೆಸರನು ಇಟ್ಟು
ಹರುಷದಿ ಕೂಗುವ ಭಕ್ತರೊಳಗೆ ತಾ ಗುಟ್ಟು
ಕರುಣಾಸಾಗರ ವರ ಶೇಷಾಚಲವಾಸ
ಭರದಿ ಶ್ರೀ ಶ್ರೀನಿವಾಸ ಇಂಥಾ ಭವ ಸಂಸಾರವ ೩

## ೧೩೮

ನಾನು ಎಂಬೊದೆ ದೊಡ್ಡದು
ನೀನೆಲ್ಲಿಹೆಯೊ ನಾನೆಲ್ಲಿ ಕಾಣಲಿ ಪ.

ನಾನೆಂಬೊ ವ್ಯಾಪಾರ ನೀನೆ ಮಾಡಿಹೆ
ಗಾನಲೋಲ ಸರ್ವರಂಗಲಿ ನಾನೇ ಇಹೆನೆಂದು ಅ.ಪ.

ಸರ್ವರೊಳಗೆ ನಾನೆಂಬೊದೇ ಇರಲಾಗಿ
ಸಾರ್ವಜನಿಕ ನೀನೆಲ್ಲಿಹೆಯೊ
ಸರ್ವಧಿಕಾರಿ ನೀನೇ ಎಂಬ ವಿಬುಧರ
ಸರ್ವಕಾಲದಿ ಸರ್ವ ಸುರರ ಸಹಿತಿಹೆ ನಾನು ೧

ಮಿಂಚಿದ ಪಾಪವ ಮಾಡುವ ಮನುಜರ
ವಂಚಕತನದಲಿ ದೇಹದೊಳಿಹೆ ನೀನು
ಸಂಚಿತಾರ್ಥದ ಪುಣ್ಯವ ಗಳಿಸಿದ ಭಕ್ತರ
ಮಿಂಚಿನ ಹುಳದಂತೆ ಕಂಚಿ ವರದ ಇಹೆ ೨

ರಘುಪತೆ ರಾಘವನೆನುತ ಶ್ರೀ ಶ್ರೀನಿವಾಸನ
ಬಗೆ ಬಗೆ ಸ್ತುತಿಸದೆ ಅಧಮರಿಗಿಲ್ಲ
ಅಘಹರ ಗೋಪಿಗೆ ಮಿಗೆಯಾಟ ತೋರಿಹೆ
ನಗಧರ ಅಳಗಿರಿ ಸೊಗಸಿನ ಚೆನ್ನಿಗ ನಾನು ೩

## ೧೩೯

ರಂಗವಾಲಿಯನಿಡು ತಂಗಿ ನಿನ್ನಂತರಂಗ
ದಂಗಳ ಸಾರಿಸಿ ರಂಗಗರ್ಪಿತವೆಂದು ಪ.

ಮಂಗಳಮಹಿಮ ಶ್ರೀ ಕೃಷ್ಣ ತನ್ನಲಿವ
ಎಂದಂಗನೆ ಸುಭದ್ರೆಗೆ ರಂಗಹೇಳಿದ ಅ.ಪ.

ಅರಿಷಡ್ವರ್ಗಹಂಕಾರ ಮದಗಳೆಂಬ
ಮಮಕಾರವ ಬಿಟ್ಟು ಮುನ್ನ
ತೊಡರಬಿಡಿಸಿ ನಿನ್ನ ಕಡೆಹಾಯಿಸುವ ಪಥ
ದೊಡೆಯ ಶ್ರೀಧರಪಾದವದರೊಳು ನಿಲುವಂತೆ ೧

ಅಚ್ಚ ಭಕುತಿಯೆಂಬ ಶ್ವೇತ ಕಲ್ಲನೆ ಕುಟ್ಟಿ
ಅಚ್ಚುತನಾಮ ಪವಳ ಬೆರಸಿ
ಸ್ವಚ್ಛ ಮುತ್ತುಗಳೆಂಬಂಥ ಶೀಲತೆಯಿಂದ
ಅಚ್ಚ ಶ್ರೀ ತುಳಸಿಯ ಕಟ್ಟೆಯ ಬೆಳಗುವಂಥ ೨

ಹರಿನಾಮದರಿಶಿನವದರ ಮಧ್ಯದಿ ತುಂಬಿ
ಅರಿಗಳ ಕಡಿವಂಥ ಕುಂಕುಮವ

ಪರಮಾನಂದದಿನೆಲ್ಲಿ ಕರಿಯ ಬಣ್ಣ
ಹರುಷದಗಸೆ ಹಸುರ ಬೆರಸಿ ಶ್ರೀ ಶ್ರೀನಿವಾಸಗೆ ೩

## ೧೪೦

ಹರಿ ಪುಟ್ಟಿಸಿದಾ ವೃಕ್ಷದಿ ಪುಟ್ಟಿದ ಎಳೆಸಸಿಯೆ
ಬಾಳೆನ್ನ ಕುಲದಾ ಬೆಳದಿಂಗಳೆ ಪ.

ತಂದೆ ತಾಯಿಯ ಮಾತು ಮರೆಯದಿರು ಎಲೆಸಸಿಯೆ
ಇಂದಿರಾಪತಿ ಕರುಣಕ್ಕೆ ಪಾತ್ರನೆಂದೆನಿಸಿ
ಇಂದು ನೀನಖಿಳಜನ ಸಂದಣಿಯೊಳು ಬೆಳಗು
ಚಂದ್ರ ಬಾನೊಳಗೆಸೆವ ತೆರನಂತೆ ಪೊಳೆದು ೧

ಬಾ ಹಿರಿಮೆ ಬೇಡವು ನಿನಗೆ ಹಿರಿಯರಾಜ್ಞೆಲಿರಿರಲು
ಕರೆಕರೆಯುಬಾರದೊ ತರಳ ಶಿಶುವೆ
ಹಿರಿಮೆಗೆ ಕೊರತೆಯುಂಟೆ ಗುರುಹಿರಿಯರಾಜ್ಞೆಯಲಿರಲು
ದುರುಳರನು ಸರಸದೊಳು ಕೆಣಕದಿರು ಎಲೆಸಸಿಯೆ ೨

ಸಕ್ಕರೆ ಜೇನು ದಧಿ ಮಧುರಾಕಿಂತ ಅಧಿಕದ
ಚೊಕ್ಕ ಮಾತುಗಳಾಡು ನಿನ್ನ ದಿಟ್ಟ ಬಾಯೊಳಗೆ
ಚಿಕ್ಕವನಲ್ಲವೇ ಭಕ್ತಪ್ರಲ್ಹಾದ ಧ್ರುವ ಕೇಳೊ ಅವರಂತೆ
ಚಿಕ್ಕ ಶ್ರೀ ಶ್ರೀನಿವಾಸನ ಹರಕೆಯಲಿ ಬಾಳೊ ೩

## ೧೪೧

ಹಳಿಯದಿರಿ ಸಂಸಾರಂ ಈ ಭವ ಭಯದಾ ಕೊಳೆ
ತೊಳೆದಾನಂದವೀವ ಸಾರಂಸಂಸಾರ ಸಾರಂ ಪ.

ಸುಳಿದು ಯಮಭಟರೆಳೆಯುವ ಕಾಲದಿ
ಬಳಸಿಕೊಳುವ ಪರಿ ಗಳಿಸಿರೊ ನಿತ್ಯಾ ಈ ಸಾರ ಮನುಜರು ಅ.ಪ.

ಅಳಿದವರಾರು ಝಳಝಳ ಮನದಿಂ
ಕಳೆಗೊಟ್ಟಿಹ ಪುರುಷನಾರುಂ
ಸಲೆ ನಾರದರಲ್ಲದೆ ಯಿದನಂ
ಸೆಳೆದುರೆ ಭಕ್ತಿಯೊಳ್ ಹರಿಯಂ
ಅಳವಲ್ಲದಾನಂದದಿಂ ಹರಿ ಸುಳಿವ
ಪೊಳೆವ ಮನದೊಳಗಿಹನೆನುತಂ
ಸಾರಿ ಹರಿದನಂ ಸಾರಂ ಸಂಸಾರಂ ೧

ಅರ್ಣವದೊಳು ಭವಾರ್ಣ ನಿರ್ಮಾಣನ
ಕರ್ನದೊಳಾಲಿಸಿ ಧ್ವನಿಮಾಡಿ
ನಿರ್ಣಯದಲಿ ಸ್ವರ್ಣರೂಪನ
ಜೀರ್ಣಿಪ ವೀಣಾನಾದದೀ ಸಾರಂ
ಕರ್ಣಾನಂದದಿ ಹಾಡಿದನಾರುಂ
ವರ್ಣಾಶ್ರಮ ಧರ್ಮ ಮರ್ಮವರಿತು
ಚರ್ಮಸುಖವಳಿದು ಪೂರ್ಣಜ್ಞಾನದ
ಪುರಂದರದಾಸರಲ್ಲಿದೆ ಈ ಸಾರಂ ಸಂಸಾರಂ ೨

ತರಲಾನಂದದಿಂ ಸರಿಗಮ ಪದನಿಸ
ಸನಿದಪ ಮಗರಿಸ ಶೋಡಷಕ್ಷರದಿಂ
ತರಲಾ ಸಂಗೀತಕೆ
ಸರಳಾಗಿಹ ಹರಿ ನಾಮಾಮೃತವಂ
ಧರಿಶಿದ ಪುರಂದರರಂ
ಶರಣ ಭರಣ ಕರುಣ ಪಡೆವುದು
ನಿರುತ ಹರಿ ಶರಣರೆನುತ
ಅರುಹಿದ ಸಂಗೀತವೀ ಸಾರಂ ಸಂಸಾರಂ ೩

ಈ ತೆರ ಭಜಿಸಿದಗ್ಯಾತರ ಭಯ
ಪಾತಕಹರ ಜಗದೀಶ ಮಾನಸ
ದಾತುರದೊಳು ಹರಿ ದಾತನೆಂದರಿತು

ನೀತಾಚಾರದಿ ಯಾವಾತ ಸ್ತುತಿಸಲು
ಜ್ಯೋತಿ ಪ್ರಕಾಶದಿ ತನುಜಾತನಾಗಿ ಬಹ
ಪ್ರೀತಿಗೊಡುತ ಖ್ಯಾತ ಭಕ್ತ ಪಾರಿಜಾತನೆಂದು
ತಿಳಿದಾತಗೆ ಇದು ಸಾರಂ ಸಂಸಾರಂ ೪

ಭಗವಂತನ ಧ್ಯಾನಿಪನ ಪುಡುಕುತ
ಮಿಗೆ ಸಂಚರಿಸುತಲಿಹರೀಗಲು
ಭಾಗವತರಿದು ಸತ್ಯಂ ಜಗಕೆ
ಜಗದೀಶ ಶ್ರೀ ಶ್ರೀನಿವಾಸನೆಂದು
ಮಿಗೆ ಜಗದಾನಂದ ಪುಳಕಿತ ತನುವಿನ ಜೀವರ
ಸೊಗವಿಲಿ ನಾಲ್ಮೊಗನ್ಯೆಯ್ಯನು
ಸಿಗುವ ಪರಿಯಗೊಡುತಗಣಿತ ಮಹಿಮರು
ಕರುಣಿಸಿದೀ ಸಾರಂ ಸಂಸಾರಂ ೫

## ೧೪೨

## ಸಂಪ್ರದಾಯದ ಕೀರ್ತನೆಗಳು

ಬಜಬೆಣ್ಣೆನಿಡುವೆನು ಬಾ ರಂಗ ಮೋಹನಾಂಗ ಕೃಷ್ಣಾ ಪ.

ಬಜ ಬೆಣ್ಣೆನಿಡುವೆನು ನಿಜರೂಪ ತೋರಿಸೊ
ತ್ರಿಜಗ ವಂದಿತ ಕೃಷ್ಣ ಭುಜಗ ಶಯನ ದೇವಾ ಅ.ಪ.

ಮೀಸಲಳಿದ್ಹಾಲು ಕಾಸಿದ ಮೊಸರನ್ನ
ಸೋಸಿಲಿ ಕಡೆದ ಬೆಣ್ಣೆ ವಾಸುದೇವನೆ ನಾ ೧

ಅಸುರ ಪೂತನಿಯ ವಿಷದ ಮೊಲೆಯನುಂಡು
ಕಸುವಿಸಿಯಾಗಿಹ ಹಸುಳೆ ನಿನ ಬಾಯೊಳು ೨

ಉಡುಗೆ ತೊಡುಗೆ ತೊಡಿಸಿ ಕಡಗ ಕಂಕಣ ಕೈಗೆ
ವಡೆಯ ಶ್ರೀ ಶ್ರೀನಿವಾಸ ಸಡಗರದಲಿ ನಾ ೩

## ೧೪೩

ಬಾರೊ ಹರಿ ಬಾರೊ ದೊರಿ
ಬಾಬಾ ಮುರಾರಿ ನೀ ಪ.

ನಾರಿಯೇರು ಕರಿಯುವರು
ಹೀರಾದ ಪೀಠಕೆ ಬೇಗಾ ಅ.ಪ.

ಪದ್ಮಪಾದ ಪೊಳೆಯುತಲಿ
ಪದ್ಮಾಕ್ಷಿಯ ಕೂಡುತಲಿ
ಪದ್ಮಾದ ಪೀಠಕೆ ಬೇಗ
ಪದ್ಮನಾಭ ಮುದ್ದು ಶೌರಿ ೧

ಪೀತಾಂಬರ ಧರಿಸುತಲಿ
ಪೀತ ವಸ್ತ್ರ ವಲಿಯುತಲಿ
ಜಾತಿ ಮುತ್ತಿನ್ಹಾರ ಹಾಕಿ
ಸೀತಾಪತಿ ಶ್ರೀ ಕೃಷ್ಣನೆ ೨

ಚಂದ್ರ ಸದೃಶಾನನನೆ
ಇಂದಿರೇಯ ಪೊಂದಿದನೆ
ಮಂದರಾದ್ರಿ ಎತ್ತಿದನೇ
ಸುಂದರ ಶ್ರೀ ಶ್ರೀನಿವಾಸ ೩

## ೧೪೪

ಬಾಬಾ ಭಾಮಿನಿ ಬಾಬಾ ಭಾಮಾಮಣಿ ಪೀಠಕೆ ಪ.

ರತ್ನ ಮಂಟಪದೊಳು ಮುತ್ತಿನಮಣೆನ್ಹಾಕಿ
ಮಿತ್ರೆಯರ್ ಕರೆವರು ಈಗ

ಎತ್ತ ನೋಡಿದರೂ ಸುತ್ತ ಜ್ಯೋತಿಗಳು
ಶಿಸ್ತಿಲಿ ಬೆಳಗುತಿಹುದು ೧

ವರ ಜರತಾರಿ ಪೀತಾಂಬರನುಟ್ಟು
ಸರಗಳು ಹೊಳೆಯುತಲೀಗ
ಬೆರಳಿನುಂಗುರ ಥಳಥಳಿಸುತಲಿ
ಬೆಡಗನು ತೋರುತಲಿ ೨

ಕಡಗ ಕಿಂಕಿಣಿ ಕರದಲಿ ಪೊಳೆಯೆ
ಅಡಿ ಇಡುತಲಿ ನೀ ಬೇಗ
ಮುಡಿದ ಮಲ್ಲಿಗೆ ಎಡಬಲಕುದುರುತ
ಒಡೆಯ ಶ್ರೀ ಶ್ರೀನಿವಾಸನ ಮಡದಿ ೩

## ೧೪೫

ಭಾಮಿನಿ ಬಾರೆಲೆ ಕಾಮಿನಿಮಣಿಯೆ ನೀ
ಕಾಮಜನಕನ ರಮಣಿ ರಾಜಿಪ ಪೀಠಕೆ ಪ.

ಸರೋಜ ಮುಖಿಯೆ ನೀ ಸೋಜಿಗದಿಂದಲಿ
ರಾಜಿಪಪೀಠಕೆ ರಾರಾಜಿಸುತ ಬಾ ೧

ಕಂಗೊಳಿಸುವ ಬೆಳದಿಂಗಳ ಸೊಬಗಲಿ
ರಂಗನಸಹಿತ ಶೃಂಗರದಿಂದಲಿ ೨

ಮಂಗಳ ಮುಖಿಯೆ ನೀ ಚಂದದಿ ಬಾಬಾ
ಶ್ರೀ ಶ್ರೀನಿವಾಸನ ಮಡದಿ ಮಾನಿನಿ ಮಣಿ ೩

## ೧೪೬

### ಉರುಟಣೆ ಹಾಡು

ಪದ್ಮಾವತಿ ನಿಂತು ಮುದ್ದು ಪದ್ಮನಾಭನಿಗೆ
ಪದ್ಧತಿಯಲಿ ಉರುಟಾಣಿಯನು ಮಾಡಿದಳೊ ಪ.

ಪದ್ಮಾಕ್ಷ ನಿನ್ನಯ ಪಾದಪದ್ಮವನೆ ತೋರೀಗ
ಪದ್ಮರೇಖೆಯ ಪಾದಕರಿಶಿಣವ ಹಚ್ಚುವೆನು
ಪದ್ಮ ಸಂಭವನ ಪಿತ ವೆಂಕಟೇಶ ಶ್ರೀಶ ಅ.ಪ.

ಅರವಿಂದ ದಳನಯನ ಕರುಣದಿಂ ಪಣೆ ತೋರು
ವರ ಕುಂಕುಮದ ತಿಲಕ ತಿದ್ದುವೇನು ಕೃಷ್ಣ
ಕೊರಳ ತೋರೆಲೊ ದೇವ ಶ್ರೀ ವತ್ಸದಾಮೇಲೆ ಮೆರೆವ
ತೆರ ಹಾರಹಾಕುವೆನೀಗ ಶ್ರೀಶಾ ಸುರವಂದ್ಯನೆ ದೇವ ಶ್ರೀನಿವಾಸ ೧

ವೇದಾಭಿಮಾನಿಯೆ ವೇದದಿಂದಮೃತವನು
ಆದರದಿ ಭಕ್ತರಿಗೆ ಕೊಟ್ಟಿ ಕರಕೆ
ಮೋದದಿಂದ ಗಂಧವನು ಹಚ್ಚುವೆನು ಎಲೊ ದೇವ
ಸಾಧಿಸಿ ಭೂಮಿಯ ತಂದ ವರಹ ಕಂಠವ ತೋರೋ
ಆದರದಿ ಹಚ್ಚುವೆನು ದೇವ ದೇವ ೨

ಕಂದನಾ ನುಡಿಕೇಳಿ ಕಂಬದಿಂ ಬಂದವನೆ
ಅಂದದಿಂ ಬ್ರಹ್ಮಚಾರಿಯಾಗಿ ಮೆರೆವ ದೇವ
ಸುಂದರ ಪರಶುರಾಮ ಅಂದದ ದಶರಥಸುತನೆ
ಮಂದರೋದ್ಧರ ಕೃಷ್ಣ ಸುಂದರ ಬೌದ್ಧ ಕಲ್ಕಿ ನಿನ್ನ
ಮಂದಗಮನೆಯ ವೀಳ್ಯ ಸ್ವೀಕರಿಸೊ ಶ್ರೀ ಶ್ರೀನಿವಾಸಾ ೩

## ೧೪೭

ಬಾ ಉರುಟಣೆಗೆ ಕಾಂತ ಪ್ರಿಯಕಾಂತ ಪ.

ಕರುಣವ ತೋರೋ ಕಮಲನಯನನೆ
ತರುಣಿಮಣಿಯು ನಾ ಕರೆವೆನು ರಮಣ ಅ.ಪ.

ವರ ಪನ್ನೀರಿಲಿ ಚರಣವ ತೊಳೆದು
ಅರಿಶಿಣ ಹಚ್ಚುವೆ ಕಾಂತ ನಾ
ವರ ಲಲಾಟಕೆ ಹರುಷದಿ ಕುಂಕುಮ
ತಿಲಕವ ತಿದ್ದುವೆ ರಮಣ ೧

ಅತ್ತರು ಪನ್ನೀರಿನ ಗಂಧವನು
ಶಿಸ್ತಿಲಿ ಪೂಸುತಲೀಗ
ವಿಸ್ತಾರವಾದ ಮಲ್ಲಿಗೆ ಮಾಲೆಯ
ಚಿತ್ತಜನಯ್ಯ ಹಾಕುವೆನು ಪ್ರಿಯ ೨

ಬಿಳಿಯೆಲೆ ಅಡಿಕೆ ಚೆಲುವಿನ ಸುಣ್ಣ
ನಲಿದು ಕೊಡುವೆ ಬಾ ಕಾಂತ
ಫಲವ್ಯಾಕೆನ್ನೊಳು ಶ್ರೀ ಶ್ರೀನಿವಾಸ
ಒಲುವಿನಲಿ ಬಾ ಬೇಗ ರಮಣ ೩

## ೧೪೮

ಕನ್ನಡಿಯ ಪೋಲುವೊ ಚೆನ್ನ ಕೆನ್ನೆಯ ತೋರು ಪ.

ಚನ್ನ ಚೆಲುವೆ ಬಣ್ಣದರಿಶಿಣವ ಪೂಸುವೆನು
ರನ್ನದ ಲಲಾಟಕೆ ಚನ್ನ ಕುಂಕುಮ ತಿಲಕ
ಚಿನ್ನದಾ ಬೊಂಬೆ ಪದ್ಮಾವತಿ ನಿನಗೆ ತಿದ್ದುವೆನೆ
ಚನ್ನಕೇಶವರಾಯ ನಿನ್ನ ಚೆಲುವಿಕೆಗೆ ಮೆಚ್ಚಿ ಬಂದಿಹೆನೆ ೧

ಅರವಿಂದದಳನಯನೆ ಅಡವಿಯಲಿ ಯನ ಮೇಲೆ
ಅರಸಿ ನೀ ಕಲ್ಲುಗಳ ಬೀಸಿದಾ ಕರಕೆ ಗಂಧ
ಸರಸದಲಿ ಹಚ್ಚುವೆನೆ ಸರಸಿಜಾಕ್ಷಿಯೆ ಕೊರಳ
ಹರುಷದಲಿ ತೋರೀಗ ನಿನ್ನ ಸರಸಿಜಾಕ್ಷಗೆ ಅರಸಿ ಪದ್ಮಿನಿಯೆ ೨

ಸರ್ಪವೇಣಿಯೆ ನಿನಗೆ ಕಂದರ್ಪಪಿತ ಮಲ್ಲಿಕಾ ಪುಷ್ಪ
ದಂಡೆಯನು ಮುಡಿಸುವೆನು ಕಮಲನಯನೆ
ಸರ್ಪಶಯನನು ನಿನಗೆ ಅರ್ಪಿಸುವೆ ಸುತಾಂಬೂಲ
ದರ್ಪವನು ಬಿಟ್ಟು ಕೈಕೊಳ್ಳೆ ವೀಳ್ಯವ ಅರಸಿ
ಸರ್ವರಿಗೆ ಅಪ್ಪ ಶ್ರೀ ಶ್ರೀನಿವಾಸಾನೆಂದು ತಿಳಿಯೆ ದೇವಿ ೩

## ೧೪೯

ಕೊಡುವೆ ವೀಳ್ಯವನು ಕಡಲ ಶಯನನೇ ನಾ ಪ.

ಬುತ್ತಿ ಚಿಗುರು ಎಲೆಯು ಕತ್ತರಿಸಿದ ಅಡಕೆ
ಮುತ್ತಿನ ಸುಣ್ಣವನ್ನು ನಾ ೧

ಯಾಲಕ್ಕಿ ಲವಂಗ ಬಾಲ ಮೆಣಸು ಸಹ
ಬಾಲೆ ನಾನು ಬೇಡುವೆನು ನಾ ೨

ಶ್ರೀ ಶ್ರೀನಿವಾಸನೆ ಶ್ರೀ ರಮಾಲೋಲನೆ
ಶಿರವನಿಂದು ಬಾಗುವೆನು ನಾ ೩

## ೧೫೦

ವೀಳ್ಯವ ಕೈಕೊಳ್ಳೊ ನಿನ್ನರಸಿಯೊಳು ನೀ ಸರಸದಿಂದಲಿ ಪ.

ಯಾಲಕ್ಕಿ ಲವಂಗ ಬಾಲ ಮೆಣಸು ಸಹ
ಲೋಲಾಕ್ಷಿ ತಂದಿಹ ವೀಳ್ಯವ
ಬಾಲಕೃಷ್ಣನೇ ಶೃಂಗಾರದಿ ೧

ರತ್ನದ ತಟ್ಟೆಯಲಿ ಮುತ್ತಿನ ಸುಣ್ಣವು
ಬುತ್ತಿ ಚಿಗುರಿನ ವೀಳ್ಯವ
ಹಸ್ತಿ ವರದನೇ ಶೃಂಗಾರದಿ ೨

ಶ್ರೀಶ ಶ್ರೀ ಶ್ರೀನಿವಾಸ
ವಾಸುಕಿಶಯನ ತಡವ್ಯಾಕೊ ಶೃಂಗಾರದಿ ೩

## ೧೫೧

## ದೀರ್ಘಕೃತಿಗಳು

### ಕೃಷ್ಣಲೀಲೆ

ಕೃಷ್ಣ ಉದಿಸಿದನು ಉತ್ಕೃಷ್ಟ ದೇವಕಿಯಲ್ಲಿ
ಶಿಷ್ಟಾಚಾರದಿ ನಿಷ್ಠೆಲಿ ತಪಗೈದ
ಶಿಷ್ಟ ವಸುದೇವಗೆ ತುಷ್ಟಿಪಡಿಸುತಲಿ ಪ.

ಗೋಕುಲ ಪಶುಗಳ ಶ್ರೀಪತಿ ಶ್ರಿಷ್ಟಸು
ಗೋಪಾಂಗನೆಯರ ರೂಪದಿ ನಿನ್ನ
ಗೋಪೀ ನಂದಗೋಪ ನಂದನ ನೀನಾಗೆ
ಶ್ರೀಪ ಖಳರಗೊಲ್ಲೆ ಭೂಪತಿ ನೀನೆಂದು ೧

ಅಜ ಭವಾದಿಗಳು ಭುಜಗಭೂಷಣ
ತ್ರಿಜಗಪಾಲನ ಸ್ತುತಿಗೈಯುತಲಿ
ನಿಜಸ್ವರೂಪನು ಅಗ್ರಜ ಸಹಿತುದಿಶಿದ
ಭುಜಗಶಯನನು ಅಜಭವ ಸನ್ನುತ ೨

ಉಗ್ರಶಯನ ಪುತ್ರ ಆಗ್ರಪದಲಿ ತಂದೆ ಅ
ನುಗ್ರಹವಿಲ್ಲದೆ ರಾಜ್ಯ ಪಾಲಿಸಿದ ಅಗ್ರಜ ನಾನೆಂದು
ಶೀಘ್ರದಿ ವಸುದೇವ ತಂಗಿಗೆ
ಅಬ್ಬರ ಮದುವೆಯ ಜಾಗ್ರತೆ ನಡೆಸಲು ೩

ಡಂಬದಿ ಕಂಸನು ತಂಗಿ ವಿವಾಹದಾ
ಡಂಬರ ಮೆರವಣಿಗೆಯ ತರಲು
ಅಂಬರದಲಿ ವಾಣಿ ಕುಂಭಿಣಿಪಾಲ ದೇವ ನಿನ್ನ ತಂಗಿ
ಅಂಗಜಪಿತನಾಗುದಿಶೀ ಬಹ ನಂಬಿರಬೇಡೆಂಟನೆ ಗರ್ಭದಿಳಿವನೆ ೪

ಕಾರಾಗೃಹದಲಿ ವಸುದೇವ ದೇವಕಿಯ ಹಾ
ಕರದಿ ಶೆರೆಯಿಡೆ ಹರಿಯ ನೆನೆಯುತಿರೆ
ಕಾರುಕೋಟ ವಿಷಪುಂಜ ಕಂಸನು
ಕಾಲಕು ಪ್ರಸವಿಪ ಪುತ್ರರ ಸೆಳೆದೊಯ್ಯೆ ೫

ಅನುದಿನ ಕ್ಲೇಷದಿ ತನುಭವರನು
ತನ್ನನುಜ ಕಂಸಗೆ ಕೊಡೆ
ಅನುಭವಿಸುವೆ ಕಷ್ಟವ ಅಕಟಾ ಎಂದೆನುತಾ
ರು ಮಕ್ಕಳಗೊಡೆ ದನುಜನೆತ್ತೊಗೆದನು ೬

ನೆಂಟನೆ ಕಂಸನು ದಂಬಿನಿಂದೊಗೆದೆಸೆ
ದಂಟದೆ ದುಃಖವ ತೆರಳಿದ ಶಿಶುಗಳ
ಕಂಟಕಕೇಳನೆ ಗರ್ಭದಿ ಶೇಷಬಲ
ನೆಂಟನ್‌ಗುದಿಶಿದ ರೋಹಿಣಿಯಲ್ಲಿ ೭

ಕಾರಾಗೃಹದಲಿ ಕರುಣಾಮಯ ತಾ
ಕಾಣಿಶಿದೆಂಟನೆ ಗರ್ಭದಲಿ
ಕಾರಣಕರ್ತಗೆ ಚಾರರ ನಿಯಮಿಸೆ ಕಂಸ
ಶ್ರೀ ರಮಣುದಿಶಿದ ನಿಶಿಯಲ್ಲಿ ೮

ಕಂಸಮರ್ಧನನ ಶಿಂಶುಮಾರಮೂರ್ತಿಯ
ಹಿಂಸಿಪ ಕಂಸನೆಂದು ಯೋಚಿಸಲು
ಅಂಶ ಶಂಕು ಚಕ್ರಧರ ನುಡಿದನು ಎನ್ನ
ಹಿಂಸಿಪರ್‍ಯಾರೈದಿಡಿ ಗೋಕುಲವಂಶ ಪೆಣ್ಣು ನೀನ್ ತಹದೆನಲೂ ೯

ಜಯಜಯವೆನುತ ದೇವೇಂದ್ರನು ಮಳೆ
ಜವದೊಳುಗತ್ತಲೆ ಕವಿಸಿರಲು
ಜಯ ಕವಾಟವು ಬಿಚ್ಚಲು ಜಯವೆಂದು
ಜಯಪತಿಯನು ವಸುದೇವ ಕರೆತರಲು ೧೦

ಛತ್ರಿ ಶೇಷ ಅನುಮಿತ್ತ ಬಂಧುವಿಗೆ
ಎತ್ತಿ ಬೆಳಕ ಯಮುನಾ ದಡಕೆ
ಮಿತ್ರಭಾವದಿ ಇತ್ತಳೆಮುನ ದಾರಿ
ಚಿತ್ತಜಪಿತನ ಯಶೋದೆಗಿತ್ತ ವಸುದೇವ ೧೧

ಇತ್ತಾ ಕೃಷ್ಣನ ಎತ್ತೆ ಸಹೋದರಿಯ
ಇತ್ತಾ ಕವಾಟವು ಬಿಚ್ಚೆ ಒಳಹೊಗೆ
ಹತ್ತರಿದ್ದ ಖಳರೆಚ್ಚರಗೊಳಿಸಲಾ
ಮತ್ತಾ ಶಿಶುಧ್ವನಿ ವಿಸ್ತರದಲಿ ಕೇಳಿ ೧೨

ಕಂಸಗೆ ತಿಳಿಸಲು ಹಿಂಸಿಸೆ ಬರಲಾ
ಅಂಶವು ಹೆಣ್ಣಿನೆ ದೇವಕಿಯು ಹಿಂಸಿಸೆ
ಕಂಸನು ಎಸೆಯಲು ಗಗನಕೆ ಅಂಶ ದುರ್ಗಿಯು ನ
ಪುಂಸಕ ನಿನ ವೈರಿ ಪುಟ್ಟಿಹನೆನಲು ೧೩

ಗೋಕುಲದೊಳಗಿಹ ಅನೇಕ ಭಕ್ತರ ಸಹ
ತಾ ಕರುಣಾನಿಧಿ ತಿಳಿಯೆಂದು
ಆ ಕುಲತಿಲಕನನೇಕ ಕರದಿ ಸ್ತುತಿಸೆ
ನೀ ಕಡೆ ಹಾಯುವೆ ಎಂದಾ ಕುಲಮಣಿ ಪೇಳೆ ೧೪

ತನುಭವರಿಂದೊಡಗೂಡಿ ಆಲೋಚಿಸಿ
ಪೂತನಿ ಸ್ತನದಲಿ ವಿಷವನು ಸ್ಥಾಪಿಸುತ
ವನರುಹಲೋಚನಗುಣಿಸಿ ಬಾಯೆನುತ
ತನು ಸಹಿತ ಹೀರುತ ಕೆಡಹಲಾಗ ೧೫

ಶಕಟನ ಕಳುಹಲು ಧಿಕಟ ಕಾಲಲೊದ್ದು
ಪ್ರಕಟ ಕೆಡಹೆ ಕೇಳಿ ತೃಣ ಕೇಶಿಯರನ್ನು
ಅಕಟ ಅನೇಕ ಖಳರನು ಬಾಲರು
ವಿಕಟಾಶ್ಚರ್ಯದಿ ಕೆಡಹುತಿರೇ ೧೬

ದುರುಳತನಕೆ ಗೋಪೀ ವರಳಿಗೆ ಕಟ್ಟಲು
ಕರುಣಾಸಾಗರ ಮರದೆಡೆಗೆಳೆಯೆ
ಬೆರಳು ಸೋಕಲು ಮರ ಮುರಿಯಲು
ಗಂಧರ್ವರು ಸ್ತುತಿ ಮಾಡಲು ವರದ ಮೂರುತಿಯ ೧೭

ಕಾಮನೈಯ್ಯನು ಕಾಳಿಯ ನಾಟ್ಯವ
ಪ್ರೇಮದಿ ಗೋಪಿಗೆ ತೋರಿಸುತ
ಕಾಮಿನಿಯರ ಸೀರೆ ಸೆಳೆದೊಯ್ಯಲು ಸ್ತ್ರೀಯರು
ಕಾಮಿಶಿ ಸ್ತುತಿಸಲು ಕರುಣಿಶಿದಾ ೧೮

ಗೋಕುಲವಾಸನು ಗೋತ್ರಜ ಕೂಡುತ
ಗೋವರ್ಧನಗಿರಿ ಎತ್ತುತ್ತಲೆ
ಗೋಪಾಲಕೃಷ್ಣನ ದೇವೇಂದ್ರ ಸ್ತುತಿಸಲು
ಶ್ರೀಪತಿ ಪ್ರೇಮದಿ ಸಲಹಿದನು ೧೯

ಬೆಣ್ಣೆಯ ಕದಿಯಲು ಸಣ್ಣ ತನದಲಿ
ಅಣ್ಣಬಾರೆನುತಲೆ ಓಡುತಲೆ
ಕಣ್ಣಿಗೆ ಕಾಣದೆ ಬೃಂದಾವನದಿ
ಚಿಣ್ಣನ ಕೊಳಲಿಗೆ ಹೆಣ್ಣುಗಳೋಡಲು ೨೦

ಅಕ್ರೂರನು ಬರೆ ತ್ರಿವಿಕ್ರಮನನು ಕರೆಯಲು
ವಿಕ್ರಮ ಕಂಸನ ಚರನಾಗಿ
ಶುಕ್ರದೆಸೆ ಎಂದು ಶಕ್ರಾದಿಗಳು ಸ್ತುತಿಸೆ
ನಕ್ರಹರಗೆ ಮಂಗಳವೆಂದು ೨೧

ಕ್ಷೀರಾನ್ನವ ತಂದು ಕ್ಷೀರಾಂಬುಧಿರಾಯಗೆ
ನಾರಾಯಣಗುಣ ಬಡಿಸಿದಳು
ಧೀರೆ ಯಶೋದೆಯು ಚಾರು ಶಿಂಗರಿಶಿ
ನಾರಿಯಾರತಿ ತಂದೆತ್ತಿದಳೂ ೨೨

ರಥದೊಳು ಹೊರಡಲು ವಿತತ ವೈಭವದಿ
ಸ್ತುತಿತ ಶೇಷ ಅಕ್ರೂರರೆಡಬಲದಿ
ಸುತನಾಲಿಂಗಿಸಿ ಗೋಪೀ ನಂದಗೋಪ
ಸತತ ಹೃದಯದಲಿ ಸ್ತುತಿಸೆ ಬಹನು ಎನೆ ೨೩

ಬರುತ ಮಾರ್ಗದಲಿ ವಿರೂಪ ಕುಬುಜೆಯ
ಸ್ವರೂಪಗೈದು ಗಂಧವಕೊಂಡು
ಬರುತಲಾರತಿ ಶಿರಿರಮಣಗೆ ಮಧುರೆಯ
ಸುರುಚಿರವದನೆಯರೆತ್ತಿದರು ೨೪

ಗಜರಜ ಹರಿಶಿ ತ್ರಿಜಗವಂದಿತ
ಭಜಿಸುವ ಭಕ್ತರಾನಂದದಿ ಪೋಷಿಸೆ
ಕುಜನಮಲ್ಲರಾಕ್ಷಣದಲಿ ಮುತ್ತಲು
ಅಜಭವಾದಿಗಳು ಸ್ತುತಿಸುತಿರೇ ೨೫

ಮಲ್ಲರ ಗೆಲ್ಲಲು ಎಲ್ಲ ಜಗತ್ಪ್ರಿಯರಲ್ಲಿ
ಬಲರಾಮಗೂಡಿ
ವಲ್ಲೆರಿವರ ಸಂಗವೆನುತ ಉಚ್ಚಸ್ಥಳ
ದಲ್ಲಿದ್ದ ಕಂಸನಲ್ಲೆ ಹಾರಿದ ೨೬

ಕಂಸನ ಕೆಡಹಲು ಅಂಶ ಕೃಷ್ಣಮೂರ್ತಿ
ಹಂಸವಾಹನ ಹರ ನಾರದರು
ಹಂಸಧ್ವನಿಯಲಿ ಮೇನಕಿರಂಭ
ಕಂಸಾರಿಗೆ ಸ್ತುತಿಸೆ ಪೂಮಳೆಗರೆದರಾಗ ೨೭

ಜಯ ಜಯ ಲಕ್ಷ್ಮೀರಮಣಗೆ
ಜಯ ರುಕ್ಮಿಣೀಶಗೆ ಜಯವೆನಲು
ಜಯಪತಿ ತಾಯಿ ದೇವಕಿ ವಸುದೇವರ
ತವಕದಿ ವಂದಿಶಿ ಶೆರೆ ಬಿಡಿಸಲಾಗ ೨೮

ತಾತಗೆ ಪಟ್ಟವ ಕಟ್ಟಿದ ಕೃಷ್ಣನು
ನೀತಾಚಾರದಿ ಶರೆ ಬಿಡಿಸಿ ಆತ
ಆತ ತಾಯಿ ತಂದೆ ಈತ ಶ್ರೀ ಶ್ರೀನಿವಾಸನ
ನೂತಕತೆಗೆ ಶರಣೆಂಬೆ ೨೯

## ೧೫೨

## ಪ್ರಹ್ಲಾದ ಚರಿತ್ರೆ

ನಾರಸಿಂಹ ನಾರಸಿಂಹ ನಮಿಪೆ ನಿಮ್ಮ
ಸರಸಿಜ ಪದಯುಗಗಳಿಗೆ
ಘೋರತರ ಭವವಾರುಧಿ ದಾಟಿಸು ಹರಿಯೆ
ಮೂರು ಲೋಕಕೆ ದೊರೆಯೆ ಪ.

ಸನಕಾದಿ ಮುನಿಗಳು ಬಂದು ನಿನ್ನ
ವನಜಪಾದ ದರುಷನಕೆಂದು
ನಿನ ಭಕ್ತರ ಬಿಡದಿರೆ ಜಯವಿಜಯರು
ಘನ ಭುವಿಯಲಿ ಅಸುರಾವತಾರವಾಗೆ
ಶಪಿಸಲಂದು ಬಲು ಘೋರ ೧

ಕಶ್ಯಪ ತನುಜರು ಆಗಿ ಜನಿಸೆ ನೀ
ಕರ್ಕಶ ಹಿರಣ್ಯಾಕ್ಷನ ಕೊಂದು
ಅವಶ್ಯದ ಧರುಣಿಯನುಳುಹಲು ಸುರರು
ಅಪ್ಸರ ಸ್ತ್ರೀಯರು ಪಾಡಿ ಪೂಮಳೆ
ಅಪ್ರಮೇಯಗೆ ಕರದರು ಸುರರಂದು ೨

ಅಣ್ಣನ ಸಂಹರ ಹರಿಯು ಗೈಯ್ಯೆ ಕೆಂ
ಗಣ್ಣ ಬಿಡುತ ಸಿಟ್ಟೆದ್ದು
ಅಣ್ಣನ್ವೈರಿ ಹರಿಯನು ಗೆಲುವೆಯೆಂದು
ಹಿರಣ್ಯಕಶಿಪು ತಾ ತೆರಳೆ ತಪಕೆ
ಹರಿ ಚೆಣ್ಣರ ಕುರಿತು ನಡೆದಾನು ೩

ತಪವನುಗೈಯೆ ಕಶಿಪು ತಾ ಪೋಗೆ
ನಿಪುಣ ದೇವೇಂದ್ರ ತಾ ಪೋಗಿ
ತಪಿಸುತಲಿದ್ದ ಪತಿವ್ರತೆ ಕಯಾದುವ
ಗುಪಿತದಿ ಎಳೆದೊಯ್ಯೆ ಸುರಮುನಿಯ ಕರೆದೊಯ್ದು
ಗುಪಿತದಿ ಸಲಹುತಲಿರಲು ೪

ಸೇವೆಗೈದು ಮುನಿವರರಾ ಮೆಚ್ಚಿಸೆ ಮನ
ಭಾವವ ಬೇಡು ನೀನೆನಲು
ನಾನಪೇಕ್ಷಿಸಿದಾಗ ಶಿಶು ಜನಿಸುವ
ಭಾವವರವ ನೀಡಿರೆಂದು ತಾ
ಬೇಡಿದಳಾ ಗುಣಸಿಂಧು ೫

ಘೋರ ತಪವ ಗೈಯೆ ಕಶಿಪು ಬ್ರಹ್ಮ
ಧೋರ ಹಂಸವನೇರಿ ಬಂದು
ಚಾರು ವರವ ಹಿರಣ್ಯಕಗೆ ಕರುಣಿಸೆ
ಸಾರಿದ ತನ್ನ ಪುರಕಂದು ಕಶಿಪು
ವಾರಿಜಮುಖಿ ಸತಿಗಂದು ೬

ಕಶಿಪು ಸತಿಗೆ ಸುತ ಜನಿಸಿದನು
ಪ್ರಹ್ಲಾದನೆಂದು ಕಾಮಿತ ಪೆಸರನಿಟ್ಟರಂದೂ
ಪ್ರೇಮದ ಸುಖ ಸಾಮ್ರಾಜ್ಯದಿ ಸುತನನು
ಲಾಲಿಸುತಿದ್ದನು ಕಶಿಪು ಪ್ರಹ್ಲಾದಗೆ
ಪ್ರೇಮದಿ ವಿದ್ಯವ ಕಲಿಸಿದನು ೭

ಗುರುಗಳ ಕರೆಸಿದನಂದು ಪ್ರಹ್ಲಾದನ
ವರ ರತುನದ ಪೀಠದಲಿ
ವರ ಗೆಜ್ಜೆ ಪೈಜನ ಸರ್ವಾಭರಣದಿ
ವರ ಜರೀ ಪೀತಾಂಬರವನುಡಿಸುತ
ಸರುವರು ನೆರೆದಿರಲಾಗ ೮

ಓಂ ನಮೋ ಶಿವ ಎಂದು ಬರೆಯೆ ಗುರುಗಳು
ಓಂ ನಮೋ ನಾರಾಯಣನೆಂದು ಬರೆದ
ಏನೋ ನಿನ್ನ ಮನ ಬಂದ ತೆರದಿ ಇಹ
ನೀನಡಿ ನಿನ್ನ ಮನೆಗೆಂದು ಗುರುಗಳು ತಾ
ಕಳಿಪಗೊಪ್ಪಿಸಲಂದು ೯

ತೊಡೆಯಲಿಗೊಂಡು ಮಗನನು ಕಶಿಪು
ಒಡೆಯ ನಮಗೆ ಶಿವನೆನಲು
ಗಡನೆ ನಾರಾಯಣ ಸಲಹುವನೆನಗೆನೆ
ತಡೆಬಡೆಯಿಲ್ಲದೆ ನೂಕೆ ಕಂದನ
ಒಡನೆ ನೆನೆದನಾಗ ಹರಿಯ ಪ್ರಹ್ಲಾದ
ಒಡನೆ ನೆನೆದ ಶ್ರೀ ಹರಿಯ ೧೦

ಶಿಕ್ಷಿಸಿದನು ಸುತನೆನುತಾ ತಿಳಿದು
ತಕ್ಷಣ ಕಳುಹೇ ಗುರುಗಳು
ಗರ್ವರಹಿತ ಪ್ರಹ್ಲಾದನ ತರಳರ ಜೊತೆ
ಗರುಹಿದರಂದು ಶಾಸ್ತ್ರವನೂ ಮೋಹಕ
ಹರಿಯ ಶಾಸ್ತ್ರವಲ್ಲೆಂದು ೧೧

ಗುರುಗಳಿಲ್ಲದ ಸಮಯದಲ್ಲಿ ಪ್ರಹ್ಲಾದ
ತರಳರ ಕರೆದು ಪೇಳಿದನು
ವರಹರಿ ಪೊರತೂ ಮತ್ತೊಂದು ದೈವವೇ
ಧರೆಯೊಳಗಿಲ್ಲೆಂದೆನುತ ನಾರಾಯಣ
ಪೊರೆವ ಸರ್ವರಿಗೆಂದೆನುತ ೧೨

ಬೋಧಿಪ ತತ್ವವ ಕೇಳಿ ಗುರುಗಳು
ಬಾಧೆಪಡುತ ಶೀಘ್ರವಾಗಿ
ಸಾಧಿಪ ಹರಿಯನು ಯುವಕುಲ ಕಂಟಕನೆಂದು
ಬೋಧಿಸಿದರು ಕಶಿಪುವಿಗೆ ಅಂದು
ತಾವ್ ಪ್ರಹ್ಲಾದನ ಕರೆತಂದು ೧೩

ನೀರಿಲಿ ಮುಳುಗಿಸಲಾಗ ಪ್ರಹ್ಲಾದನ ಹರಿತಾ
ವಾರುಧಿ ದಾಟಿಸಿದಾನು
ಘೋರ ಬೆಟ್ಟದ ಮೇಲಿಂದ ಬಿಸುಡಲು
ನಾರಿ ಧರುಣಿ ಎತ್ತಿದಳು ಆಗ
ಭಾರಿ ಸರ್ಪದಿ ಕಡಿಸಿದರು ಆ ಸರ್ಪ
ತೋರಿತು ಕರುಣವನಂದು ೧೪

ಆನಿಯ ಕಾಲ್ತುಳಿಸಿದರೇ ಪ್ರಹ್ಲಾದನ
ತಾನೆಯೆತ್ತಿ ಸಿಂಹಾಸನದಿ
ಹಾನಿಯಿಲ್ಲದೇ ಕರೆದೊಯ್ದು ಬಿಡಲು ಗಜ
ಹೀನ ಖಳನು ನೋಡಿದನು ಪ್ರಹ್ಲಾದನ
ಏನು ಮಾಡಲಿ ತಾನೆಂದು ೧೫

ವಿಷವನುಣಿಸೆ ತಾಯಿ ಬಂದು ಪ್ರಹ್ಲಾದಗೆ
ಹಸನ ಅಮೃತವ ತಂದು
ಬಿಸಜನಯನ ಹರಿ ಉಣಿಸಿದನಂದು
ನಸುನಗುತಿದ್ದನಂದು ಪ್ರಹ್ಲಾದ
ನಸುನಗುತಿದ್ದನಂದು ೧೬

ನಾನೇ ಸಂಹರಿಸುವೆನಿನ್ನಾ ಎಂದು
ಹೀನ ಖಡ್ಗ ಪಿಡಿದಂದು
ದಾನವಾಂತಕ ನಿನ್ನ ಹರಿಯೆಲ್ಲಿಹನೆಂದರೆ
ತಾನೆ ಸ್ಥಂಭವ ತೋರಿದನು ಪ್ರಹ್ಲಾದ
ನೀನುದಿಸಿದೆ ಅಲ್ಲಿ ಬಂದು ೧೭

ಕಟಕಟ ಹಲ್ ಕಡಿದ್ವಧೆ ಸ್ಥಂಭಕೆ
ಛಟಛಟ ಶಬ್ಧದಿ ಉದಿಸಿ
ಆರ್ಭಟದಿ ಖಳನ ಬಗಲಲಿ ಧರಿಸುತ ಹರಿ
ಹಟದಿ ಹೊಸ್ತಿಲ ಬಳಿಗೊಯ್ದು ಹರಿ ತಾ
ಕಟು ಉಗ್ರರೂಪದಿ ಕುಳಿತು ೧೮

ಉದರ ಬಗೆದು ಕರುಳ್ಹಾರ ಧರಿಸಲು
ಹರಿಗೆ ಸುರರು ಪೂಮಳೆಗೆರೆದರಲ್ಲಿ
ಭರದಿ ಲಕುಮಿ ಪ್ರಹ್ಲಾದನೊಪ್ಪಿಸೆ
ಕರವ ಮುಗಿದು ಬೇಡಿದನು ವರ
ಸ್ಥಿರ ಭಕುತಿಯ ನೀಡೆಂದು ೧೯

ತಂದೆಗೆ ಮುಕುತಿಯ ಕೊಟ್ಟು ಸಲಹೆಂದು
ಕಂದ ಪ್ರಹ್ಲಾದ ತಾನಂದು
ಇಂದಿರೇಶನನು ಬೇಡಲು ಹರಿತಾ
ಮಂದಹಾಸದಿ ನಗುತಂದು ನಾನವನ
ಬಂದು ನಾರಾಯಣನೆಂದು ಪೇಳಲಂದು ೨೦

ರಾಜ್ಯವನಾಳೊ ನೀನೆಂದು ಪ್ರಹ್ಲಾದಗೆ
ಮೂರ್ಜಗಪತಿಗರ್ಪಿತನೆಂದು
ಭಾಜ್ಯಭಾಜಕನಾನಾಗಿ ನಿನ್ನ
ಸಹಜದಿ ಸಲಹುವೆನೆಂದು ಪ್ರಹ್ಲಾದಗೆ
ಅರುಹಿದ ಹರಿ ತಾನಂದು ೨೧

ಜಯ ಜಯ ನಾರಸಿಂಹನ ಕಥೆಯ
ಜವದಿ ಪಠಿಸಿ ಕೇಳಿದರೆ
ಭವಭಯ ನಾಶವು ಹರಿ ಕರುಣದಿ ನಿಮ್ಮ
ತವಕದಿ ಕೋರಿಕೆ ಸಲಿಸಿ ಸಾಕುವ
ಜವದಿ ಶ್ರೀ ಶ್ರೀನಿವಾಸ ಸರ್ವೇಶ ೨೨

ಮಂಗಳ ನಾರಸಿಂಹನಿಗೆ ಜಯ ಜಯ
ಮಂಗಳ ಶ್ರೀ ಶ್ರೀನಿವಾಸನಿಗೆ
ಮಂಗಳ ಪ್ರಹ್ಲಾದನ ಹೃದಯಾಂಗದಿ ಪೊಳೆವ ಶ್ರೀ
ಶೃಂಗಾರ ನಾರಸಿಂಹನಿಗೆ ಜಯ ಮಂಗಳ
ಪಾಡಿ ಅಂಗನೆಯರು ಹರಿಗೆ
ಮಂಗಳಾ ಪಾಡೆ ಅಂಗನೆಯರು ೨೩

## ೧೫೩

## ಶ್ರೀ ಕೃಷ್ಣನ ಕಥೆ

ಮಾತು : ಮಕ್ಕಳಿರಾ ಇವತ್ತು ನಿಮಗೆ ಶ್ರೀ ಕೃಷ್ಣ ಯಾವ ರೀತಿ ಬಾಲಲೀಲೆಯಾಡಿದನೆಂಬ ವಿಷಯ ಹೇಳುತ್ತೇನೆ ಕೇಳಿ. ಗೋಕುಲದಲ್ಲಿ ಗೋಪಿ ಜನರು ಶ್ರೀ ಕೃಷ್ಣನ ಕೊಳಲಿಗೆ ಬೆರಗಾಗಿ ಗಂಡ, ಮಕ್ಕಳು ಯಾರನ್ನೂ ಲಕ್ಷಕ್ಕೆ ತಾರದೇ ಕೊಳಲಿನ ಧ್ವನಿ ಕೇಳುತ್ತಲೇ ಧಾವಿಸಿ ಕೃಷ್ಣನ ಬಳಿ ಬೃಂದಾವನಕ್ಕೆ ಓಡುವರು. ಅಲ್ಲಿ ಶ್ರೀ ಕೃಷ್ಣನು ಯಾವ ರೀತಿ ನಿಂತು ಕೊಳಲೂದುತ್ತಿದ್ದನೆಂದರೆ, ಹೇಳುತ್ತೇನೆ ಸಾವಧಾನದಿಂದ ಕೇಳಿ ಮಕ್ಕಳೆ.

ಕೊಳಲನೂದುತನಿಹನೆ ಮುರಾರಿ ಕೃಷ್ಣ
ಕೊಳಲನೂದುತನಿಹನೆ ಪ.

ಕೊಳಲನೂದುತಲಿಹ ಸುಸ್ವರಗಳನೆ ಕೇಳೆ ತಂಗಿ
ವರ ಸಾರಂಗಿ ರಾಗ ಸರಿಗಮಪದನಿಸ ಸಾನಿದಪಮಗರಿಸ
ಆ ಕೊಳಲನೂದುತ ಅ.ಪ.

ಕೋಟಿ ಪ್ರಕಾಶಪೋಲುವ ವರ ಮಾಣಿಕ್ಯ ಕಿರೀಟ ಧರಿಸಿಹನೆ
ಕಸ್ತೂರಿ ತಿಲಕ ಲಲಾಟದೊಳ ಪೊಳೆಯುವನೆ
ಕೃಷ್ಣಗೆ ಜಗದಿ ಸಾಟಿಗಾಣೆನೆ ಕೇಳೆ ತಂಗಿ

ನೋಟಕರಾ ಮನಸೆಳೆವ ಕೆಂದುಟಿಯೊಳು
ನಿಟಿಲಿಂದಿರೆ ಕೊಳಲೊಳ್ ಭಕ್ತ ಭವ
ದಾಟಿಸುವೆನೆಂದಾ ೧

ಮುತ್ತಿನಂಗಿಯ ತೊಟ್ಟಿಹ ರಂಗನು ತಾ
ಮುಕ್ತಾಹಾರದಲ್ಲಿಯ ವಲಿಸುತಲಿ
ಮುಕ್ತಿದಾತ ಹರಿಯು ಶ್ರೀ ಕೃಷ್ಣ
ಮುತ್ತಿನಂಚಿನ ಜರಿ ಪೀತಾಂಬರಧರ
ಮೇಲೊತ್ತಿ ತನ್ನಯ ಪಾದ ಅತ್ತಿತ್ತ ನಲಿಯುತ ಕೃಷ್ಣ ೨

ರಾಗರಾಗಗಳಿಂದಲಿ ರಂಗನು ತಾ ಬೇಗದಿ ನುಡಿಸುತಲಿ
ಸಾವೇರಿಸುರಟಿಝುಂಪೆ ರಾಗ ಮೋಹನಸ್ವರದಿ
ನವವಿಧ ರಾಗದೊಳೂದುತಿಹ ಭೂಗೀಶ
ಶ್ರೀ ಶ್ರೀನಿವಾಸ ನವವಿಧ ಅನುರಾಗದೊಳೆಮ್ಮ
ಭವಸಾಗರ ದಾಟುವಂಥಾ ೩

ಮಾತು : ಈ ಕೃಷ್ಣನ ಕೊಳಲಿನ ರಾಗವನ್ನು ಆಲಿಸಿ ಗೋಕುಲದ ಗೋಪಿಕಾ ಸ್ತ್ರೀಯರೆಲ್ಲ ಸೇರಿ ಸೀರೆ ಉಟ್ಟು, ಕುಪ್ಪುಸ ಬಿಟ್ಟೊಬ್ಬಳು ಪೊರಟಳು ಮಗುವನ್ನು ಕೆಳಬಿಟ್ಟು, ಓಲೆಯ ಕಳಚಿಟ್ಟು, ಮುಕುರವ ಕಿವಿಗಿಟ್ಟು ಓಡಿದಳೊಬ್ಬಳು ಲಂಗವುಟ್ಟು ಸೀರೆಬಿಟ್ಟು ಓಡಿದಳೊಬ್ಬಳು ಗಂಡನಿಗೆ ತೊಟ್ಟಿಲೊಳೆಡೆ ಮಾಡಿ ಬಡಿಸಿ, ಪಂಜರದ ಗಿಣಿ ಈಚೆ ಬಿಟ್ಟು ಓಡಿದಳೊಬ್ಬಳು. ಈ ರೀತಿ ಒಬ್ಬೊಬ್ಬ ಗೋಪಾಲ ಬಾಲರಿಗೆ ಒಬ್ಬೊಬ್ಬ ಸ್ತ್ರೀಯರು ಕೋಲಪಿಡಿದು ಕೃಷ್ಣನೇ ಇವರೆಲ್ಲಾ ಎಂದು ತಿಳಿದು ಒಬ್ಬೊಬ್ಬರಿಗೆ ಒಬ್ಬೊಬ್ಬ ಕೃಷ್ಣನಂತೆ ಕಾಣಿಸಿದ ಹರಿ. ಶ್ರೀ ಕೃಷ್ಣ ಅವನು ಜಗತ್ಪತಿಯಲ್ಲವೆ ಮಕ್ಕಳಿರಾ ? ವಿಶ್ವ ವ್ಯಾಪಕನು ಗೋಪಿಕಾ ಸ್ತ್ರೀಯರಿಗೆ ಒಲಿದಿದ್ದನು. ಅವರ ಭಕ್ತಿಗೆ ಮೆಚ್ಚಿ ಶ್ರೀ ಕೃಷ್ಣ.

ಕೋಲಪಿಡಿದಾಡುತ್ತಿದ್ದ ಕಾಮಿನಿಯರೊಡನೆ ಪ.

ಕಾಲಗೆಜ್ಜೆ ಝಣಿರೆಂಬೊ ನಾದದಿ ಗೋವಿಂದ
ನಾದದಿ ಗೋವಿಂದ ಬಲುಮೋದದಿ ಗೋವಿಂದ ೧

ಬಾಲಕೃಷ್ಣ ಬಾಲೆಯರ ಮೇಲೆ ಸ್ವರ ಮೇಳದಿ
ಜಾಲ ಮೋಹನಾಂಗ ಬಲು ಜಾಲ ರೂಪದಿಂದ ೨

ಬಾಲರೂಪ ಮಿಗಿಲಾಗಿ ತೋರಿ ನಾರಿಯರಿಗೆ
ಕಾಲಕಾಲವರಿಯದಂತೆ ಶ್ರೀಲೋಲ ತನ್ನ ಭಕ್ತರೊಡನೆ ೩

ಮಾತು : ಶ್ರೀ ಕೃಷ್ಣನು ತಾನೂ ಒಂದು ಕೋಲನ್ನು ಹಿಡಿದು ಸ್ತ್ರೀಯರ ಮಧ್ಯವರ್ತಿಯಾಗಿ ಕುಣಿದನು. ಆ ಮೇಲೆ ಆ ಕೃಷ್ಣ ಮೈ ಮರೆತು ಕುಣಿಯುತ್ತಿದ್ದ ಗೋಪಿಯರ ನೋಡಿ, ಅದರಲೊಬ್ಬಳ ತನ್ನ ಜೊತೆಯಲ್ಲಿ ಕರೆದುಕೊಂಡು ಮರೆಯಾದನು. ಮರೆಯಾಗಿ ಅವಳೊಡನೆ ಕೆಲಕಾಲ ನಡೆದು, ಹೆಗಲ ಮೇಲೆ ಅವಳನ್ನು ಎತ್ತಿಕೊಂಡು ನಡೆದನು. ಒಂದು ತೋಟಕ್ಕೆ ಕರೆತಂದು ಅವಳನ್ನು ಸಂಪಿಗೆಯ ಮರದಡಿ ಕೂಡಿಸಿದನು. ಅವಳು ಸಂಪಿಗೆ ಹೂ ಕೊಯ್ದು ನಿನ್ನ ಮಡಿಲೊಳಿಟ್ಟುಕೊಳ್ಳೆಂದನು. ಅವಳು ಅದೇ ರೀತಿ ಮಾಡುತ್ತಿರಲು ಈ ನಾಟಕಧಾರಿ ಕೃಷ್ಣನು ಮಾಯವಾದನು ಅವಳು ಸಂಪಿಗೆ ಮರಕ್ಕೆ ನೇತಾಡುತ್ತಾ ಕೃಷ್ಣ ಕೃಷ್ಣ ಎಂದು ಕೂಗುತ್ತಿದ್ದಳು. (ಇತ್ತ ಗೋಪಿ ಜನರು) ಶ್ರೀ ಕೃಷ್ಣನನ್ನು ಕಾಣದೇ ಮಿಕ್ಕಾದ ಗೋಪಿಯರು ನೋಡುತ್ತಾರೆ ! ಕೃಷ್ಣ ನಾಪತ್ತೆ. ನಮ್ಮ ಜೊತೆಯವಳೊಬ್ಬಳಿಲ್ಲವೆಂದರಿತು ಅವಳ ಭಾಗ್ಯ ಹೊಗಳುತ್ತಾರೆ.

ಎಂಥಾ ಭಾಗ್ಯವೆ ಇನ್ನೆಂಥಾ ಪುಣ್ಯವೆ ಪ.

ಪಂಥದಿ ಕೃಷ್ಣನ ಒಲಿಸಿಕೊಂಡವಳ ಇನ್ನೆಂಥಾ ಅ.ಪ.

ಪೋಗುವ ಪುಡುಕುತ ಆ ಗೋಪಿ ಕೃಷ್ಣನ
ಜಾಗು ಮಾಡದೆ ಬನ್ನಿ ಬೇಗ ಸ್ತ್ರೀಯರು ೧

ಅಲ್ಲಿ ಹೆಜ್ಜೆಗಳಿವೆ ಮತ್ತಲ್ಲಿ ಪೋಗುವ ಬನ್ನಿ
ಎಲ್ಲೆಲ್ಲೂ ನಿಲ್ಲ ಬೇಡಿರೆ ೨

ಸಜ್ಜಿಲಿ ಶಂಖ ಚಕ್ರಾಂಕಿತನ್ಹೆಜ್ಜೆಗುರುತಿದೆ
ಸಖಿಯ ಹೆಜ್ಜೆ ಗುರುತಿಲ್ಲ ಎತ್ತವಳ ಹೆಜ್ಜೆ
ನಿಟ್ಟಿಹ ನಮ್ಮ ಕೃಷ್ಣ ೩

ಭಾರ ಪೊತ್ತಿಹನವಳ ಸಾರಸಾಕ್ಷನು
ಊರಿದ ಹೆಜ್ಜೆಯಿದು ಶ್ರೀ ಶ್ರೀನಿವಾಸನ ಹೆಜ್ಜೆ ಸಖಿ ೪

ಮಾತು : ಹೀಗೆ ಸ್ತ್ರೀಯರು ದಾರಿಯುದ್ದಕ್ಕೂ ಕೃಷ್ಣನ ಹುಡುಕುತ್ತಿರಲು ಮನದುಮ್ಮಳಿಕೆಯಿಂದ ಅಲ್ಲೊಂದು ವನ ಕಂಡರು, ಅಲ್ಲಿ ಸಂಪಿಗೆ ಮರಕೆ, ನೇತಾಡಿಕೊಂಡೊಬ್ಬಳು ಕೃಷ್ಣಾ ಕೃಷ್ಣಾ ಎನ್ನುತಿರುವುದು ಕೇಳಿ ಬೆರಗಾದರು ನಿಲ್ಲಿ ನಿಲ್ಲಿ ಬಿಟ್ಟೆಗಲ ಪೋದನೆನೆ ಅವಳು ಎನ್ನ ಸಮರಿಲ್ಲೆಂದು ಇದ್ದೆ ಆ ಸಮಯದಿ, ಎನ್ನ ಕೈ ಬಿಟ್ಟೋಡಿದನು ಕೇಳಿರೆ ಸಖಿಯರೆ ಎನಲು ಅವಳ ಮರದಿಂದಿಳಿಸಿ ಮತ್ತೆಲ್ಲರೂ ಹುಡುಕುತ ಬಂದರು. ( ಗೋಪಿಯರಿಗೆ ಗೋಚರನಾದ ಕೃಷ್ಣ ) ಒಂದು ಎತ್ತರವಾದ ಗುಡ್ಡದ ಮೇಲೆ, ತನ್ನ ಕರದ ಕೊಳಲ ಸಹಿತ ಇವರ ಕಂಗಳಿಗೆ ಕಾಣಿಸೆ, ಸಿಕ್ಕ ಕೃಷ್ಣ ಕಳ್ಳನನು ಹಿಡಿಯಿರೆಂದೋಡಿ ಬಂದರು ಭಕ್ತಿಪೂರ್ವಕವಾಗಿ ಕೃಷ್ಣನ ಪೊಂದಿ ಪೊಗಳಿದರು.

ಬಾಬಾ ಮಾಧವ ಬಾಬಾ ಯಾದವ ಬಾ ಮುರಳೀಧರ ಪ.

ಬಾ ಗೋಪಾಲ ಬಾ ಶ್ರೀಲೋಲ ಬಾ ತ್ರಿಭುವನ ಪಾಲ ಅ.ಪ.

ಯಾಕೆಮ್ಮಗಲಿದೆ ಯಾಕೆಮ್ಮಳಲಿಸಿದೆ
ಸಾಕು ಸಾಕು ನಿನ್ನ ಪುಡುಕಿ ಸೋತೆವೀಗ ಬಾಬಾ ೧

ಸುಗುಣವಂತನೆಂದು ಬಗೆ ಬಗೆ ಸ್ತುತಿಪೆವೊ ಅಗಲಿಪೋಗಬೇಡಾ
ಎಮ್ಮಗಲಿ ಪೋಗಬೇಡ ನಗಧರ ಕೃಷ್ಣ ೨

ಬಂದೆವು ನಿಮ್ಮ ಬಳಿ ಇಂದಿರಾರಮಣನೆಂದು
ಇಂದು ಕಾಯೊ ನಮ್ಮ ಸುಂದರವಿಗ್ರಹನೆ
ತಂದೆ ಶ್ರೀ ಶ್ರೀನಿವಾಸ ಕೃಷ್ಣ ೩

ಮಾತು : ಕೃಷ್ಣ ನಿನ್ನಗಲಿ ಇರಲಾರೆವೆಂದು ಗೋಪಿಯರು ತಮ್ಮ ಭಕ್ತಿ ಪೂರ್ವಕ ಸ್ತುತಿಸೆ ಹರಿಯನ್ನು ಸೇರಿದರು. ಮಕ್ಕಳಿರಾ, ನೀವು ಕೃಷ್ಣನಂತೆ ನಿಮ್ಮ ತಾಯಿ ಮತ್ತು ಅಕ್ಕ ತಂಗಿಯರಿಗೂ ಸಂತಸಪಡಿಸಿ ನಲಿದು ಇದ್ದರೆ ನಿಮಗೆ ಒಳ್ಳೆಯದಲ್ಲವೆ ? ನಿಮಗೂ ಮನಸ್ಸಿಗೆ ನೆಮ್ಮದಿ ಸಿಕ್ಕುತ್ತದೆ. ನಿಮ್ಮ ಗುರುಗಳಿಗೂ ಮನಸ್ಸಿಗೆ ನೆಮ್ಮದಿ ಸಿಕ್ಕುತ್ತದೆ. ನಿತ್ಯವೂ ನೀವು ಗೋಪಿಯರಂತೆ ಕೃಷ್ಣನ್ನ ಧ್ಯಾನಿಸಿ ಬೇಕಾದ ಬುದ್ಧಿ ಪಡೆಯಿರಿ ಎಂದು ಪೇಳುವೆನು.

## ೧೫೪

### ಪ್ರಮೀಳೆ ಕಾಳಗ

ಶ್ರೀ ಕೃಷ್ಣಂ ಕರುಣಾಬ್ಧಿ ಪುಣ್ಯನಿಲಯಂ ಶ್ರೀಕಂಬು ಕಂಠೀರವಂ
ಶ್ರೀಕಾಂತ ಕುಚ ಕುಂಕುಮಾಂಕಿತ ಕರಂ ವೈಕುಂಠವಾಸಂ ಶುಭಂ
ಚಕ್ರವಿಷ್ಠಾಬಿ ದೇಶಾಭಿ ವಾಂಛಿತಫಲಂ ಶ್ರೀ ಕೇಶವಂ ಚಿನ್ಮಯಂ
ಏಕೋ ವಿಷ್ಣು ತವಪ್ರಸಾದ ಕೃಪೆಯಂ ಈ ಕೀರ್ತನಂ ಬಣ್ಣಿಪೇಂ.

## ರಾಗ

ಕರಿವದನ ಜಯಜಯತು ಕರುಣಾಸಾಗರ ಜಯಜಯತು
ಹರಿಹರ ವಿರಿಂಚಿ ಪೂಜಿತನೆ ಜಯತು ಜಯತು ಜಯತು ಪ.

ಜಯತು ವಿಕಟ ಸುನೀತ ಜಯತು ಗುಹ ಸಹಜಾತ
ಜಯ ಮೋದಕ ಪ್ರೀತ ವಿಜಯ ಜಯನಾಥ ಜಯ ಜಯತು ೧

ಶಿದ್ಧ ಬೌದ್ಧನೆ ಜಯತು ವಿದ್ಯಪಾಲಿಪ ಜಯತು
ಮುದ್ದು ಗುರು ದತ್ತಾತ್ರೇಯನಿಗೆ ಒಲಿದೆ ಮೋದದಲಿ ೨

ಶುದ್ಧಗಿರಿಯಲಿ ಸುಪ್ರಸಿದ್ಧವಾಗಿಹ ಸರ್ವ
ಶಿದ್ಧಿದಾಯಕ ತುಂಗ ಭದ್ರ ತಟವಾಸ ಜಯತು ಜಯತೂ ೩

## ರಾಗ

ಪನ್ನಂಗವೇಣಿ ವೇಣು ವಾಣಿ ಪಾಣಿ ಶ್ರೀ ಶಾರದಾಂಬ
ಎನ್ನ ಜಿಹ್ವಾಗ್ರದಲಿ ನಿಂತಿರ್ಪೆ ಸಂತತ ಶಾರದಾಂಬ ೧

ಅಖಿಲ ವೇದ ಪುರಾಣ ವಿಚಾರ ಶ್ರೀ ಶಾರದಾಂಬ
ನಿಖಿಲಾತ್ಮಕಾ ಸರ್ವ ಶಕ್ತಿ ಸ್ವರೂಪೆ ಶ್ರೀ ಶಾರದಾಂಬ ೨

ಬ್ರಹ್ಮನರ್ಧಾಂಗಿ ಜಗನ್ಮಾತೆ ಖ್ಯಾತೆ ಶ್ರೀ ಶಾರದಾಂಬ
ಎನ್ನ ಮನ್ನಿಸಿ ಕ್ಷೋಣಿಯೋಳ್ ಕಾಯೆ ಸಂತತ ಶಾರದಾಂಬ ೩

**ವಚನ :** ಗುರುವರನರಸಿ ಚರಣ ಕರಸಿರವ ಸರಸಿರದಿ
ಕರಿಮುಖಗೆ ಕರಮುಗಿದು ವರ ಪಡೆದಿಹಗೆ.

## ರಾಗ

ಸರಸ್ವತಿ ಮುಖ್ಯ ಪರಮೇಷ್ಠಿಗಭಿನಮಿಸಿ
ಹರಿ ಕರುಣಾದಿಂ ವೊಡಗೊಂಡು ಗಿರಿವರಗೆ ನಮಿಸಿ ಧರೆಯೋಳ್ ೧

ಉತ್ತಮ ಸಜ್ಜನರು ಪರಕಿಸುತ್ತ ತಪ್ಪಿದ್ದಡರಿತು
ಒಪ್ಪುವನಿಡುತಲಿ ಮೆರೆಸಿ ಪಡೆವುದು ಕೀರ್ತಿಯಾ ೨

ಜಯ ಜಯ ಮುನೀಶ್ವರನು ಜನಮೇಜಯಗೆ
ಧರ್ಮಜ ಯಜ್ಞವ ಸಹಿತ ಆಯದಕತನವ
ವಿನಯದೊಳಗೆ ಪೇಳ್ದಂ ೩

**ಧ್ರುಪದೆ :** ಕೇಳೊ ನೃಪ ನಿನ್ನವರ ಮನದೊಳು
ಸಾಲ ನೀಲಧ್ವಜರಿಗೆ ಗೆಲಿದತಿ ಭೂಪಾಲರನು
ಸಂತತದಿ ನಡೆದನು ಲೀಲೆಯಿಂದ
ಆಲಿಸೈ ನೃಪ ಯೌವನಾಶ್ವ ಲೀಲೆಯಿಂ
ಹಂಸಧ್ವಜನ ಪುತ್ರನನು ಸಂಹರಿಸಿ
ಮೇಲೆ ಬಹುದೇಶಗಳು ಕಳೆದವು
ಬಾಲೇರ ರಾಜ್ಯವನು ಸಾರಲು
ಲೀಲೆಯಿಂ ಪೇಳ್ದ ಪಾರ್ಥ ಸರ್ವರಿಗೆ

## ರಾಗ

ಬನ್ನಿರೈಯ್ಯ ಭೂಪಾಲರೆ ಮುನ್ನೊಂದು ಚೋದ್ಯವ ಪೇಳ್ವೆ
ಚೆನ್ನಾಗಿ ಲಾಲಿಸಿ ಸರ್ವರೆನ್ನಾ ಮಾತನು ೧

ಘನ್ನ ಘಾತಕವು ಮಾಳ್ವ ಖರ್ನೆಯರ ರಾಜ್ಯವಿದು
ಎನ್ನ ಮಾತು ಲಾಲಿಸಿರೈಯ್ಯಾ ಮುನ್ನೊಂದು ಕಥೆಯ ೨

ಖರ್ನೆಯರು ಮೋಹದಿಂದ ಉರಗಲಿಟ್ಯಾಲಿಂಗಿಸುತ್ತ
ಸರಸ ಸಲ್ಲಾಪವ ತೋರುತ್ತ ವಲಿಸಿಕೊಂಬೋರು ೩

ಗುರುಕುಚದ ಮೋಹದಿಂದ ಪುರುಷನ್ನ ಕಾಣುತ್ತ ಬೇಗ
ಸರಸ ಸಲ್ಲಾಪವ ತೋರುತ್ತ ಸುರತ ಕಾಂಬೋರು ೪

ಮುದ್ದು ಮುದ್ದು ಮಂತ್ರದಿಂದ ಮೆಚ್ಚಿಸಿ ಕಾಂತನ ಮನವ
ಹುಚ್ಚು ಮಾಡಿ ಕೂಡಿಕೊಂಬೋ ಅಚ್ಚರಿಯಿಂದಾ ೫

ಕಿಚ್ಚನಂಥ ಸತಿಯೆರವರು ಅಚ್ಚನ್ನವರೀಕೇರೆನುತ ನಾ
ನೆಚ್ಚೆತ್ತಿರಬೇಕೆನ್ನುತ್ತ ನರನೆಚ್ಚರಿಸಿದ ೬

**ವಚನ** : ವಸುಮತಿ ಸತಿಯಿಂದ ಕೇಳುತ್ತ ಫಲ್ಗುಣಂ ಋಷಿಕೇತುವಂ ಕರೆದು ತಿಳುಹಿರಿ ವಿವೇಕ ಕುಶಲದಿಂ ವಾದಿ ಮುಂದೈತರಲು ಕಾಣುತ್ತ ಶಶಿಮುಖಿಯರಿತೆಂದರೂ

**ರಾಗ**

ನೋಡಿದೇನೆ ಅಕ್ಕ ಈ ವಾಜಿ ಬರುವ ಸೊಕ್ಕ ಪ.

ಮಂಗಳವಾಗಿಹುದೆ ಭಲೂ ಭಲು
ಭಂಗಾರವೆಸೆದಿಹುದೆ ಇಹುದೇ ೧

ಕಾವಲು ಇಹರೇನೆ ಬರುವರು
ಭೂವರರತಿ ಸೇನೆ ಸೂನೆ ೨

ಪಂಚವರ್ಣದಲಿಹುದೆ ಮುತ್ತಿನ
ಗೊಂಚಲು ಕಟ್ಟಿಹುದೆ ಬಾಹೋದ ೩

**ವಚನ** : ಇಂತೂ ಸತಿಯೆರು ತಮ್ಮೊಳು ತಾವು ನಿಂತಾಲೋಚಿಸುತ ಗೊಂತಿನ ಪತ್ತಿಗೆಯೊಳು ಇದರೋಳ್ ಯಂತಿಹದೆಂದು ತಿಳಿದು ನೋಡಿದರು ಬಂದು

**ರಾಗ**

ತಿಳಿದರು ಓದಿ ತಿಳಿದರರ್ಥವನು ಪ.

ಚೆಲುವು ಲೇಖನೆಯೊಳು ಉಳಿಯದಂತೆಲ್ಲವನು ಅ.ಪ.

ಧರೆಯೊಳು ಧರ್ಮರಾಯನ ಮುಖದ್ವಯವು
ಬಲವಂತ ಪಾರ್ಥ ಭಟರ ಬೆಂಬಲವೂ

ಭಲು ಭಲು ರಾಯರ ಗೆಲಿದ ಸಂಭ್ರಮವು
ನಳಿನಾಕ್ಷ ಕೃಷ್ಣನಿದಕೆ ಸಹಾಯವು ೧

ಧರೆಯೊಳು ಧೀರರಾದರೆ ಕಟ್ಟಬೇಕಂತೆ
ಚಾಪವನ್ಪಿಡಿದು ಶೆಣಿಶಿ ಗೆಲ್ಲಬೇಕಂತೆ
ಈ ಪರಿಯಲಿ ಕರನಿಲ್ಲದಿದ್ದರೆ ಜಯಾ
ಭೂಪನೆ ತುರುವ ರಕ್ಷೆಯ ನಡೆಸಬೇಕಂತೆ ೨

ಇಂತೆಂಬೋದೆಲ್ಲವ ಮನದಲ್ಲಿ ಗ್ರಹಿಸಿ
ಸಂತೋಷದಿಂದುಬ್ಬಿ ಬುಜವ ಚಪ್ಪರಿಸಿ
ಕಂತುವಿಗಿಂತ್ಹಬ್ಬವೆನುತ ನಿಶ್ಚೈಸಿ
ಕಾಂತೆ ಪ್ರಮೀಳೆಗೈತಂದು ವಿಸ್ತರಿಸಿ ೩

## ರಾಗ

ಕೇಳ್ವೈ ಸಕರುಣದಿಂದ ಚೋದ್ಯವನೊಂದ
ಪೇಳೂವೆ ಸೊಬಗಿನಿಂದ ಪ.

ಓಲಾಡುತಿಹರು ಪಾಳೆಯ ಸಹಿತಾಗಿ
ಲೀಲೆಯಿಂದಿರೆ ಮೇಲಾದ ಖತವನ ಅ.ಪ.

ಅರಸು ಧರ್ಮಜನಂತೆ ಯಜ್ಞವ ಮಾಡಿ
ತುರಗ ಬಿಟ್ಟಿಹನಂತೆ ದೊರೆಯೊಳು
ಧೀರರಾದರೆ ಕಟ್ಟಬೇಕಂತೆ
ಭರದಿ ತಾವ್ ಕಾದಿ ಬಿಡಶಿಕೊಂಬೋರಂತೆ ೧

ಧೀರ ಪಾರ್ಥನು ಹಿಂದೆ ಬಂದಿಹನಂತೆ
ವಾಜಿ ಏರುವದಿಲ್ಲವಂತೆ ಏಕಾಂತೆ
ಮೂರು ಲೋಕಕೆ ಗಂಡನೆಂತೆಂಬೊ ಬಿರುದಂತೆ
ಈ ರೀತಿ ಚಲದಿ ಬರದು ಕಟ್ಟಿಹರು ಕಾಂತೆ ೨

ಅಂದ ಮಾತನು ಕೇಳುತ್ತ ಪ್ರಮೀಳೆ ತಾ
ಮಂದಹಾಸದಿ ನಗುತ ಬಂದದ್ದು ಬರಲದ
ರಿಂದಲಿ ಕುದುರೆಯ ತಂದು ಲಾಯದಿ ಕಟ್ಟಿ
ಸೆಂದು ನೇಮಿಸಿದಳು ೩

**ವಚನ** : ಅರಸುಸತಿ ಇಂತೆನಲು ಬಂದರರಸಿಯರು
ಅರಸುವಾಜಿಯಂ ಪಿಡಿತಂದು ತವಕದಿಂ ಕಟ್ಟಿ ಲಾಯದಲಿ
ಹರ ಕಟಾಕ್ಷಣದಿಂದ ನಿಂತರೆ ಕರಸಿದರು ಸ್ತ್ರೀಯರ ಬಲವನು
ಆಲಿಸರಸೇ ಅವನಿತಾ ಸ್ತ್ರೀರಾಜ್ಯವನಾಳುವೋ ಪ್ರಮೀಳೆ
ಎಂಬಾಕೆ ಅರಸಾಗಿ ವಾಲಗದೊಳಿದ್ದತಿ ಭೋಗ ಜನರತಿ
ಸ್ತ್ರೀಯ ಮೇಳವೆಸೆಯಲ್ಕೆ ಸಾಗಿ ಪರಿವಾರ ಪ್ರಜೆರೂಪ ಪ್ರಧಾನ
ಸಹಿತಲಿ ಪುರಜನರು ಪರಿಜನರು ಸಹಿತ ಮೆರೆವೋ ಹೆಣ್ಣೆಲ್ಲಾ
ಇಲ್ಲಿಹಾ ರಾಜ್ಯದಲಿ ಪುರುಷನೆಂಬೋರ್ವನಿಲ್ಲಾ. ಸೋಮ
ವಂಶಾಂಬು ನೀರಾಜೇಂದು ಭುಜಬಲಸ್ತೋತ್ರಮಗ್ರಗಣ್ಯನ
ಪಾಂಡುವಿನ ಪ್ರೇಮಜನ ಸುಪುತ್ರ ಧರ್ಮಜನ ಮಖ ತುರಗ
ನಿಸ್ಸೀಮರಿದು ತಂದು ತಂದು ಕಟ್ಟುವುದು ಚಂಡ
ವಿಕ್ರಮರಿದನು ಕಟ್ಟೆ ಮೂರು ಲೋಕದ ಗಂಡನರ್ಜುನನವನ
ಗೆಲಿದು ದಂಡಿಸಲ್. ಕೇಳಿ ಲೇಖನವನಚ್ಚಲ್ಕೆ ಮಿಂಡೆದ್ದು
ನಗುತಿದ್ದಳಾಗ ಆಲಿಶಿದಳಾಲಿಸಿದಳು ಲಿಖಿತ ಪತ್ರವಂ ಸತ್ವವಂ
ಏಳಿಗೆಯೆ ನರನೊಡನೆ ಮೋಚವಂ ಭೋಚವಂ ಬಾಳುವೀ
ನರನೊಡನೆ ಅಂಗವಂ ಸಂಗವಂ ಅಡವಿಡಿದು ಪಡೆವೆನುತಲಿ
ಆಲಿಶಿದಳಾ ಪ್ರಮಿಳೆ ಗುಣಜಾಲೆ ಜನಪನಧ್ವರನಶ್ವವಂ
ಹಿಡಕಂಡು ಕಟ್ಟಿಸಿ ಯಣಿಕೆಯಿಲ್ಲದ ಸುಗುಣ ಕಾಂತೆಯರ
ಕರಶಿದಳು ಧುರಕೆ ಬಳಿಕಾ.

## ರಾಗ

ಬಂದರಾಗ ಸಮರಕ್ಕೆ ಪ.

ನಿಂದು ಬೇಗ ಸತಿ ವೃಂದಕಾ ತಾರೆಗಳ
ಚಂದಿರನೈತರುವಂದದಲಿ ಅ.ಪ.

ತೆಗೆದುಟ್ಟು ಚಂದಣದಾದಟ್ಟಿ ಬಿಗಿದು ಮೊಲೆಗಳ ಕಟ್ಟಿ
ಮೃಗಮದ ಕಸ್ತೂರಿ ತಿಲಕನಿಟ್ಟು ಚಿಗುರಿದಾಳು ಲೇಪಣವ
ಮಗೆ ಮಗೆಪಾ ಸುಮಗಳಿಂದ ಝಗಝಗಿಪಾವೋಲಾಭರಣಗಳಿಂದ
ಬಗೆ ಬಗೆಯಾ ಆಯುಧವ ಧರಿಸೆ ಬಿಗುಡೆ ಏರು ಸೊಬಗಿನಿಂದ ೧

ಕಣ್ಣ ಹೊಳಹಿನ ಚಪಲೆ ಏರ ಆನೆ ಲಕ್ಷದಿಂದ
ಹುಣ್ಣಿಮೆ ಸೀಸೆಯ ಪೋಲವೊಪ್ಪೊ ಮುಖಿಯೆರು ಲಕ್ಷದಿಂದ
ಸಣ್ಣ ನಡುವಿನ ಸೊಕ್ಕು ಜೌವ್ವನೆಯರು ಖರ್ನೆಯೇರು
ಮೂರ್ಲಕ್ಷದಿಂದ ೨

ಸರಸಸಲ್ಲಾಪದಿ ಸರಸಿಜಾಕ್ಷೆಯೇರು ಹರುಷದಿ ಬಂದರು
ಸಮರಕಾಗ
ಚಿಣ್ಣ ಅರ್ಜುನನ ನೋಡುತ ನಾಚಿ ನಗುತ ಮೈಬಣ್ಣ ಪೊಳೆವ
ಪ್ರಮೀಳೆಯುತ
ಕಣ್ಣಾರೆ ಕಂಡೆನೆ ಮೂರು ಲೋಕ ಪ್ರಚಂಡ ಮಾರ್ತಾಂಡ
ಪರಾಕ್ರಮನ
ಬಣ್ಣಗೆಡಿಶಿ ನಮ್ಮ ವಶಪಡಿಸುವ ಭಾಗ್ಯ ಬಣ್ಣಿಸಲಳವಲ್ಲವೆ
ಇದು ನಿಜವೆ ೩

ವಚನ : ಗಜಗಮನೆಯರ್ ಕೂಡಿದರ್ ನೋಡಿದರ್ ಧೀರೆಯೇರ್
ಸುತ್ತಲಂಬೂ ಸೇನೆಯೊಳ್ ಮುತ್ತಿಕೊಂಡರು ಪೋಗಿ
ನೀರೇಯೇರ್ ಧೀರೆಯೇರ್ ನರನ ಪರಿವಾರದೊಡನೆ

ಮುತ್ತಿದಾಯುಧವ ಝೇಂಕರಿಸುತ್ತ ಒತ್ತರಿಸುತ ಬರಿಸುತ
ಜಬ್ಬತಿ ಬರೆ ಕಂಡು ನೆರೆಯೋಧರಿಂ ಚೋದ್ಯದಿ
ನೋಡುತಿದ್ದರಾ ಭಟರು.

ರಾಗ

ರವಿಯಾರ ಧೀರೆ ಸೇಸಿದಿವರೊಳ್ ಸೇನವನು ಕಣವನು
ದಿವಿಯಜರು ನೋಡಲೆಡನುತ್ಯೆತರುತಿರೆ ಸತಿನಿವಹ ಮಧ್ಯದಲಿ
ಬಾಲೆ ಪ್ರಮೀಳೆಯು ಬಾಲಮುಖದ ಮೇಲೆ ಕುಳತಾ ಭಾನು
ಲೋಲಲೋಚನೆಯಿಟ್ಟಾ ವಾಲೆಯಾ ಹರಳಿನ ಜಾಲದೊಳಡಗಿದರೂ
ಹೊಂದೇರೇರಿ ಪ್ರಮೀಳೆಯ ಸೇನೆ ತಾನೊಡಗೊಂಡು ಬರುತಿರಲು
ಮುಂದೆಸೆವೊ ಕಪಿಧ್ವಜದ ರಥವನು ಕಂಡು ಪರೀಕ್ಷಿಸುತ
ಕಂಡಳು ಮೇಲೆ ಕಿರೀಟಯ ಕಿರುನಗೆಗೊಂಡು ಮುಖವ ನೋಡುತ್ತ
ಕೊಂಡಾಡಿದಳು ಮನದಿ ಮೂರ್ಜಗಕಿವ ಗಂಡನೆನುತ ಪಾಡೆ

**ವಚನ :** ಅಹಿವೇಣಿಯರ್ ವಂದುಗೂಡಿ ಬಹು ಶೀಘ್ರಥ ಬಂದು
ನಿಂತರೆ ಗಾಡಿ ಮಹಾಹನುಮನಿಂದ್ದೊಳೆವಾ ರಥವ ನೋಡಿ
ಹಾ ವಿಹಿತವೆಂದರು ನರನೊಳು ಮಾತಾಡೀ.

ರಾಗ

ಕೇಳು ಪಾರ್ಥನೊಳ್ ಆಡಿದರ್ ಮಾತನಾಡಿದರ್
ಕೇಳೆಂದೆನುತ್ತ ಸೋಸುಕ್ತೆಯಿಂದೆರಗಿದರ್ ಬಂದೆರಗಿದರ್ ೧

ಪಾರ್ಥನೆಂಬುವನು ನೀನೆ ನಿನ್ನಶ್ವವ ಸೂಸ್ತ್ರದಿಂ ಕಟ್ಟಿದೆ ನಾ
ಅಸ್ತಿದಾಯಕದ ವಿದ್ಯಗಳುಂಟು ನಮ್ಮಲ್ಲಿ ಗೊತ್ತಾಗಿ ಕೇಳ್ ಮುಂದೆ ೨

ಅರಸ ನೀ ರಾಜ್ಯಕ್ಕೆ ಆಯುಧವನ್ನು ಧರಿಸಿಹೆ ನೋಡಲಿಕ್ಕೆ
ವಿರಹ ಶೇಷಗಳುಂಟು ಸ್ಮರನೊಳಗಿನ ಮಾತು ಚರಿಸುತಿಹೆ ಸಹಗೆ ೩

ಹೆಂಗಳಾಳುವೊ ರಾಜ್ಯವೊ ಹೇ ಪಾರ್ಥ ಹೆಂಗಳಾಳುವ ರಾಜ್ಯವೊ
ಯುದ್ಧವಾಡಿದರೆ ಮೃಂಗಿಯಾಗುವೆಯೊ ನೀನು ಭಂಗಿಸುವರೆ
ನೀವು ಅರೆನಿಮುಷದಲಿ ಕುರಂಗವ ಬಿಡಬೇಕೆಂದ ೪

ಜಾಲವಿದ್ಯಂವು ನಿಮ್ಮಲ್ಲಿ ಹುಟ್ಟಿತು ಎಂದು ಕೇಳಿದೆ ಪೂರ್ವದಲಿ
ಲೋಲಾಕ್ಷಿ ಹಯವನು ಬಿಟ್ಟು ಪೋಗುವೆನೆಂದು
ಲೋಲಾಕ್ಷಿ ನಿನ್ನೊಲುವಿಗೇಂದು ತಿಳಿದೆಯಾ ೫

ವಿಟಸ್ತ್ರಿಯರಲ್ಲ ನಾವು ಹೇ ಪಾರ್ಥ
ವಿಟಸ್ತ್ರೀಯರಲ್ಲ ನಾವು
ನಮ್ಮಯ ಸಂಗ ಬಲು ಪುಣ್ಯಕ್ಕೆ ವಶವೊ
ಅರ್ಧ ನಿಶಿಯಲ್ಲಿ ದೊರಕಲು ಪವನವ ಕೂಡಿ
ಕುಶಲದಿಂ ಕೊಡುವೆವೋ ೬

ತರುಣಿಯೊಳ್ ಸೆಣೆಶಿ ಗೆಲ್ಲುವ ತನ ನೆರೆಬಲ್ಲ
ಬಹು ಸಹಸಿ ನೀ ತುರಗವ ಬಿಡುವೋರೆ
ಮುಂದೆ ಕಾರ್ಯವುಂಟು ನಿನ್ನಲ್ಲಿ ಚರಿಸುತಿದೆ ಸಹನೆ ೭

ರಾಗ

ನಾರಿಯೊಳು ಕದನ ತನಗಕಟಕಟೆಂದು
ಧೀರ ಪಾರ್ಥನು ಚಿಂತಿಸೀ
ನೀರೆ ನಾನಿವನೊಳು ಬಿಡಗೊಡೆನೆಂದು
ಶಿರನೆದ್ದು ವಾರ ನೈತಂದರಾಗ ೧

ಮಾರನ ಸಂಗ್ರಾಮದೋಳ್
ವದಗಿದಾ ಚದುರೆ ನೀ ಧುರದೊಳ್ ಆ
ತನವ ತೋರೆ ಧುರದೊಳಟ್ಟುಳ್ಳೆದೆ
ಎದುರಾಗಿ ನಿಲ್ಲೆದ್ದು ಸ್ಮರಜನಕನ ಸ್ಮರಿಸೆ ೨

ನಸುನಗುತಿಂತೆಂದರ್ಜುನ ಪಸುಳಿ ಕೇಳ್
ವಿಷಯ ಭೋಗವ ಬಯಸಿ
ಕುಶಲದಿಂದ ನಿನಗೆ ನಾ ಒಲಿದರೆ
ಕಡೆಗದು ವಿಷಭೋಗವೆಂತೆಂದನೂ ೩

ರಾಗ

ನಿನ್ನ ವಿಷಮಕೊಲಿದ ಪುರುಷರೆಂತು ಬಾಳ್ವರೊ
ಬಣ್ಣನೆಯ ಮಾತು ಕೇಳ್ವಳಲ್ಲ ತಿಳಿದಿರೊ
ಕೇಳ್ವಳಲ್ಲಿ ತಿಳಿದಿರೋ ೧

ವೀರಭಟರೆಂದು ಶೆಣಿಸಿ ನೀರೇರು ರಣದೊಳು
ನೀರೆ ನಿನ್ನ ಕೊಂದಡೆನುತ ಕೀರ್ತಿ ಜಗದೊಳು ೨

ಯಿನಿತು ಬೆದರುವೇನೆ ಪೆಣ್ಗಳಿಗೆ ಸದರವೆನ್ನೊಳು
ಕುದುರೆಯನ್ನು ಬಿಟ್ಟು ಪೋಗುಯೆನುತ ಪೇಳ್ದನು
ಪೋಗು ಎನುತ ಪೇಳ್ದನು ೩

**ವಚನ** : ಬೇಡ ಫಲ್ಗುಣಂ ಕೇಳು ಪ್ರಮೀಳೆಯೋಳ್ ಕೂಡೆ ವಾಸಿಯು
ಬಿಡ ಸರೋಹದಿಂ ಕೂಡಿದರೆ ಲೇಸುಂಟು ಮುಂದೆ ವರ
ಬಹುವಚನ ಕೂಗಿ ಧ್ವನಿ ನುಡಿಯಿಂದ ಕೂಗಲು ಕಾಡಿದಾಸ್ತ್ರವ
ನಿಳುಹಿದದ್ವರಂ ಕೂಡೆ ಮುಂದಿನಾ ಪರಿಯ
ನಾಲಿಸುತಲಿಂತೆಂದ.

ರಾಗ

ತರುಣಿ ಪ್ರಮೀಳೆ ಬಾ ಬೆರೆಸಿ ಕೂಡುವೆ ನಿನ್ನ
ಕರದು ಮನ್ನಿಸುತಾಗ ಕರವ ಪಿಡಿದನೂ ಪ.

ನಾ ಪೇಳ್ದ ನುಡಿಗನುಕೂಲೆಯಾಗಿರು ಎಂದು
ಲೀಲೆಯಿಂ ಪಾರ್ಥ ನಗುತಲಿಂತೆಂದ ಅ.ಪ.

ಬಣ್ಣದೂಟಿಯ ಬಾಲೆ ಯನ ಮಾತನು ಕೇಳೆ
ಅಣ್ಣ ದೀಕ್ಷೆಯೋಳಗಿರುವ ಆದ್ದರಿಂದ ನಾನು
ಸತಿಯ ಕೂಟವ ಬಿಟ್ಟು ವ್ರತವ ಕೈಗೊಂಡಿಹೆನು
ಮಿತಿಯೊಂದು ಹಸ್ತವ ಹಯ ರಕ್ಷೆಗಾಗಿ ೧

**ವಚನ** : ನಿನ್ನ ಇಷ್ಟವ ಸಲಿಸುವೆನು ಆಮೇಲೆ ಇನ್ನು ಸಂಶಯಬೇಡ ಎನುತಲಿ ಮನ್ನತ್ತದಾ ಸುಖ ವೊಪ್ಪುತಿರಲು ಮನ್ನಿಸಿದ ನರನಾಕ್ಷಣ ಮುತ್ತುರತ್ನಾದಿಗಳ ತರಿಶಿದಳಾ ನೃತ್ಯ ಕಾಚೆಯರ ಸಂದಣಿಯಿಂದ ಮತ್ತೆ ಗಜಪುರಿಗಾಗ ಹೊರಟ ರುಚಿತ ಜನ ಘಡೆವೊಪ್ಪುತಿರಲೂ ನರ ನಂದಾಖ್ಯ ವಿಳಸದಿಂ ಕವಲತ್ವವಂ ಕಾಣುತ್ತ ಕಂಡಳಾಕ್ಷಣವೆ ಗಜಪುರಿಗಾಗ ಹೊರಟಳಾಗದು ಎಂತೆನೆ.

### ಮಂಗಳ

ಘನ ರಥವೇರಿ ತರುಳೆ ಪ್ರಮೀಳೆಯು
ಪರಿಪರಿಯ ಬಳವಳ್ಳಿಯ ಸಾಗಿಸಿ
ಗಜಪುರಿಗೈತರಿದ ಸೊಬಗ ನಾನೇನೆಂಬೆ
ಗದುಗಿನ ವೀರನಾರಾಯಣನಿಗೆ ಮಂಗಳ ಜಯ ಮಂಗಳ ಪ.

ಅಧ್ವರ ಪಾಲಿಪ ಕೃಷ್ಣನಿಗೆ
ಅರ್ಜುನ ಸಖ ಪುರುಷೋತ್ತಮಗೆ
ಅಕ್ಷಯ ಬಾಣವ ಕರುಣಿಶಿ ಸಖನಿಗೆ
ಅಧೋಕ್ಷಜನಾದ ಕೃಷ್ಣನಿಗೆ ೧

ಮಂಗಳ ಜಯ ಜಯ ಮಂಗಳ
ಭಕ್ತರ ಪರಿ ಪಾಲಿಸುವಂಥ
ಶಕ್ತಿ ಪ್ರಧಾನನಾಗಿರುವಂಥ
ಯುಕ್ತಿಲಿ ಶರಣರ ಪಂಥವ ಗೆಲಿಸುವ
ಭಕ್ತವತ್ಸಲ ಶ್ರೀ ಕೃಷ್ಣನಿಗೆ ೨

ಪರಿಪರಿ ರೂಪದಿ ಮೆರೆವಂಥ
ಪರಮಪುರುಷನಾಗಿರುವಂಥ
ಸಿರಿ ದೇವೇರಿಗೆ ಅರಸನಾಗಿರುವಂಥ
ವರದ ಶ್ರೀ ಶ್ರೀನಿವಾಸ ಭಕ್ತರೊಳು ಪಂಥಾ ೩

ಮಂಗಳಾ ಜಯ ಜಯ ಮಂಗಳಾ
ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು ೪

## ೧೫೫

### ಶ್ರೀನಿವಾಸ ಕಲ್ಯಾಣ

ಸ್ತುತಿಸಬಲ್ಲೆನೆ ನಾ ನಿನ್ನ ಶ್ರೀನಿವಾಸ
ಸ್ತುತಿಸಬಲ್ಲೆನೆ ನಾ ನಿನ್ನ ಪ.

ಸ್ತುತಿಸಬಲ್ಲೆನೆ ಆದಿಶೇಷಗಳವಲ್ಲ
ದತುಳ ಮಹಿಮ ನಿನ್ನ ಮಹಿಮೆಯ ದೇವಾ ಅ.ಪ.

ಕೃತಯುಗದಲಿ ವೃಕ್ಷ ಅಸುರ ನಿನ್ನನತಿಶಯದಲಿ ವಲಿಸಿ
ಯುದ್ಧದ ಭಿಕ್ಷೆ ಮತಿವಂತ ನಿನ್ನ ಬೇಡೆ ಗರುಡನೇರಿ
ಹತಗೈಸೆ ಅಸುರನ ಸುರರು ಪುಷ್ಪದ ವೃಷ್ಟಿ
ಮತಿಯುತ ನಿನ್ನ ಶಿರದಲ್ಲಿಗೆರೆಯೆ ಕ್ಷಿತಿಯೊಳು
ವೃಷಭಾಚಲದೊಳು ಮೆರೆದ ಲಕ್ಷ್ಮೀಪತಿ ನಿನ್ನ ಗುಣಗಳ ೧

ತ್ರೇತೆಯೊಳಂಜನೆಯು ತಪವಗೈಯೆ
ಪ್ರೀತಿಯೋಳ್ ವಾಯುದೇವ ಶ್ರೀ ಹನುಮಂತ
ಆತ ಶ್ರೀ ರಾಮದೂತ ಜನಿಸುವನೆಂದು
ಖ್ಯಾತ ವಾಯುಪೇಳೆ ಅಂಜನದೇವಿಯೊ

ಖಾತ ಉದಿಶಿ ಅಂಜನಾದ್ರಿಯೆಂದು
ಈ ತೆರ ಪೆಸರಿನ ಪರ್ವತದೀ ಮೆರೆವಾತ
ಸರ್ವರ ದಾತ ವೆಂಕಟ ೨

ದ್ವಾಪರ ಯುಗದಲಿ ಶೇಷ ವಾಯುವಾದದಿ
ಭೂಪ ವಾಯುವಿನಿಂದ ಶ್ರೀಪತಿ ಶೇಷನ
ಹಂಕಾರ ನಿಶ್ಶೇಷ ಮಾಡಿಶಿದ ಧೀರ
ಶೇಷಗಿರಿವಾಸ ಭೂಪತಿ ಕಲಿಯುಗದಲ್ಲಿ ಮಾಧವಗೆ
ಅಪಾರವಾಗಿದ್ದಘವನೆ ಸುಟ್ಟು
ಶ್ರೀಪತಿ ಕರುಣದಿಂದಲಿ ದಯವಾ ತೋರಿ
ಈ ಪರಿಯಲಿ ವೆಂಕಟಾದ್ರಿಯೋಳ್ ಮೆರೆದೆ ೩

ಸಪ್ತಋಷಿಗಳ ಯಾಗದಿ ಭೃಗುಋಷಿಗಳ
ಸಪ್ತ ಮುನಿಪುಂಗವರು ಸರ್ವೇಶನು ನಿತ್ಯ
ತೃಪ್ತ ಹರಿಯೋ ಬೊಮ್ಮನೋ ಹರನೊ
ಸತ್ಯವಾಗರಿತು ಬನ್ನಿರೆನಲು ಸತ್ಯಲೋಕಕೆ ಬರೆ ಬೊಮ್ಮ
ಮಾತನಾಡದಿರಲು ಇತ್ತು ಶಾಪವ ರಜತಗಿರಿಗೆ ಪೋಗೆ
ಮೃತ್ಯುಂಜಯನು ಮುನಿಯನು ಕೊಲ್ಲಲು ಬರೆ
ನಿತ್ಯದಿ ಲಿಂಗಪೂಜೆಯಾಗಲಿ ನಿನಗೆನೆ ಮುನಿ ೪

ಹೆದರದೆ ಭೃಗುಋಷಿಯು ಪದೆಯೆ ನಿನ್ನ
ಮೃದುವಾದವ ಮುನಿಪಾದವ ಮುದದೊಳಾಗ
ಪದುಮಾಕ್ಷ ನೀ ತೊಳೆಯೆ ಸಂತಸಗೊಂಡು
ಪದುಮಸಂಭವಪಿತ ಸರ್ವೇಶನನೆ ಮುನಿ
ಸದಮಲ ಜ್ಞಾನಿಗಳೆಲ್ಲ ಸಪ್ತಮರು ಯಾಗದ ಫಲ
ನಿನಗರ್ಪಿಸೆ ಕೈಗೊಂಡಾ ಬುಧರ ಸಲಹಿದ ಪದುಮಿಣಿ ವಲ್ಲಭ ೫

ಮಾನವ ಋಷಿ ವದೆಯೆ ಮಾನುನಿ ಲಕ್ಷ್ಮೀ
ದೀನರ ರಕ್ಷಿಸಲು ಕೊಲ್ಲಾಪುರಕಾನತ ಬಂಧುವಾಗಿ
ಮಾನುನಿ ಪೋಗೆ ಗಾನಲೋಲನೆ ವೈಕುಂಠವ ಬಿಟ್ಟು ನೀ
ದೀನಪಾಲಕ ವಲ್ಮೀಕದಲ್ಲಿರೆ ಜ್ಞಾನನಿಧಿ ಬೊಮ್ಮ
ಧೇನುರೂಪದಿ ಬಂದು ಶ್ರೀನಿಧಿ ನಿನಗೆ ಪಾಲುಗರೆಯುತಲಿರಲು ೬

ಗೋಪಾಲಕನಿಂದ ಶಿರವಡೆಶಿಕೊಂಡು
ಶ್ರೀಪ ಭಕ್ತನ ಕಾಯ್ದೆ
ಭೂಪಾಲಗೆ ಶಾಪವಿತ್ತು ಶಿರ ಗಾಯಕೆ
ಔಷುಧಿಗೆ ಪೋಗಿರೆ ನಿನ್ನ
ಆಪದ್ಬಾಂಧವ ವರಹನು ಕಂಡು ಆದರಿಸೆ
ಭೂಪತಿಯನು ನೂರು ಹೆಜ್ಜೆ ಭೂಮಿಬೇಡಿ
ಭೂಪ ವೆಂಕಟ ಬಕುಳೆಯ ಸೇವೆಯಗೊಂಡು
ಈ ಪರಿ ಲೀಲೆಯ ತೋರುತ ನಿಂತೆ ಗಿರಿಯೊಳು ೭

ಬೇಟೆಗೆನುತ ಪೋಗಿ ನಾಟಕಧಾರಿ ಕರಿಯನಟ್ಟಿ
ಸಾಟಿ ಇಲ್ಲದ ಚೆಲುವೆ ಪದ್ಮಾವತಿ ನೋಟಕೆ ಮನ ಸೋಲೆ
ಕಲಿತ ಮಾತ ಸಾಟಿ ಇಲ್ಲದೆ ನೀನಾದೆ
ಕಲ್ಲಲಿ ಬಡಿಯಲಾಕೆ ಈ ಪಾಡು ಪಟ್ಟು ಕುದರೀ ಮೃತವಾಗೆ
ಆಟ ಸಾಕೆಂದಲ್ಲಿಂದಲಿ ಮೆಲ್ಲನೇ ಪೋಗಿ
ಧಾಟಿಗಾಣದೆ ಮಲಗಿಹೆಯೊ ಮುಕುಂದ
ನಿನ್ನಾಟಕೆ ಎಣೆಗಾಣೆನೋ ಗೋವಿಂದ ೮

ಬಕುಳೆಯ ಕಳುಹಿಸಿ ಅಕಳಂಕ ಮಹಿಮನಿ
ಯುಕುತಿಯಿಂದಲೆ ಕೊರವಿ ರೂಪವ ತಾಳಿ
ಶಕುನ ಕಣಿಯ ಪೇಳಿ ನಿನ್ನಯ ಮದುವೆ
ಭಕುತ ಜನರಿಗೆಲ್ಲ ತೋರುವ ನೆಪದೊಳು

ಯುಕುತಿಯ ಹೂಡಿ ಬ್ರಹ್ಮಾದಿಗಳ ಕರೆಸಿ
ಸಕಲಕಾರ್ಯ ನೇಮಿಸಿ ಲಗ್ನಪತ್ರಿಕೆ
ಶುಕರ ಕೈಯಿಂದ ಕಳುಹಿಸಿದ ವೀರವೆಂಕಟ ೯

ಅರಸಿಯ ನೆನೆದು ನೀನು ಕರವೀರದಿ ಕರೆಸಿ
ಮಹಲಕ್ಷ್ಮಿಯನು ಶಿರಿರಮಣನೆ ಅರಿಶಿಣೆಣ್ಣೆಯ ಕೊಂಕು
ಮಜ್ಜನಗೈದು ದೇವೇಶ ಸುರವಂದ್ಯ ಕುಬೇರನಿಂದ
ಹಣವಗೊಂಡು ವರಕಲಶದಿ ಮನೆದೇವರ ಪೂಜೆಮಾಡಿ
ಹರುಷಪಡಿಸಿ ಬಂಧು ವಿಪ್ರರಿಗೆ ಭೋಜನದಿ
ವರದಿವ್ಯ ಶುಕರಾತಿಥ್ಯವಗೊಂಡ ಧೀರ ೧೦

ಆಕಾಶರಾಯನು ತಾ ನಿನ್ನ ದಿವ್ಯ ಶ್ರೀಕಮಲದ
ಪಾದವ ತೊಳೆಯಲಾಗನೇಕ ಬಂಧುಗಳ ಕೂಡಿ
ಸಂತೋಷದಿ ಅನೇಕ ವಸ್ತ್ರ ವಸ್ತುಹಾರ ಕಿರೀಟದಿ
ಶ್ರೀಕರ ನಿನಗಲಂಕರಿಸಲು ಶ್ರೀಶ
ಸಾಕಾರ ರೂಪನೆ ಕೈಗೊಂಡವರಾ ಕುಲದೀಪ
ಪದ್ಮಿನಿಯನು ಸ್ವೀಕರಿಸಿದಾಪಾರ ಮಹಿಮ ೧೧

ಆಕಾಶರಾಯನಿಗೆ ಅಳಿಯನಾಗಿ ಆ ಕಮಲೋದ್ಭವಳಾ
ಕರವ ಹಿಡಿದನೇಕ ಭಕ್ತರ ಸಲಹೆ ರಾಜಿಸುತಿಹ
ಶೋಕನಾಶನ ಸರ್ವಲೋಕೋದ್ಧರಕನೀ ಕರದೊಳು
ಕಂಕಣವ ಧರಿಸಿ ಮಾಂಗಲ್ಯನೇಕ ವಾದ್ಯದಿ
ಪದುಮಿಣಿಗೆ ಕಟ್ಟಲು ದೇವ ಆಕಾಶದಲ್ಲಿ ಪುಷ್ಪವೃಷ್ಟಿಗರೆಯೆ ೧೨

ಮತ್ಸ್ಯಕೂರ್ಮನೆ ವರಹ ನಾರಸಿಂಹ ವಿಪ್ರ ವಾಮನ
ಭಾರ್ಗವ ದಶರಥಪುತ್ರ ದಶದಿಗ್ವಲಯದಿ ಮೆರೆದು
ಕೃಷ್ಣಾ ಬೌದ್ಧನೆ ಕಲ್ಕಿ ಅಚ್ಯುತ ಅನಂತ ಮುಕುಂದ ಗೋವಿಂದ

ತನ್ನಿಚ್ಛೆಯಿಂದಲಿ ಭೂಭಾರ ಇಳುಹಿದಗೆ ಸ್ವಚ್ಛ ನಾರೀಯರು
ನವರತ್ನದಾರುತಿ ಸ್ವಚ್ಛ ಪದ್ಮಿನಿ ಶ್ರೀ ವೆಂಕಟೇಶಗೆ ಬೆಳಗಿದರು ೧೩

ಸತ್ಯವಾದೀ ಕಥನ ನಿನ ಕಲ್ಯಾಣ ನಿತ್ಯ ಪಠಿಸುವ್ರ
ಮನುಜರಿಗೆ ಇತ್ತು ವರವ ಸಲಹುವ ಸತ್ಯಸಂಕಲ್ಪ
ಎತ್ತಿದಭಯ ಹಸ್ತ ಭಕ್ತವತ್ಸಲ ನೀನೆಂದು
ನಿತ್ಯದಿ ಸ್ತುತಿಸುವೆ ಶ್ರೀ ಶ್ರೀನಿವಾಸ ಅತ್ಯಂತ ಹರುಷದಿಂದ
ಸಲಹೆನ್ನ ದೇವೇಶ ನಿತ್ಯತೃಪ್ತ ವೆಂಕಟೇಶಾ ಶ್ರೀಶಾ ೧೪

## ಗುರುಗಳ ಸುಳಾದಿ*

ಚಿಂತಿಸಬೇಡ ಅನ್ಯದೇವರುಗಳನು ಹರಿಯಬಿಟ್ಟು
ಚಿಂತೆಯನು ಕೊಡುವನೇ ಹರಿ ಎಂದು ನಂಬುತ್ತ
ಚಿಂತನೆಯ ಮಾಡಿದರೆ ಅವನ ಚರಣವ ನಿಮ್ಮ
ಚಿಂತನೆಯ ಪರಿಹರಿಸಿ ಮಾರ್ಗದರ್ಶಿಯಾಗಿ ತೋರುವನು
ಅವನ ಚರಿತೆ ನೀ ನಿಶ್ಚಿಂತೆಯಲಿ ಧ್ಯಾನಿಸೆ ಪರಮ ಹರುಷದಲಿರಲಿ
ಚಿಂತಾಯಕ ಹರಿ ನಿನ್ನೋಚನೆಯ ತಾನೇ ವಹಿಸುವನು
ನಿಶ್ಚಿಂತೆಯಲಿ ಶ್ರೀ ಶ್ರೀನಿವಾಸನ ನೆನಯುತಿರು
ಇದೇ ಶ್ರೀ ಗುರು ರಾಘವೇಂದ್ರರ ವಾಕ್ಯವೆಂದು ತಿಳಿ, ಮನದಿ
ಮರುಳೇ ೫

ಇದೇ ಗುರುವಾಕ್ಯ ಸದಮಲ ಮನದಿ ಅವರ ಪಾದವ ಧ್ಯಾನಿಸು
ಒದಗುವರು ನಾರಾಯಣನ ಸಹಿತ
ನಿನಗದುಭುತುದ ಮಹಿಮೆ ನೀನಿದ್ದಲ್ಲೆ ತೋರುವರು
ಚದುರಿಸಬೇಡವೀ ಮನವ ಗಟ್ಟಿಮಾಡು
ಇದೇ ಗುರು ರಾಘವೇಂದ್ರರು ಆಚರಿಸಿದ ಮಾರ್ಗವೆಂದಾ

* ಗುರುಗಳ ಸುಳಾದಿ ಎಂಬ ಹೆಸರಿನ ಈ ಸುಳಾದಿಯ ಮೊದಲ ನಾಲ್ಕು ನುಡಿಗಳು ಸಿಕ್ಕಿಲ್ಲ.

ಮಾರ್ಗದಲಿ ನೀ ಪೋಗೆ
ವದಗುವನು ಆ ನಾರಾಯಣ ನಿನಗೆ
ಭಕ್ತಿಮುಕ್ತಿಯನಿತ್ತು ಮತ್ತಧಿಕ ಸಂಪತ್ತು ಆರೋಗ್ಯ ಆಯುಷ್ಯ
ಕೊಟ್ಟು ಕಾವ ನಮ್ಮ ಶ್ರೀಧರ ಶ್ರೀ ಶ್ರೀನಿವಾಸ ೬

ಪ್ರತಿರೂಪ ತೋರುವವರು ಮನದಲ್ಲಿ ಗುರುಗಳು
ಪ್ರತಿದಿವಸ ಅವರ ಸ್ತೋತ್ರ ಮಾಡುತಿರು
ಅಪ್ರತಿಮಲ್ಲ ಜಗಕೆಲ್ಲ ನಾರಾಯಣನೆಂದು ತೋರಿಹರು ಜಗಕೆಲ್ಲ ಧ್ಯಾನದಾ
ಪ್ರತಿದಿವಸ ಯಾವ ಯೋಚನೆ ಮಾಡದೆ
ನಿನ್ನ ಕುಲದೈವ ಶ್ರೀ ಶ್ರೀನಿವಾಸನೆ ಅವರ
ಪ್ರತಿ ರಿಂಧಾವನ ನಿನ್ನ ಮನದಲಿ ನಿಲಿಸಿ
ಸ್ತೋತ್ರಗೈವಂತೆ ನಿನ್ನ ಪುನೀತನ ಮಾಡುವರು
ರಾಘವೇಂದ್ರರೆಂದು ಧ್ಯಾನಿಸು ನಿತ್ಯಾ ೭

ಗುರುಚರಣ ನಂಬಿದರೆ ಹರಿವಲಿವ ನಿಮಗೆ
ವರ ದ್ರೌವ್ಯ ಬೇಕಿಲ್ಲ ಗುರುಕಾಣಲು
ಗುರುಗಳಾಗಮಿಸಿದರೆ ಹಗಲಲ್ಲೇ ಇಹ
ಹರಿ ನಾರಾಯಣಿರುವಲ್ಲಿ ಗುರುಗಳಿಹರು
ಇದನರಿತರೆ ಯಾತ್ರೆ ಮಾಡಿದ ಫಲಬರದಿಹುದೆ ಭಕ್ತರಿಗೆ
ಕರಗತ ಗುರುಗಳು ಕಲ್ಪತರು ಕಾಮಧೇನು
ವರವಿತ್ತು ಭಕ್ತರಿಗೆ ಪರಿಪರಿಯ ವ್ಯಾಧಿ ಪರಿಹರಿಸಿ ದ್ರೌವ್ಯ ಕೊಡಿಸಿ
ಅವರ ಬಳಿ ಕರೆಸಿಕೊಳ್ಳುವರೆಂದು ನೀ ತಿಳಿಯೆ ಮನದಿ
ಶ್ರೀ ಶ್ರೀನಿವಾಸನು ಬಂದೊದಗುವನು ಎಂದೆಂದಿಗೂ ೮

ಅಧಮರಿಗೆ ಅರ್ಥವಾಗದು ಈ ಉಕ್ತಿ
ಸದಮಲ ಭಕ್ತರಿಗೆ ಜೇನು ಸವಿದಂತೀ ನುಡಿ

ಅದುಭುತನ ಲೀಲೆ ವದಗಿದ ದಿನವೇ ಸುದಿನವೆಂದರಿತು
ಆ ಚದುರ ನಾರಾಯಣನ ಲೀಲೆ ನೆನದವರ ಮನದಲ್ಲಿ
ಸದಾ ಸಂಚರಿಸಿ
ಅಧಮರಾದರೆ ಏನು ಸದಮಲರ ಮಾಡುವರು ಗುರುಗಳು
ಅವರವರ ಕರ್ಮಕನುಸಾರವಾಗಿ
ಒದಗಿಸುವರು ಶ್ರೀ ಶ್ರೀನಿವಾಸನ ಕರುಣವ ೯

ಅವರ ಧ್ಯಾನಿಸೆ ಕರ್ಮಖಂಡನೆಯಾಗುವದು
ಅವರಲ್ಲಿ ಹರಿ ಇದ್ದು ನಿನ್ನನುದ್ಧರಿಸೆ ಕಂಕಣ ತೊಡುವನು
ಅವರ ಕರುಣವೇ ತನ್ನ ಕರುಣ ಬೇರೆಂದು ನೆನಯ ಶ್ರೀ ಹರಿ
ಅವರಲ್ಲಿದ್ದು ನಲಿನಲಿದು ಸದಾ ಭಕ್ತರಭೀಷ್ಟವ ಕೊಡುವ
ಶ್ರೀ ಹರಿನಾರಸಿಂಹ
ಅವರ ಯೋಗ್ಯತೆಗನುಸಾರ ಅವರ ವಲಿಸೆ ನೀ
ಅವರೇ ನಮ್ಮ ಮಧ್ವಮತದುದ್ಧಾರಕರೆಂದು ತಿಳಿದು ಪ್ರಾರ್ಥಿಸೆ
ಮತ್ತವರೇ ನಿನ್ನ ಶಿದ್ಧಿಬುದ್ಧಿಯಲಿದ್ದು ಸಲಹುವರು
ಶ್ರೀ ಶ್ರೀನಿವಾಸನ ದಯಾ ೧೦

ಈ ಕರುಣವನು ಪಡೆದವನೇ ಧನ್ಯ
ಈ ಕರುಣ ಬಹು ದುರ್ಲಭ ಈ ಕರುಣ ಪಡೆದವನು
ಬೇಕಾದ ಭಾಗ್ಯವನು ಕೂಡಿಡಬೇಕಿಲ್ಲ
ಈ ಕರುಣ ಪಡೆದು ಗುರುಗಳ ಪಾದ ಧ್ಯಾನಿಪರಿಗೆ
ಈ ಸಂಸಾರದ್ವಂಬಲ ಬಿಡಿಸಿ ಸಕಲ ಸಂಪತ್ತು ಕೊಟ್ಟಗುರುರಾಘವೇಂದ್ರ
ತಾವು ಗಳಿಸಿದ ಪುಣ್ಯಶೇಷವ ಕೊಟ್ಟು ಕಾವರು
ಈ ಪುಣ್ಯ ಪಡೆದವರೇ ಧನ್ಯರು ಬೇಕಾದ ಕಡೆ ಪೋಗಬಹುದು
ಈ ಪುಣ್ಯ ಪಡೆದವರು ಶ್ರೀ ಶ್ರೀನಿವಾಸನ ಕರುಣಕೆ ಪಾತ್ರರು ೧೧

ಇಂತು ಗುರು ರಾಘವೇಂದ್ರರ ಮನದಿ ನೆನೆದರೆ
ಕಂತು ಜನಕನು ನಿನ್ನ ಸಲಹದೇ ಇಹನೆ
ಗುರ್ವಂತರ್ಯಾಮಿಯಾಗಿ ಕಾವನು ನಿಮ್ಮನೇಕೆಂತು
ಸಂತಸ ಪಡಿಸುವನೋ ನಾ ಕಾಣೆ
ನಿಮ್ಮನೆಂತೆಂತು ಸಂತಸ ಪಡಿಸಿದರೂ ಹರಿಗೆ ಸಮ್ಮತ
ನಿಮ್ಮಂತರಂಗದಿ ನಿಂತು ಎಲ್ಲೆಲ್ಲಿ ಕರೆದೊಯ್ವನೊ ನಾ ಕಾಣೆ
ಸಂತಸದಿ ಹಿಗ್ಗಿ ಅವನ ರೂಹ ಅವನ ಭಕ್ತರಲಿ ನೋಡಿ ಸಂತಸದಿ
ನೆನಯಿರಿ ನಿತ್ಯ, ನಿಂತು ಕಾವನು ರುಕ್ಮಿಣೀಶ ಕೃಷ್ಣಾನಂತ ಮಹಿಮಾ ೧೨

('ಗುರುಗಳ ಸುಳಾದಿ' ಎಂಬ ಹೆಸರಿನ ಈ ಸುಳಾದಿಯ ಮೊದಲ ನಾಲ್ಕು ನುಡಿಗಳು ಸಿಕ್ಕಿಲ್ಲ)

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

### ೧. ಯದುಗಿರಿಯಮ್ಮ ಅವರ ಕೀರ್ತನೆಗಳು

**ಅ**

ಅಂಕಣ – ನಾಲ್ಕು ಕಂಬಗಳ ನಡುವಿನ ಸ್ಥಳ

ಅರ್ಚ – ಪೂಜಿಸುವ

ಅರ್ಥಿ – ಪ್ರೀತಿ

ಅಟ್ಟೋಳಿ – ಆಟಾಟೋಪ

ಅರೆಯರು – ಶ್ರೀವೈಷ್ಣವ ನೃತ್ಯ – ಹಾಡುಗಾರರು

ಅವಭೃತ – ಸ್ನಾನ

ಅಳವಟ್ಟು – ತೊಡು, ಹೊಂದು

**ಆ**

ಆತಪತ್ರ – ಕೊಡೆ

ಆರ್ತಿ – ದುಃಖ

ಆಳ್ವಾರರು – ಶ್ರೀವೈಷ್ಣವ ಸಂತರು

ಆವುಗೆ – ಪಾದರಕ್ಷೆ

ಆಳಂಪಲ್ಲಕ್ಕಿ – ಉತ್ಸವವಿಶೇಷ

**ಇ**

ಇಂದ್ರದಂಡ – ವಜ್ರಾಯುಧ

ಇಕ್ಷುರಸ – ಕಬ್ಬಿನರಸ

**ಉ**

ಉತ್ರಾಜಿಮಾಲೆ – ಹಾರವಿಶೇಷ

ಉಡಗೆಜ್ಜೆ – ಉಡದಾರ

**ಕ**

ಕಂಕಣ – ಕೈಗೆ ಕಟ್ಟುವ ಶುಭದಾರ

ಕತ್ತರಿಬಾವುಲಿ – ಕಿವಿಯಾಭರಣ

ಕದಪು – ಕೆನ್ನೆ

ಕದಳಿ – ಬಾಳೆ

ಕಲ್ಕಿತುರಾಯಿ – ಕಿರೀಟ ವಿಶೇಷ

ಕಲ್ಪೋಕ್ತ – ಶಾಸ್ತ್ರೋಕ್ತ

ಕಸ್ತುರಿಬಟ್ಟು – ಒಂದು ಬಗೆಯ ತಿಲಕ

ಕಳಿಯಡಕೆ – ಹದವಾದ ಅಡಕೆ

ಕ್ರಮುಕ – ಅಡಕೆ

ಕುಂದಣ – ಅಪರಂಜಿ

ಕುತ್ತನಿಅಂಗಿ – ದೇವರ ಉಡುಗೆ

ಕುಲಾವಿ – ಟೋಪಿ

ಕೂರೆಕುಲಾವಿ – ಒಂದು ಬಗೆಯ ಕುಲಾವಿ

ಕೇಸರಿ – ಸಿಂಹ
ಕೊಂಡೆ – ವಿಗ್ರಹಾಭರಣ
ಕೋಳಿಕೆ – ಪೀಠ

ಗ

ಗೊಂಡೆಯ – ಒಂದು ಬಗೆಯ ಆಭರಣ
ಘೃತ – ತುಪ್ಪ

ಚ

ಚಳಕಂಬು – ಆಭರಣ
ಚಾಪ – ಬಾಣ
ಚಾಮರ – ಬೀಸಣಿಗೆ

ಜ

ಜಾಮಾತ – ಅಳಿಯ

ತ

ತುಂಡುಲ – ಅಕ್ಕಿ
ತಳೆ – ಲೇಪಿಸು
ತಾಪ – ದುಃಖ
ತಿಂತ್ರಿಣಿ – ಹುಣಸೆ
ತಿಮಿರ – ಕತ್ತಲು, ಅಜ್ಞಾನ
ತುರಾಯಿ – ಕಿರೀಟ
ತೋರ – ದಪ್ಪ, ಸುಂದರ, ಎದ್ದು ಕಾಣುವ

ದ

ದಕ್ಷಿಣಹಸ್ತ – ಎಡಗೈ
ದಂತದಾವನ – ಹಲ್ಲು ಉಜ್ಜುವ ಶಾಸ್ತ್ರ
ದಾಸರಿಸಂದ – (?) ಆರತಿ
ದೀವಟಿಗೆ – ದೀಪ
ದಧ್ಯಾನ್ನ – ನೈವೇದ್ಯದಮೊಸರನ್ನ
ದ್ರಾವಿಡವೇದ – ಆಳ್ವಾರರ ಹಾಡು

ನ

ನಂಬಿ – ಭಕ್ತ
ನಜರು – ಕಾಣಿಕೆ
ನಕ್ರ – ಮೊಸಳೆ
ನಾಸಿಕ – ಮೂಗು
ನೀರಾಡಿ – ಸ್ನಾನ, ಮಜ್ಜನ

ಪ

ಪಡಿ – ಮೆಟ್ಟಿಲು
ಪರುಷೆ – ಜಾತ್ರೆ
(ಅ)ಪಾಂಗ – ಕಡೆಗಣ್ಣಿನ ನೋಟ, ಕಟಾಕ್ಷ
ಪಾಗಡ – ಉಡುಗೊರೆ
ಪಾಡಗ – ಚಿನ್ನದಲ್ಲಿ ರತ್ನ ಕೂಡಿಸಿದ ವಿಶೇಷಾಭರಣ
ಪಾರ – ತೀರ, ಗಡಿ
ಪಾನಪಟ್ಟಿ – ದೇವರ ಉಡುಗೆ
ಪಾವಡೆ – ಲಂಗ
ಪಾರ್ವೇಗಂಟಿ– ಹಬ್ಬದ ಬೇಟೆ
ಪೇರಿ – ಉತ್ಸವವಿಶೇಷ
ಪೊತ್ತೊಂದು – ಪೊಸತು ಬಂದು ಮೊದಲನೆಯದು
ಪೋಡಿಸು – ಹೋಲಿಸು, ಹೊಂದಿಸು

ಬ

ಬರವು – ಬರುವಿಕೆ

ಬಹರಿ - ಪೀಠ
ಬಾಣಬಿರುಸು - ಪಟಾಕಿಗಳು
ಬಾವುಲಿ - ಕಿವಿಯಾಭರಣ
ಬುಗುಡಿ - ಆಭರಣ
ಭಾಗಿಗಳು - ಭಾಗಸ್ಥರು
ಭಾಂಡ - ಬಾಣಲಿ, ಅಗಲಬಾಯಿಯಪಾತ್ರೆ
ಭಾಷ್ಯಕಾರರು - ರಾಮಾನುಜರು
ಭುಕ್ತಿ - ಭೋಜನ
ಭೇರಿ - ವಾದ್ಯ ವಿಶೇಷ

## ಮ

ಮತಂಗ - ಆನೆ
ಮಕರಿ - ಮೊಸಳೆ
ಮಕರಿಕು,ಮಕಕಂಠಿ - ಒಂದು ಬಗೆಯ ಆಭರಣ
ಮತಾಪು - ಪಟಾಕಿ ವಿಶೇಷ
ಮುಂಡಾಸ - ಪೇಟ
ಮುಕುರ - ಮೂಗುಬಟ್ಟು, ಕನ್ನಡಿ
ಮುದ್ಗಾನ್ನ - ನೈವೇದ್ಯದ ಅನ್ನದಬಗೆ
ಮುರುಜ - ಚರ್ಮವಾದ್ಯ

## ಯ

ಯಾಳಿ - ನವಿಲು
ಯೆರೆ - ಸುರಿ, ಸ್ನಾನ

## ರ

ರಾಜಮುಡಿ - ಕಿರೀಟ
ರಾಗಟೆಹೆರಳು - ಗಂಟು ಹಾಕಿರುವ ಮುಡಿಗೆ ಸುತ್ತುವ ಒಡವೆ

## ಲ

ಲಲಾಟ - ಹಣೆ

## ವ

ವರಸುಲ್ತಾನಿ - ಬೀಬಿನಾಚ್ಚಿಯಾರ್
ವಂಕಿಬಾಜಿ - ಆಭರಣಗಳು
ವಲ್ಲಿ - ವಸ್ತ್ರ, ಉತ್ತರೀಯ, ಶಲ್ಯ
ವಡ್ಯಾಣ - ಒಡ್ಯಾಣ, ಡಾಬು
ವಾಲೆಬುಗುಡಿ - ಕಿವಿಯಾಭರಣಗಳು
ವಾರಣ - ಆನೆ
ವೇಣುಶೂರ್ಪ - ಕೊಳಲಿನತುದಿ
ವ್ಯಜನ - ಗಾಳಿ
ವಾರಾಂಗನೆ - ಪರಿಚಾರಕಿ, ವೇಶ್ಯೆ
ವಾಲೂಕರು - ಗಂಧರ್ವರು
ವಿಪ್ರ - ಬ್ರಾಹ್ಮಣ

## ಸ

ಸಲಾಮು - ನಮಸ್ಕಾರ
ಸುತ್ತೇಣಿಗಂಟು - ಜಡೆಯ ಒಂದು ಬಗೆ
ಸುಜ್ಯೋತಿ - ನದಿ ಹೆಸರು
ಸುಲಿ - ಒಡವೆ
ಸೂರೆಪಾನ - ದೇವರುವ ಮೆರವಣಿಗೆಯಲ್ಲಿ ಹಿಡಿಯುವ ಫಲಕ

## ಹ

ಹಗಲುಬತ್ತಿ - ಪಂಜು, ಪಟಾಕಿ ವಿಶೇಷ
ಹರಿದ್ರ - ಹರಿಶಿನಾ, ಹಳದಿ, ರೇಶ್ಮೆ

**ಮ**

ಮಂಡಿತ - ಅಲಂಕರಿಸಿದ
ಮಡುಹಿದೆಯೊ - ಕೊಂದೆಯೋ
ಮಯೂರ ವಾಹಿನಿ - ನವಿಲನ್ನು ವಾಹನವಾಗಿ ಹೊಂದಿರುವಿಕೆ (ಸರಸ್ವತಿ)
ಮಾಲತಿ - ಮಲ್ಲಿಗೆ
ವಲಾರ್ದ್ನಿ - ತಲೆ ಶಿರ
ಮೂರು ತಾಪಗಳ - ತಾಪತ್ರಯಗಳ

**ರ**

ರಂಕರಕ್ಷಕ - ಧೀನ
ರಿಪು - ಶತ್ರು

**ವ**

ವಾಂಗ್ಮಕ ರೋಚಕ - ಮಾತು ಮನಗಳಿಂದ ಅರಿಯಲಾರದವನು
ವಾಸುಕಿ - ಒಬ್ಬ ನಾಗರಾಜ
ವಿಷ್ಣುವಲ್ಲಭ - ವಿಷ್ಣುವಿಗೆ ಪ್ರಿಯನಾದಶಿವ
ವಿಸಯವಾಸನೆ - ಇಂದ್ರಿಯಗಳ ಸುಖದಸೆಳತ
ವ್ಯಾಘ್ರವಸನ - ಹುಲಿಯ ಚರ್ಮವನ್ನು ಧರಿಸಿದವ (ಶಿವ)

**ಶ**

ಶಿಂಶುಮಾನ - ಚೋಳಿನ ರೂಪ
ಶಶಂಕದರ - ಚಂದ್ರಧರ, ಶಿವ

**ಷ**

ಷಡ್ದ್ವಾರ ಭೇಧಧಿ - ಯೋಗದಲ್ಲಿಹೇಳುವ ಷಟ್‌ಚಕ್ರ - ಆರು ದ್ವಾರಗಳನ್ನು ಭೇಧಿಸಿ
ಷಡ್ರಿಪು - ಕಾಮ, ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯ, ಅಶತ್ರುಗಳು

**ಸ**

ಸಚ್ಚಿದ್ರೂಪ - ಸತ್ಯ ಮತ್ತು ಚಿತ್ತಕ (ಚೈತನ್ಯಗಳುಳ್ಳ)
ಸನಕಸನಂದ - ಋಷಿಕುವರರು
ಸರ್ವಾಂತರವಾದ - ಎಲ್ಲಿರೊಳಗೆ ನೆಲೆಸಿರುವವ
ಸೂಸದೆ - ಹೊಮ್ಮಿಸದೆ
ಸ್ವರ್ಣಕಶ್ಯಪು - ಹಿರಣ್ಯಕಶಿಪು

**ಹ**

ಹಮ್ಮು - ಅಹಂಕಾರ

## ೩. ಓರಬಾಯಿಲಕ್ಷ್ಮೀದೇವಮ್ಮ ಅವರ ಕೀರ್ತನೆಗಳು

**ಅ**

ಅರ್ಕಮಂಡಲ – ಸೂರ್ಯಮಂಡಲ
ಅರ್ಕವದನೆ – ಸೂರ್ಯನಂತೆ ಹೊಳೆಯುವ ಮುಖವುಳ್ಳವಳು
ಅಗಣಿತ – ಲೆಕ್ಕವಿಲ್ಲದಷ್ಟು
ಅತಿರಸ – ಕಜ್ಜಾಯ
ಅಪ್ಪಲು – ಸಿಹಿದೋಸೆ
ಅನ್ಯರು – ಬೇರೆಯವರು
ಅಳಗಿರಿ – ಸುಂದರವಾದ ಬೆಟ್ಟ– ತಿರುಪತಿ

**ಇ**

ಇಷ್ಟಾರ್ಥ – ಕೋರಿಕೆ

**ಕ**

ಕಂಚುಕ – ಕುಪ್ಪುಸ
ಕಂತುಜನಕ – ಮನ್ಮಥನ ತಂದೆ– ವಿಷ್ಣು
ಕಂಜದಳಾಕ್ಷ – ತಾವರೆಯ ಎಸಳಿನಂತೆ ಸುಂದರವಾದ ಕಣ್ಣುಳ್ಳವನು. ವಿಷ್ಣು
ಕಡಹಾಯ್ದುಮರ – ಕದಂಬವೃಕ್ಷ
ಕಮನೀಯಗಾತ್ರ – ಸುಂದವಾದ ಶರೀರವುಳ್ಳವನು, ವಿಷ್ಣು
ಕಮ್ಮೆಣ್ಣೆ – ನಾರುಬೇರುಗಳನ್ನು ಹಾಕಿ ಕಾಯಿಸಿದ ಸುಗಂಧ ತೈಲ, ಅಭ್ಯಂಜನ ತೈಲ.
ಕರಿರಾಜ – ಆನೆಗಳರಾಜ
ಕರಿಪುರ – ಹಸ್ತಿನಾಪುರ
ಕಿರೀಟಿ – ಅರ್ಜುನನ ಇನ್ನೊಂದು ಹೆಸರು
ಕುಂತಿಸುತರು – ಧರ್ಮರಾಯ, ಭೀಮ, ಅರ್ಜುನ ನಕುಲ ಸಹದೇವರು.
ಕೂಕಬುದ್ಧಿ – ಕುಹಕ ಬುದ್ಧಿ
ಕೂರ್ಮ – ಆಮೆ
ಕೃಷ್ಣೆ – ದ್ರೌಪದಿ
ಕೊರಳು ಕೂವೋದು – ಕತ್ತನ್ನು ಕತ್ತರಿಸುವುದು

**ಖ**

ಖಬ್ಬು – ಕಬ್ಬು
ಖರೆ – ಖರೇನೇ– ನಿಜವಾಗಿಯೂ (ಮರಾಠಿ ಶಬ್ದ)
ಖಗರಾಜ – ಗರುಡ

**ಗ**

ಗದ್ರಿಸುತ್ತ – ಗದರಿಸುತ್ತ
ಗರ್ಜಿಸುತ್ತ – ಆರ್ಭಟಿಸುತ್ತ
ಗೋಪಾಳಿಯರು – ಗೊಲ್ಲತಿಯರು

**ಘ**

ಘಟ್ಟಿಸಿಕೊಂಡು – ಹೊಡೆದುಕೊಂಡು
ಘಾಡನೆ – ಬೇಗನೆ
ಘಾಸಿಗೊಂಡೆ – ಕಷ್ಟಪಟ್ಟೆ

**ಚ**

ಚತ್ರಶಾಲೆ – ಕಲಾಭವನ
ಚೂತಫಲ – ಮಾವಿನಹಣ್ಣು
ಚರಿಯ – ಚರ್ಯೆ, ನಡವಳಿಕೆ

**ತ**

ತರಳ – ಹುಡುಗ
ತಟ್ಟೆ – ತಟ್ಟೆ, ತಟ್ಟುವುದು
ತಸ್ಕರ – ಕಳ್ಳ
ತುರಗ – ಕುದುರೆ

**ದ**

ದಾನವಾಂತಕ – ದಾನವರನ್ನು ಕೊಂದವನು,ವಿಷ್ಣು
ನಾಗಭೂಷಣ – ಸರ್ಪವನ್ನು ಆಭರಣವಾಗುಳ್ಳವನು, ಶಿವ

**ನ**

ನೀಲವರ್ಣ – ವಿಷ್ಣು
ನೈಮಿಶಾರಣ್ಯ – ಅಯೋಧ್ಯೆಯಿಂದ ಮುಂದೆ ಹೋಗುವಾಗ ದಟ್ಟವಾದ ಮರಗಳಿಂದ ಕೂಡಿದ ಒಂದು ಕಾಡು–ಇಲ್ಲಿ ಗೋಮತೀ ನದಿ ಹರಿಯುತ್ತದೆ ಅಲ್ಲಿ ಒಂದು ವಿಶಾಲವಾದ ವೃಕ್ಷದ ಬುಡ ದಲ್ಲಿ ಒಂದು ಕಲ್ಲಿನ ಪೀಠವಿದೆ. ಸೂತಕು ಇದರ ಮೇಲೆ ಕುಳಿತು ಸನಕಾದಿಗಳಿಗೆ ಪುರಾಣ ಹೇಳುತ್ತಿದ್ದರಂತೆ

**ಬ**

ಬಟ್ಟೆ – ವಸ್ತ್ರ, ದಾರಿ

**ಮ**

ಮಚ್ಚ – ಮೀನು
ಮಂಡೂಕಿ – ಕಪ್ಪೆ
ಮಂಗಳಗಿರಿ – ವಿಜಯವಾಡದ ಬಳಿಯ ಒಂದು ಚಿಕ್ಕ ಬೆಟ್ಟ ಇಲ್ಲಿ. ಪಾನಕ ನರಸಿಂಹ ಬಹಳ ಪ್ರಸಿದ್ದ ದೇವರು

ಮಂಚಾಲಿ - ಮಂತ್ರಾಲಯದ ಮೊದಲ ಹೆಸರು
ಮಸಳೆ - ಮೊಸಳೆ
ಮಳಲು - ಮರಳು
ಮಲ್ಲಿಕಾರ್ಜುನ - ಶ್ರೀಶೈಲದಲ್ಲಿರುವ ಶಿವ
ಮರ್ತ್ಯಲೋಕ - ನಾವು ವಾಸ ಮಾಡುತ್ತಿರುವ ಲೋಕ
ಮಾತುಳ - ಸೋದರಮಾವ
ಮಾರಜನಕ - ಮನ್ಮಥನ ತಂದೆ, ವಿಷ್ಣು

## ೪. ಸರಸಾಬಾಯಿಯವರ ಕೀರ್ತನೆಗಳು

ಅ

ಅಜನಪಿತ - ಬ್ರಹ್ಮನ ತಂದೆ (ವಿಷ್ಣು)
ಅಕ್ಷರ - ಲಕ್ಷ್ಮಿ

ಇ

ಇರುಳು - ರಾತ್ರಿ

ಈ

ಈಕ್ಷಿಸು - ನೋಡು

ಕ

ಕುಕ್ಷಿ - ಭೂಮಿ
ಕಂಕಣ - ಬಳೆ
ಕಾಮನಯ್ಯ - ಶ್ರೀಹರಿ

ಖ

ಖಗವಾಹನ - ಪಕ್ಷಿವಾಹನ, ಗರುಡವಾಹನ

ಗ

ಗೃಹ - ಮನೆ

ಘ

ಘಾಡ, ಗಾಡ - ದೀರ್ಘ

ದ

ದಯಾನಿಧೆ - ಕರುಣಾನಿಧಿ

ನ

ನಾಗಶಯನ - ಶೇಷಶಾಯಿ,ಹಾವನ್ನೇ ಹಾಸಿಗೆಯಾಗಿ ಉಳ್ಳವ

ಬ

ಬಂಧನ - ತೊಡಕು

ಮ

ಮಂದರೊದ್ಧರ - ಮಂಧರ ಪರ್ವತವನ್ನು ಎತ್ತಿದ ಶ್ರೀಹರಿ (ಕೂರ್ಮಾವತಾರ)
ಮತಿಬುದ್ಧಿ - ಮೂಢ, ದಡ್ಡ
ಮನದಲಿ - ಮನಸ್ಸಿನಲ್ಲಿ

## ೫. ತಿರುಮಲಾಂಬರವರ ಕೀರ್ತನೆಗಳು

**ಅ**

ಅಘ – ಪಾಪ
ಅದ್ರಿ – ಬ್ರಹ್ಮ
ಅಣಿಮರ – ಅರದ
ಅರಸಂಚೆ – ದುಂಬಿ
ಅಣುಗ – ಪ್ರಿಯ, ಭಕ್ತ

**ಆ**

ಆನಿಸ – ಒದಗಿ
ಆಣ್ಮ – ಪ್ರಿಯಕರ
ಆರಯ್ – ಈಕ್ಷಿಸು, ಸೇರು
ಆವಂಗ – ಯಾವಾಗಲೂ
ಆಳಕ – ಸಡಿಲ

**ಇ**

ಇರವು – ಇರುವಿಕೆ, ಅಸ್ತಿತ್ವ

**ಎ**

ಎರೆ – ನಮಸ್ಕಾರ,ಸೇವೆ
ವಗಳುಂ – ಯಾವಾಗಲೂ

**ಒ**

ಒರೆ – ಹೇಳು
ಓವು – ರಕ್ಷಿಸು
ಓಲದ ಕುಲ್ಮ – ಮಲ್ಲಿಗೆ ಮೊಗ್ಗು

**ಕ**

ಕಕ್ಕುಲತೆ – ಆಸಕ್ತಿ, ಪ್ರೀತಿ
ಕಂಧರ – ಗಂಟಲು
ಕೃಪಣೆ – ಜಿಪುಣ
ಕಕ್ಕಸ – ತಿರಸ್ಕಾರ
ಕಾಕಲಾಸ – ಹರಟೆ

**ಗ**

ಗಾರುಗೊಳು – ಕಷ್ಟಕ್ಕೆ ಸಿಲುಕು

**ಘ**

ಘನ್ನ – ಘನವಂತ, ಅಧಿಕ, ವಿಶೇಷ

**ತ**

ತಳುವು – ತಡೆ, ಕಾಯಿಸು
ತರಣಿ – ಸೂರ್ಯ
ತೊಡವು – ಉಡುಗೆ, ಆಭರಣ
ತ್ಯಜಿಸು – ನಲಿಯಿಸಿ,ಒಪ್ಪಿಸಿ
ತೋಯಜ – ಕಮಲ
ತೋಯಜಾಂಬಕಿ – ಕಮಲದಂತೆ ಕಣ್ಣುಳ್ಳವಳು, ಮಹಾಲಕ್ಷ್ಮೀ

**ನ**

ನಖ – ಉಗುರು
ನಖಾಗ್ರ – ಉಗುರಿನ ಕೊನೆ
ನನ್ನಿ – ಪ್ರೀತಿ
ನಿಂದಿತಾಚಾರ – ಸಲ್ಲದ ನಡವಳಿಕೆ
ನಮ್ಮಿ – ನಂಬಿ, ಆಶ್ರಯಿಸಿ
ನಾರಗ – ನಾರಾಯಣ
ನಲ್ವಾತು – ಒಳ್ಳೆಯ ಮಾತು
ನುಡಿವೆಣ್ಣು – ಸರಸ್ವತಿ

**ಪ**

ಪಂಕಜೇಕ್ಷಣ – ಕಮಲದಂತೆ ಕಣ್ಣುಳ್ಳವನು, ಮಹಾವಿಷ್ಣು
ಪದುಳ – ಹೆಚ್ಚು
ಪೂತ – ಧರಿಸಿದ, ಹೊಂದಿದ, ಪೋತ
ಫಾಲಾಕ್ಷಿ – ಹಣೆಯಲ್ಲಿ ಕಣ್ಣುಳ್ಳವನು, ಶಿವ
ಪುಂಡರೀಕ – ಕಮಲ
ಪುಂಡರೀಕಾಕ್ಷ – ಕಮಲದಂತೆ ಕಣ್ಣುಳ್ಳವನು, ಮಹಾವಿಷ್ಣು

**ಮ**

ಮನವಾರೆ – ಮನಸಾರೆ, ಮನಸ್ಸಿಟ್ಟು
ಮಾಜದೆ – ತಪ್ಪದೆ
ಮದವಾರಣ – ಮದಿಸಿದ ಆನೆ
ಮಾರ್ತಾಂಡ – ಸೂರ್ಯ
ಮತ್ತೇಭ – ಆನೆ (ಘನ) ಮಾಸ, ಗಜರಾಜ

**ರ**

ರವ – ಧ್ವನಿ
ರದನ – ಹಲ್ಲು
ರಾಮಣೀಯ – ಸುಂದರ

**ವ**

ವ್ಯಜನ – ಚಾಮರ
ವಾರ್ಧಿ – ವಾರಿಧಿ, ಸಮುದ್ರ
ವಾರಿಜಾಸನಮಾತೆ– ಬ್ರಹ್ಮನ ತಾಯಿ, ಲಕ್ಷ್ಮೀದೇವಿ

**ಶ**

ಶ್ರೀವತ್ಸ – ವಿಷ್ಣುವಿನ ಎದೆಯಲ್ಲಿರುವ ಮಚ್ಚೆ
ಕ್ಷೀರಾಂಬುದಿ – ಹಾಲಿನ ಸಮುದ್ರ

**ಸ**

ಸೊಕ್ಕುನೂ – ಸೊಕ್ಕು, ಗರ್ವ
ಸೊಲ್ಲು – ಮಾತು
ಸರಸಿಜಾಯತನೇತ್ರೆ–ಕಮಲದಂತೆ ವಿಶಾಲವಾದ ಕಣ್ಣುಳ್ಳವಳು, ಲಕ್ಷ್ಮಿ
ಸನ್ನಿ – ಕಲ್ಮಷ, ಕೊಳೆ
ಸಾವರಿಸು – ಮನ್ನಿಸು, ಸ್ವೀಕರಿಸು

**ಹ**

ಹುರುಡಿಸು – ಉಬ್ಬಿಸು, ಉತ್ತೇಜಿಸು

## ೬. ರಾಧಾಬಾಯಿಯವರ ಕೀರ್ತನೆಗಳು

**ಅ**

ಅರ್ಥಿ – ಆಸೆ

ಅಗಣಿತ – ಲೆಕ್ಕವಿಲ್ಲದಷ್ಟು

ಅಂದಣ – ಪಲ್ಲಕ್ಕಿ

**ಇ**

ಇಷ್ಟಾರ್ಥ – ಕೋರಿಕೆ

**ಕ**

ಕಾಟ – ತೊಂದರೆ

ಕಂಜದಳಾಕ್ಷ – ಕಮಲದಳದಂತಹ ಕಣ್ಣುಳ್ಳವನು

**ಗ**

ಕಮನೀಯ ಗಾತ್ರಾ – ಸುಂದರವಾದ ದೇಹ ವುಳ್ಳವನು

**ಘ**

ಘಾಸಿಗೊಂಡು – ಕಷ್ಟಪಟ್ಟು

**ಪ**

ಪಂಕಜನಾಭ – ಹೊಕ್ಕುಳಲ್ಲಿ ಕಮಲವುಳ್ಳವನು

ಪೃಥ್ವಿ – ಭೂಮಿ

ಪಂಥ – ಹಾದಿ

**ಮ**

ಮತಿ – ಬುದ್ಧಿ

**ಯ**

ಯೆಡರು – ಕಷ್ಟ

## ೭. ಸುಂದರಮ್ಮನವರ ಕೀರ್ತನೆಗಳು

**ಅ**

ಅಷ್ಟಮಹಿಷಿಯರು –ಸತ್ಯಭಾಮ, ರುಕ್ಮಿಣಿ ದೇವಿ, ಲಕ್ಷಣ, ನೀಲ, ಜಾಂಬವತಿ,ಮಿತ್ರವೃಂದ, ಭದ್ರ, ಕಾಳಿ.

ಅಂಧಕ – ಕುರುಡ

ಅನಿಮಿತ್ತ ಒಂದು –ಆಪತ್ತಿಗೆ ಒದಗುವವ, ರಕ್ಷಕ

ಅಂಧರೂಪ – ನರಕ

ಅರಣ್ಯ – ಕಾಡು

ಅಹಿಭೂಷಣ – ಈಶ್ವರ, ಶಿವ, ರುದ್ರ

ಅಘ – ಪಾಪ

ಅಕ್ಷರಳು – ರಮಾದೇವಿ, ತ್ರಿಜಗನ್ಮಾತೆ, ಲಕ್ಷ್ಮಿ ತ್ರಿಗುಣಾಭಿಮಾನಿ

**ಆ**

ಆಪಾದ ಮೌಳಿಪರ್ಯಂತ –ಪಾದದಿಂದ ಶಿರಸ್ಸಿನವರೆಗೆ

ಇ

ಇರುಳು – ರಾತ್ರಿ

ಉ

ಉದರ – ಹೊಟ್ಟೆ

ಎ

ಎರಗು – ನಮಸ್ಕರಿಸು

ಒ

ಒಡೆಯ ಖುಳಿ – ಕಾಲಿನ ಆಭರಣ

ಕ

ಕಂದರ್ಪಿತ – ಮನ್ಮಥನ ತಂದೆ (ವಿಷ್ಣು)

ಕಂಜಾಕ್ಷಿ – ಕಮಲದಂತೆ ಕಣ್ಣುಳ್ಳವಳು

ಕಠಾಣಿ – ಕೊರಳ ಹಾರ

ಕಂದ – ಮಗು, ಶಿಶು

ಕರ – ಕೈ

ಕಿಂಡಿ – ಸಂದು, ಸಣ್ಣ ರಂಧ್ರ

ಕುಂತಿಕುಮಾರ – ಕುಂತಿಯ ಮಗ (ಭೀಮ)

ಕುಬ್ಜೆ – ಗಂಧರ್ವ ಕನ್ಯೆ,

ಗ

ಗಳದಿ – ಕಂಟ, ಕುತ್ತಿಗೆ

ಗಿರಿ – ಬೆಟ್ಟ

ಗೋವರ್ಧನಧಾರಿ – ಗೋವರ್ಧನ ಬೆಟ್ಟ ಪೊತ್ತವ

ಚ

ಚಾರುದೇಷ್ಣ – ಕೃಷ್ಣನ ಮಗ (ಗಣಪತಿ)

ಚೋರ – ಕಳ್ಳ

ಜ

ಜಾರ – ನಡತೆಗೆಟ್ಟವ, ಪರಸ್ತ್ರೀ ಸಂಗ ಮಾಡುವವ

ಜಡಿ – ಹೆರಳು

ತ

ತ್ರಿಜಗ – ಮೂರು ಲೋಕ (ಸ್ವರ್ಗ, ಭೂಮಿ, ಪಾತಾಳ)

ತರುಣಿ – ಹೆಂಗಸು

ತಲೆಯಗಾಯ್ದ – ತಲೆಯನ್ನು ಕಾಪಾಡಿದವ, ರಕ್ಷಿಸಿದವ

ದ

ದಾಕ್ಷಾಯಿಣಿ – ಗೌರಿದೇವಿ, ದಕ್ಷಕುಮಾರನ ಪುತ್ರಿ, ಪಾರ್ವತಿ

ದಾನವ – ರಾಕ್ಷಸ, ದೈತ್ಯ

ದ್ವಾರಾವತಿ – ದ್ವಾರಕಾಪುರ (ಪಟ್ಟಣ)

ದ್ವಿಜರು – ಬ್ರಾಹ್ಮಣರು, ದಿವಿಜರು

ಧ

ಧಣಿ – ಒಡೆಯ

ಧರೆ – ಭೂವಿ

**ನ**

ನಾಸಿಕ – ಮೂಗು

**ಪ**

ಪಾಲು – ಹಾಲು
ಪಿಡಿದು – ಹಿಡಿದು
ಪುಸಿ – ಸುಳ್ಳು
ಪರ್ಯಂಕ – ಮಂಚ, ಮಲಗಿ ಕೂಡುವ ಆಸನ
ಪೊಂಗೊಳಲು – ಕೊಳಲು

**ಬ**

ಬುಲಾಕು – ಮೂಗಿನ ಆಭರಣ
ಬೆಟ್ಟ ಬೆರಳಲಿ ಪೊತ್ತ – ಬೆಟ್ಟವನ್ನು ಬೆರಳಿನಿಂದ ಎತ್ತಿ ಹಿಡಿದ (ಶ್ರೀಕೃಷ್ಣ)

**ಭ**

ಭವಾಬ್ಧಿ – ಸಂಸಾರ ಸಾಗರ (ಸಮುದ್ರ) ಶರದಿ

**ಮ**

ಮೂಶಕ – ಇಲಿ
ಮಡುವು – ಸಮುದ್ರ
ಮೃಡನಯ್ಯ – ಈಶ್ವರನ ತಂದೆ
ಮಜ್ಜನ – ಸ್ನಾನ
ಮುರಾರಿ – ಕೃಷ್ಣ
ಮಧ್ಯಗೇಹ – ಮಧ್ಯದ ಮನೆ

**ರ**

ರಾಕಟೆ – ಜಡೆಗೆ (ಹೆರಳಿಗೆ) ಹಾಕುವ ಒಡವೆ
ರಕ್ಕಸ – ರಾಕ್ಷಸ
ರವಿ – ಸೂರ್ಯ

**ಲ**

ಲಲಾಟ – ಹಣೆ
ಲಕುಮಿ – ಲಕ್ಷ್ಮಿ
ಲೋಕಮಾತೆ – ಲಕ್ಷ್ಮಿ

**ವ**

ವಟಪತ್ರಶಾಯಿ – ಆಲದೆಲೆಯ ಮೇಲೆ ಮಲಗಿರುವ, ಆಲದೆಲೆ ಕೃಷ್ಣ
ವೈರಿ – ಶತ್ರು

**ಶ**

ಶಯನ – ಹಾಸಿಗೆ
ಶೇಷಾಚಲ – ಶೇಷಾದ್ರಿ, ತಿರುಪತಿ ಬೆಟ್ಟ
ಶಿಲ್ಕಿ – ಸಿಕ್ಕಿ
ಶೇಷಶಾಯಿ – ಹಾವೇ ಹಾಸಿಗೆಯಾಗಿ ಉಳ್ಳವ (ವಿಷ್ಣು)
ಶಂಭುದೇವ – ಈಶ್ವರ
ಶರಧಿ – ಸಮುದ್ರ

**ಸ**

ಸ್ವಚ್ಛ – ನಿರ್ಮಲ, ಶುದ್ಧ
ಸೋಳಸಾಸಿರ – ಹದಿನಾರುಸಾವಿರ
ಸ್ತ್ರೀರೂಪ – ಹೆಣ್ಣಿನ ರೂಪ
ಸಂಜೀವಿನಿ – ಔಷಧಿ

## ೮. ಗುಂಡಮ್ಮನವರ ಕೀರ್ತನೆಗಳು

**ಅ**

ಅ - ಅಂಬರ

**ಈ**

ಈಕ್ಷಿಸು - ನೋಡು

**ಉ**

ಉಮ - ಪಾರ್ವತಿ
ಉಪೇಕ್ಷಿಸು - ಅಲಕ್ಷೆ ಮಾಡು

**ಕ**

ಕಂತುಪಿತ - ಮನ್ಮಥನ ತಂದೆ
ಕಂಟೀಪದಕ - ಕತ್ತಿಗೆ ಹಾಕಿಕೊಳ್ಳುವ ಕೊರಳಿನ ಪದಕ
ಕರ - ಕೈ
ಕಂಚುಕ - ಕುಪ್ಪಸ

**ತ**

ತ್ರಿಜಗನ್ಮಾತೆ - ಮೂರುಲೋಕದ ಒಡತಿ - ಲಕ್ಷ್ಮಿ (ಮಧ್ಯ, ಪಾತಾಳ, ಸ್ವರ್ಗ) ಮೂರು ಲೋಕಗಳು

**ದ**

ದ್ವಾರಾವತಿಯ ದೊರೆ - ದ್ವಾರಕಾಪಟ್ಟಣದ ರಾಜ, ಕೃಷ್ಣ
ದಾಕ್ಷಾಯಿಣಿ - ದಕ್ಷಮಹಾರಾಜನ ಕುವರಿ, (ಮಗಳು) ಪಾರ್ವತಿ

**ನ**

ನೇತ್ರ - ಕಣ್ಣು

**ಪ**

ಪಕ್ಷಿವಾಹನ - ಗರುಡವಾಹನ
ಪಾಡಿ - ಹಾಡಿ

**ಮ**

ಮನೋಭಿಮಾನಿ - ಮನಸ್ಸಿಗೆ ಅಭಿಮಾನಿ
ಮುಗಳ್ನಗೆ - ಹಸನ್ಮುಕಿ, ಸಂತೋಷದ ನಗೆ
ಮೂಗುತಿ - ಮೂಗಿನ ಆಭರಣ
ಮಧ್ಯಗೇಹ - ಮಧ್ಯದ ಮನೆ, ಮಧ್ವರ ತಂದೆಯ ಮನೆ

**ರ**

ರಕ್ಷಿಸು - ಕಾಪಾಡು

**ಲ**

ಲೋಕಮಾತೆ - ಲಕ್ಷ್ಮೀದೇವಿ, ಲೋಕದ ಒಡತಿ

**ವ**

ವಕ್ಷ - ಎದೆ
ವಸ್ತ್ರ - ಬಟ್ಟೆ

**ಶ**

ಶಂಭುದೇವ - ಈಶ್ವರ

**ಸ**

ಸದ್ಗುಣ - ಒಳ್ಳೆಯ ಗುಣ
ಸುಜ್ಞಾನ - ಒಳ್ಳೆಯ ಜ್ಞಾನ

# ೯. ಸರಸ್ವತಿಬಾಯಿಯವರ ಕೀರ್ತನೆಗಳು

ಅಂತಕ – ಯಮ
ಅಂದಿಗೆ – ಕಾಲಿನ ಕಡಗ
ಅಗಹರ – ಶಿವ, ಪಾಪನಾಶಕ
ಅಘ – ಪಾಪ
ಅಧ್ವರ – ಯಾಗ
ಅನುಜ – ಸಹೋದರ
ಆಖುವಾಹನ – ಇಲಿಯನ್ನು ವಾಹನವಾಗಿ ಉಳ್ಳವನು, ಗಣೇಶ
ಆಪನ್ನ – ಅಪತ್ತಿಗೆ ಗುರಿಯಾದ
ಕವಿಗೇಯ – ಜ್ಞಾನಿಗಳಿಂದ ಸಂಸ್ತುತ್ಯಮಾನನು
ಕಾವಡಿ – ಅಡ್ಡೆ
ಜಾಗು – ತಡಮಾಡು
ಜಾಯೆ – ಹೆಂಡತಿ
ಠೌಳಿಗಾರ – ಮೋಸಗಾರ
ಡಿಂಭ – ಸಣ್ಣದಾದ
ತನುಜ – ಮಗ
ತರಣಿ – ಸೂರ್ಯ
ತೊಂಡ – ತುಂಟತನ
ತೋಯ – ನೀರು
ದನುಜ – ರಾಕ್ಷಸ
ಧಾವತಿ – ಶ್ರಮ
ನಕ್ರ – ಮೊಸಳೆ
ನವನೀತ – ಬೆಣ್ಣೆ
ಪಾಡಗ – ಕಾಲುಬಳೆ
ಬನ್ನ – ಭಂಗ
ಮಶ್ವ – ಸೊಳ್ಳೆ
ವಧೂಟಿ – ಯುವತಿ
ಸಂಚಿತಾರ್ಥ – ಕೂಡಿಟ್ಟ ಹಣ
ಸೂಕರ – ಹಂದಿ
ಹರದೆ – ಹೆಣ್ಣು
ಹಾಟಕಾಂಬರ – ಶ್ರೀಹರಿ, ರೇಷ್ಮೆವಸ್ತ್ರ ಧರಿಸಿರುವವನು

# ಅನುಬಂಧ-೨

## ಪೂರ್ವಕಥೆಗಳು ಮತ್ತು ಲಘು ಟಿಪ್ಪಣಿಗಳು

### ೧. ಯದುಗಿರಿಯಮ್ಮನವರ ಕೀರ್ತನೆಗಳು

೧

ಗಯಾಕ್ಷೇತ್ರದ ಶ್ರೀ ವಿಷ್ಣುಪಾದ ಕಂಡು ಹಾಡಿರುವ ಸ್ತುತಿಪರ ಕೀರ್ತನೆ. ಇಲ್ಲಿಯ ಅಧಿದೈವ ವಿಷ್ಣುವಿನ ಒಂದು ರೂಪ – ಗದಾಧರ. ಫಲ್ಗುನೀ ಹೆಸರಿನ ನದಿ, ಸಾಯುಜ್ಯ, ಸಾರೂಪ್ಯ, ಸಾಮೋಕ್ಷ, ಸಾಮೀಪ್ಯ – ಮೋಕ್ಷದ ನಾಲ್ಕು ಬಗೆ. ಶ್ರೀವೈಷ್ಣವ ಸಂಪ್ರದಾಯದಲ್ಲಿ ಮುಕ್ತಿಯ ಒಂದು ಪರಿಯಾದ ವಿಷ್ಣುಸಾಯುಜ್ಯ, ಶ್ರೀಹರಿಪಾದಗಳಿಗೆ ಪ್ರಾಶಸ್ತ್ಯ. ಕಾರಣ, ಪ್ರಪತ್ತಿ ಅಥವಾ ಶರಣಾಗತಿಯನ್ನು ಮಾಡುವುದು, ಶ್ರೀಮನ್ನಾರಾಯಣನ ದಿವ್ಯಪಾದಯುಗ್ಮದಲ್ಲಿ. (ಶ್ರೀ ವೇದಾಂತದೇಶಿಕರು "ಶ್ರೀಪಾದುಕಾ ಸಹಸ್ರ" ವೆಂಬುವ ಸಾವಿರ ಸಾಲಿನ ಸ್ತೋತ್ರವನ್ನೇ ಶ್ರೀರಂಗದ ಶ್ರೀರಂಗನಾಥ ಸ್ವಾಮಿಯ ದಿವ್ಯಪಾದಕಮಲಗಳ ಕುರಿತಂತೆ ರಚಿಸಿದ್ದಾರೆ.)

ದ್ಯುಮಣಿಕೋಟಿಕಾಂತಿ = ಕೋಟಿ ಸೂರ್ಯಪ್ರಕಾಶ

೨

ರಾಮ, ಕೃಷ್ಣ, ಶ್ರೀನಿವಾಸರ ಮಹಾತ್ಮೆಯನ್ನು ಕುರಿತು ಹಾಡಿರುವ ಸಾಲುಗಳು. **ಒರಳನೆಳೆದು ಮತ್ತಿ ಮರವನ ಒಡೆದಾ ಶ್ರೀಪಾದ** = ಒಂದು ಒರಳುಕಲ್ಲನ್ನೆಳೆದೊಯ್ದು ಮರಗಳ ರೂಪದಲ್ಲಿದ್ದ ರಾಕ್ಷಸರನ್ನು ಕೊಂದ ಶ್ರೀಕೃಷ್ಣನ ಬಾಲಲೀಲೆಯ ಪ್ರಸಂಗ. ಇಲ್ಲಿ 'ಮತ್ತಿ ಮರ' ವಿಶೇಷ

ಗೋಮಂತ – ಗೋವರ್ಧನ ಪರ್ವತ

ಭಾಷ್ಯಕಾರರು – ಆಚಾರ್ಯ ಶ್ರೀರಾಮಾನುಜರಿಗೆ ಇದ್ದುದೊಂದು ಹೆಸರು.

ಭಗವಂತನ ವಿವಿಧ ಸಂದರ್ಭಗಳ ಮೂಲಕ ಈ 'ಶ್ರೀಪಾದ ಸ್ತುತಿಯು ಶರಣಾಗತಿಯ ನಿಷ್ಠೆಯನ್ನು ಅಭಿವ್ಯಕ್ತಿಸುತ್ತದೆ. ಕೊನೆಯಲ್ಲಿ ಶ್ರೀವೈಷ್ಣವ ದಿವ್ಯ ದೇಶಗಳಾದ ಶ್ರೀರಂಗ, ಕಂಚಿ, ತಿರುಪತಿ ಮತ್ತು ಮೇಲುಕೋಟೆಗಳ ಸ್ತುತಿ ಇದೆ.

೫

೧೯ ನುಡಿಗಳ ದೀರ್ಘರಚನೆ. ಇಲ್ಲಿ ಯದುಗಿರಿ ಅಮ್ಮನವರು ಶ್ರೀವೈಷ್ಣವ ಪರಂಪರೆಗೆ ಅನುಸಾರವಾಗಿ ಗುರು ಶ್ರೀರಾಮಾನುಜರನ್ನು ಸ್ತುತಿಸಿ, ಅನಂತರ ಶ್ರೀಹರಿಯ ದಶಾವತಾರಗಳನ್ನು ವರ್ಣಿಸಿದ್ದಾರೆ.

ಕ್ರೋಢ – ವರಾಹ

ಧ್ರುವ, ಗಜೇಂದ್ರ, ಸುಧಾಮ, ದ್ರೌಪದಿಯ ಸನ್ನಿವೇಶಗಳನ್ನು ತಂದಿದ್ದಾರೆ. ಕೊನೆಯಲ್ಲಿ ಆತ್ಮಾಭ....... ಪಾಮರ ಸ್ತ್ರೀ ಜನ್ಮಕ್ಕೆ ಮುಕ್ತಿಕೋರಿದ್ದಾರೆ.

೬

೩೨ ನುಡಿಗಳ ಮಂಗಳದ ಹಾಡು, ಶ್ರೀಮದ್ರಾಮಾಯಣ, ಮಹಾಭಾರತ, ಭಾಗವತ – ಶ್ರೀಕೃಷ್ಣನ ದಿವ್ಯಲೀಲೆಗಳು, ಎಲ್ಲವೂ ಈ ಕೃತಿಯಲ್ಲಿ ಮೂಡಿ ಬಂದಿವೆ. ಈ ಕೃತಿಗಳ ಎಲ್ಲ ಮುಖ್ಯ ಸಂದರ್ಭಗಳ ಚಿತ್ರಣವಿದೆ. ಅವರುಗಳ ಹೆಸರುಗಳ ಪಟ್ಟಿಯೂ ಇದೆ.

೭

ಶ್ರೀರಂಗದ ಶ್ರೀರಂಗನಾಥಸ್ವಾಮಿಯ ದಿವ್ಯ ಮಹಿಮೆ. ವೇದನಾಯಕಿ ಅಮ್ಮನವರ ಸ್ತುತಿಪರ ಕೀರ್ತನೆ. ಲಕ್ಷ್ಮೀಯನ್ನು ಕುರಿತ ಕೀರ್ತನೆ. ಆಂಡಾಳ್ ಮತ್ತು ಶ್ರೀರಂಗ ಧ್ಯಾನದಲ್ಲಿ ಒಂದೆರಡು ಇದ್ದರೂ ಲಕ್ಷ್ಮೀ ಸ್ತುತಿಗಳು ಕಡಮೆಯೆಂದೇ ಹೇಳಬಹುದು

೮

೧೭ ನುಡಿಗಳ ಕೀರ್ತನೆ. ಶ್ರೀವೈಷ್ಣವ ಆಳ್ವಾರ ಸಂತರ ಪರಂಪರೆಯಲ್ಲಿ ಸೇರಲ್ಪಡವ ಪರಮಭಕ್ತೆ ಗೋದಾದೇವಿ. ಆಂಡಾಳ್ ಈಕೆಯ ಇನ್ನೊಂದು ಹೆಸರು. ಭಗವದ್ಭಕ್ತಿ ಸಾಯುಜ್ಯವನ್ನು ಆಳಿದಾಕೆ ಎಂದೂ ಅರ್ಥ. ಈಕೆಯು ರಚಿಸಿರುವ ತಿರುಪ್ಪಾವೈ (ಸಿರಿನೋಂಪಿ – ಶ್ರೇಷ್ಠವಾದ ವ್ರತ), ಪಾರಾಯಣ ಮಾಡುವ ಪದ, ಸ್ತೋತ್ರ – ಪ್ರಬಂಧಗಳು ಸರ್ವಮಾನ್ಯ ಆದವು. ಮಾರ್ಗಶಿರ ಮಾಸದ ವ್ರತದ ಮೂವತ್ತು ಪದ್ಯ, ಮೂವತ್ತು ದಿನ ಒಂದೊಂದಂತೆ ಹಾಡುವ ರೂಢಿ. ಆಂಡಾಳ್ ಬದುಕು, ಸಂಸ್ಕೃತಿ–ಸದಾಚಾರಗಳ ವಿವರವೂ ತಿಳಿದುಬರುತ್ತದೆ. ಒಡವೆ, ವಸ್ತ್ರ ಸಂಪ್ರದಾಯಗಳ ವರ್ಣನೆಯೂ ಇದ್ದು, ಅಮ್ಮನವರ ಈ ಹಾಡು ವಿಶಿಷ್ಟ

ರಚನೆಯಾಗಿದೆ. (ಕಮ್ಮೆಣ್ಣೆ = ಕಂಪಿನೆಣ್ಣೆ, ತೈಲ) ಜಾನಪದ ಧಾಟಿಯಲ್ಲಿದೆ. ಎರಡನೇ ನುಡಿ ಪುನರಾವರ್ತನೆ ಶೈಲಿಯಲ್ಲಿದೆ.

೧೧

ತನ್ನ ಪರಮಪ್ರಿಯ ಭಗವಂತ ಶ್ರೀರಂಗದ ಶ್ರೀರಂಗನಾಥಸ್ವಾಮಿಯನ್ನು ಪಾರ್ಥಸಾರಥಿಯಾಗಿ ವಿವರ ಕುರಿತ ಹಾಡು. ದೇವಾಲಯ ಪ್ರವೇಶದಿಂದ ಹಿಡಿದು ದೇವತಾಮೂರ್ತಿಯ ದರ್ಶನದವರೆಗಿನ ಅನುಕ್ರಮ ವರ್ಣನೆ ಇಲ್ಲಿಯ ವಿಶೇಷ. ಕೈರವೀಣೀ (= ಕಾವೇರಿ)ಯಲ್ಲಿ ಮಿಂದು ದೇವಾಲಯಕ್ಕೆ ಬರುವಾಗ ಸಿಗುವ ಆನೆ, ಮಾರುತಿ ಆಚಾರ್ಯ, ಆಳ್ವಾರರು (ಕಾರಿಮಾರಿ ಪುತ್ರ = ನಮ್ಮಾಳ್ವಾರ್ (ಭಕ್ತಿಸಾರ) ಮತ್ತು ವಿವಿಧ ದೇವತಾ ಮೂರ್ತಿಗಳನ್ನು ದರ್ಶಿಸಿ ಕೊನೆಗೆ ಶೇಷಶಾಯಿಯ ಪಾದಾದಿಕೇಶದರ್ಶನ ಮಾಡುವ ಸುಂದರ ವರ್ಣನೆಯಿದೆ).

೧೩

ಭಕ್ತೆಯ ದೀನಭಾವ, ಆರ್ತಭಾವ ಪ್ರಕಟಿಸುವ ರಚನೆ. *'ಪಂಚೇಂದ್ರಿಯಗಳೆನ್ನ / ಬಹುಬೇಗ ವಂಚನೆ ಮಾಡುತಿದೆ / ಪಂಚಬಾಣನಪಿತ / ಪರಮಪುರುಷ ರಂಗ ಅಕಿಂಚನನಾದೆ ನಿನ್ನಂಘ್ರಿಯ ಸೇರಿಸು ॥'* ಎಂಬುವಲ್ಲಿ ಪ್ರಾಸ ಗಮನೀಯ. ನಿಮಿಷ – ಎಂಬುದರ ಇತ್ತೀಚಿನ 'ಸಮಯ' ಪದಪ್ರಯೋಗವಿಲ್ಲಿದೆ. *'ಭಕ್ತವತ್ಸಲನೆಂಬೊ ಬಿರುದು ಈಗ ವ್ಯರ್ಥವಾಯಿತೆ'* ಇಲ್ಲಿ ಕನಕದಾಸರ ಕೀರ್ತನೆಯ ಆಶಯವಿದೆ ಅನ್ನಿಸುತ್ತದೆ.

ಗಾಡನೆ = ಬೇಗ (ಶೀಘ್ರವಾಗಿ) ಎಂಬುವುದರ ಗ್ರಾಮ್ಯ ಪದ.

೧೪

ಶ್ರೀರಂಗನಾಥನ ಸ್ತುತಿ. *'ಆರು ಜನ ಕಳ್ಳರೂ / ಯೆನ್ನಲಿ ಸೇರಿ ಬಾಧಿಸುತಿಹರೂ /'* ಎಂಬುದಾಗಿ ಅರಿಷಡ್ವರ್ಗಗಳನ್ನು ತಿಳಿಸಿರುವ ಪರಿ ಅನನ್ಯವಾದದ್ದು. (ಕಾಮ, ಕ್ರೋಧ, ಲೋಭ, ಮದ, ಮತ್ಸರ, ಮೋಹ)

೧೫

ಶ್ರೀರಂಗನಾಥನ ಸ್ತುತಿಪರ ಹಾಡು. *'ಸುಖದುಃಖ ಮಾನಾಪಮಾನಂಗಳೆಲ್ಲಾ ನಮಮ ಮಾಡುವದೆಂದಿಗೇ ರಂಗಯ್ಯ'* ಎಂಬುವಲ್ಲಿರುವ ಭಾವ ಮುಖ್ಯ. ಇದು ಸಾತ್ವಿಕತ್ಯಾಗದ ಪರಿಕಲ್ಪನೆ, ಶರಣಾಗತಿ ತತ್ವದ ಅಭಿವ್ಯಕ್ತಿ. 'ನಮಮ' ಎಂದರೆ ನನ್ನದಲ್ಲ ಎಂಬುದು, ಇಲ್ಲಿ ಅಲಿಪ್ತ ಭಾವನೆ ಇದೆ.

೧೭

ಒಡವೆ, ಆಭರಣ ಧರಿಸುವ ಬಾಲೆಯರಿಗೊಂದು ಕಿವಿಮಾತು ಇಲ್ಲಿದೆ. ವಾಲೆ, ಬುಗುಡಿ, ಕತ್ತರಿಬಾವುಲಿ, ಹಾರ, ಒಡ್ಯಾಣ, ಎಲ್ಲದರ ವಿವರ ಬರುತ್ತದೆ. *'ಟಂಶಣಿಸುವ ಎಂಟು ರತ್ನದ ಪದಕವು'* . . . . ಎಂಬುವ ಸಾಲಿನಲ್ಲಿರುವ ಧ್ವನಿ ಗಮನಾರ್ಹ. ಇಲ್ಲಿಯ ಸಂಖ್ಯಾಪದಗಳು ಕೇವಲ ಆಭರಣ ಸೂಚನೆಯಾಗಿರದೆ ವಿಶೇಷಾರ್ಥದಲ್ಲೂ ಇರುವಂತಿವೆ.

೧೯

ಕಾಂಚೀಪುರವು ತಮಿಳುನಾಡಿನ ಯಾತ್ರಾಸ್ಥಳ. ವಿಷ್ಣುಕಂಚಿಯನ್ನು 'ಕರಿಗಿರಿ' 'ಹಸ್ತಿಶೈಲ' ಎಂದು ಕರೆಯುವ ರೂಢಿ ಇದೆ. ಇಲ್ಲಿಯ ಅಧಿದೈವ ಶ್ರೀವರದರಾಜ. ಆ ದೇವರ ಸ್ಮರಣೆ ಇಲ್ಲಿದೆ.

೨೦

ಶಿವಮೊಗ್ಗಕ್ಕೆ ೫–೬ ಮೈಲು ದೂರದಲ್ಲಿ, ತುಂಗಾನದಿ ತೀರದಲ್ಲಿರುವ, ಗುಡ್ಡದ ಮೇಲಿರುವ ಪ್ರಾಚೀನ ದೇವಾಲಯ ಪಿಳ್ಳನಗಿರಿ ಶ್ರೀವೆಂಕಟರಮಣನ ದೇವಾಲಯ. ಉದ್ಭವಮೂರ್ತಿ ಶ್ರೀರಂಗನಾಥ. ಆರಾಧ್ಯದೈವ ಇಂದ್ರಪ್ರತಿಷ್ಠಿತ ಶ್ರೀ ಶ್ರೀನಿವಾಸ. ಈ ಕ್ಷೇತ್ರಧದೀಶನ ಸ್ತುತಿ ಇಲ್ಲಿ ಸುಂದರವಾಗಿ ಮಾಡಿದೆ.

೨೧

ಸುಪ್ರಸಿದ್ಧ ಉಡುಪಿಯ ಶ್ರೀಕೃಷ್ಣದರ್ಶನಗೈದ ರಸಘಳಿಗೆಯಲ್ಲಿ ಬರೆದಿರುವ ಹಾಡು. ಶ್ರೀ ಶ್ರೀಪಾದರಾಜರ 'ಕಂಗಳಿದ್ಯಾತಕೊ ಕಾವೇರಿರಂಗನ್ನ ನೋಡದ' ಎಂಬು ರಚನೆಯನ್ನು ಹೋಲುತ್ತದೆ. ಮಧ್ವರಾಯಗೊಲಿದವನನ್ನಾಗಿ ಅಷ್ಟಮಠಗಳಿಂದ ಪೂಜಿಸಲ್ಪಟ್ಟವನನ್ನಾಗಿ, ವಿವಿಧ ಆಭರಣಯುಕ್ತನಾದ ಕಡೆಗೋಲು ಕೃಷ್ಣನನ್ನು ಸುಂದರವಾಗಿ ಚಿತ್ರಿಸಿದೆ.

೨೨

ತ್ರಿವೇಣಿ ಸಂಗಮ – ಅಲಹಾಬಾದ್ – ಪ್ರಯಾಗ ಕ್ಷೇತ್ರ – ಗಂಗೆ, ಯಮುನೆ, ಗುಪ್ತಗಾಮಿನಿ ಸರಸ್ವತಿಯರ ಸ್ತುತಿ. ಗಂಗೆಯುದಿಸಿದ ಪರಿ ವರ್ಣನೆಯಿದೆ. ೨೩ರಲ್ಲಿ ಕೃಷ್ಣವೇಣಿಯಾಗಿ ನದಿಯುದಿಸಿದುದನ್ನೂ ವರ್ಣಿಸಿದೆ.

೨೪

ಮಂಡ್ಯ ಜಿಲ್ಲೆಯ ಮೇಲುಕೋಟೆ – ಸುಪ್ರಸಿದ್ಧ ಶ್ರೀವೈಷ್ಣವ ದಿವ್ಯಕ್ಷೇತ್ರ, ಯದುಶೈಲ, ಯಾದವಗಿರಿ, ವೇದಾದ್ರಿ, ದಕ್ಷಿಣಬದರಿ, ಯತಿಶೈಲ – ಎಂದೆಲ್ಲ ಕರೆಸಿಕೊಳ್ಳುವ

ಮೇಲುಕೋಟೆಯ ಶ್ರೀ ತಿರುನಾರಾಯಣನ ಸ್ತುತಿಪರ ಕೀರ್ತನೆ. ಆಯಾ ಹೆಸರುಗಳು ಬಂದುದರ ಪುರಾಣ ಕಲ್ಪನೆಯ ಚಿತ್ರಣವಿದೆ.

### ೨೫

*'ರಂಗನಾಥ ಎನ್ನ ಕಣ್ಣಾಳಿದುರ ನಿಂತಿದ್ದಂತಿದೇ'* ಶ್ರೀರಂಗದ ಶ್ರೀರಂಗನಾಥನನ್ನು ವರ್ಣಿಸುವ ಕೃತಿ. ಪುರಂದರದಾಸರ ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೇ ಎಂಬುವುದನ್ನು ನೆನಪಿಸುವ ರಚನೆಯಾದರೂ ಸ್ವಂತಿಕೆಯಿದೆ.

### ೨೬, ೨೭

ತಿರುಪತಿಯ ಶ್ರೀನಿವಾಸ ಸ್ತುತಿಗಳು. ಎರಡೂ ಸುಂದರವಾಗಿವೆ. ಮೊದಲನೆಯದರಲ್ಲಿ ದೈವಮಹಿಮೆಯ ಸ್ತುತಿಯಿದ್ದರೆ, ಎರಡನೆಯದರಲ್ಲಿ ಮೂರ್ತಿವರ್ಣನೆಯಿದೆ.

### ೨೮

ಶೃಂಗೇರಿ ಶಾರದೆಯ ವರ್ಣನೆ ಚೆನ್ನಾಗಿ ಮೂಡಿ ಬಂದಿದೆ. ಮೂರ್ತಿವರ್ಣನೆಯನ್ನು ಅತ್ಯಂತ ಆಪ್ಯಾಯಮಾನವಾಗಿ ಬಿಡಿಸಿದ್ದು ಅಂತ್ಯದಲ್ಲಿ ಆತ್ಮನಿವೇದನೆಯಿದೆ.

### ೨೯–೩೦

ಶ್ರೀರಂಗಕ್ಷೇತ್ರ ಮಹಾತ್ಮ್ಯೆ. ಅಲ್ಲಿ ನಡೆಯುವ ವಿವಿಧ ಸೇವೆ, ಉತ್ಸವಗಳು, ಭಕ್ತರಿಗೆ ತಂಗಲು ವಸತಿ, ದಿವ್ಯಪ್ರಬಂಧಗೋಷ್ಠಿ. ಆಳ್ವಾರ್ – ಆಚಾರ್ಯರ ಸ್ತುತಿಗಳು ಇವೆಲ್ಲದರಿಂದ ಕೂಡಿರುವ ಶ್ರೀವೈಷ್ಣವ ಪರಂಪರೆಯ ರಚನೆಗಳು. ಪ್ರತಿ ತಿಂಗಳು ನಡೆಯುವ ಉತ್ಸವ ಕಲಾಪಗಳು ಇಲ್ಲಿವೆ. ಚೈತ್ರಮಾಸದಿಂದ ಎಲ್ಲ ಮಾಸದ ಉತ್ಸವ, ಧನುರ್ಮಾಸದ ಸೇವೆ, ದಿವ್ಯಪ್ರಬಂಧಗೋಷ್ಠಿ. ವೈಕುಂಠ ಏಕಾದಶಿ ಉತ್ಸವ, ಧನುರ್ಮಾಸದ ಸೇವೆ, ದಿವ್ಯಪ್ರಬಂಧಗೋಷ್ಠಿ ಕೊಟ್ಟಿಗೋತ್ಸವ, ಅರೈಯರ್ ಹಾಡು, ಮೋಹಿನಿಯ ಅಲಂಕಾರ, . ಮಂಗಳದ ನುಡಿಗಳು, ಹೀಗೆ ವೈವಿಧ್ಯಮಯವಾಗಿರುವ ಶ್ರೀರಂಗ ಮಹಾತ್ಮ್ಯೆ ಕೀರ್ತನ ಸಂಚಯಕ್ಕೆ ಯದುಗಿರಿಯಮ್ಮ ಹಾಡಿರುವ ಮಂಗಳದ ನುಡಿಗಟ್ಟಾಗಿದೆ.

## ೨. ಶಾಂತಿಬಾಯಿಯವರ ಕೀರ್ತನೆಗಳು

೧

**(ಅ) ಈಡೆ ಪಿಂಗಳ ಜೋಡಿಗಂಡಿ –**

ಮಾನವನ ದೇಹದಲ್ಲಿರುವ ವಿಶಿಷ್ಟ ರೀತಿಯ ನಾಡಿಗಳು ಈಡಾ ಮತ್ತು ಪಿಂಗಳ. ಜೋಡಿ ನಾಡಿಗಳ ನಡುವೆ ಹಾದು ಹೋಗುವ ಸುಷುಮ್ನಾ ಎಂಬ ನಾಡಿ ಬೆನ್ನ ಕೆಳಗಿನ ತುದಿಯಿಂದ ನೆತ್ತಿಯವರೆಗೂ ಸಾಗುತ್ತದೆ.

**(ಆ) ಆರು ಚಕ್ರಗಳು –**

ಯೋಗಿಯಾದವನು ಈ ಆರುಪಕ್ರಗಳನ್ನು ಭೇದಿಸಿ ತುಟ್ಟತುದಿಯ ಸಹಸ್ರದಳದನೆಲೆಗೆ ಮಾನಸಿಕವಾಗಿ ಏರಿದಾಗ ಪರಮಾನಂದವಾಗುತ್ತದೆಂದು ಯೋಗ ಸಾಧನೆಯಲ್ಲಿ ತಿಳಿಸಿದೆ.

ಆರು ಚಕ್ರ, ನಾಭಿತುದಿ, ಉರಸ್ಥಳ, ಕಂಠ, ಬ್ರೂಮಧ್ಯೆ, ಶಿರಸ್ಸು

೩

**ಮಂದರಧರ** : ದೇವದಾನವರು ಕ್ಷೀರಸಾಗರವನ್ನು ಕಡೆದು ಅಮೃತವನ್ನು ಪಡೆದರು. ಸಮುದ್ರಮಥನ ಕಾಲದಲ್ಲಿ ಮಂದರ ಪರ್ವತವನ್ನು ಕಡಗೋಲಾಗಿ ಕಡೆಯಲು ಉಪಯೋಗಿಸುವಾಗ ಭಾರದಿಂದ ಮುಳುವಾಗ ಶ್ರೀಹರಿಯು ಆಮೆಯ ರೂಪವನ್ನು ತಾಳಿ ಗಟ್ಟಿಯಾಗಿದ್ದ ಡುಬ್ಬದ ಮೇಲೆ ಪರ್ವತವನ್ನು ಧರಿಸಿದನು. ಆದ್ದರಿಂದ ಮಂದರಧರ ಎಂದು ಹೆಸರುಂಟು.

೮

**ಗಜರಾಜ ಸಶುವಾ ಹಿಂದೆ ಭಜಿಸಿದಾಗ...ಕಾಯ್ದೆ:** ಪಾಂಡ್ಯ ದೇಶದ ಧೂರೆ ಇಂದ್ರದ್ಯುಮ್ನ, ಮಹಾವಿಷ್ಣು ಭಕ್ತ, ಪೂಜಾ ನಿರತನಾಗಿದ್ದಾಗ ಅಗಸ್ತ್ಯ ಮುನಿ ಬಂದದ್ದು ಕಾಣದೆ ಅವನ ಶಾಪಕ್ಕೆ ಒಳಗಾಗಿ ಗಜೇಂದ್ರನಾಗಿ ಹುಟ್ಟಿದ. ಕೊಳದಲ್ಲಿ ನೀರು ಕುಡಿಯಲು ಹೋದಾಗ ಮೊಸಳೆಯೊಂದು ಅವನ ಪಾದ ಹಿಡಿಯಿತು. ಎಷ್ಟು ಸೆಣಸಿದರೂ ಅದರಿಂದ ಪಾರಾಗಲಾರದೆ ಆದಿಮೂಲಾ ಎಂದು ಕರೆಯಲು ವಿಷ್ಣು ಬಂದು ಮೊಸಳೆಯನ್ನು ಚಕ್ರದಿಂದ ಭೇದಿಸಿ ಗಜನಿಗೆ ಸದ್ಗತಿಯಿತನು.

೧೦

**ವೇದನಾಲ್ಕರ ಕದ್ದಂತಾದ್ವೈತ್ಯನ:** ಅಕ್ಪೌರುಷೇಯವಾದ ಗ್ರಂಥರಾಶಿಯಾದ ವೇದಗಳನ್ನು ಕೃಷ್ಣದ್ವೈಪಾಯನ ಮುನಿಯು ವಿಭಾಗ ಮಾಡಿ ತನ್ನ ಶಿಷ್ಯರ ಮೂಲಕ ಪ್ರಚಾರ ಮಾಡಿದ.

ಕಮನೆಂಬ ರಾಕ್ಷಸ ಅದನ್ನು ಅಪಹರಿಸಿಕೊಂಡು ನೀರಿನೊಳಗೆ ಅಡಗಿಸಿಟ್ಟನು. ವಿಷ್ಣುವು ಮೀನಿನ ಅವತಾರವೆತ್ತಿ ಆ ರಕ್ಕಸನನ್ನು ಕೊಂದು ವೇದಗಳನ್ನು ಮೇಲೆತ್ತಿ ತಂದನು.

೧೬

**(ಅ) ದಶರಥನುದರದಿ ಶಿಷುವಾಗಿ ಜನಿಸಿದೆ:** ಸೂರ್ಯವಂಶದ ಆಯೋಧ್ಯಾನಗರಿಯ ರಾಜ ದಶರಥ ಮಹಾರಾಜ ವೃದ್ಧನಾದರೂ ಮಕ್ಕಳಿರಲಿಲ್ಲ. ಋಷ್ಯಶೃಂಗನ ಮೂಲಕ ಪುತ್ರಕಾಮೇಷ್ಠಿ ಯಾಗವನ್ನು ಮಾಡಿದಾಗ ಯಜ್ಞಪುರಷನು ಚರುವಿನಿಂದ ಕೂಡಿದ ಪಾತ್ರೆಯನ್ನು ದಶರಥನಿಗೆ ನೀಡಿದ, ಅದರ ಸೇವನೆಯಿಂದ ದಶರಥನ ಮೂವರು ಪತ್ನಿಯರೂ ಗರ್ಭಧರಿಸಿ ಮಕ್ಕಳನ್ನು ಪಡೆದರು.

ಕೌಸಲ್ಯೆಯ ಗರ್ಭದಲ್ಲಿ ಸಾಕ್ಷಾಕ್ ನಾರಾಯಣನೇ ಶಿಶುವಾಗಿ ಜನ್ಮ ತಳೆದನು.

**(ಆ) ಅಲ್ಲೇ ಕೌಶಿಕಯಾಗವೆಲ್ಲ ಸಲಹಿದ ಧೀರನೆ:** ಮಾರೀಚ ಸುಬಾಹುಗಳು ವಿಶ್ವಾಮಿತ್ರ ಮುನಿಯ ಯಜ್ಞಯಾಗಾದಿಗಳಿಗೆ ಅಡ್ಡಿಯುಂಟು ಮಾಡುತ್ತಿದ್ದರು. ವಿಶ್ವಾಮಿತ್ರರು ರಾಮಲಕ್ಷ್ಮಣರನ್ನು ಕರೆತಂದು ಅವರ ಮೂಲಕ ಯಾಗಭಂಗವಾಗದಂತೆ ರಕ್ಷಣೆ ನೀಡಿದರು. ಆಗ ಕಾಡಲು ಬಂದ ಸುಬಾಹು ರಾಮನ ಬಾಣಕ್ಕೆ ಬಲಿಯಾದ. ಮಾರೀಚ ಬಾಣಕ್ಕೆ ಸಿಗದೆ ತಪ್ಪಿಸಿಕೊಂಡು ಮುಂದೆ ಚಿನ್ನದ ಜಿಂಕೆಯಾಗಿ ಸೀತಾಹರಣ ಕಾಲದಲ್ಲಿ ರಾವಣನಿಗೆ ನೆರವಾಗಿ ರಾಮ ಬಾಣದಿಂದಲೇ ಹತನಾದನು.

**(ಇ) ಮಿಥುಳಾಪುರದಿ ಬಂದು ಅತುಳ ಧನವನ್ನು ಮುರಿದು:** ಮಿಥಿಲಾ ನಗರದ ರಾಜ ಜನಕನು ಯಜ್ಞಭೂಮಿಯನ್ನು ಉಳುತ್ತಿರುವಾಗ ನೇಗಿಲಿನ ತುದಿಯಲ್ಲಿ ಸಿಕ್ಕ ಮಗುವೇ ಸೀತಾದೇವಿ. ಅತುಳ ಸಂತೋಷದಿಂದ ಆ ಮಗುವನ್ನು ಸಾಕಿ,ಬೆಳೆಸಿ, ತನ್ನಲ್ಲಿದ್ದ ಶಿವಧನನ್ನು ಹೆದೆ ಏರಿಸಿ ಮುರಿದವಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡುವುದಾಗಿ ಪ್ರತಿಜ್ಞೆ ಮಾಡಿದ. ರಾಮನು ಮಿಥಿಲಾಪುರಕ್ಕೆ ಬಂದು ಶಿವಧನಸ್ಸನ್ನು ಮುರಿದನು. ಅವನ ಜೊತೆ ವಿವಾಹವಾಯಿತು.

೧೮

**ಗಜಸುರ ವರನಿತ್ತು ಗಜಚರ್ಮಧಾರಗೆ:** ಗಜವೆಂಬುವನೇ ಮಹಿಷಾಸುರನ ಮಗ. ರಾಕ್ಷಸನಾದ ಇವನು ಶಿವನನ್ನು ಪ್ರಾರ್ಥಿಸಿ ಬೇಡಿಕೊಂಡಂತೆ ಶಿವನು ಇವನನ್ನು ಕೊಂದು ಅವನ ಚರ್ಮವನ್ನು ವಸ್ತ್ರವನ್ನಾಗಿ ಧರಿಸಿದನು.

೧೯

**(ಅ) ಮಾನಿನಿ ದ್ರೌಪತಿಯ ಮಾನವಕಾಯ್ದೆ.:** ದ್ರುಪದರಾಜನ ಪುತ್ರಿ ದ್ರೌಪತಿ. ಪಾಂಡವರ ಪತ್ನಿ. ಯುದೀಷ್ಟರನು ದುರ್ಯೋಧನ ಶಕುನಿಗಳ ಸಂಚಿಗೆ ಬಲಿಯಾಗಿ ಜೂಜಾಡಿ ರಾಜ್ಯ ಸಂಪತ್ತನ್ನು ಕಳೆದು ಕೊಂಡನು. ದುರ್ಯೋಧನನ ಆದೇಶದಂತೆ ತಮ್ಮನಾದ ದುರುಳ ದುಶ್ಯಾಸನನು ದ್ರೌಪತಿಯನ್ನು ಅವಮಾನಿಸಿ ರಾಜ ಸಭೆಗೆ ಎಳೆತಂದನು. ದಾಸಿಯಾದವಳ ವಸ್ತ್ರವನ್ನು ಸೆಳೆಯತೊಡಗುವಂತೆ ಆಜ್ಞಾಪಿಸಿದನು. ಸಭೆಯಲ್ಲಿ ನೆರೆದಿದ್ದ ಗುರುಹಿರಿಯರು, ಪತಿಗಳಾರೂ ರಕ್ಷಿಸದಾದರು. ಕೃಷ್ಣಾ ಅನಾಥ ರಕ್ಷಕಾ ಎಂದು ಎರಡು ಕೈಗಳನ್ನ ಎತ್ತಿ ಕರೆದಾಗ ಕೃಷ್ಣ ಅಭಯವನ್ನ ನೀಡಿ ಉಟ್ಟ ವಸ್ತ್ರ ಅಕ್ಷಯವಾಗುವಂತೆ ಕರುಣಿಸಿ ದ್ರೌಪತಿಯ ಮಾನ ಸಂರಕ್ಷಣೆ ಮಾಡಿದ.

**(ಆ) ಶಬರಿಯ ಭಕ್ತಿಗೆ ಮೆಚ್ಚಿ ನೀ ಬಂದೆಯೋ:** ರಾಮನ ಬರುವಿಗಾಗಿಯೇ ಹಗಲಿರುಳು ತಪಸ್ಸು ಮಾಡುತ್ತಿದ್ದ ಶಬರಿಯ ಭಕ್ತಿಗೆ ಮೆಚ್ಚಿ ಬಂದ ರಾಮ ಅವಳ ರುಚಿಗಾಗಿ ಸವಿದುಂಡ ಹಣ್ಣನ್ನೇ ಪ್ರೀತಿ ಭಕ್ತಿ ವಾತ್ಸಲ್ಯದಿಂದ ತಿಂದು ಅವಳಿಗೆ ಸದ್ಗತಿಯನ್ನು ನೀಡಿದ ಪ್ರಸಂಗ ಮುಂದೆಯೂ ವಿವರಿದಸಲಾಗಿದೆ.

೨೭

**ಅ. ಕಡಹದಾ ಮರನೇರಿ ಮಡುವ ಧುಮಿಕಿದೆಯೋ ಪಿಡಿದು ಕಾಳಿಂಗನ ತುಳಿದ್ಯೊ:** ಕಶ್ಯಪನ ಮಗ ಕಾಳೀಯನೆಂಬ ಸರ್ಪ ಗರುಡನಿಂದ ತಪ್ಪಿಸಿಕೊಳ್ಳಲು ಮಡುವಿನಲ್ಲಿ ಅಡಗಿ ಕೊಂಡಿದ್ದನು. ಇದನ್ನು ಕಂಡ ದೇವತೆಗಳು ಮಡುವು ವಿಷಮಯವಾಗಿ ಜಲಚರ ಪ್ರಾಣಿಗಳು ವಿಷಪೂರಿತವಾಗುವ ನೀರನ್ನು ಕುಡಿದು ಪ್ರಾಣಬಿಡುವುದೆಂಬ ಭೀತಿಯುಂಟಾಗಿ ಕೃಷ್ಣನನ್ನು ಮೊರೆ ಹೊಕ್ಕರು. ಆಗ ಕೃಷ್ಣನು ಜನರ ಸಂರಕ್ಷಣೆ ಹಾಗೂ ಅವರ ಮೊರೆಯನ್ನು ಲಾಲಿಸಿ ಮಡುವಿನಲ್ಲಿ ಧುಮುಕಿ ಕಾಳಿಂಗನ ಫಣಿಯನ್ನು ತುಳಿದು ನಾಟ್ಯವಾಡಿ ಧ್ವಂಸ ಮಾಡಲಾರಂಭಿಸಿದ. ಕಾಳಿಯ ಪತ್ನಿಯ ಬೇಡಿಕೆಯಿಂದಾಗಿ ಅವನನ್ನು ಬೇರೆಡೆಗೆ ಕಳುಹಿದ ಪ್ರಸಂಗ.

**(ಆ) ಪುಂಡಲೀಕನ ಭಕ್ತಿಗೆ ಮೆಚ್ಚಿ.:** ವಿಷ್ಣುಭಕ್ತನಾದ ಪುಂಡಲೀಕನು ಮಾತಾಪಿತೃಗಳ ಸೇವೆಯಲ್ಲಿ ನಿರತವಾಗಿದ್ದನು. ಅವನ ಭಕ್ತಿಗೆ ಮೆಚ್ಚಿ ಪಾಂಡುರಂಗ ಅಲ್ಲಿ ಬಂದಾಗ ಮಾತಾಪಿತೃಗಳ ಸೇವೆಯೇ ಹರಿಯ ಸೇವೆಯೆಂದರಿತು ಮಗ್ನನಾಗಿದ್ದರೂ ಪಾಂಡುರಂಗನ ಬಳಿಯಲ್ಲಿದ್ದ ಒಂದು ಇಟ್ಟಿಗೆಯನ್ನು ಸರಿಸಿ ಸ್ವಲ್ಪಕಾಲ ನಿಲ್ಲವಂತೆ ಹೇಳಿದ. ಭಕ್ತನ ಪ್ರೀತಿಗೆ ಪಾತ್ರನಾದ ಪಾಂಡುರಂಗ ಇಟ್ಟಿಗೆಯ ಮೇಲೆ ಕಾದುನಿಂತ.

ಇದು ಭಗವಂತನಿಗೂ ಭಕ್ತನಿಗೂ ಇದ್ದ ಸಂಭಂಧ. ಇದರಂತೆ ಚಂದ್ರಭಾಗಾ ನದಿಯ ದಡದಲ್ಲಿ ಪಂಡರಾಪುರದಲ್ಲಿ ಪಾಂಡುರಂಗನ ಗುಡಿ ಇದೆ. ಅಲ್ಲಿ ಪಾಂಡುರಂಗ ಇಟ್ಟಿಗೆ ಮೇಲೇ ನಿಂತಿರುವ ದೃಶ್ಯ ಮನೋಹರವಾಗಿದೆ.

# ೩. ಓರಬಾಯಿಲಕ್ಷ್ಮೀದೇವಮ್ಮ ಅವರ ಕೀರ್ತನೆಗಳು

## ದಶಾವತಾರ ವರ್ಣನೆ

೧

೧. ಮುತ್ತಿನಂತ ದೇಹ :

**ಮತ್ಸ್ಯಾವತಾರ:** ಹಯಗ್ರೀವನೆಂಬ ರಾಕ್ಷಸನು ಬ್ರಹ್ಮನ ಬಾಯಿಂದ ಬಂದ ವೇದಗಳನ್ನು ಅಪಹರಿಸಿ ಪ್ರಳಯ ಜಲದಲ್ಲಿ ಬಚ್ಚಿಟ್ಟುಕೊಂಡಿದ್ದಾಗ ಶ್ರೀಹರಿಯು ಮತ್ಸ್ಯರೂಪವನ್ನು ಧರಿಸಿ ವೇದಗಳನ್ನು ಹಿಂದಕ್ಕೆ ತರುತ್ತಾನೆ. ಇದನ್ನು ಲಕ್ಷ್ಮೀದೇವಮ್ಮನವರು ಸೊಗಸಾಗಿ ಚಿತ್ರಿಸಿದ್ದಾರೆ.

೨. ಪೊತ್ತು ಗಿರಿಯ ಬೆನ್ನಿನಿಂದ

**ಕೂರ್ಮಾವತಾರ:** ದೇವಾಸುರರು ಕ್ಷೀರಸಾಗರವನ್ನು ಮಥಿಸಿ ಅದರಿಂದ ಅಮೃತವನ್ನು ಪಡೆಯುಲಿಕ್ಕಾಗಿ ಮಂದರಪರ್ವತವನ್ನು ಕಡೆಗೋಲಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಮಂದರ ಪರ್ವತವನ್ನು ಕ್ಷೀರಸಾಗರದಲ್ಲಿಳಿಸಿದಾಗ ಅದು ಮುಳುಗಿ ಹೋಗಲಾರಂಭಿಸುತ್ತದೆ. ಆಗ ಶ್ರೀಹರಿಯು ಕೂರ್ಮರೂಪವನ್ನು ತಾಳಿ ಆ ಪರ್ವತವನ್ನು ಬೆನ್ನಿನ ಮೇಲೆ ಹೊರುತ್ತಾನೆ. ಆಗ ದೇವಾಸುರರು ಸಾಗರ:ವನ್ನು ಮಥಿಸುತ್ತಾರೆ.

೩. ಸುತ್ತಿಲ್ಯೆದಭೂಮಿ ತಂದು :

**ವರಾಹ ಅವತಾರ:** ಹಿರಣ್ಯಾಕ್ಷನೆಂಬ ದೈತ್ಯನು ಭೂಮಿಯನ್ನು ಚಾಪೆಯಂತೆ ಸುತ್ತಿ ಸಮುದ್ರದ ತಳಕ್ಕೆ ತೆಗೆದುಕೊಂಡುಹೋಗುತ್ತಿದ್ದಾಗ ಶ್ರೀಹರಿಯು ವರಾಹ ರೂಪದಿಂದ ಆ ದೈತ್ಯನನ್ನು ಸಂಹರಿಸಿ ಭೂಮಿಯನ್ನು ತನ್ನ ಕೋರೆದಾಡಿಗಳಿಂದ ಮೇಲೆತ್ತಿ ತರುತ್ತಾನೆ.

೪. ಮತ್ತೆ ಹಿರಣ್ಯಾನ ಕೊಂದಾ :

**ನರಸಿಂಹಾವತಾರ:** ಭಗವಂತನ ಭಕ್ತನಾದ ಪ್ರಹ್ಲಾದನ ತಂದೆ ಹಿರಣ್ಯಕಶಿಪು ಶ್ರೀಹರಿಯ ಪರಮದ್ವೇಷಿ. ಅವನು ಪ್ರಹ್ಲಾದನಿಗೆ ನಾನಾ ರೀತಿಯಲ್ಲಿ ಹಿಂಸೆಕೊಟ್ಟು ನಿನ್ನ ಪರಮಾತ್ಮನು ಸರ್ವವ್ಯಾಪಿಯಾಗಿ ಇದ್ದಲ್ಲಿ ಈ ಕಂಭದಲ್ಲಿ ಅವನನ್ನು ತೋರಿಸು ಎಂದು ಗರ್ಜಿಸಿದಾಗ ಪ್ರಹ್ಲಾದನ ಮೊರೆಗೆ ಓಗೊಟ್ಟು ಶ್ರೀ ಹರಿಯು ಕಂಭದಿಂದ ಮೂಡಿ ಬಂದು ಹಿರಣ್ಯಕಶಿಪುವಿನ ಸಂಹಾರ ಮಾಡುತ್ತಾನೆ.

೫. ಪುಟ್ಟಬ್ರಾಹ್ಮಣನಾಗಿ ಬಂದು :

**ವಾಮನಾವತಾರ:** ಯಾಗ ಮಾಡುತ್ತಿದ್ದ ಬಲಿಚಕ್ರವರ್ತಿಯ ಬಳಿಗೆ ಚಿಕ್ಕವನಾದ ವಟು ವೇಷದಿಂದ ಶ್ರೀಹರಿಯು ಕೇವಲ ಮೂರು ಹೆಜ್ಜೆ ಭೂಮಿಯನ್ನು ಬೇಡುತ್ತಾನೆ. ಬಲಿಯು

ಧಾರಾಪೂರ್ವಕವಾಗಿ ಮೂರು ಹೆಜ್ಜೆಗಳನ್ನು ದಾನ ಮಾಡಿದಾಗ ವಾಮನನು ತ್ರಿವಿಕ್ರಮನಾಗಿ ಒಂದು ಹೆಜ್ಜೆಯಿಂದ ಇಡಿಯ ಭೂಮಂಡಲವನ್ನೂ, ಮತ್ತೊಂದು ಹೆಜ್ಜೆಯಿಂದ ಆಕಾಶವನ್ನೂ ಅಳೆದು ಇನ್ನೊಂದು ಹೆಜ್ಜೆಯನ್ನು ಬಲಿಯು ಇಚ್ಚಿಸಿದಂತೆ ಅವನ ತಲೆಯ ಮೇಲಿಟ್ಟು ಅವನನ್ನು ಸುತಳಕ್ಕೆ ಅದುಮುತ್ತಾನೆ.

೬. ದುಷ್ಟಕ್ಷತ್ರಿಯೇರಕೊಂದು :

**ಪರಶುರಾಮಾವತಾರ:** ಶ್ರಿಹರಿಯು ಗಂಡುಗೊಡಲಿಯನ್ನು ಪಿಡಿದು ಮದೋನ್ಮತ್ತರಾಗಿದ್ದ ಕ್ಷತ್ರಿಯರ ಕುಲವನ್ನೇ ನಾಶ ಮಾಡಲು ಪಣತೊಟ್ಟು ಕ್ಷತ್ರಿಯರನ್ನು ಸಂಹರಿಸುತ್ತಾನೆ.

೭. ಕಟ್ಟಿ ಸೇತುವೆ ಸತಿಯ ತಂದು

**ಶ್ರೀರಾಮಾವತಾರ:** ಶ್ರೀಹರಿಯು ತ್ರೇತಾಯುಗದಲ್ಲಿ ದಶರಥ ರಾಜನ ಮಗನಾಗಿ ಅವತರಿಸಿ, ತಂದೆಯ ಮಾತನ್ನ ಉಳಿಸಲಿಕ್ಕಾಗಿ ಹದಿನಾಲ್ಕು ವರ್ಷ ವನವಾಸ ಮಾಡಿ ದೈತ್ಯರನ್ನು ಕೊಂದು ಕೊನೆಗೆ ಲಂಕೆಗೆ ಕದ್ದೊಯ್ದ ತನ್ನ ಮಡದಿ ಸೀತೆಯನ್ನು ತರಲಿಕ್ಕಾಗಿ ವಾನರರ ಸಹಾಯದಿಂದ ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಿ ರಾವಣ–ಕುಂಭಕರ್ಣರೇ ಮೊದಲಾದ ರಾಕ್ಷಸರನೆಲ್ಲಾ ಸಂಹಾರಮಾಡಿ, ವಿಭೀಷಣನಿಗೆ ಲಂಕಾಧಿಪತ್ಯವನ್ನು ವಹಿಸಿಕೊಟ್ಟು ಸೀತೆಯನ್ನು ತರುತ್ತಾನೆ.

೮. ಕೃಷ್ಣನೇ ದಾಯಾದಿಯೆಂದು :

**ಕೃಷ್ಣಾವತಾರ:** ಕಂಸ, ಜರಾಸಂಧರೇ ಮೊದಲಾದ ದೈತ್ಯರಿಂದ ತುಂಬಿ ಹೋಗಿ, ಜನಗಳು ನಾನಾ ವಿಧವಾದ ಬಾಧೆ ಪಡುತ್ತಿರಲು ಶ್ರೀಹರಿಯು ಯಾದವ ಕುಲದಲ್ಲಿ ವಸುದೇವ\ದೇವಕಿಯರಿಗೆ ಮಗನಾಗಿ ಹುಟ್ಟಿ, ಗೋಕುಲದಲ್ಲಿ ಬೆಳೆದು, ಶಿಶುವಾಗಿದ್ದಾಗಲೇ ಅಲ್ಲಿಗೆ ಬೇರೆ ಬೇರೆ ವೇಷಗಳಿಂದ ಬಂದ ರಾಕ್ಷಸರನ್ನೆಲ್ಲ ಕೊಂದು ಮತ್ತೆ ಮಥುರಾ ಪಟ್ಟಣದಲ್ಲಿದ್ದ ಕಂಸನನ್ನು ಸಂಹರಿಸಿ, ತಾಯಿ ತಂದೆಗಳ ಸೆರೆಬಿಡಿಸಿ, ಉಗ್ರಸೇನನಿಗೆ ರಾಜ್ಯಭಿಷೇಕವನ್ನು ಮಾಡಿ ತನ್ನ ಅವತಾರ ಪೂರ್ತಿಯಾಗುವವರೆಗೂ ಒಂದಲ್ಲ ಒಂದು ರೀತಿಯಿಂದ ಭೂಭಾರವನ್ನು ಹರಣಮಾಡಿ, ನಂಬಿದ ಭಕ್ತರನ್ನು ಪಾಲಿಸುತ್ತಾ ಧರ್ಮವನ್ನು ಸಂಸ್ಥಾಪನೆ ಮಾಡುತ್ತಾನೆ.

೯. ಮುಪ್ಪುರಾರಶೀನ ವ್ರತವ ತಪ್ಪದೇ ಕೆಡಿಸಿನಿಂತ :

**ಬೌದ್ಧಾವತಾರ:** ತ್ರಿಪುರಾಸುರರೆಂಬ ರಾಕ್ಷಸರು ಬಹಳ ದುಷ್ಟರಾಗಿ ಸಾತ್ವಿಕರಿಗೆ ಬಹಳ ಹಿಂಸೆ ಮಾಡುತ್ತಿರುತ್ತಾರೆ. ಅವರ ಪತ್ನಿಯರು ಬಹಳ ಪತಿವ್ರತೆಯರಾಗಿರುತ್ತಾರೆ. ಆ ಪಾತಿವ್ರತ್ಯದ ಬಲದಿಂದ ಈ ದೈತ್ಯರು ಇಷ್ಟು ದುರುಳರಾಗಿರುತ್ತಾರೆ. ಆಗ ಶ್ರೀಹರಿಯು ವ್ರತವನ್ನು ಮಾಡುತ್ತಿದ್ದ ಅವರ ಬಳಿಗೆ ಬೆತ್ತಲೆಯಾಗಿ ಬಂದು ನಿಲ್ಲಲು ಅವನ ಮನಮೋಹಕ ಸೌಂದರ್ಯಕ್ಕೆ ಒಂದು

ಕ್ಷಣ ಮಾತ್ರ ಆ ಸ್ತ್ರೀಯರು ಚಿತ್ತ ಚಾಂಚಲ್ಯವನ್ನು ಹೊಂದುತ್ತಾರೆ. ಆಗ ದೇವತೆಗಳು ತ್ರಿಪುರಾ ಸುರರನ್ನು ಸಂಹರಿಸುತ್ತಾರೆ. ಇದು ಶ್ರೀಹರಿಯ ಬೌದ್ಧಾವತಾರ.

೧೦. ತೇಜಿಯ ಹತ್ತಿ ಮೆರೆದ :

**ಕಲ್ಕ್ಯಾವತಾರ:** ಕಲಿಯುಗದಲ್ಲಿ ದುಷ್ಟರನ್ನು, ಅಧರ್ಮಿಗಳನ್ನು ನಾಶಮಾಡಲು ಶ್ರೀ ಹರಿಯು ಕಲ್ಕಿ ಅವತಾರವನ್ನು ಧರಿಸಿ ಕುದುರೆಯನ್ನು ಹತ್ತಿ, ಕೈಯಲ್ಲಿ ಖಡ್ಗವನ್ನು ಹಿಡಿದು ಬರುತ್ತಾನೆ.

ಇಂತಹ ದಶಾವತಾರ ವರ್ಣನೆಗಳನ್ನು ಲಕ್ಷ್ಮೀ ದೇವಮ್ಮನವರ ಚೇಳಿನ ಹಾಡುಗಳಲ್ಲೂ ನೋಡಬಹುದು. ಮೇಲೆವರ್ಣಿಸಿದ ದಶಾವತಾರ ವರ್ಣನೆಯನ್ನು ಜಲಕ್ರೀಡೆ ಹಾಡಿನಿಂದ ತೆಗೆದು ಕೊಳ್ಳಲಾಗಿದೆ.

ಲಕ್ಷ್ಮೀದೇವಮ್ಮನವರ ಕಟ್ಟಕಡೆಯ ಹಾಡಾಗಿರುವ ತಪ್ಪೆಣಿಸುವರೇನೋ ತಾಮರದಳಾಕ್ಷ ಎಂಬುದರಲ್ಲಿ ಕೆಲವು ಪೂರ್ವಕಥೆಗಳು ಬರುತ್ತವೆ.

೨

**ಅಕ್ಕರದ ಅಜಾಮಿಳನು ಅಕ್ಕನಾ ಮಗನೇನೋ:** ಅಜಾಮಿಳನೆಂಬುನು ಧರ್ಮಬಾಹಿರನಾಗಿ ಮಾಡಬಾರದ ಕೆಲಸಗಳನ್ನು ಮಾಡುತ್ತಾ ಭಗವಂತನ ಹೆಸರನ್ನು ಸಹ ಉಚ್ಚರಿಸದೆ ಇರುತ್ತಿದ್ದನು. ಅಂಥವನು ತನ್ನ ಕೊನೆಗಾಲದಲ್ಲಿ ತನ್ನ ಮಗನಾದ ನಾರಾಯಣನನ್ನು 'ನಾರಾಯಣಾ' ಎಂದು ಕರೆದಾಗ ಶ್ರೀಹರಿಯು ತನ್ನ ನಾಮೋಚ್ಚಾರ ಮಾಡಿದ ಅವನಿಗೆ ಸದ್ಗತಿಯನ್ನು ಕರುಣಿಸಿದನು.

೩

**ರಕ್ಕಸಾಸುತನಿನಗೆ ರೊಕ್ಕಕೊಟ್ಟನೋ ಏನೋ:** ಪ್ರಹ್ಲಾದನು ವಿಷ್ಣುಭಕ್ತನಾಗಿದ್ದುದನ್ನು ಸಹಿಸದೆ ಅವನ ತಂದೆಯಾದ ಹಿರಣ್ಯಕಶಿಪುವು ಅವನಿಗೆ ನಾನಾವಿಧವಾದ ಚಿತ್ರ ಹಿಂಸೆಗಳನ್ನು ಕೊಡುತ್ತಿರಲು, ಭಗವಂತನು ಕಂಭವನ್ನೊಡೆದು ಬಂದು ಆ ರಾಕ್ಷಸನನ್ನು ನರಸಿಂಹ ರೂಪದಿಂದ ಕೊಲ್ಲುತ್ತಾನೆ.

೪

**ಅಂತ್ಯಜಳ ಕೂಡಿ, ಅನಂತ ಕರ್ಮವ ಮಾಡಿ, ಅಂತ್ಯದಲಿ ನಿನ್ನೊಮ್ಮೆ ನೆನೆದನೇನೋ ಅಂಥ ಶೊಬಚನ ಮಗಳ ಕಾಂತನೆಂದೆನಿಸಿದಿ:** ಇದು ಶ್ರೀನಿವಾಸ ಕಲ್ಯಾಣ ಕಥೆ. ಹಿಂದೆ ಬಹಳ ವಿದ್ಯಾವಂತನೂ, ಶ್ರೋತ್ರಿಯನೂ, ಸದಾಚಾರ ಸಂಪನ್ನನೂ ಆಗಿದ್ದ ಮಾಧವನೆಂಬ ಬ್ರಾಹ್ಮಣನು ಕರ್ಮವಶದಿಂದ ಒಬ್ಬ ಅಂತ್ಯಜಾತಿಯವಳನ್ನು ಕೂಡಿ, ಅನಾಚಾರಗಳನ್ನೂ ಮಾಡಿ,

ತಾಯಿ–ತಂದೆಗಳನ್ನು, ಧರ್ಮಪತ್ನಿಯನ್ನೂ ತ್ಯಜಿಸಿ ಬಹಳ ದುರುಳನಾಗಿರಲು ಆ ವೇಶ್ಯಾಸ್ತ್ರೀ ಮರಣ ಹೊಂದುತ್ತಾಳೆ. ಆಗ ಅವನು ಹುಚ್ಚನಂತೆ ಅಲೆಯುತ್ತಾ ತಿರುಪತಿಗೆ ಬರುತ್ತಾನೆ. ಅಲ್ಲಿ ತಿರುಮಲೆಗೆ ಹೋಗುತ್ತಿದ್ದ ಕೆಲವು ಜನರೊಡನೆ ತಾನೂ ನಡೆಯಲು ಬೆಟ್ಟವನ್ನು ಸ್ಪರ್ಶಿಸಿದ ಮಾತ್ರದಿಂದ ಅವನ ಕೈ ಕಾಲುಗಳು ನಡುಗಿ ಅವನು ಮಾಡಿದ್ದ ಪಾಪಗಳೆಲ್ಲಾ ವಾಂತಿಯಾಗಿ ಬಿಡುತ್ತವೆ. ಈ ಕೌತುಕವನ್ನು ನೋಡಲು ಆಕಾಶದಲ್ಲಿ ದೇವತೆಗಳ ತಂಡವೇ ನೆರೆಯುತ್ತದೆ. ಆಗ ಬ್ರಹ್ಮದೇವನೇ ಭೂಮಿಗೆ ಬಂದು ಮಾಧವನಿಗೆ ಹೇಳುತ್ತಾನೆ. ಈ ಪರ್ವತದ ಸ್ಪರ್ಶದಿಂದಲೇ ನೀನು ಪುನೀತನಾಗಿದ್ದೀಯೆ. ಮೇಲೆ ಹೋಗಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನ ಮಾಡಿ ವರಾಹದೇವರ ದರ್ಶನಮಾಡು. ಮತ್ತೆ ನಿನ್ನ ಶರೀರವನ್ನು ತ್ಯಾಗ ಮಾಡಿಬಿಡು. ನೀನು ಕಲಿಯುಗದಲ್ಲಿ ಸುಧರ್ಮರಾಜನ ಮಗನಾಗಿ ಆಕಾಶರಾಜನೆಂಬ ಹೆಸರಿನಿಂದ ಪ್ರಸಿದ್ಧಿ ಪಡೆಯುತ್ತೀಯೆ. ಸಾಕ್ಷತ ಮಹಾಲಕ್ಷ್ಮೀಯೇ ನಿನಗೆ ಮಗಳಾಗಿ ದೊರಕುತ್ತಾಳೆ. ಶ್ರೀಹರಿಯು ಶ್ರೀನಿವಾಸ ನಾಮಕನಾಗಿ ಈ ಪರ್ವತಕ್ಕೆ ಬರುತ್ತಾನೆ. ಆತನು ನಿನ್ನ ಸುತೆಯನ್ನು ಪಾಣಿಗ್ರಹಣ ಮಾಡಿಕೊಳ್ಳುತ್ತಾನೆ. ಎನ್ನಲು ಮಾಧವನು ಹಾನೇ ಮಾಡುತ್ತಾನೆ.

ಮುಂದೆ ಅಷ್ಟಾವಿಂಶತ್ ಕಲಿಯುಗದಲ್ಲಿ ಈ ಮಾಧವನೇ ಆಕಾಶರಾಜನಾಗಿ ಹುಟ್ಟುತ್ತಾನೆ. ಈತನ ಪತ್ನಿ ಧರಣೀದೇವಿ. ಇವರಿಗೆ ಭೂಮಿಯಲ್ಲಿ, ಕಮಲದ ಹೂವಿನಲ್ಲಿ ಒಂದು ಹೆಣ್ಣು ಶಿಶು ದೊರಕುತ್ತದೆ. ಇವಳು ಯೌವನಾವಸ್ಥೆಗೆ ಬರುವವೇಳೆಗೆ ವೈಕುಂಠ ಬಿಟ್ಟು ಬಂದು ವೇಕಟಾಚಲದಲ್ಲಿ ವಾಸಿಸುತ್ತಿರುವ ಶ್ರೀನಿವಾಸನು ಬೇಟೆಗಾಗಿ ಬಂದವನು ಈಕೆಯನ್ನು ನೋಡಿ ಮೋಹಿತನಾಗುತ್ತಾನೆ, ಪದ್ಮಾವತಿಯು ಇವನನ್ನು ಕಲ್ಲುಗಳಿಂದ ಬಡಿದು, ಬಡಿಸಿ ಗಾಯಮಾಡುತ್ತಾಳೆ, ನಂತರ ಬಕುಳೆಯ ಸಂಧಾನದಿಂದ ಶ್ರೀನಿವಾಸ–ಪದ್ಮಿನಿಯರ ವಿವಾಹವಾಗುತ್ತದೆ.

ಪಕ್ಷಿಗಳು : ಗಿಳಿ, ಕೋಗಿಲೆ, ಭ್ರಮರ, ನವಿಲು

ಮೃಗಗಳು : ಸಾರಂಗ, ಮಾತಂಗ, ಶಿಂಗ, ಕಸ್ತೂರಿಮೃಗ, ಕೂರಂಗ

ಹೂವುಗಳು : ಕ್ಯಾದಿಗಿ, ಕಮಲ, ಪಾರಿಜಾತ, ಮಲ್ಲಿಗಿ, ಮರಗ, ಜಾಜೀ, ಇರುವಂತಿಗೆ, ದವನ, ಸುರಗಿ, ಸಂಪಿಗೆ, ಶಾವಂತಿಗೆ

ಹಣ್ಣುಗಳು : ಕದಳಿ, ಖರ್ಜೂರ, ಮಾದಳ, ನಿಂಬೆ, ಕಿತ್ತಳೆ, ಪನಸು, ಅಂಜೂರ, ದ್ರಾಕ್ಷಿ.

ಸೀರೆಗಳು : ತಾರಕಿಗಳ ಜರತಾರಿ ಸೀರೆ, ಎಳೆಗೆ ಸಾವಿರ ವರಹದ ಸೀರೆ, ಗಿಳಿಯು ಪೀತಾಂಬರ, ಸಾಸಿರ ವರಹದ ಕಾಶಿಯಸೀರೆ, ಹಸುರು ತಾವಕೀ ಸೀರೆ, ಕುತ್ತಣಿ ಕುಪ್ಪುಸ

- **ಒಡವೆಗಳು** : ವಾಲಿ, ಬುಗುಡಿ, ಚಂದ್ರ, ಸೂರ್ಯ, ಜಡೆಭಂಗಾರ, ತೋರಮುತ್ತಿನ, ಮೂಕುತಿ, ವಜ್ರದಹಸ್ತ ಕಡಗ, ಗೆಜ್ಜೆ ಅಂದಿಗೆ, ರುಳಿ, ಪೈಜಣ.

**ಗೊಲ್ಲತಿಯ ಅಲಂಕಾರ** :

ಜಡೆ ಬಿಗಿದು ಭಂಗಾರದ ಎಳೆಗಳ ಹೆಣೆದು

ವಾಲಿ, ಬುಗುಡಿ, ವಾರಿಜಾಕ್ಷಿಯು ಇಟ್ಟು

ತೋರ ಮುತ್ತಿನ ಮೂಗುತಿಯಿಟ್ಟು

ಚಾರು ಕಂಚುಕ ಬಿಗಿ ಬಿಗಿ ತೊಟ್ಟು

ಹಾರ ಪದಕ ಕೊರಳೊಳಗಿಟ್ಟು

ವಜ್ರ ಹಸ್ತ ಕಡಗಮನಿಟ್ಟು

ಭರ್ಜರಿ ಪೀತಾಂಬರವುಟ್ಟು

ಗೆಜ್ಜೆ ಅಂದಿಗೆ ಪದಗಳೊಳಿಟ್ಟು

ನಿಲುವು ಕನ್ನಡಿ ನೋಡಿ, ಕಸ್ತೂರಿಯ ತಿಲುಕವ ತಾ ತೀಡಿ

ಕಮಲಾಕ್ಷಿ ಕಣ್ಣಿಗೆ ಕಪ್ಪುರೇಖೆಯ ಮಾಡಿ

ಕರ್ಪೂರದ ವೀಳ್ಯವ ಕಥಲಿ ಹಿಡಿದು, ಗೋಪಾಳಿಯು ಬೆಣ್ಣೆಯ ತಾ

ತೆಗೆದು, ಪುಟ್ಟಿಯಲಿಟ್ಟು, ವಲಿದು, ಶಿರದಲ್ಲಿಟ್ಟು

ನಳಿನಾಕ್ಷೆ ನಡೆತಂದಾಳು.

೫

**ದ್ರೌಪದೀ ದೇವಿಗೆ ಅಕ್ಷಯಾಂಬರವಿತ್ತೆ** : ಧರ್ಮರಾಜನು ದುರ್ಯೋಧನನ ಆಹ್ವಾನವನ್ನು ಸ್ವೀಕರಿಸಿ ಪಗಡೆಯಾಡಲು ಹೋಗುತ್ತಾನೆ. ಜೊತೆಯಲ್ಲಿ ತಮ್ಮಂದಿರು ಮತ್ತು ದ್ರೌಪದೀ ದೇವಿಯೂ ಇರುತ್ತಾರೆ. ಶಕುನಿಯ ಮೋಸದಿಂದ ಧರ್ಮರಾಜನು ತನ್ನ ರಾಜ್ಯ, ಕೋಶ ಎಲ್ಲವನ್ನೂ ಸೋತು ನಂತರ ತಮ್ಮಂದಿರನ್ನು ಪಣವಾಗಿಟ್ಟು ಅವರನ್ನೂ ಸೋತು ಕೊನೆಗೆ ತನ್ನ ಪತ್ನಿಯಾದ ದ್ರೌಪದೀ ದೇವಿಯನ್ನು ಪಣವಾಗಿರಿಸಿ ಅವಳನ್ನೂ ಸೋಲುತ್ತಾನೆ. ಆಗ ದುರ್ಯೋಧನನು ತನ್ನ ತಮ್ಮನಾದ ದುಶ್ಯಾಸನನಿಗೆ ಅಂತಃಪುರದಿಂದ ದ್ರೌಪದಿಯನ್ನು

ಎಳೆದುಕೊಂಡುಬರಲು ಹೇಳುತ್ತಾನೆ. ದುರಾತ್ಮನಾದ ದುಶ್ಯಾಸನನು ಅವಳು ತನ್ನ ಅತ್ತಿಗೆಯೆಂಬುದನ್ನೂ ಮರೆತು ಅವಳ ಮುಡಿಹಿಡಿದೆಳೆದು ಕೊಂಡು ತುಂಬಿದ ಸಭೆಯ ಮಧ್ಯೆ ಎಳೆತರುತ್ತಾನೆ ಮತ್ತು ದುರ್ಯೋಧನನ ಅಪ್ಪಣೆಯಂತೆ ಅವಳ ಸೀರೆಯನ್ನು ಎಳೆಯಲು ಪ್ರಾರಂಭಿಸುತ್ತಾನೆ. ದ್ರೌಪದಿಯ ಮೊರೆಯನ್ನು ಯಾರೂ ಕೇಳುವುದಿಲ್ಲ. ಪಾಂಡವರೂ ಹತಾಶರಾಗಿ ಕುಳಿತಿರುತ್ತಾರೆ. ಆಗ ದ್ರೌಪದಿಯು ದ್ವಾರಕಾವಾಸಿಯಾದ ಶ್ರೀಕೃಷ್ಣನನ್ನು ಮೊರೆಹೊಕ್ಕು ದೈನ್ಯದಿಂದ ಪ್ರಾರ್ಥಿಸತೊಡಗುತ್ತಾಳೆ. ಭಕ್ತಿಪರಾಧೀನನಾದ ಪರಮಾತ್ಮನು ದ್ರೌಪದಿಯ ಸೀರೆಗಳು ಅಕ್ಷಯಾವಾಗುವಂತೆ ನೋಡಿಕೊಳ್ಳುತ್ತಾನೆ. ಹೀಗಾಗಿ ದುಶ್ಯಾಸನನು ದ್ರೌಪದಿಯ ಸೀರೆಯನ್ನು ಸೆಳೆಯುತ್ತಾ ಹೋದಂತೆ ಬೇರೆ ಬೇರೆ ಸೀರೆಗಳು ಬರುತ್ತಲೇ ಇರುತ್ತವೆ. ಕೊನೆಗೆ ದುಶ್ಯಾಸನನು ಆಯಾಸಗೊಂಡು ತನ್ನ ಕಾರ್ಯವನ್ನು ನಿಲ್ಲಿಸಿ ಬಿಡುತ್ತಾನೆ. ಸಭಾಸದರೆಲ್ಲಾ ಬೆರಗಾಗುತ್ತಾರೆ.

೬

**ಧೃವನನ್ನು ನೂಕಲು** : ಉತ್ತಾನಪಾದ ರಾಜನಿಗೆ ಸುನೀತಿ ಮತ್ತು ಸುರುಚಿಯೆಂಬ ಇಬ್ಬರು ಹೆಂಡತಿಯರಿರುತ್ತಾರೆ. ಸುರುಚಿ ಎಂಬುವವಳನ್ನು ಎರಡನೆಯ ಹೆಂಡತಿಯಾಗಿ ಪಡೆದ ಉತ್ತಾನಪಾದನು, ಪಟ್ಟದ ರಾಣಿಯಾಗಿದ್ದ ಸುನೀತಿಯನ್ನೂ ಅವಳ ಮಗ ಧೃವನನ್ನು ಕಡೆಗಣಿಸಿ ಸುರುಚಿಯ ಸೌಂದರ್ಯಕ್ಕೆ ಮರುಳಾಗಿ. ಅವಳನ್ನೇ ಪಟ್ಟದ ರಾಣಿಯಾಗಿ ಮಾಡಿಕೊಂಡಿರುತ್ತಾನೆ. ಒಂದು ಸಲ ಸುರುಚಿಯ ಮಗನಾದ ಉತ್ತಮನು ಸಿಂಹಾಸನದ ಮೇಲೆ ಕುಳಿತಿದ್ದ ತನ್ನ ತಂದೆಯ ತೊಡೆಯ ಮೇಲೆ ಕುಳಿತಿರುತ್ತಾನೆ. ಇದನ್ನು ಕಂಡ ಐದು ವರ್ಷದ ಮಗುವಾದ ಧೃವನು ತಾನೂ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲು ಆಸೆ ಪಟ್ಟಾಗ ಸುರುಚಿಯು ಅವನನ್ನು ನೂಕಿಬಿಡುತ್ತಾಳೆ. ಅಳುತ್ತಾ ಮನೆಗೆ ಬಂದ ಧೃವನನ್ನು ತಾಯಿಯು ಸಮಾಧಾನ ಪಡಿಸಿ, ಭಗವಂತನ ವಿಚಾರವನ್ನು ತಿಳಿಸುತ್ತಾಳೆ. ಧೃವನು ತಕ್ಷಣವೇ ಕಾಡಿಗೆ ಹೊರಡುತ್ತಾನೆ, ದಾರಿಯಲ್ಲಿ ನಾರದ ಮುನಿಗಳು ಎದುರಾಗಿ ಧೃವನಿಗೆ ಶ್ರೀಹರಿಯ ಬಗ್ಗೆ ತಿಳಿಸಿ ಮಂತ್ರೋಪದೇಶ ಮಾಡುತ್ತಾರೆ. ಧೃವನು ನಿದ್ರಾಹಾರಾದಿಗಳನ್ನು ತೊರೆದು, ಬಿಸಿಲು, ಚಳಿ, ಗಾಳಿ, ಮಳೆಗಳನ್ನು ಲೆಕ್ಕಿಸದೆ ಒಂಟಿ ಕಾಲಿನಲ್ಲಿ ನಿಂತು ಘೋರ ತಪಸ್ಸನ್ನು ಮಾಡುತ್ತಾನೆ. ಆಗ ವಿಷ್ಣುವು ಪ್ರತ್ಯಕ್ಷನಾಗಿ ಅವನು ಕೋರಿದ ವರಗಳನ್ನೆಲ್ಲಾ ಕೊಟ್ಟು ಕೊನೆಗೆ ಅವನಿಗೆ ನಕ್ಷತ್ರ ಲೋಕದಲ್ಲಿ ಸ್ಥಾನವನ್ನು ಕೊಡುತ್ತಾನೆ.

ಇಷ್ಟು ಹೊತ್ತಿಗೆ ಉತ್ತಾನ ಪಾದ ರಾಜನಿಗೆ ತಾನು ಮಾಡಿದ ತಪ್ಪಿನ ಅರಿವಾಗಿ ಧೃವನ ಬರವನ್ನೇ ಎದುರು ನೋಡುತ್ತಿರುತ್ತಾನೆ. ಧೃವನು ಹಿಂದಿರುಗಿ ಬಂದೊಡನೆಯೇ ಅವನಿಗೆ ರಾಜ್ಯಭಿಷೇಕವನ್ನು ಮಾಡುತ್ತಾನೆ, ಧೃವನು ತಂದೆಯನ್ನು ಗೌರವಿಸುತ್ತಾನೆ. ಹಾಗೆಯೇ ಚಿಕ್ಕಮ್ಮನನ್ನೂ, ತನ್ನ ಈ ಸಾಧನೆಗೆ ಅವಳೇ ಕಾರಣವಾದಳೆಂದು ಆದರಿಸಿ ಉತ್ತಮನನ್ನು ಯುವರಾಜನಾಗಿ ನೇಮಿಸುತ್ತಾನೆ. ಸುನೀತಿಗೆ ಬಹಳ ಸಂತೋಷವಾಗುತ್ತದೆ.

ಧೃವನು ಬಹುಕಾಲ ಧರ್ಮದಿಂದ ರಾಜ್ಯಭಾರ ಮಾಡಿ ಕೊನೆಗೆ ನಕ್ಷತ್ರ ಲೋಕವನ್ನು ಸೇರುತ್ತಾನೆ. ನಾವು ಈಗಲೂ ಸಹಾ ಸಪ್ತರ್ಷಿಮಂಡಲದ ನೆತ್ತಿಯ ಮೇಲೆ ಸ್ಥಿರವಾಗಿ ನಿಂತಿರುವ, ಪ್ರಜ್ವಲಿಸುತ್ತಿರುವ ಒಂದು ನಕ್ಷತ್ರವನ್ನು ಕಾಣಬಹುದು. ಅದೇ ಧೃವನ ನಕ್ಷತ್ರ. ಅದಕ್ಕೆ ಚ್ಯುತಿಯೆಂಬುದೇ ಇಲ್ಲ.

ದಾನವಾಂತಕ, ದನುಜಸಂಹಾರಿ : ವಿಷ್ಣು

೭

**ದುಷ್ಟ ಕಂಸನ್ನ ಮೆಟ್ಟಿಯಾಳಿದ ಕೃಷ್ಣ** : ಕಂಸನು ಶ್ರೀ ಕೃಷ್ಣ ಸೋದರ ಮಾವ. ಅವನು ಕೃಷ್ಣನ ತಂದೆ ವಸುದೇವನನ್ನೂ, ತಾಯಿದೇವಕಿಯನ್ನೂ ಸೆರೆಯಲ್ಲಿಟ್ಟಿರುತ್ತಾನೆ. ಏಕೆಂದರೆ ಅವನು ತಂಗಿ ದೇವಕಿಯನ್ನು ವಸುದೇವನಿಗೆ ಕೊಟ್ಟು ಬಹಳ ವಿಜೃಂಭಣೆಯಿಂದ ವಿವಾಹ ಮಾಡಿಸುತ್ತಾನೆ ದಂಪತಿಗಳನ್ನು ಸಂತೋಷವಾಗಿ ಮೆರವಣಿಗೆ ಮಾಡಿಸಿ ಕರೆದೊಯ್ಯುತ್ತಿರುವಾಗ ಅಶರೀರವಾಣಿಯೊಂದು ಇದೇ ದೇವಕಿಯ ಅಷ್ಟಮಗರ್ಭದಲ್ಲಿ ಹುಟ್ಟುವ ಕೂಸು ನಿನ್ನನ್ನು ಕೊಲ್ಲುತ್ತದೆ ಎಂದು ತಿಳಿಸಿದಾಗ ಅವರನ್ನು ಸೆರೆಯಲ್ಲಿಟ್ಟು ಒಂದೊಂದು ಕೂಸನ್ನು ಕೊಲ್ಲುತ್ತಾ ಬರುತ್ತಾನೆ. ಎಂಟನೆಯ ಮಗುವನ್ನು ವಸುದೇವನು ಯಮುನಾ ನದಿಯ ಆಚೆ ಬದಿಯಲ್ಲಿನ ನಂದಗೋಕುಲಕ್ಕೆ ಕರೆದೊಯ್ದು ಅಲ್ಲಿ ತನ್ನ ಗೆಳೆಯನಾದ ನಂದಗೋಪ–ಯಶೋದೆಯರ ವಶಕ್ಕೊಪ್ಪಿಸುತ್ತಾನೆ. ಅಲ್ಲಿರುವ ಹೆಣ್ಣು ಶಿಶುವನ್ನು ತಂದು ದೇವಕಿಯ ಪಕ್ಕದಲ್ಲಿ ಮಲಗಿಸುತ್ತಾನೆ. ಎಂಟನೆಯ ಮಗು ಜನಿಸಿದೆಯೆಂದು ಕಂಸನು ಬಂದು ನೋಡಲು ಅದು ಹೆಣ್ಣಾಗಿರುತ್ತದೆ. ಚಿಂತೆಯಿಲ್ಲವೆಂದು ಅದನ್ನು ಗೋಡೆಗಪ್ಪಳಿಸಲು ಹೋದಾಗ ಅದು ಅವನ ಕೈಗಳಿಂದ ಆಕಾಶಕ್ಕೆ ಹಾರಿ ಹೋಗುತ್ತದೆ. ಹಾಗೆಯೇ ಕಂಸನನ್ನು ಕೊಲ್ಲುವ ಮಗು ನಂಧಗೋಕುಲದಲ್ಲಿ ಬೆಳೆಯುತ್ತಿದೆ ಎಂದು ಹೇಳುತ್ತದೆ. ಅವಳೇ ದುರ್ಗಾದೇವಿ. ಕಂಸನು ಅಲ್ಲಿ ಬೆಳೆಯುತ್ತಿರುವ ಮಗುವನ್ನು ಕೊಲ್ಲಲು ಅನೇಕ ರಾಕ್ಷಸರನ್ನು ಬೇರೆ ಬೇರೆ ವೇಷಗಳಿಂದ ಕಳಿಸುತ್ತಾನೆ. ಕೃಷ್ಣನು ಅವರನ್ನೆಲ್ಲಾ ಸಂಹರಿಸುತ್ತಾನೆ. ಕೊನೆಗೆ ಕಂಸನು ಅಕ್ರೂರನನ್ನು ಕಳುಹಿಸಿ, ಮಲ್ಲಿಯುದ್ಧದ ನೆಪದಿಂದ ಕೃಷ್ಣ ಬಲರಾಮರಿಗೆ ಕರೆಕಳಿಸುತ್ತಾನೆ. ಕಂಸನ ನೀಚ ಬುದ್ಧಿಯನ್ನು ತಿಳಿದ ಕೃಷ್ಣನು ಅವನನ್ನು ಸಂಹರಿಸುತ್ತಾನೆ.

೮

**ಭಂಡಾರ ಒಡೆಯುವುದು** : ಇದು ದಿವಸೀವ್ರತದಲ್ಲಿ ಬರುವ ಒಂದು ಮುಖ್ಯವಾದ ಘಟ್ಟ. ದಿವಸೀವ್ರತ ಕಥೆ ಹೀಗಿದೆ–ಕತ್ತಲೆರಾಯನೆಂಬೊಬ್ಬ ರಾಜನಿಗೆ ಒಬ್ಬನೇ ಮಗನಿರುತ್ತಾನೆ. ಆದರೆ ಅವನು ಮೃತ್ಯು ಹೊಂದಿರುತ್ತಾನೆ. ಕತ್ಲೆರಾಯನ ಪುತ್ರವ್ಯಾಮೋಹವೆಷ್ಟಿತ್ತೆಂದರೆ ಅವನು ತನ್ನ ಸತ್ತಮಗನಿಗೆ ಯಾರಾದರೂ ಹೆಣ್ಣು ಕೊಟ್ಟು ಮದುವೆ ಮಾಡಿದರೆ ಅವರಿಗೆ ಅರ್ಧ ರಾಜ್ಯವನ್ನು ಕೊಡುತ್ತೇನೆಂದು ಡಂಗುರವನ್ನು ಸಾರಿಸುತ್ತಾನೆ. ಯಾರು ಮುಂದೆ ಬರುವುದಿಲ್ಲ.

ಆ ಊರಲ್ಲಿ ಬಹು ಬಡವರಾದವರ ಒಂದು ಕುಟುಂಬವಿರುತ್ತದೆ. ಆ ಅಣ್ಣ ಅತ್ತಿಗೆಯರು ತಾಯಿ ತಂದೆಗಳಿಲ್ಲದ ಕುಮಾರಿಯನ್ನು ಶವಕ್ಕೆ ಕೊಟ್ಟು ಮದುವೆ ಮಾಡಲು ನಿಶ್ಚಯಿಸಿದ್ದೇವೆಂದು ರಾಜನಿಗೆ ಹೇಳಿಕಳಿಸುತ್ತಾರೆ. ವಿವಾಹ ಸ್ಮಶಾನದಲ್ಲೇ ನಡೆಯುತ್ತದೆ. ವಿವಾಹ ವಿಧಿಗಳ ನಂತರ ಎಲ್ಲರೂ ಆ ಹುಡುಗಿಯನ್ನು ಶವದ ಬಳಿಯೇ ಬಿಟ್ಟು ತೆರಳುತ್ತಾರೆ. ರಾಜನು ಆ ಹುಡುಗಿಯನ್ನು ತನ್ನೊಡನೆ ಬರಲು ಕರೆಯುತ್ತಾನೆ. ಆದರೆ ಆ ಹುಡುಗಿ ತನ್ನ ಪತಿಯನ್ನು ಬದುಕಿಸಿಕೊಂಡೇ ಬರುತ್ತೇನೆನ್ನುತ್ತಾಳೆ. ನಂತರ ಅವಳು ಮಣ್ಣಿನಲ್ಲಿ ಹಣತೆ ಮಾಡಿ, ಅಲ್ಲಿದ್ದ ಬಾಳೆಯ ನಾರನ್ನೇ ಬತ್ತಿಯಾಗಿ ಮಾಡಿಕೊಂಡು ನೀರನ್ನು ಎಣ್ಣೆಯ ಸ್ಥಾನದಲ್ಲಿ ಹಾಕಿ ದೀಪ ಹಚ್ಚುತ್ತಾಳೆ. ಆಮೇಲೆ ಪಾರ್ವತೀ ಪರಮೇಶ್ವರರನ್ನು ಪ್ರಾರ್ಥಿಸುತ್ತಾ ಕುಳಿತುಬಿಡುತ್ತಾಳೆ. ಆಕಾಶದಲ್ಲಿ ಸಂಚಾರ ಮಾಡುತ್ತಿದ್ದ ಪಾರ್ವತೀ ಪರಮೇಶ್ವರರು ಆಕೆಯ ಬಳಿಗೆ ಬಂದು ಕಾರಣವೆಲ್ಲಾ ಕೇಳಿ ತಿಳಿದು ಅಲ್ಲಿ ಭಂಡಾರವನ್ನು ಒಡೆಯಲಿಕ್ಕೆ ಆಕೆಯ ಬಳಿ ಯಾರೂ ಅಣ್ಣತಮ್ಮಂದಿರಿಲ್ಲವೆಂದು ತಿಳಿದು ಶಿವನು ಅವಳು ಮಾಡಿಟ್ಟ ಮಣ್ಣಿನ ಕಡುಬನ್ನೇ ತನ್ನ ಮೊಳಕೈಯಿಂದ ಒಡೆಯುತ್ತಾನೆ. ತಕ್ಷಣ ಕತ್ಲೆರಾಯನ ಮಗ ಎದ್ದು ಕುಳಿತುಕೊಳ್ಳುತ್ತಾನೆ. ದೇವದಂಪತಿಗಳು ಈ ತರುಣದಂಪತಿಗಳಿಗೆ ಆಶೀರ್ವಾದ ಮಾಡಿಹೊರಡುತ್ತಾರೆ. ಆ ಹುಡುಗಿಯು ತನ್ನ ಗಂಡನನ್ನು ಕರೆದುಕೊಂಡು ಅರಮನೆಗೆ ಹೊರಡುತ್ತಾಳೆ. ಹೀಗೆ ಕನ್ನಿಕೆಯರು ಈಗಲೂ ಈ ದಿವಸೀ ಪೂಜೆಯನ್ನು ಮಾಡುತ್ತಾರೆ. ಅಲ್ಲದೆ ಮದುವೆಯ ನಂತರವೂ ಹದಿನಾರು ವರ್ಷ ಮಾಡುತ್ತಾರೆ. ಕೆಲವರು ಕೆಂಪುಜ್ಯೋತಿಗೇ ಅಂದರೆ ದೀಪಸ್ತಂಭಕ್ಕೆ ಮಾಡುತ್ತಾರೆ. ಇನ್ನು ಕೆಲವರು ಕೆಂಪುಮಣ್ಣಿನಿಂದ ಗೋಪುರ –ಶಿಖರವು ಚೂಪಾಗಿರುವುದಿಲ್ಲ–ಗಳನ್ನು ಮಾಡಿ ಅವಕ್ಕೆಲ್ಲಾ ಸುಣ್ಣದ ಚುಕ್ಕಿಗಳನ್ನಿಟ್ಟು ಒಂದು ಜೊತೆ ಅಂತಹ ಗೊಂಬೆಗಳಿಗೆ ಪೂಜೆಮಾಡುತ್ತಾರೆ.

ಭಂಡಾರವೆಂದರೆ ಕರಿಗಡಬು, ಸಕ್ಕರೆ ಮತ್ತು ಒಣಕೊಬ್ಬರಿ ಹಾಕಿ ಕರಿದ ಕಡುಬುಗಳ ಹೊಟ್ಟೆಯಲ್ಲಿ ಯೋಗ್ಯತಾನುಸಾರ ಹಣವಿಟ್ಟು ಅದನ್ನು ಮನೆಯ ಮುಂಭಾಗದ ಹೊಸ್ತಿಲಿನ ಮೇಲಿಟ್ಟು ಅಣ್ಣ–ತಮ್ಮಂದಿರ ಕೈಯಲ್ಲಿ ಒಡೆಸುತ್ತಾರೆ.ಅಣ್ಣ ಅಥವಾ ತಮ್ಮನಿಂದ ಒಡೆಸುವುದು ಪದ್ಧತಿ. ಕಡುಬಿನಲ್ಲಿರುವ ಹಣವನ್ನು ಸೋದರನು ತೆಗೆದುಕೊಳ್ಳುತ್ತಾನೆ ಮತ್ತು ತಂಗಿಯನ್ನು ಹರಸುತ್ತಾನೆ. ಅಣ್ಣ–ತಮ್ಮಂದಿರಿಲ್ಲದಿದ್ದರೆ ಸಂಬಂಧದಲ್ಲಿರುವ ಯಾವ ಹುಡುಗನ ಕೈಲಾದರೂ ಒಡೆಸ ಬಹುದು.

ಹೀಗೆ ಭಂಡಾರವನ್ನು ಒಡೆಸಿದರೆ ಮುತ್ತೈದತನ ಶಾಶ್ವತವಾಗಿರುತ್ತದೆಂದು ಪ್ರತೀತಿ.

೯

**ಕನಕ ಕಶ್ಯಪನಳಿದು : ಹಿರಣ್ಯ ಕಶಿಪುವನ್ನು ಕೊಂದು** ಪ್ರಹ್ಲಾದನ ತಂದೆಯಾದ ಕನಕಕಶ್ಯಪನು ಘೋರ ತಪಸ್ಸಿನಿಂದ ಈಶ್ವರನನು ಒಲಿಸಿಕೊಂಡು ತನಗೆ ಯಾರಿಂದಲೂ ಅಂದರೆ ಮನುಷ್ಯರಿಂದಾಗಲೀ, ಮೃಗಗಳಿಂದಾಗಲೀ ಸಾವು ಬರಬಾರದೆಂಬ ವರವನ್ನು ಪಡೆದುಕೊಂಡು ವಿಷ್ಣು ದ್ವೇಷಿಯಾಗಿ ಜನರಿಗೆ ನಾನಾವಿಧ ಕಿರುಕುಳಗಳನ್ನು ಕೊಡುತ್ತಾ

ತಾನೇ ದೇವರೆಂದು ಮೆರೆಯುತ್ತಿರುತ್ತಾನೆ. ಇತ್ತ ಅವನ ಮಗನಾದ ಪ್ರಹ್ಲಾದನು ವಿಷ್ಣುವಿನ ಪರಮಭಕ್ತರಾಗಿ ತನ್ನ ಜೊತೆಯ ಹುಡುಗರಿಗೆಲ್ಲ ವಿಷ್ಣುಪಾರಮ್ಯವನ್ನು ಬೋಧಿಸುತ್ತಿರುತ್ತಾನೆ. ತಂದೆಯು ಎಷ್ಟೇ ವಿಧದಲ್ಲಿ ಹೇಳಿದರೂ ಪ್ರಹ್ಲಾದನು ವಿಷ್ಣು ಭಕ್ತಿಯನ್ನು ಮಾತ್ರ ಬಿಡುವುದಿಲ್ಲ. ಇದರಿಂದ ಖತಿಗೊಂಡ ಹಿರಣ್ಯಕಶಿಪುವು ತನ್ನಮಗನನ್ನು ಬೆಟ್ಟದಿಂದ ತಳ್ಳಿಸುತ್ತಾನೆ. ಹಾವುಗಳಿಂದ ಕಚ್ಚಿಸುತ್ತಾನೆ. ಅಗ್ನಿಯಲ್ಲಿ ಹಾಕುತ್ತಾನೆ. ಏನೇ ಆದರೂ ಪ್ರಹ್ಲಾದನ ಕೂದಲೂ ಕೊಂಕುವುದಿಲ್ಲ. ಆಗ ಒಂದು ದಿನ ಪ್ರಹ್ಲಾದನನ್ನು ಹಿಡಿದುಕೊಂಡು ನಿನ್ನ ವಿಷ್ಣು ಸರ್ವವ್ಯಾಪಿಯಾದರೆ ಈ ಕಂಭದಲ್ಲಿ ತೋರಿಸು ಎನ್ನುತ್ತಾನೆ. ಅಲ್ಲದೆ ತನ್ನ ಗದೆಯಿಂದ ಕಂಭವನ್ನು ಹೊಡೆಯುತ್ತಾನೆ. ತಕ್ಷಣ ವಿಷ್ಣುವು ಕಂಭದಿಂದ ನರ–ಮೃಗ ವೇಷಧರನಾಗಿ ಬಂದು ಕಶ್ಯಪನನ್ನು ಎತ್ತಿಕೊಂಡು ಬಂದು ಮುಂದಿನ ಹೊಸ್ತಿಲಿನ ಮೇಲೆ ಕುಳಿತು ಆ ದೈತ್ಯನನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ತನ್ನ ಉಗುರುಗಳಿಂದ ಅವನ ಹೊಟ್ಟೆಯನ್ನು ಸೀಳಿ ಕರುಳುಗಳನ್ನು ಬಗೆದು ಮಾಲೆ ಮಾಡಿಕೊಂಡು ತನ್ನ ಕೊರಳಿಗೆ ಹಾಕಿಕೊಳ್ಳುತ್ತಾನೆ. ಮುಂದೆ ತನ್ನ ಘೋರ ರೂಪವನ್ನು ತೊರೆದು ಪ್ರಸನ್ನನಾಗಿ ಪ್ರಹ್ಲಾದನಿಗೆ ರಾಜ್ಯಪಟ್ಟವನ್ನು ಕಟ್ಟುತ್ತಾನೆ ಇದು ವಿಷ್ಣುವಿನ ನಾಲ್ಕನೇ ಅವತಾರವಾದ ನರಸಿಂಹ ರೂಪ.

## ೧೦

**ಭದ್ರಾಚಲ** : ಆಂಧ್ರ ಪ್ರದೇಶದ ಹೈದರಾಬಾದಿನ ಸಮೀಪದ ಒಂದು ನಗರ. ಇಲ್ಲಿನ ರಾಮದೇವರ ಮಂದಿರ ಬಹಳ ಪುರಾತನವಾದದ್ದು. ದೇವಾಲಯದ ಸನಿಹದಲ್ಲಿ ಗೋದಾವರಿ ನದಿ ತುಂಬಿ ಹರಿಯುತ್ತಾಳೆ.

ಇಲ್ಲಿ ರಾಮದಾಸರೆಂಬ ಶ್ರೀರಾಮನ ಭಕ್ತರೊಬ್ಬರಿದ್ದರು. ಆತ ತಹಸೀಲುದಾರರಾಗಿದ್ದರು. ಹೈದರಾಬಾದಿನ ನಿಜಾಮನಿಗೆ ಕಂದಾಯವನ್ನು ವಸೂಲಿ ಮಾಡಿಕೊಡುತ್ತಿದ್ದರು. ಶ್ರೀರಾಮನ ಭಕ್ತರಾಗಿದ್ದುದರಿಂದ, ದೇವಾಲಯವನ್ನು ಇನ್ನಷ್ಟು ಚೆಂದಗೊಳಿಸಲು, ಯಾತ್ರಾರ್ಥಿಗಳಿಗೆ ಅನುಕೂಲ ಮಾಡಿಕೊಡಲು ಛತ್ರಗಳನ್ನು ಕಟ್ಟಿಸಲು ಕಂದಾಯದ ಹಣವನ್ನೆಲ್ಲಾ ವಿನಿಯೋಗಿಸಿಬಿಟ್ಟರು. ಆಗ ಹೈದರಾಬಾದಿನಲ್ಲಿ ತಾನೀಷಾ ಎಂಬ ನಿಜಾಮನಿದ್ದನು. ಎಷ್ಟು ಸಮಯವಾದರೂ ಕಂದಾಯದ ಹಣವನ್ನೇಕೆ ಸರಕಾರಕ್ಕೆ ಸಲ್ಲಿಸಿಲ್ಲ ಎಂದು ಕೇಳಲು ರಾಮದಾಸರು ನಿರ್ವಂಚನೆಯಿಂದ ತಾವು ಹಣವನ್ನು ಖರ್ಚುಮಾಡಿರುವ ವಿಷಯವನ್ನು ತಿಳಿಸಿದರು. ಖತಿಗೊಂಡ ನವಾಬನು ಅವರನ್ನು ಗೋಲ್ಕೊಂಡ ಜೈಲಿನಲ್ಲಿಟ್ಟನು (ಈಗಲೂ ಗೋಲ್ಕೊಂಡದಲ್ಲಿ ಆ ಸೆರೆಮನೆಯನ್ನು ನೋಡಬಹುದು– ಹಾಗೆಯೇ ಸೆರೆಯಲ್ಲಿದ್ದಾಗ ರಾಮದಾಸರು ಗೋಡೆಗಳ ಮೇಲೆ ಬರೆದಿರುವ ರಾಮಾಯಣದ ದೃಶ್ಯಗಳನ್ನೂ ನೋಡಬಹುದು) ರಾಮದಾಸರು ಇದಕ್ಕಾಗಿ ಚಿಂತಿಸಿದೆ ಶ್ರೀರಾಮನನ್ನು ಚಿಂತಿಸುತ್ತಾ ಕುಳಿತರು. ಒಂದು ದಿನ ಇಬ್ಬರು ಸುಂದರರಾದ ತರುಣರು ಹಣದ ಥೈಲಿಗಳನ್ನು ತೆಗೆದುಕೊಂಡು

ಕುದುರೆಗಳ ಮೇಲೆ ಕುಳಿತು ತಾನೀಷಾನ ದರ್ಬಾರಿಗೆ ಬಂದು ಹಣವನ್ನು ಒಪ್ಪಿಸಿ ಇದನ್ನು ಭದ್ರಚಲದ ರಾಮದಾಸರು ಕಳಿಸಿರುವರೆಂದೂ, ತಾವು ಅವರ ಭೃತ್ಯರೆಂದೂ, ತಮ್ಮ ಹೆಸರು ರಾಮಣ್ಣ, ಲಕ್ಷ್ಮಣ್ಣರೆಂದೂ ಹೇಳಿದರು. ತಾನೀಷನು ಆ ಸುಂದರ ತರುಣರ ರೂಪಕ್ಕೆ ಬೆರಗಾಗಿ ನಿಜವನ್ನು ಹೇಳಿ ನೀವು ಯಾರು ಎಂದು ಕೇಳಿದಾಗ ಅವನಿಗೆ ರಾಮಲಕ್ಷ್ಮಣರ ದರ್ಶನವಾಯಿತು. ತಾನೀಷಾನು ರೋಮಾಂಚನಗೊಂಡು ರಾಮದಾಸರಂತಹ ಭಕ್ತಶ್ರೇಷರನ್ನು ಸೆರೆಯಲ್ಲಿಟ್ಟುದಕ್ಕಾಗಿ ಪರಿತಪಿಸಿ ಅವರನ್ನು ಬಿಡುಗಡೆ ಮಾಡಿ, ವಿಷಯವನ್ನೆಲ್ಲಾ ತಿಳಿಸಿದನು. ರಾಮದಾಸರು ತಮಗಾಗದ ದರ್ಶನವು ತಾನೀಷಾನಿಗಾಯಿತಲ್ಲಾ ಎಂದು ಸಂತಸ ಪಟ್ಟು ಆತನನ್ನು ಮಹಾನುಭಾವನೆಂದು ಪ್ರಶಂಸಿಸಿದರು. ರಾಮದಾಸರಿಗೂ ಶ್ರೀರಾಮಲಕ್ಷ್ಮಣರ ದರ್ಶನವಾಯಿತು.

**ಭೃತ್ಯರು** : ಸೇವಕರು.

೧೧

**ಭೂತರಾಜ** : ಹಂಪೆಯ ದಾರಿಯಲ್ಲಿ ಒಂದು ಅರಳೀ ಮರದ ಮೇಲೊಬ್ಬ ಬ್ರಹ್ಮರಾಕ್ಷಸನು ಕುಳಿತು ಆ ದಾರಿಯಲ್ಲಿ ಹೋಗಿ ಬರುತ್ತಿರುವವನೆಲ್ಲಾ ಹಿಡಿದು– ಆ–ಕಾ–ಮಾ–ವೈ ಕೋನಸ್ನಾತಃ? ಎಂದು ಕೇಳುತ್ತಿದ್ದನು ಯಾರಿಗೂ ಉತ್ತರ ಹೊಳೆಯುತ್ತಿರಲಿಲ್ಲ. ಆಗ ಅವನು ಅವರನ್ನು ತಿಂದು ಹಾಕಿ ಬಿಡುತ್ತಿದ್ದನು. ಒಮ್ಮೆ ಸಂಚಾರ ಮಾಡುತ್ತಾ ವಾದಿರಾಜ ಸ್ವಾಮಿಗಳು ಆ ಮಾರ್ಗದಲ್ಲಿಯೇ ಬಂದರು. ಆಗ ಜನರು ಶ್ರೀಗಳವರಿಗೆ ಭೂತರಾಜನ ವಿಷಯವನ್ನು ತಿಳಿಸಿ ಬೇರೆ ಹಾದಿಯಿಂದ ಹೋಗಲು ಹೇಳಿದರು. ಆದರೆ ವಾದಿರಾಜರು ಅದೇ ಮಾರ್ಗದಲ್ಲೇ ಹೋದರು. ಯಥಾಪ್ರಕಾರ ಭೂತನು ಅವರನ್ನು ಹಿಡಿದು ಕೇಳಿದನು– ಆ–ಕಾ–ಮಾ–ವೈ ಕೋನಸ್ನಾತಾ : ವಾದಿರಾಜಸ್ವಾಮಿಗಳು ತಕ್ಷಣವೇ ಉತ್ತರಿಸಿದರು "ರಂಢಾ ಪುತ್ರತ್ವ ನಸ್ನಾತಃ" ಬ್ರಹ್ಮರಾಕ್ಷಸನು ಅವರ ಪಾದಗಳಿಗೆ ಬಿದ್ದು ಉದ್ಧರಿಸಬೇಕೆಂದು ಬೇಡಿಕೊಂಡನು. ಸ್ವಾಮಿಗಳು ಕನಿಕರಿಸಿ ಅವನನ್ನು ತಮ್ಮ ಪಲ್ಲಕ್ಕಿ ಹೊರಲಿಕ್ಕಾಗಿ ನೇಮಿಸಿ ಕೊಂಡರು, ನಂತರ ಶಿಷ್ಯರಿಗೆ ಆ ಪಿಶಾಚನ ವೃತ್ತಾಂತವನ್ನು ತಿಳಿಸಿದರು. ಹಿಂದೆ ಅವನು ವಾದಿರಾಜರ ಶಿಷ್ಯನಗಿದ್ದನು. ಅವನ ಹೆಸರು ನಾರಾಯಣಾಚಾರ್ಯ. ಒಮ್ಮೆ ಕಾರಣಾಂತರಗಳಿಂದ ಶ್ರೀಗಳವರು ತಮ್ಮ ಆಹ್ನೀಕವನ್ನು ಮೊಟಕು ಮಾಡಬೇಕಾದ ಸಂದರ್ಭದಲ್ಲಿ ಈ ಶಿಷ್ಯನು ಅವರನ್ನು ಆಡಿಕೊಂಡನು ಆಗ ರಾಜರೇ ಅವನಿಗೆ ಶಾಪವನ್ನು ಕೊಟ್ಟಿದ್ದರು. ಆಗಿನಿಂದ ಅವನು ಈ ಮರದಲ್ಲಿ ಸೇರಿಕೊಂಡು ಜನರನ್ನು ಹಿಂಸಿಸುತ್ತಿದ್ದನು. ಅವನು ಕೇಳುತ್ತಿದ್ದ ಪ್ರಶ್ನೆ–ಆ–ಕಾ–ಮಾ–ವೈ ಕೋನಸ್ನಾತಃ? ಆಷಾಢ, ಕಾರ್ತಿಕ,ಮಾಘ ಮತ್ತು ವೈಶಾಕಮಾಸಗಳಲ್ಲಿ ಯಾರು ನದಿಯ ಸ್ನಾನ ಮಾಡುವುದಿಲ್ಲ : ವಾದಿರಾಜರ ಉತ್ತರ– ರಂಢಾ ಪುತರತ್ವಂನಸ್ನಾತಃ ರಂಡೇಮಗನೇ ಎಲ್ಲರು ಮಾಡುತ್ತಾರೆ ಆದರೆ ನೀನು ಮಾತ್ರ ಮಾಡುವುದಿಲ್ಲ. ಏಕೆಂದರೆ ಬ್ರಹ್ಮರಾಕ್ಷಸನಿಗೆ ನೀರನ್ನು ಮುಟ್ಟಲು ಅವಕಾಶವಿಲ್ಲ.

ನಂತರ ವಾದಿರಾಜರು ತಾವು ಸೋದೆಯಲ್ಲಿ ನೆಲೆಸಿದ ಮೇಲೆ ಇದೇ ಭೂತರಾಜನಿಂದ ಬದರಿಯಲ್ಲಿದ್ದ ರಮಾತ್ರಿವಿಕ್ರಮ ವಿಗ್ರಹಗಳನ್ನು ತರಿಸಿದರು. ಭೂತರಾಜನು ರಥದ ಸಮೇತವಾಗಿ ಅವುಗಳನ್ನು ತಂದಿತ್ತನು. ರಾಜರು ಅವುಗಳನ್ನು ಸೋದೆಯಲ್ಲಿ ಪ್ರತಿಷ್ಠಿಸಿದ್ದಾರೆ. ಸೋದೆಗೆ ಹೋಗುವ ಭಕ್ತರು ಮೊದಲು ಭೂತರಾಜನ ಮಂದಿರಕ್ಕೆ ಹೋಗಿ ಅವನ ದರ್ಶನ ಪಡೆದು ತೆಂಗಿನಕಾಯಿಯನ್ನು ಉರುಳಿಸಿ ನಂತರ ಪಂಚಬೃಂದಾವನಗಳ ದರ್ಶನ ಮಾಡುತ್ತಾರೆ. ವಾದಿರಾಜರ ಬಲದಿಂದ ಭೂತರಾಜನು ಭಕ್ತರ ಕೋರಿಕೆಗಳನ್ನು ಈಡೇರಿಸುತ್ತಾನೆ.

೧೨

**ಶ್ರೀಶೈಲ** : ಆಂಧ್ರ ಪ್ರಾಂತದಲ್ಲಿರುವ ಒಂದು ಮಹಾನ್ ವೀರಶೈವಕ್ಷೇತ್ರ. ಅಧಿದೇವತೆ ಚೆನ್ನಮಲ್ಲಿಕಾರ್ಜುನ. ಈ ಚೆನ್ನಮಲ್ಲಿಕಾರ್ಜುನಿಗಾಗಿ ಶಿವಶರಣೆ ಅಕ್ಕಮಹಾದೇವಿಯು ತನ್ನ ಇಡೀ ಜೀವನವನ್ನೇ ಮುಡುಪಾಗಿಟ್ಟಳು. ರಾಜನನ್ನು ಕೈ ಹಿಡಿದಿದ್ದರೂ ಸಹಾ ರಾಜ್ಯ ಸುಖವನ್ನು ಪತಿಸಂಗವನ್ನು ಬಯಸದೆ ಚೆನ್ನ ಮಲ್ಲಿಕಾರ್ಜುನನನ್ನು ನೆನೆಯುತ್ತಾ ಅವನಲ್ಲಿ ಐಕ್ಯಳಾದಳು. ಅಕ್ಕ ಮಹಾದೇವಿ ಒಬ್ಬ ಪ್ರಜ್ಞಾವಂತ ಮಹಿಳೆ, ಮಹಾನ್, ಭಕ್ತೆ ಈಕೆಯ ಒಂದೊಂದು ವಚನಗಳು ರೋಮಾಂಚಕಾರಕವಾಗಿವೆ, ಹಾಗೆಯೇ ಆಗಿನ ಕಾಲಕ್ಕೆ ಕ್ರಾಂತಿಕಾರಕವೂ ಅಹುದು. ಮರ್ತ್ಯಲೋಕದ ಗಂಡಂದಿರನ್ನು ಕುರಿತು ಈ ಸಾವ, ಕೆಡುವಗಂಡರ ತೆಗೆದು ಒಲೆಯೊಳಗಿಕ್ಕು ಚೆನ್ನ ಮಲ್ಲಿಕಾರ್ಜುನನೇ ಎನ್ನ ಗಂಡ ಎಂಬ ವಚನವಾಗಲೀ, ದಿಗಂಬರವೇ ದಿವ್ಯಾಂಬರವೆಂದು ಹೇಳಿ ಅಂತೆಯೇ ನಡೆಯುವ ಕೆಚ್ಚು ಎಷ್ಟುಮಂದಿ ಹೆಂಗಸರಿಗಿದೆ, ಅವಳ 'ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಗಳಿಗಂಜಿದಡೆಂತಯ್ಯ' ಎಂಬ ವಚನದಲ್ಲಿ ಲೋಕದಲ್ಲಿ ಹುಟ್ಟಿ ಬಂದ ಮೇಲೆ ನಿಂದಾ – ಸ್ತುತಿಗಳನ್ನು ಸಮನಾಗಿ ಭಾವಿಸುವ ಮಾತಂತೂ ಎಲ್ಲರಿಗೂ ನುಡಿಯಲು ಶಕ್ಯವಲ್ಲ.

೧೩

**ಸಂಜೀವನವ ತಂದೆ ನಾನು** : ದ್ರೌಪದಿಯು ಆಕಾಶದಿಂದ ಹಾರಿ ಬಂದ ಒಂದು ಸೌಗಂಧಿಕಾ ಪುಷ್ಪವನ್ನು ಕಂಡು ತನಗೂ ಅಂತಹುದು ಬೇಕೆಂದು ಭೀಮಸೇನನನ್ನು ಕೇಳಲು ಆತನು ಅದನ್ನು ತಂದುಕೊಡಲು ಕುಬೇರನ ಅಂಕಾಪುರಿಗೆ ಹೋಗುವ ಹಾದಿಯಲ್ಲಿ ಹನುಮಂತನೊಡನೆ ಮುಖಾಮುಖಿ ಯಾಗುತ್ತದೆ. ಆಗ ಹನುಮಂತನು ನಾನು ಬಹಳ ಮುದುಕನಾಗಿದ್ದೇನೆ. ನನ್ನ ಬಾಲವನ್ನೂ ಅಲುಗಾಡಿಸಲಾರೆ. ನೀನು ನಿನ್ನ ದಾರಿಗೆ ಅಡ್ಡಲಾಗಿರುವ ಈ ಬಾಲವನ್ನೂ ಎತ್ತಿಟ್ಟು ಹೋಗು ಎನ್ನುತ್ತಾನೆ. ಭೀಮ ಆ ಬಾಲವನ್ನು ಎತ್ತಲಾರದೆ ಹೋಗುತ್ತಾನೆ. ಆ ಸಂದರ್ಭದಲ್ಲಿ ಹನುಮಂತನು ತನ್ನ ಪರಾಕ್ರಮವನ್ನು ಬಣ್ಣಿಸುತ್ತಾನೆ.

ಸಂಜೀವನ ಪರ್ವತದ ಪ್ರಸಂಗವು ರಾಮಾಯಣದ ಯುದ್ಧಕಾಂಡದಲ್ಲಿ ಬರುತ್ತದೆ. ರಾವಣನ ಮಗನಾದ ಇಂದ್ರಜಿತುವು ಹೊಡೆದ ಬಾಣದಿಂದ ಲಕ್ಷ್ಮಣನು ಮೂರ್ಛಿತನಾಗುತ್ತಾನೆ

ರಾಮನು ಬಹಳವಾಗಿ ದುಃಖಿಸುತ್ತಾನೆ. ವೈದ್ಯನಾದ ಸುಕ್ಷೇಣನು ಸಂಜೀವನ ಪರ್ವತದಲ್ಲಿರುವ ಸಂಜೀವನೀ ಮೂಲಿಕೆಯನ್ನು ಒಂದೇ ದಿನದಲ್ಲಿ ತರುವುದಾದರೆ ಅದರ ರಸದಿಂದ ಲಕ್ಷ್ಮಣನನ್ನು ಬದುಕಿಸಬಹುದು ಎನ್ನುತ್ತಾನೆ. ಆಗ ಹನುಮಂತನು ಆಕಾಶ ಮಾರ್ಗದಿಂದ ಹೋಗಿ ಸಂಜೀವ ಪರ್ವತವನ್ನು ಕಂಡು ಮೂಲಿಕೆಯನ್ನು ಹುಡುಕುತ್ತಾ ಕುಳಿತುಕೊಂಡರೆ ವೇಳೆಯಾಗುವುದೆಂದು ಇಡೀ ಪರ್ವತವನ್ನೇ ಕಿತ್ತು ಎತ್ತಿಕೊಂಡು ಬಂದುಬಿಡುತ್ತಾನೆ. ನಂತರ ಸುಕ್ಷೇಣನು ಮೂಲಿಕೆಯ ರಸವನ್ನು ಹಿಂಡಿ ಲಕ್ಷ್ಮಣನನ್ನು ಬದುಕಿಸುತ್ತಾನೆ.

**ಹದ್ದುವಾಹನ** : ಗರುಡಪಕ್ಷಿಯನ್ನು ವಾಹನವಾಗಿ ಉಳ್ಳವನು ಶ್ರೀ ಮಹಾವಿಷ್ಣು.

೧೪

**ಸಿಂಧು ಸುತೆ** : ಶ್ರೀಹರಿಯೆ ಕೂರ್ಮನಾಗಿ ನಿಂತು, ಮಂದರ ಪರ್ವತವೇ ಕಡೆಗೋಲಾಗಿ ಕ್ಷೀರಸಾಗರವನ್ನು, ಅಮೃತವನ್ನು ಪಡೆಯಲಿಕ್ಕಾಗಿ ದೇವಾಸುರರು ಮಥಾಸಿದಾಗ ಅದರಿಂದ ಲಕ್ಷ್ಮೀದೇವಿಯು ಉದಿಸಿ ಬಂದು ಶ್ರೀಹರಿಯ ಕೊರಳಿಗೆ ಪುಷ್ಪಮಾಲಿಕೆಯನ್ನು ತೊಡಿಸುತ್ತಾಳೆ. ಹೀಗೆ ಸಮುದ್ರದಿಂದ ಉದಿಸಿ ಬಂದವಳಾದ್ದರಿಂದ ಇವಳಿಗೆ ಸಿಂಧುಸುತೆಯೆಂಬ ಹೆಸರು ಬಂದಿದೆ.

೧೫

**ಸ್ವಾದಿಪುರ** : ಸೋದೆ ಅಥವಾ ಸೋಂಧ ಉತ್ತರ ಕರ್ನಾಟಕದ ಶಿರಸಿಯಿಂದ ಏಳೆಂಟು ಮೈಲುಗಳಲ್ಲಿರುವ ಸೋದೆ, ವಾದಿರಾಜರ ಕಾರ್ಯಕ್ಷೇತ್ರ. ಅವರು ಇಲ್ಲಿದ್ದಾಗ ಸೋದೆಯ ರಾಜನಾದ ಸರಸಪ್ಪನಾಯಕನು ರಾಜರಿಗೆ ಬೇಕಾದ ಅನುಕೂಲಗಳನ್ನೆಲ್ಲಾ ಮಾಡಿಕೊಟ್ಟನು. ಅವನ ಅಳಿಯನು ಅಕಾಲ ಮರಣಕ್ಕೆ ತುತ್ತಾದಾಗ ರಾಜರು ಲಕ್ಷ್ಮೀಶೋಭಾನೆಯನ್ನು ಬರೆದುಕೊಟ್ಟು, ಸತ್ತ ಹುಡುಗನ್ನು ಬದುಕಿಸಿ ಕೊಟ್ಟರು ಸೋದೆಯಲ್ಲಿ ವಾದಿರಾಜ ಮಠವಿದೆ. ಧವಳಗಂಗೆ ಇದ್ದಾಳೆ. ಪ್ರಾಣದೇವರಿದ್ದಾರೆ. ಭೂತರಾಜನಿದ್ದಾನೆ. ಪಂಚ ಬೃಂದಾವನ ಇದೆ. ಇದೊಂದು ಜಾಗೃತ ಕ್ಷೇತ್ರ. ಕೋರಿದ ಕೋರಿಕೆಗಳನ್ನೆಲ್ಲಾ ವಾದಿರಾಜರು ನಡೆಸಿ ಕೊಡುತ್ತಾರೆ.

೧೬

**ಸತ್ಯಸಂಧರು** : ಶಿವಮೊಗ್ಗ ಜಿಲ್ಲೆಯಲ್ಲಿರುವ ಮಹಿಷಿಯು ಉತ್ತರಾದಿಮಠದ ಸತ್ಯಸಂಧರ ಆವಾಸವಾಗಿದೆ. ಮಠದ ಬಳಿ ತುಂಗಾನದಿ ಹರಿಯುತ್ತದೆ. ಕಾಡು–ಮೇಡುಗಳ ಹಸಿರು ಹಾಸಿನಲ್ಲಿ ಮಠ ಉಜ್ವಲವಾಗಿದೆ, ಬಹಳ ತಂಪಾದ ತಾಣ. ಎಲ್ಲೆಲ್ಲಿ ನೋಡಿದರೂ ಹಸುರಾದ ಸಸ್ಯರಾಶಿ ಕಣ್ಣುಗಳಿಗೆ ತಂಪನ್ನು ಕೊಡುತ್ತದೆ. ಸತ್ಯಸಂಧರನ್ನು ಪ್ರಹ್ಲಾದರಾಜರ ನಾಲ್ಕನೇ ಅವತಾರವೆನ್ನುತ್ತಾರೆ.

**ಸಂಚಿತಾಗಮ** : ಹಿಂದೆ ಸಂಚಯಮಾಡಿದ ಪಾಪ ಅಥವಾ ಪುಣ್ಯ, ಮುಂದೆ ಬರಲಿರುವ ಪಾಪ ಪುಣ್ಯಗಳು.

## ೪. ಸರಸಾಬಾಯಿಯವರ ಕೀರ್ತನೆಗಳು

೧

***ಜಗನ್ನಾಥದಾಸರಿಗೆ ಗುರುವು ನೀನೆಂದೆನಿಸಿದೆ,*** ಗಣಪತಿಯ ಅಂಶ ಶ್ರೀಗೋಪಾಲದಾಸರು – ಜಗನ್ನಾಥದಾಸರಿಗೆ ಆಯುರ್ ದಾನ ಮಾಡಿ ಅಂಕಿತವಿತ್ತ ಗುರುಗಳು ಎಂಬರ್ಥ.

೪

ಈ ದೇವರ ನಾಮದಲ್ಲಿ ತಿರುಪತಿ ಕ್ಷೇತ್ರದಲ್ಲಿರುವ ಪುಷ್ಕರಣ ವರಹಾದೇವರ ದರ್ಶನ – ಕಲ್ಯಾಣೋತ್ಸವ, ವಸಂತೋತ್ಸವ ಎಲ್ಲಾ ವರ್ಣಿಸಿದ್ದಾರೆ.

೫

***ಕಂಕಣವು ನೀನಾಗಿ ಹರಿಗೆ ಭುಜಕೀರ್ತಿ ನೀನಾಗಿ*** ಲಕ್ಷ್ಮಿದೇವಿ ಸರ್ವವಿಧದಲ್ಲೂ ಭಗವಂತನ ಸೇವೆ ಮಾಡುತ್ತಾಳೆ. ಛತ್ರಿ–ಚಾಮರ–ವ್ಯಜನ ಎಲ್ಲಾ ಸೇವೆ ಅವಳಿಂದಲೀ ಸ್ವಾಮಿ ತೆಗೆದುಕೊಳ್ಳುತ್ತಾನೆ, ಕೋಟಿ ಕೋಟಿ ದೇವತೆಗಳಿದ್ದರು ಅವಳಿಂದಲೇ ಸೇವೆ ತೆಗೆದುಕೊಳ್ಳುತ್ತಾನೆ ಎಂಬರ್ಥ

೧೧

***ಸಂಜೀವನವ ತಂದ ಶೂರ*** – ಲಕ್ಷ್ಮಣದೇವರು ಮೂರ್ಛೆ ಹೊಂದಿದಾಗ ಸಂಜೀವನ ಪರ್ವತವನ್ನೇ ಹೊತ್ತು ತಂದ ಸಂಜೀವಿನಿಗಾಗಿ

***ಕಂತು ಪಿತನಿಗೆ ದುರ್ಯೋಧನನ ಶಿರವ ಒಪ್ಪಿಸಿದೆ*** ಭೀಮಾವತಾರದಲ್ಲಿ ದುರುಳ ದುರ್ಯೋಧನನ್ನು ಸಂಹರಿಸಿ ಹರಿಗೆ ಒಪ್ಪಿಸಿದ್ದು

***ಪಂಥದಲಿ ಕೀಚಕನ ಕೊಂದೆ*** – ಭೀಮಾವತಾರದಲ್ಲಿ ಕೀಚಕನ ವಧೆ ಮಾಡಿದ ಪ್ರಸಂಗ

***ಮಧ್ವ ಗೇಹ ಭಟ್ಟರಲಿ ಜನಿಸಿ*** – ಮಧ್ವಾಚಾರ್ಯರಾಗಿ ಅವತರಿಸಿದ ಪ್ರಸಂಗ

***ಮುದ್ದು ಕೃಷ್ಣನ ಪೂಜಿಸಿ ಉಡುಪಿಯಲ್ಲಿ ಸ್ಥಾಪಿಸಿ*** – ವಡಬಂಡೇಶ್ವರದ ಬಳಿ ಗೋಪಿಚಂದನದಲ್ಲಿ ಮೂಡಿ ಬಂದ ಕೃಷ್ಣನನ್ನು ಮಧ್ವಾಚಾರ್ಯರು ಉಡುಪಿಯಲ್ಲಿ ಸ್ಥಾಪಿಸಿದರು.

***ರಾಮ ಸೇವೆ ನೀ ಸಂಭ್ರಮದಲಿ ಮಾಡಿ*** – ಹನುಮಂತಾವತಾರದಲ್ಲಿ ರಾಮನ ಸೇವೆ ಮಾಡಿ ಸೀತೆಗೆ ಉಂಗುರವಿತ್ತು ಭಕ್ತನಾಗಿದ್ದ ಪ್ರಸಂಗ.

೧೨

*ಯಂತ್ರೋದ್ಧಾರಕ ಪ್ರಾಣಸಾಯಿ* – ಮಂತ್ರಾಲಯದ ಸಮೀಪದಲ್ಲಿದೆ, ಯಂತ್ರೋದ್ಧಾರಕ ಪ್ರಾಣದೇವರು.

೧೩

*ವೃಂದಾವನ ದಂಡೆಯ ಮಂತ್ರಾಲಯ ನಿಲಯ* – ಶ್ರೀ ರಾಘವೇಂದ್ರ ಗುರು ಸಾರ್ವಭೌಮರು (ವ್ಯಾಸ–ಪ್ರಹ್ಲಾದ) ಒಟ್ಟು ಮೂರು ಅವತಾರ (ಮುಖತಿ) ತುಂಗಾತೀರದಲ್ಲಿ ಮಂತ್ರಾಲಯದಲ್ಲಿ ಬೃಂದಾವನಸ್ಥರಾಗಿದ್ದಾರೆ. ಸಕಲರ ಅಭೀಷ್ಟಗಳನ್ನು ನೆರವೇರಿಸುವ ಕಲ್ಪತರು ಕಾಮಧೇನು.

*ಮಂಗಳ ರಾಮರ ಪೂಜೆಯ ಮಾಡಿ* – ಅವರ ಉಪಾಸನಾ ಮೂರ್ತಿ ಶ್ರೀ ರಾಮದೇವರು.

## ೫. ತಿರುಮಲಾಂಬ ಅವರ ಕೀರ್ತನೆಗಳು

ಭದ್ರಗೀತಾವಳಿಯ ಮೊದಲ ಸೀಸ ಪದ್ಯ ಭಗವಂಗನಿಗೆ ಜಯಕಾರವನ್ನು ಹೇಳುತ್ತದೆ. ನಂತರ ೨ನೇ ಪಧ್ಯದಿಂದ ೧೨ನೇ ಪದ್ಯದವರೆಗೆ ಶ್ರೀಕೃಷ್ಣನ ದಶಾವತಾರಗಳ ಸುಂದರ ವಿಪುಲ ಘಟನೆಗಳಿವೆ.

**ಗೋವರ್ಧನೊದ್ಧರಣ** : ಗೋಕುಲದ ಗೋಪಾಲಕರು ಪ್ರತಿ ವರ್ಷ ಮಳೆ–ಬೆಳೆಗಾಗಿ ದೇವೇಂದ್ರನನ್ನು ಪೂಜಿಸುತ್ತಿದ್ದರು. ಆದರೆ ಬಾಲಕನಾಗಿದ್ದ ಶ್ರೀಕೃಷ್ಣನು ದೇವೇಂದ್ರನಿಗಿಂತ ಬೆಟ್ಟವನ್ನೇ ಪೂಜಿಸಿದರೆ ಒಳ್ಳೆಯದೆಂದು ಹೇಳಿ ಜನಗಳ ಕೈಯಲ್ಲಿ ಗೋವರ್ಧನ ಗಿರಿಯನ್ನು ಪೂಜೆ ಮಾಡಿಸುತ್ತಾನೆ. ಇದರಿಂದ ದೇವೇಂದ್ರನು ಕುಪಿತಗೊಂಡು ಸತತ ಏಳುದಿನಗಳ ಕಾಲ ಬಹಳ ರಭಸದಿಂದ ಮಳೆ ಸುರಿಸುತ್ತಾನೆ ಬಾಲಕನಾದ ಶ್ರೀಕೃಷ್ಣನು ತನ್ನ ಕೈಯ ಕಿರುಬೆರಳಿನಲ್ಲಿ ಗೋವರ್ಧನ ಗಿರಿಯನ್ನು ಮೇಲೆತ್ತಿ ಛತ್ರಿಯಂತೆ ಹಿಡಿದು ತನ್ನ ಜನ–ಜಾನುವಾರುಗಳನ್ನೆಲ್ಲಾ ಅದರ ಕೆಳಗೆ ವಾಸ ಮಾಡಲು ಹೇಳುತ್ತಾನೆ. ಶ್ರೀಕೃಷ್ಣನ ಸಂಕಲ್ಪದಂತೆ ಅವರೆಲ್ಲಾ ಹಾಯಾಗಿರುತ್ತಾರೆ. ಕೊನೆಗೆ ದೇವೇಂದ್ರನೆ ಸೋತು ಕೃಷ್ಣನಿಗೆ ಗೋವಿಂದ ಪಟ್ಟಾಭಿಷೇಕವನ್ನು ಮಾಡುತ್ತಾನೆ (ಭಾಗವತ)

**ಹೆತ್ತವರಿಗೆರನಾಗಿ ಹೆರದವರಿಗೆ ಮಗನಾಗಿ** : ಶ್ರೀಕೃಷ್ಣನು ವಸುದೇವ–ದೇವಕಿಯರಿಗೆ ಮಗನಾಗಿ ಜೈಲಿನಲ್ಲಿ ಕಾಣಿಸಿಕೊಂಡ. ಮತ್ತೆ ಮಾವ ಕಂಸನು ದೇವಕಿಯ ಆರು ಮಕ್ಕಳನ್ನು

ಕೊಂದಿದ್ದ. ಏಳನೆಯವಳಾದ ದುರ್ಗಾದೇವಿ ಕಂಸನ ಕೈಗೆ ಸಿಗದೆ ಆಕಾಶದೆತ್ತರಕ್ಕೆ ಹಾರಿ ಕಂಸನ ಸಂಚಕಾರಕ್ಕೆ ಬೇರೊಬ್ಬನಿದ್ದಾನೆ ಎಂದು ಹೇಳಿದಾಗ ವಸುದೇವ ದೇವಕಿಯರನ್ನು ಕೂಡಿಹಾಕಿದ್ದ ಕಾರಾಗೃಹದಲ್ಲಿ ಇನ್ನಷ್ಟು ಜನರನ್ನು ಕಾವಲಿಟ್ಟ. ಆದರೆ ಶ್ರೀಕೃಷ್ಣನು ತನ್ನ ಆಯುಧಗಳ ಸಮೇತ ಮಾತಾ ಪಿತೃಗಳಿಗೆ ಕಾಣಿಸಿಕೊಂಡು ತನ್ನನ್ನು ಗೋಕುಲದಲ್ಲಿರುವ ನಂದಗೋಪನ ಮನೆಗೆ ಕರೆದೊಯ್ದು ಅಲ್ಲಿಡಬೇಕೆಂದು ಹೇಳಿ ಮತ್ತೆ ಎಳೆಯ ಕಂದನಾದ. ಆಗ ವಸುದೇವನು ಮಗುವನ್ನು ಒಂದು ಬುಟ್ಟಿಯಲ್ಲಿ ಹೊತ್ತುಕೊಂಡು ಯಮುನೆಯನ್ನು ದಾಟಿ ಮುಸಲಧಾರೆ ಸುರಿಯುತ್ತಿದ್ದರೂ ಲೆಕ್ಕಿಸದೆ ಗೋಕುಲದಲ್ಲಿ ಬಿಟ್ಟು ಬಂದ. ಹೀಗೆ ಹೆತ್ತವರಿಂದ ದೂರವಾಗಿ ಹೆರದವರಿಗೆ ಮಗನಾದನು (ಭಾಗವತ)

## ನಾರಣಾ ಎನುತಂದು (ಪದ್ಯ ಸಂಖ್ಯೆ – ೨೦) :

ಹಿಂದೆ ಅಜಾಮಿಳನೆಂಬ ಬ್ರಾಹ್ಮಣನು ಭಗವಂತನ ದ್ವೇಷಿಯಾಗಿ ನಾರಾಯಣನ ಹೆಸರನ್ನು ಉಚ್ಚರಿಸದೆ ಧರ್ಮಬಾಹಿರನಾಗಿ ಇರುತಿದ್ದನು. ಒಮ್ಮೆ ಇವನಿಗೆ ಅತೀವ ಖಾಯಿಲೆಯಾಗಿ ಪ್ರಾಣೋತ್ಕ್ರಮಣ ಸಮಯ ಬಂದಾಗ ತನ್ನ ಮಗನಾದ ನಾರಾಯಣನನ್ನು "ನಾರಾಯಣಾ" ಎಂದು ಆರ್ತನಾಗಿ ಕೂಗಿದ ಹಾಗೆ ಕೂಗಿದಾಗ ನಾರಾಯಣನ ದೂತರೇ ವೈಕುಂಠದಿಂದ ಬಂದು ಅಜಾಮಿಳನನ್ನು ಅವನು ಪಾಪಿಯಾಗಿದ್ದರೂ ಕೂಡ ವೈಕುಂಠಕ್ಕೆ ಕರೆದೊಯ್ದರೆಂಬ ಒಂದು ಘಟನೆಯನ್ನು ನಾವು ಭಾಗವತದಲ್ಲಿ ಕಾಣುತ್ತೇವೆ. ಅಂದರೆ 'ನಾರಾಯಣ' ಎಂಬ ಶಬ್ದದಲ್ಲಿ ಅಷ್ಟು ಮಹತ್ವವಿದೆ. ಅದು ಮನುಷ್ಯನು ಮಾಡುವ ಪಾಪಗಳನ್ನು ಸುಟ್ಟು ಬೂದಿ ಮಾಡಿ ಅವನನ್ನು ವಿಷ್ಣು ಸನ್ನಿಧಾನಕ್ಕೆ ಕರೆದೊಯ್ಯುತ್ತದೆ ಎಂಬ ನಂಬಿಕೆಯಿದೆ.

**ಗೋವಿಂದ ಪೊರೆಯೆಂದು ಗೋಳಿಟ್ಟ ಗಜರಾಜ** : ಹಿಂದೆ ಇಂದ್ರದ್ಯುಮ್ನನೆಂಬ ರಾಜನು ತನ್ನ ವೈಭವದಿಂದ ಮದಾಂಧನಾಗಿ ಋಷಿಗಳು ಕರುಣಿಸಿಕೊಟ್ಟ ಪುಷ್ಪಹಾರವನ್ನು ತನ್ನ ಪಟ್ಟದಾನೆಯ ಕಾಲಿನಡಿಗೆ ತುಳಿಸಿದನು. ಪರಮಾತ್ಮನಿಗೆ ತೊಡಿಸಿದ ಪ್ರಸಾದರೂಪವಾದ ಹಾರವನ್ನು ಹೀಗೆ ಅವಮಾನಿಸಿದ್ದಕ್ಕಾಗಿ ಋಷಿಗಳು ಅವನಿಗೆ ಗಜರಾಜನ ಜನ್ಮವೇ ಬರಲಿ ಎಂದು ಶಾಪವಿತ್ತರು. ಅದರಂತೆ ಅವನು ಗಜರಾಜನಾಗಿ, ಮದೋನ್ಮತ್ತನಾಗಿ ಸಲಗಗಳ ಹಿಂಡಿಗೆ ಒಡೆಯನಾಗಿ ಮೆರೆಯುತ್ತಿದ್ದನು. ಒಮ್ಮೆ ಆ ಆನೆಗಳ ಹಿಂಡು ಸರೋವರದಲ್ಲಿಳಿದು ಸ್ವೇಚ್ಛೆಯಾಗಿ ಜಲಕ್ರೀಡೆಯಾಡುತ್ತಿದ್ದವು. ಶಾಪಗ್ರಸ್ತವಾಗಿದ್ದ ಸಲಗವೂ ಸಹ ಆ ಹಿಂಡಿಗೆ ನಾಯಕನಾಗಿ ವಿಜೃಂಭಿಸುತ್ತಿತ್ತು. ಈಗ ಜಲಕೇಳಿಯಲ್ಲಿ ಮಗ್ನವಾಗಿ ದಾಂಧಲೆ ಮಾಡುತ್ತಿರುವಾಗ ಒಂದು ದೊಡ್ಡ ಮೊಸಳೆ ಈ ಆನೆಯ ಕಾಲನ್ನು ಕಚ್ಚಿ ಹಿಡಿದುಬಿಟ್ಟಿತು. ಏನು ಮಾಡಿದರೂ ಅದರ ಹಿಡಿತದಿಂದ ಬಿಡಿಸಿಕೊಳ್ಳಲಾಗಲಿಲ್ಲ. ವಿಪರೀತ ನೋವನ್ನು ತಡೆಯಲಾಗದೆ ಆನೆಯು ಬಹಳ ಆರ್ತನಾಗಿ ಭಗವಂತನನ್ನು ವಾಸುದೇವಾ ನೀನೆ ನನ್ನನ್ನು ರಕ್ಷಿಸು ಎಂದು ಕೂಗಿ ಕೂಗಿ ಕೇಳಿಕೊಂಡಾಗ ವಿಷ್ಣುವು ತನ್ನ ಚಕ್ರಾಯುಧದಿಂದ ಆ ನಕ್ರದ ಕೊರಳನ್ನು ಸೀಳಿ ಆನೆಯ ಪ್ರಾಣವುಳಿಸಿ ತನ್ನ ದರ್ಶನವಿತ್ತನು. ಇದೂ ಕೂಡಾ ಭಾಗವತದಲ್ಲಿ ಬರುವ ಪ್ರಸಂಗವೇ.

# ೬. ರಾಧಾಬಾಯಿಯವರ ಕೀರ್ತನೆಗಳು

ಎಲ್ಲ ಹರಿದಾಸ ದಾಸಿಣಿಯರಂತೆ ಶ್ರೀಮತಿ ರಾಧಾಬಾಯಿಯವರು ಕೂಡಾ ಶ್ರೀ ಹರಿಯ ದಶಾವತಾರಗಳನ್ನು ವರ್ಣನೆ ಮಾಡಿದ್ದಾರೆ. (ಹಾಡು – ೫ –)

೧

**ದಶಾವತಾರ ವರ್ಣನೆ**

**ಅ. ನೀರೊಳಗೆ ಮುಳುಗುತಾ – ಮತ್ಸಾವತಾರ** : ಹಯಗ್ರೀವನೆಂಬ ರಾಕ್ಷಸನು ವೇದಗಳನ್ನು ಕದ್ದುಕೊಂಡು ಹೋಗಿ ಪ್ರಳಯ ಜಲದಲ್ಲಿ ಅಡಗಿಸಿಡುತ್ತಾನೆ. ಆಗ ಶ್ರೀ ಹರಿಯು ಮತ್ಸ್ಯ ರೂಪವನ್ನು ತಾಳಿ ಅವುಗಳನ್ನು ತೆಗೆದು ಕೊಂಡು ಬರುತ್ತಾನೆ.

**ಆ. ಅವನಿಭಾರವ ಹೊತ್ತು ಬಂದೆಯಾ – ಕೂರ್ಮಾವತಾರ** : ದೇವಾಸುರರು ಕ್ಷೀರಸಾಗರವನ್ನು ಅಮೃತ ಪಡೆಯುವುದಕ್ಕಾಗಿ ಮಂದರ ಪರ್ವತವನ್ನು ಕಡೆಗೋಲಾಗಿ, ವಾಸುಕಿಯನ್ನು ಹಗ್ಗವಾಗಿ ಮಾಡಿಕೊಂಡು ಕಡೆಯತೊಡಗಿದಾಗ ಮಂದರ ಪರ್ವತವು ನೀರಿನಲ್ಲಿ ಮುಳುಗತೊಡಗುತ್ತದೆ. ಆಗ ಮಹಾವಿಷ್ಣುವು ಆಮೆಯ ರೂಪದಲ್ಲಿ ಬಂದು ತನ್ನ ಬೆನ್ನಿನ ಮೇಲೆ ಆ ಪರ್ವತವನ್ನು ಹೊತ್ತುಕೊಂಡು ನಿಲ್ಲುತ್ತಾನೆ.

ಇ. **ಕೋರೆದಾಡಿಗಳಿಂದ ಧರಣಿ ಸುತ್ತಿತಂದು** : ಹಿರಣ್ಯಾಕ್ಷನೆಂಬ ರಾಕ್ಷಸನು ಭೂಮಿಯನ್ನು ಚಾಪೆಯಂತೆ ಸುತ್ತಿ ಸಮುದ್ರ ತಳಕ್ಕೆ ಕೊಂಡೊಯ್ಯುತ್ತಾನೆ. ಆಗ ಭಗವಂತನು ಹಂದಿಯ ರೂಪವನ್ನು ಧರಿಸಿ ತನ್ನ ಕೋರೆ ದಾಡಿಗಳಿಂದ ಭೂಮಿಯನ್ನು ಹೊತ್ತು ತರುತ್ತಾನೆ.

**ಈ. ಬಾಲಕನಾ ನುಡಿಕೇಳಿ ಬೇಗದಿ ಬಂದೆಯಾ** : ವಿಷ್ಣು ದ್ವೇಷಿಯಾದ ಹಿರಣ್ಯಕಶಿಪು ಎಂಬ ದೈತ್ಯನು ವಿಷ್ಣು ಭಕ್ತಬಾದ ತನ್ನ ಮಗ ಪ್ರಹ್ಲಾದನಿಗೆ ನಾನಾ ಬಗೆಯಿಂದ ಹಿಂಸಿಸಿ, ನಿನ್ನ ವಿಷ್ಣುವನು ಕಂಬದಲ್ಲಿ ತೋರಿಸು ಎಂದಾಗ ಪ್ರಹ್ಲಾದನ ಮೊರೆಯನ್ನು ಕೇಳಿ ವಿಷ್ಣುವು ನಾರಸಿಂಹ ವೇಷವನ್ನು ತಾಳಿ ಕಂಬದಿಂದೊಡೆದು ಬಂದು ಹಿರಣ್ಯಕಶಿಪುವಿನ ಸಂಹಾರ ಮಾಡುತ್ತಾನೆ.

**ಉ. ಬಲಿಯ ದಾನವ ಬೇಡಿ – ವಾಮನಾವತಾರ** : ಮಹಾವಿಷ್ಣುವು ಬಲಿ ಚಕ್ರವರ್ತಿಯ ಬಳಿಗೆ ವಟು ವೇಷದಿಂದ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡುತ್ತಾನೆ. ಬಲಿಯು ದಾನವನ್ನು ಧಾರಾ ಪೂರ್ವಕವಾಗಿ ದಾನ ಕೊಡಲು ತನ್ನ ಒಂದು ಹೆಜ್ಜೆಯಿಂದ ಇಡೀ ಭೂಮಂಡಲವನ್ನು ಇನ್ನೊಂದು ಹೆಜ್ಜೆಯಿಂದ ಆಕಾಶವನ್ನು ಅಳೆದು ಮೂರನೆ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು ಒತ್ತಿ ಅವನನ್ನು ಸುತಳದಲ್ಲಿ ಸ್ಥಾಪಿಸುತ್ತಾನೆ.

ಊ. **ಕೊಡಲಿ ಪಿಡಿದು ನಿಂತೆಯಾ – ಭಾರ್ಗವರಾಮ** : ಶ್ರೀ ಹರಿಯು ಕ್ಷತ್ರಿಯರ ಕುಲವನ್ನೇ ನಾಶ ಪಡಿಸಲಿಕ್ಕಾಗಿ ಕೊಡಲಿಯನ್ನು ಪಿಡಿದು ಪರಶು ರಾಮಾವತಾರವನ್ನು ತಾಳಿ ಕ್ಷತ್ರಿಯರನ್ನು ನಾಶ ಮಾಡುತ್ತಾನೆ.

ಋ. **ಮಡದಿಯ ಕೊಂದವನ ಒಡನೆ ಬೆನ್ನಟ್ಟಿಕೊಂದಿ – ರಾಮಾವತಾರ** : ಭಗವಂತನು ದೈತ್ಯರ ನಾಶಕ್ಕಾಗಿ ರಾಮಾವತಾರವನ್ನು ಹೊಂದಿ ತನ್ನ ಮಡದಿಯಾದ ಸೀತೆಯನ್ನು ಕದ್ದು ಕೊಂಡು ಹೋಗಿ ಲಂಕೆಯಲ್ಲಿರಿಸಿದ್ದ ರಾವಣಾಸುರನ ವಧೆಗೈದು ಸೀತೆಯನ್ನು ಕರೆದು ಕೊಂಡು ಬರುತ್ತಾನೆ.

ಎ. **ಮಧುರೇಲಿ ಹುಟ್ಟಿ ನೀ – ಶ್ರೀಕೃಷ್ಣಾವತಾರ** : ವಸುದೇವ–ದೇವಕಿಯರ ಹೊಟ್ಟೆಯ ಮಗನಾಗಿ ಹುಟ್ಟಿ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿದ, ಅವತಾರವೇ ವರ್ಣಮಯವಾದ, ಬಹುರಂಜಕವಾದ ಕೃಷ್ಣಾವತಾರ.

ಏ. **ವಸನವಿಲ್ಲದೆ – ಚೌದ್ಧಾವತಾರ** : ತ್ರಿಪುರಾಸುರರು ತಮ್ಮ ಮಡದಿಯರ ಪಾತಿವ್ರತ್ಯದ ಪ್ರಭಾವದಿಂದ ಬಹಳ ದುಷ್ಟರಾಗಿ ಜನರಿಗೆ ಕಿರುಕುಳ ಕೊಡುತ್ತಿರಲು ಸ್ವಾಮಿಯು ಬೆತ್ತಲೆಯಾಗಿ ಬಂದು ಆ ಮಡದಿಯರ ವ್ರತ ಕೆಡಿಸಿ ತ್ರಿಪುರರ ಸಂಹಾರ ಮಾಡುತ್ತಾನೆ.

ಐ. **ಪಶುವನ್ನೇರಿ – ಕಲ್ಕ್ಯಾವತಾರ** : ದುಷ್ಟ ಶಿಕ್ಷನ, ಶಿಷ್ಟ ರಕ್ಷಣೆಗಾಗಿ ಸ್ವಾಮಿಯು ಕುದುರೆಯ ಬೆನ್ನನ್ನು ಹತ್ತಿ ಬರುತ್ತಾನೆ.

೨

**ಕರಿಯ ಮೊರೆ ಕೇಳಿ ತ್ವರಿತದಿ ಬಂದೆಯಾ** : ಮೊಸಳೆಯ ಬಾಯಿಗೆ ಸಿಕ್ಕ ಗಜರಾಜನು ಆರ್ತನಾಗಿ 'ವಾಸುದೇವಾ' ಎಂದು ಭಗವಂತನನ್ನು ಮೊರೆಯಿಡಲು ಶ್ರೀ ಹರಿಯು ಚಕ್ರಧರನಾಗಿ ಬಂದು ಮೊಸಳೆಯನ್ನು ಸಂಹರಿಸಿ ಗಜರಾಜನನ್ನು ಉದ್ಧಾರ ಮಾಡುತ್ತಾನೆ. ಇದು ಭಾಗವತದಲ್ಲಿ ಬರುವ 'ಗಜೇಂದ್ರ ಮೋಕ್ಷ'ದ ಕಥೆ.

೩

**ಲಕ್ಷ್ಮಿ ಇಲ್ಲದೆ ನಾನಿರೆನೆಂದು ವೈಕುಂಠವ ಬಿಟ್ಟು ಬಂದೆಯಾ** : ಯಾಗ ಮಾಡುತ್ತಿದ್ದ ಋಷಿಗಳ ಪ್ರಾರ್ಥನೆಯಂತೆ ಭೃಗು ಋಷಿಗಳು ಹರಿ ಹರ ಬ್ರಹ್ಮಾದಿಗಳಲ್ಲಿ ಸರ್ವಶ್ರೇಷ್ಠರು ಯಾರೆಂದು ತಿಳಿಯಲು ಸತ್ಯಲೋಕಕ್ಕೆ ಹೋಗುತ್ತಾರೆ. ಅಲ್ಲಿ ಬ್ರಹ್ಮನು ಸರಸ್ವತಿಯೊಡಗೂಡಿ ಈ ಋಷಿಯು ಬಂದದ್ದನ್ನೇ ಗಮನಿಸುವುದಿಲ್ಲ. ಆಗ ಋಷಿಯು ಬ್ರಹ್ಮನಿಗೆ ಭೂಲೋಕದಲ್ಲಿ ಪೂಜೆಯೋ ಬೇಡವೆಂದು ಶಪಿಸಿ ಕೈಲಾಸಕ್ಕೆ ಬರುತ್ತಾರೆ. ಅಲ್ಲೂ ಸಹಾ ಶಿವನು ಪಾರ್ವತಿಯೊಡನಿದ್ದು ಭೃಗು ಋಷಿಗಳನ್ನು ಸತ್ಕರಿಸುವುದಿಲ್ಲ, ಭೃಗು ಋಷಿಗಳು ಭೂಲೋಕದಲ್ಲಿ ಶಿವನ ಲಿಂಗಕ್ಕೆ ಪೂಜೆಯಾಗಲಿ ಎಂದು ಹೇಳಿ ವೈಕುಂಠಕ್ಕೆ ಬರುತ್ತಾರೆ ಅಲ್ಲಿಯೂ ಸಹಾ

ಸ್ವಾಮಿಯು ಲಕ್ಷ್ಮಿಯಿಂದ ಸೇವೆಕೈಗೊಳುತ್ತಿರುತ್ತಾನೆ. ಭೃಗುಗಳಿಗೆ ಮಹಾಕೋಪ ಬಂದು ಶ್ರೀ ಹರಿಯ ಎದೆಯನ್ನು ಝಾಡಿಸಿ ಒದೆಯುತ್ತಾರೆ. ಆಗ ವಿಷ್ಣುವು ತನ್ನ ಕಠಿಣವಾದ ಎದೆಯನ್ನು ಒದ್ದದ್ದರಿಂದ ಋಷಿಗಳಿಗೆ ಎಷ್ಟು ಕಷ್ಟ ವಾಯಿತೋ ಎಂದು ಅವರನ್ನು ಆದರಿಸುತ್ತಾನೆ. ಭಗವಂತನ ಈ ಗುಣದಿಂದ ಸಂತೋಷಗೊಂಡು ಭೃಗುಗಳು ಶ್ರೀ ಹರಿಯೆ, ಶ್ರೇಷ್ಠನೆಂದು ಅವನ ಸರ್ವೋತ್ತಮತ್ವವನ್ನು ಸ್ಥಾಪಿಸುತ್ತಾರೆ. ಆದರೆ ತನ್ನ ಆವಾಸಸ್ಥಾನವಾದ ಭಗವಂತನ ಎದೆಯನ್ನು ಋಷಿಯು ಒದ್ದರೂ ಕೂಡಾ ಸ್ವಾಮಿಯು ಅವರನ್ನು ಶಿಕ್ಷಿಸದೆ ಉಪಚರಿಸಿದನೆಂದು ಲಕ್ಷ್ಮೀದೇವಿಯು ಕೊಲ್ಲಾಪುರಕ್ಕೆ ಹೊರಟು ಬಿಡುತ್ತಾಳೆ. ಸ್ವಾಮಿಯು ತಾನೂ ವೈಕುಂಠವನ್ನು ಬಿಟ್ಟು ಭೂಲೋಕ್ಕೆ ಬಂದು ಶೇಷಾಚಲದಲ್ಲಿ ನಿಲ್ಲುತ್ತಾನೆ.

೪

**ಕರುಣಾದಿ ಕಾಯಬೇಕೆನ್ನಾ ದುಷ್ಟಜನರೂ ಕೂಡೀ ಕೆಟ್ಟಯೋಚನೆ ಮಾಡಿ :** ಶ್ರೀ ರಾಘವೇಂದ್ರ ಗುರುಗಳನ್ನು ಪರೀಕ್ಷಿಸಬೇಕೆಂದು ಕೆಲವು ದುಷ್ಟರು ಜೀವವಿದ್ದವನನ್ನು ಶವದ ರೂಪದಲ್ಲಿ ತಂದು ಇವನನ್ನು ಬದುಕಿಸಿರಿ ಎಂದು ಕೇಳಿದಾಗ ಸ್ವಾಮಿಗಳು ನಾವು ಜೀವವಿದ್ದವರನ್ನು ಮಾತ್ರ ಬದುಕಿಸುತ್ತೇವೆ ಅಲ್ಲವೆ, ನಿರ್ಜೀವರನ್ನು ಹೇಗೆ ಬದುಕಿಸ ಬಲ್ಲೆವು ಎಂದು ಏಟಿಗೆ ಮರು ಏಟು ಕೊಡುತ್ತಾರೆ ಆಗ ಅವರು ಆ ಹುಡುಗನ ಮೇಲಿನ ಬಟ್ಟೆಯನ್ನು ತೆಗೆದು ನೋಡಿದಾಗ ಅವನು ನಿಜವಾಗಿಯೂ ಸತ್ತು ಹೋಗಿರುತ್ತಾನೆ.

೫

**ಕುಹರಿ ಜನರೂ ಎಲ್ಲಾ ವನಿಕೆ ತುಂಡನು ತಂದು :** ಕೆಲವರು ಕುಹಕಿಗಳು ವನಕೆಯನ್ನು ತಂದು ಇದನ್ನು ಚಿಗುರಿಸಿರಿ ಎಂದಾಗ ಸ್ವಾಮಿಗಳು ತಮ್ಮ ಕಮಂಡಲೂದಕದ ಪ್ರೋಕ್ಷಣೆಯಿಂದ ಅದನ್ನು ಚಿಗುರಿಸುತ್ತಾರೆ.

೬

**ಮಾವಿನ ರಸದೊಳು ಮುಳುಗಿ ಮೃತನಾದಾ :** ಕಿರೀಟಗಿರಿಯ ದೇಸಾಯರು ರಾಘವೇಂದ್ರ ಸ್ವಾಮಿಗಳ ಅಭಿಮಾನಕ್ಕೆ ಪಾತ್ರರಾದವರು. ಒಮ್ಮೆ ಅವರು ರಾಯರನ್ನು ಭಿಕ್ಷೆಗೆ ಆ ಮಂತ್ರಿಸುತ್ತಾರೆ. ಶ್ರೀಮಂತರಾದ ಅವರು ಬಹಳ ಭರ್ಜರಿಯಾಗಿ ಸಾವಿರಾರು ಜನರಿಗೆ ಭೋಜನದ ಆಮಂತ್ರಣ ನೀಡಿರುತ್ತಾರೆ. ಮಾವಿನ ಹಣ್ಣಿನ ಕಾಲವಾದ್ದರಿಂದ ಒಂದು ಬಹಳ ದೊಡ್ಡ ಕೊಳಗ ಪಾತ್ರೆಯ ತುಂಬಾ ಮಾವಿನ ಹಣ್ಣಿನ ಸೀಕರಣೆ ಮಾಡಿಸಿರುತ್ತಾರೆ. ದೇಸಾಯರ ಮಗ ಬಹಳ ಚಿಕ್ಕವನು ಈ ಕೊಳಗ ಪಾತ್ರೆಯಲ್ಲಿ ಏನಿದೆ ಎಂದು ಮೆಟ್ಟಂಗಾಲು ಇಟ್ಟು ನೋಡುವಾಗ ಪಾತ್ರೆಯೊಳಗೆ ಬಿದ್ದು ಮೃತನಾಗುತ್ತಾನೆ. ಈ ಆಭಾಸವನ್ನು ಯಾರಿಗೂ ತಿಳಿಸದೆ ದಂಪತಿಗಳು ದೂರದೂರವಾಗೇ ಇರುತ್ತಾರೆ. ತೀರ್ಥ ಕೊಡುವ ಸಮಯದಲ್ಲಿ ಸ್ವಾಮಿಗಳು

ದೇಸಾಯಿ ದಂಪತಿಗಳನ್ನು ಕರೆಯುತ್ತಾರೆ. ಅವರು ದುಃಖದಿಂದ ನಿಜಸ್ಥಿಯನ್ನು ತಿಳಿಸುತ್ತಾರೆ. ಆಗ ಸ್ವಾಮಿಗಳು ಆ ಕೂಸಿನ ಶವವನ್ನು ತರಿಸಿ ಮಂತ್ರೋದಕದಿಂದ ಪ್ರೋಕ್ಷಿಸಲು ಆ ಕೂಸು ಎದ್ದು ಕೂಡುತ್ತದೆ.

೭

**ಕರಿಯ ಮೊರೆಕೇಳಿ ತ್ವರಿತದಿ ಬಂದೆಯಾ** : ಮೊಸಳೆಯು ಗಜರಾಜನ ಕಾಲನ್ನು ಕಚ್ಚಿ ಕೊಂಡಿರಲು ಗಜರಾಜನು ಆರ್ತನಾಗಿ ಭಗವಂತನನ್ನು ವಾಸುದೇವಾ ಎಂದು ಕೂಗಲು ಶ್ರೀ ಹರಿಯು ಚಕ್ರಧರನಾಗಿ ಬಂದು ಮೊಸಳೆಯನ್ನು ಚಕ್ರದಿಂದ ಕತ್ತರಿಸಿ ಗಜರಾಜನನು ಬಿಡಿಸಿದ ಗಜೇಂದ್ರಮೋಕ್ಷದ ಪ್ರಸಂಗ ಶ್ರೀಮದ್ಭಾಗವತದಲ್ಲಿ ಬರುತ್ತದೆ.

೮

**ಲಕ್ಷ್ಮಿಯಿಲ್ಲದೆ ನಾನಿರಲಾರೆನೆಂದು ವೈಕುಂಠವ ಬಿಟ್ಟು ಬಂದೆಯಾ** : ಯಾಗ ಮಾಡುತ್ತಿದ್ದ ಅಗಸ್ತ್ಯಾದಿ ಋಷಿಗಳನ್ನು ಕುರಿತು ನಾರದ ಮುನಿಯು ಈ ಯಜ್ಞದ ಫಲವನ್ನುಯಾರಿಗೆ ಕೊಡುತ್ತೀರಿ ಎಂದು ಕೇಳಿದಾಗ ಅದುವರೆಗೂ ಆ ಯೋಚನೆಯನ್ನೇ ಮಾಡದಿದ್ದ ಋಷಿಗಳು ತ್ರಿಮೂರ್ತಿಗಳಲ್ಲಿ ಯಾರೂ ಶ್ರೇಷ್ಠ ಎಂಬುದನ್ನು ತಿಳಿದು ಬರಲು ಭೃಗು ಋಷಿಗಳನ್ನು ಪ್ರಾರ್ಥಿಸುತ್ತಾರೆ.

ಆಗ ಭೃಗು ಋಷಿಗಳು ಮೊದಲು ಸತ್ಯ ಲೋಕಕ್ಕೆ ಬರುತ್ತಾರೆ. ಅಲ್ಲಿ ಬ್ರಹ್ಮದೇವರು ಸರಸ್ವತೀ ದೇವಿಯೊಡನೆ ಏಕಾಂತದಲ್ಲಿದ್ದು ಭೃಗುಋಷಿಗಳ ಆಗಮನವನ್ನೇ ಕಾಣದಿರುತ್ತಾನೆ. ಆಗ ಭೃಗುಋಷಿಗಳು ಬ್ರಹ್ಮದೇವರಿಗೆ – 'ನಿನಗೆ ಭೂಲೋಕದಲ್ಲಿ ಪೂಜೆಯೇ ಬೇಡ' ವೆಂದು ಶಾಪಕೊಟ್ಟು ಕೈಲಾಸಕ್ಕೆ ಬರಲು ಶಿವನು ಪಾವರ್ತಿಯೊಡನೆ ಸರಸ ಸಲ್ಲಾಪದಲ್ಲಿ ತೊಡಗಿದ್ದು ಪಾರ್ವತಿಯು ಋಷಿಗಳ ಆಗಮನವನ್ನು ತಿಳಿಸಿದಾಗ್ಯೂ, ಅದನ್ನು ನಿರ್ಲಕ್ಷಿಸುತ್ತಾನೆ. ಭೃಗುವು ಶಿವನಿಗೆ – ನಿನ್ನ ಲಿಂಗಕ್ಕೆ ಪೂಜೆಯಾಗಲಿ ಎಂದು ಶಪಿಸಿ ವೈಕುಂಠಕ್ಕೆ ಬರುತ್ತಾರೆ. ಅಲ್ಲೂ ಸಹಾ ಶ್ರೀಹರಿಯ ಪಾದಗಳನ್ನು ಲಕ್ಷ್ಮೀದೇವಿಯರು ಒತ್ತುತ್ತಿರುತ್ತಾರೆ. ಭೃಗುಮುನಿಯು ಕೋಪವನ್ನು ತಾಳಲಾರದೆ ಶ್ರೀ ಹರಿಯ ವಕ್ಷ ಸ್ಥಳವನ್ನ ಝಾಡಿಸಿ ಒದೆಯುತ್ತಾರೆ. ಶ್ರೀಹರಿಯು ಒಡನೆಯೇ ಎದ್ದು ಋಷಿಗಳನ್ನು ಸತ್ಕರಿಸಿ ನನ್ನ ಹೃದಯ ವಜ್ರಸಮವಾದುದು. ಅಂತಹ ಕಠಿಣ ಹೃದಯವನ್ನು ಒದ್ದ ತಮ್ಮ ಪಾದಕ್ಕೆ ಎಷ್ಟು ನೋವಾಗಿದೆಯೋ ಎಂದು ಅವರನ್ನು ಆದರಿಸುತ್ತಾರೆ. ತೃಪ್ತಿಗೊಂಡ ಭೃಗುಋಷಿಗಳು ತ್ರಿಮೂರ್ತಿಗಳಲ್ಲಿ ಶ್ರೀ ಹರಿಯೇ ಶ್ರೇಷ್ಠನೆಂಬುದಾಗಿ ನಿರ್ಣಯ ಕೊಡುತ್ತಾರೆ.

ಅತ್ತ ಲಕ್ಷ್ಮೀದೇವಿಯವರಿಗೆ ಯಃಕಶ್ಚಿತನಾದ ಮಾನವನೊಬ್ಬನು ತನ್ನ ಆವಾಸಸ್ಥಾನವಾದ ಭಗವಂತನ ಎದೆಯನ್ನು ಒದ್ದದ್ದನ್ನು ಕಂಡು ಮನನೋಯುತ್ತಾಳೆ. ಅಷ್ಟೇ ಅಲ್ಲದೆ ತನ್ನ ರಮಣನು ಭೃಗು ಮಹರ್ಷಿಗೆ ಆದರ\ಸತ್ಕಾರ ಮಾಡಿದ್ದನ್ನು ಕಂಡು ಕುಪಿತಳಾಗಿ ವೈಕುಂಠವನ್ನು ಬಿಟ್ಟು ಕೊಲ್ಲಾಪುರಕ್ಕೆ ಹೊರಟು ಹೋಗುತ್ತಾಳೆ. ಆಗ ಸ್ವಾಮಿಯು ನನ್ನ ಪತ್ನಿ ನನ್ನನ್ನು ತೊರೆದು ಹೋದ ಮೇಲೆ ನಾನೊಬ್ಬನೇ ವೈಕುಂಠದಲ್ಲಿ ಹೇಗಿರಲಿ ಎಂದು ಭೂಲೋಕದಲ್ಲಿ ಪಾವನವಾಗಿರುವ ವೇಂಕಟಾದ್ರಿಗೆ ಬಂದು ನೆಲೆಸುತ್ತಾನೆ.

## ೭. ಸುಂದರಮ್ಮನವರ ಕೀರ್ತನೆಗಳು

೫

**ಮಥುರಾಪುರದಿಂದ ಅಕ್ರೂರ ಬಂದನು** : ಬಲರಾಮಕೃಷ್ಣರನ್ನು ಹೇಗಾದರೂ ಮಾಡಿ ಕೊಲ್ಲಲಿಕ್ಕಾಗಿ ಮಲ್ಲಹಬ್ಬದ ನೆವದಿಂದ ಕಂಸನು ನಂದಗೋಕುಲದಿಂದ ಕರೆದುಕೊಂಡು ಬರುವಂತೆ ಅಕ್ರೂರನನ್ನು ಕಳಿಸುತ್ತಾನೆ. ಶ್ರೀಕೃಷ್ಣ ಬಲರಾಮ ತಾವು ಮಲ್ಲಹಬ್ಬಕ್ಕೆ ಹೋಗಿ ಬರುತ್ತೇವೆಂದು ಅವರ ಅಪ್ಪಣೆ ಪಡೆದು ಬೆಳಗಿನ ಝೂವದಲ್ಲೇ ಹೊರಡಲು ತೊಡಗುತ್ತಾರೆ. ಅಷ್ಟರಲ್ಲಿ ಅಕ್ರೂರನು ಹಿಂದಿನ ರಾತ್ರಿ ರಥವನ್ನು ತೆಗೆದುಕೊಂಡು ಬಂದು ಬಾಲಕರಿಬ್ಬರನ್ನೂ ಕರೆದುಕೊಂಡು ಹೋಗಲು ಬಂದಿದ್ದಾನೆಂಬ ವಿಚಾರ ತಿಳಿದು ಗೋಪಬಾಲೆಯರೆಲ್ಲಾ ರಥವನ್ನು ಅಡ್ಡಗಟ್ಟಿ ಶ್ರೀಕೃಷ್ಣನನ್ನು ನೀನು ಮತ್ತೆ ಯಾವಾಗ ಮರಳಿ ಬರುತ್ತೀಯೆ. ನಿನ್ನನ್ನು ಬಿಟ್ಟಿರಲಾರೆವು ಎಂದು ಕೇಳುತ್ತಾರೆ.

**ಮಂದರೋದ್ಧರ ಮಾವ ಕಂಸನ ಕೊಂದು** : ಶ್ರೀ ಕೃಷ್ಣ ಬಲರಾಮರಿಗೆ ಕಂಸನು ತಮ್ಮನ್ನು ಕರೆಸಿದ ವಿಚಾರ ಚೆನ್ನಾಗಿ ತಿಳಿದಿರುತ್ತದೆ. ಅದರಂತೆ ಶ್ರೀಕೃಷ್ಣನು ತನ್ನ ಮಾವನಾದ ಕಂಸನನ್ನು ಮುಷ್ಟಿಯುದ್ಧದಿಂದ ಕೊಂದು ಹಾಕುತ್ತಾನೆ.

**ಕುಬುಜೆಯಿಂದ ಗಂಧವ ಕೊಂಡನು** : ಶ್ರೀಕೃಷ್ಣ ಬಲರಾಮರು ಮಥುರಾ ಪಟ್ಟಣಕ್ಕೆ ಬರಲು ಇವರಿಗಾಗಿಯೆ ಕಾದಿದ್ದ ಕುಬ್ಜೆಯು ಇವರಿಗೆ ಗಂಧವನ್ನು ಕೊಡುತ್ತಾಳೆ. ಶ್ರೀಕೃಷ್ಣನು ಗಂಧವನ್ನು ಹಚ್ಚಿಕೊಂಡು ಕುಬ್ಜೆಯನ್ನು ಎತ್ತಿ ನಿಲ್ಲಿಸಿ ಅವಳ ಗೂನು ಬೆನ್ನನ್ನು ಸರಿಪಡಿಸುತ್ತಾನೆ.

೬

**ವಟಪತ್ರಶಾಯಿ** : ಪ್ರಳಯಕಾಲದಲ್ಲಿ ಭೂಮಂಡಲವೆಲ್ಲಾ ಜಲಾವೃತವಾದಾಗ ಆ ಪ್ರಳಯ ಜಲಧಿಯಲ್ಲಿ ರಮಾದೇವಿಯರು ವಟಪತ್ರವಾಗಿ ತೇಲಾಡುತ್ತಿರುತ್ತಾರೆ.

ಶ್ರೀಮನ್ನಾರಾಯಣನು ಬಾಲರೂಪದಿಂದ ತನ್ನ ಕಾಲಿನ ಹೆಬ್ಬೆರಳನ್ನು ಚೀಪುತ್ತಾ ಆ ವಟಪತ್ರದ ಮೇನೆ ಮಲಗಿರುತ್ತಾನೆ.

೯

**ಮಂದರೋದ್ಧರ** : ದೇವ-ದಾನವರು ಅಮೃತವನ್ನು ಪಡೆಯಲಿಕ್ಕಾಗಿ ಕ್ಷೀರಸಾಗರವನ್ನು ಮಥಿಸಲು ಸಿದ್ಧರಾಗುತ್ತಾರೆ. ಆಗ ಮಂದರ ಪರ್ವತವನ್ನು ಕಡೆಗೋಲಾಗಿ ಮಾಡಿಕೊಳ್ಳಲು ಅದನ್ನು ಸಮುದ್ರದಲ್ಲಿ ಇಳಿಸುತ್ತಾರೆ. ಅದು ಮುಳುಗಿ ಹೋಗುತ್ತದೆ. ಆಗ ಶ್ರೀ ಹರಿಯು ಕೂರ್ಮ ರೂಪವನ್ನು ತಾಳಿ ತನ್ನ ಬೆನ್ನಿನ ಮೇಲೆ ಪರ್ವತವನ್ನು ಹೊತ್ತು ಮಥಿಸಲು ಅನುವು ಮಾಡಿಕೊಡುತ್ತಾನೆ.

**ಹಿರಣ್ಯಾಕ್ಷನ ತರಿದಂಥ ಧೀರ** : ಹಿರಣ್ಯಾಕ್ಷನೆಂಬ ದುರುಳ ದೈತ್ಯನು ಭೂಮಿಯನ್ನು ಚಾಪೆಯಂತೆ ಸುತ್ತಿ ಸಮುದ್ರದಲ್ಲೆಸೆದಾಗ ಭೂದೇವಿಯ ಮೊರೆಯನ್ನು ಕೇಳಿ ಮಹಾವಿಷ್ಣುವು ವರಹಾರೂಪವನ್ನು ತಾಳಿ ತನ್ನ ಕೋರೆದಾಡೆಗಳಿಂದ ಭೂಮಿಯನ್ನು ಎತ್ತಿ ಉದ್ಧರಿಸುತ್ತಾನೆ.

**ಬಲಿಯ ಸೊಕ್ಕನು ಮುರಿದೆ** : ಬಲಿಯು ಇಂದ್ರಪದವಿ ಪಡೆಯಲಿಕ್ಕಾಗಿ ತೊಂಭತ್ತೊಂಭತ್ತು ಯಾಗಗಳನ್ನು ಮಾಡಿ ನೂರನೇ ಯಾಗವನ್ನು ಮಾಡುತ್ತಿರಲು ದೇವತೆಗಳ ಮೊರೆ ಕೇಳಿದ ಮಹಾವಿಷ್ಣುವು ವಾಮ ವೇಷದಿಂದ ಚಿಕ್ಕ ಬಾಲಕನ ರೂಪದಿಂದ ಯಾಗಶಾಲೆಗೆ ಹೋಗಿ ಮೂರು ಅಡಿ ಭೂಮಿಯನ್ನು ದಾನವಾಗಿ ಬೇಡುತ್ತಾನೆ. ಬಲಿಯು ಮೂರು ಅಡಿ ಭೂಮಿ ಧಾರಾ ಪುರಸ್ಸರವಾಗಿ ದಾನಮಾಡಲು ವಾಮನನಾದ ಪರಮಾತ್ಮನು ಭೂಮಿಯಿಂದ ಅಂತರಿಕ್ಷದವರೆಗೂ ಬೆಳೆದು ತ್ರಿವಿಕ್ರಮನಾಗಿ ಒಂದು ಹೆಜ್ಜೆಯಿಂದ ಭೂಮಂಡಲವನ್ನೂ, ಇನ್ನೊಂದುರಿಂದ ನಭೋಮಂಡಲವನ್ನೂ ವ್ಯಾಪಿಸಿಕೊಂಡು ಮೂರನೆ ಹೆಜ್ಜೆಯನ್ನು ಎಲ್ಲಿಡಲೆಂದು ಕೇಳಲು ಶ್ರೀ ಹರಿಯ ಮಹಿಮೆಯನ್ನರಿತ ಬಲಿ ಚಕ್ರವರ್ತಿಯು ಅದನ್ನು ತನ್ನ ತಲೆಯ ಮೇಲಿಡುವಂತೆ ಕೇಳಿಕೊಳ್ಳುತ್ತಾನೆ. ಪರಮಾತ್ಮನು ಬಲಿಯ ತಲೆಯ ಮೇಲೆ ಮೂರನೇ ಹೆಜ್ಜೆಯನ್ನಿಟ್ಟು ಅವನನ್ನು ಪಾತಾಳಕ್ಕೆ ತುಳಿದು ಅವನು ಅಲ್ಲಿಯೇ ಇರಬೇಕೆಂದು ಶಾಸನ ಮಾಡುತ್ತಾನೆ.

**ಕಲಿಮುಖ ದೈತ್ಯರ ಅಳಿಯುವ ಕಲ್ಕಿ** : ಯುಗಗಳಲ್ಲಿ ನಾಲ್ಕನೇ ಯುಗವಾದ ಕಲಿಯುಗದಲ್ಲಿ ಸನಾತನ ಧರ್ಮಾಚರಣೆಗಳೆಲ್ಲಾ ಅಳಿದು ದೈತ್ಯರೇ ಪ್ರಬಲರಾಗುವಾಗ ಮಹಾವಿಷ್ಣುವು ಕುದುರೆಯನ್ನೇರಿ ಕೈಯಲ್ಲಿ ಕತ್ತಿಯನ್ನು ಹಿಡಿದು ಕಲ್ಕ್ಯಾವತಾರವಾಗಿ ಬಂದು ದುಷ್ಟರನ್ನು ಶಿಕ್ಷಿಸಿ ಮತ್ತೆ ಧರ್ಮವನ್ನು ಸ್ಥಾಪನೆ ಮಾಡುತ್ತಾನೆ.

೧೨

**ಗೋಪಿಚಂದನದಿಂದ ಆನಂದತೀರ್ಥರು ತಂದ ಮುದವು** : ಒಮ್ಮೆ ಶ್ರೀಮಧ್ವಾಚಾರ್ಯರು ಕಡಲ ತಡಿಯಲ್ಲಿ ಆಹ್ನೀಕ ಮಾಡುತ್ತಾ ಕುಳಿತಿರುವಾಗ ಬೀಸಿದ

ಬಿರುಗಾಳಿಗೆ ಸಮುದ್ರದಲ್ಲಿ ಬರುತ್ತಿದ್ದ ಹಡಗೊಂದು ತರಗೆಲೆಯಂತೆ ತಿರುಗುತ್ತಿರುವುದನ್ನು ನೋಡಿ ತಮ್ಮ ಕಾಲೀ ಶಾಠಿಯನ್ನು ಬೀಸಿ ಅದನ್ನು ಮುಳುಗದಂತೆ ಕಾಪಾಡುತ್ತಾರೆ. ಹಡಗು ದಡವನ್ನು ಸೇರುತ್ತದೆ. ಹಡಗಿನ ಯಜಮಾನನು ತಮ್ಮನ್ನು ಕಾಪಾಡಿದ ಆಚಾರ್ಯರಿಗೆ ಅಡ್ಡಬಿದ್ದು ಬೇಡಿದ್ದನ್ನು ಕೊಡಲು ಸಿದ್ಧನಾದಾಗ ಆಚಾರ್ಯರು ಹಡಗಿನಲ್ಲಿರುವ ಎರಡು ಗೋಪಿಚಂದನದ ಗಡ್ಡೆಗಳನ್ನು ಕೊಡುವಂತೆ ಕೇಳುತ್ತಾರೆ. ಒಂದು ಗಡ್ಡೆಯಲ್ಲಿ ದ್ವಾಪರದಲ್ಲಿ ರುಕ್ಮಿಣೀದೇವಿಯವರಿಂದ ಅರ್ಚನೆಗೊಳ್ಳುತ್ತಿದ್ದ, ಕಡಗೋಲು ಮತ್ತು ಹಗ್ಗವನ್ನು ಹಿಡಿದ ಶ್ರೀಕೃಷ್ಣನ ಬಾಲ ಮೂರ್ತಿಯ ಪ್ರತೀಕವಿರುತ್ತದೆ. ಇನ್ನೊಂದರಲ್ಲಿ ಬಲರಾಮನ ಮೂರ್ತಿಯಿರುತ್ತದೆ. ಶ್ರೀ ಮಧ್ವಾಚಾರ್ಯರು ಬಲರಾಮನ ಮೂರ್ತಿಯನ್ನು ಕಡಲ ತಡಿಯಲ್ಲಿ ಸ್ಥಾಪಿಸಿ, ಶ್ರೀ ಕೃಷ್ಣನನ್ನು ಉಡುಪಿಗೆ ತಂದು ಈಗಿರುವಲ್ಲಿ ಪ್ರತಿಷ್ಠಾಪಿಸುತ್ತಾರೆ.

**ಸೋಳಸಾಸಿರ ಸುದತಿಯರೋಪ್ಪುವ ಮದವೋ** : ಜರಾಸಂಧನು ಹದಿನಾರುಸಾವಿರ ರಾಜಕನ್ಯೆಯರನ್ನು ಹಿಡಿದು ತಂದು ಸೆರೆಯಲ್ಲಿಟ್ಟಿರುತ್ತಾನೆ. ಭೀಮನಿಂದ ಜರಾಸಂಧನ ವಧೆಯಾದ ಮೇಲೆ ಈ ಕನ್ಯೆಯರಿಗೆ ಬಂಧನದಿಂದ ಬಿಡುಗಡೆಯಾಗುತ್ತದೆ. ಜರಾಸಂಧನ ಬಳಿ ಇದ್ದರೆಂಬ ಕಾರಣದಿಂದ ತಮಗೆ ವಿವಾಹವಾಗುವುದೂ ಇಲ್ಲವೋ? ನೀನೆ ನಮ್ಮನ್ನೆಲ್ಲಾ ಉದ್ಧರಿಸಬೇಕು ಎಂದು ಆ ತರುಣಿಯರು ಕೇಳಿಕೊಂಡಾಗ ಶ್ರೀಕೃಷ್ಣನು ಅಷ್ಟು ಜನರನ್ನು ಮದುವೆಯಾಗಿ ತನ್ನ ಅಂತಃಪುರದಲ್ಲಿ ಇರಿಸಿ ಕೊಳ್ಳುತ್ತಾನೆ.

**ಒಂದು ದ್ರೌಪದಿಯ ಮಾನವಾ ಕಾಯ್ದ** : ಶಕುನಿಯ ವಂಚನೆಯಿಂದ ಧರ್ಮರಾಯನು ಜೂಜಿನಲ್ಲಿ ಎಲ್ಲವನ್ನೂ ಕಳೆದುಕೊಳ್ಳುತ್ತಾನೆ. ಕೊನೆಗೆ ತಮ್ಮಂದಿರನ್ನು ಪಣಕ್ಕಿಟ್ಟು ಅವರನ್ನೂ ಸೋಲುತ್ತಾನೆ. ದ್ರೌಪದಿಯನ್ನು ಸಹಾ ಕಳೆದುಕೊಳ್ಳುತ್ತಾನೆ. ಆಗ ದುರ್ಯೋಧನನು ದ್ರೌಪದಿಯನ್ನು ರಾಜಸಭೆಗೆ ಎಳೆದುಕೊಂಡು ವಸ್ತ್ರಾಪಹರಣ ಮಾಡುವಂತೆ ದುಶ್ಯಾಸನನಿಗೆ ಆದೇಶ ನೀಡುತ್ತಾನೆ. ದುಷ್ಟನಾದ ದುಶ್ಯಾಸನನು ಅವಳನ್ನು ಮುಂದೆಲೆ ಹಿಡಿದು ಎಳೆದುಕೊಂಡು ಬರುತ್ತಾನೆ. ಯಾರು ಎಷ್ಟು ಹೇಳಿದರೂ ಕೇಳುವುದಿಲ್ಲ. ಭೀಷ್ಮ ದ್ರೋಣಾದಿಗಳು ಸಹಾ ಮೌನವಾಗಿದ್ದು ಬಿಡುತ್ತಾರೆ. ಆಗ ದ್ರೌಪದಿಯು ಶ್ರೀ ಕೃಷ್ಣನಿಗೆ ಮೊರೆಹೋಗಿ ಆರ್ತಸ್ವರದಿಂದ ಕೂಗಿಕೊಂಡಾಗ ಶ್ರೀಕೃಷ್ಣನು ಅವಳಿಗೆ ಅಕ್ಷಯಾಂಬರವನ್ನು ಕರುಣಿಸುತ್ತಾನೆ.

**ಮಡುವಿನೊಳು ಗಜರಾಜ** : ಇಂದ್ರದ್ಯುಮ್ನನೆಂಬ ರಾಜನು ತನ್ನ ಸೊಕ್ಕಿನಿಂದ ಋಷಿಗಳ ಶಾಪಕ್ಕೊಳಗಾಗಿ ಗಜರಾಜನಾಗಿ ಹುಟ್ಟಿರುತ್ತಾನೆ. ಒಮ್ಮೆ ಆ ಸಲಗನು ತನ್ನ ಹಿಂಡಿನೊಡನೆ ಹೋಗಿ ನದಿಯಲ್ಲಿ ಜಲವಿಹಾರ ಮಾಡುತ್ತಿರುವಾಗ ಮೊಸಳೆಯು ಅವನ ಕಾಲನ್ನು ಹಿಡಿದು ಬಿಡುತ್ತದೆ. ಸಲಗನು ಎಷ್ಟೇ ಪ್ರಯತ್ನ ಪಟ್ಟಾಗ್ಯೂ ಬಿಡಿಸಿಕೊಳ್ಳಲಾಗುವುದಿಲ್ಲ. ಅತೀವ ನೋವಿನಿಂದ 'ವಾಸುದೇವ' ಎಂದು ಆರ್ತನಾದ ಮಾಡಲು ಶ್ರೀಹರಿಯು ಗರುಡಾರೂಢನಾಗಿ ಬಂದು ತನ್ನ ಚಕ್ರದಿಂದ ಮೊಸಳೆಯ ಕತ್ತನ್ನು ಕತ್ತರಿಸಿ ಗಜರಾಜನನ್ನು ಉದ್ಧರಿಸುತ್ತಾನೆ.

೧೪

**ಸಂಜೀವನವ ತಂದ ವೀರ** : ರಾಮ–ರಾವಣರ ಯುದ್ಧದಲ್ಲಿ ರಾವಣನ ಮಗನ ಬಾಣದಿಂದ ಲಕ್ಷ್ಮಣ ಮೂರ್ಛೆ ಹೊಂದುತ್ತಾನೆ. ರಾಮನು ಬಹಳವಾಗಿ ವಿಲಾಪ ಮಾಡುತ್ತಾನೆ. ಆಗ ವೈದ್ಯರು ಸಂಜೀವನ ಮೂಲಿಕೆಯನ್ನು ತಂದು ಅದರ ರಸವನ್ನು ಹಿಂಡಿದರೆ ಲಕ್ಷ್ಮಣನು ಬದುಕುವನೆನ್ನುತ್ತಾರೆ. ಆಗ ಆಂಜನೇಯನು ಸಂಜೀವನ ಪರ್ವತಕ್ಕೆ ಹೋಗಿ ಅಲ್ಲಿ ಮೂಲಿಕೆಯನ್ನು ಹುಡುಕಲಾರದೆ ಸಂಜೀವನ ಪರ್ವತವನ್ನೇ ಕಿತ್ತು ತಂದು ಬಿಡುತ್ತಾನೆ. ವೈದ್ಯರು ಮೂಲಿಕೆಯಿಂದ ಲಕ್ಷ್ಮಣನನ್ನು ಬದುಕಿಸುತ್ತಾರೆ.

**ಕುಂತಿಯಾ ಕಂದ ಕೀಚಕನ ಕೊಂದ** : ಪಂಚಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದಾಗ ದ್ರೌಪದಿಯು ವಿರಾಟರಾಜನ ಹೆಂಡತಿಯ ಬಳಿ ಸೈರಂಧ್ರಿಯಾಗಿ ಕೆಲಸ ಮಾಡುತ್ತಿದ್ದಳು. ಒಮ್ಮೆ ವಿರಾಟರಾಜನ ಹೆಂಡತಿಯ ತಮ್ಮನಾದ ಕೀಚಕನ ದೃಷ್ಟಿ ಸೈರಂಧ್ರಿಯ ಮೇಲೆ ಬೀಳುತ್ತದೆ. ಅವಳನ್ನು ತನ್ನ ಮನೆಗೆ ಕಳಿಸಬೇಕೆಂದು ಅಕ್ಕನನ್ನು ಕೇಳಿಕೊಳ್ಳುತ್ತಾನೆ. ಆಕೆ ಬೇಡವೆಂದು ಎಷ್ಟು ಹೇಳಿದರೂ ಕೇಳುವುದಿಲ್ಲ. ಆಕೆ ಕೊನೆಗೆ ತನ್ನ ತಮ್ಮನಿಗೆ ಗಂಧವನ್ನು ಕೊಟ್ಟು ಬರಲು ಸೈರಂಧ್ರಿಯನ್ನು ಕಳಿಸುತ್ತಾಳೆ. ಅಲ್ಲಿ ಕೀಚಕನು ಆಕೆಯನ್ನು ಬಲಾತ್ಕರಿಸುತ್ತಾನೆ. ಆಕೆ ತಪ್ಪಿಸಿಕೊಂಡು ಬಂದು ತನ್ನ ಪತಿಯರೊಂದಿಗೆ ಈ ವಿಷಯವನ್ನು ಹೇಳಿಕೊಳ್ಳುತ್ತಾಳೆ. ಅವರೆಲ್ಲಾ ತಮ್ಮ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾರೆ. ಆದರೆ ಭೀಮನು ಮಾರನೆಯ ದಿನ ರಾತ್ರಿ ಗರಡಿಯ ಮನೆಗೆ ಬಂದರೆ ಅಲ್ಲಿ ಅವಳು ಅವನನ್ನು ಕೂಡಲು ಸಿದ್ಧಳಾಗಿರುತ್ತಾಳೆ ಎಂದು ತಿಳಿಸು ಎನ್ನುತ್ತಾನೆ. ಆಕೆಯು ಕೀಚಕನಿಗೆ ಹಾಗೆಯೇ ತಿಳಿಸುತ್ತಾಳೆ. ಅದರಂತೆ ಕೀಚಕನು ರಾತ್ರಿಯಲ್ಲಿ ಗರಡಿಯ ಮನೆಗೆ ಬಂದಾಗ ಹೆಂಗಸಿನ ವೇಷದಲ್ಲಿದ್ದ ಭೀಮನು ಕೀಚಕನನ್ನು ಕೊಂದುಹಾಕುತ್ತಾನೆ.

**ಸತಿಗೆ ಕುಸುಮವಾ ತಂದ** : ಒಂದು ದಿನ ದ್ರೌಪದಿಯು ತಲೆಗೆ ಸ್ನಾನ ಮಾಡಿ ಅಂಗಳದಲ್ಲಿ ನಿಂತು ಕೂದಲನ್ನು ಒಣಗಿಸಿಕೊಳ್ಳುತ್ತಿರುವಾಗ ಗಾಳಿಯಲ್ಲಿ ಒಂದು ಸುಂದರವಾದ ಸುಗಂಧ ಭರಿತವಾದ, ದೊಡ್ಡದಾದ ಹೂವು ತೇಲಿಕೊಂಡು ಬಂದು ಅಂಗಳದಲ್ಲಿ ಬೀಳುತ್ತದೆ. ದ್ರೌಪದಿ ಅದರ ಸೌಂದರ್ಯ, ಸುಗಂಧಗಳಿಗೆ ಮಾರುಹೋಗಿ ಅಂತಹ ಹೂಗಳು ಇನ್ನೂ ತನಗೆ ಬೇಕು ಎನ್ನುತ್ತಾಳೆ. ಅದು ಸೌಗಂಧಿಕಾ ಪುಷ್ಪ, ಕುಬೇರನ ಅಲಕಾನಗರಿಯಿಂದ ಬಂದಿರುತ್ತದೆ. ಒಡನೆ ಭೀಮನು ಅಲಕಾನಗರಿಗೆ ಹೋಗಿ ಅಲ್ಲಿನ ಉದ್ಯಾನವನವನ್ನು ಧ್ವಂಸ ಮಾಡತೊಡಗುತ್ತಾನೆ. ಈ ವಿಷಯ ತಿಳಿದ ಕುಬೇರನು ತಾನೇ ಬಂದು ಭೀಮನನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ ಸತ್ಕರಿಸುತ್ತಾನೆ ಮತ್ತು ಬಂದ ಕಾರಣವನ್ನು ಕೇಳುತ್ತಾನೆ. ಭೀಮನು ತಾನು ಸೌಗಂಧಿಕಾ ಪುಷ್ಪವನ್ನು ಪಡೆಯಲು ಬಂದಿರುವುದಾಗಿ ತಿಳಿಸಲು ಕುಬೇರನು ಒಂದು ತಟ್ಟೆಯ ತುಂಬಾ ಹೂಗಳನ್ನು ತಂದು ಭೀಮನಿಗೆ ಒಪ್ಪಿಸುತ್ತಾನೆ. ಭೀಮನು ಆ ಹೂಗಳನ್ನು ತಂದು ದ್ರೌಪದಿಗೆ ಕೊಡುತ್ತಾನೆ.

೧೫

**ಕಂಜಾಕ್ಷಿಮುಖಿಗೆ ಉಂಗುವನಿತ್ತೆ** : ಸೀತೆಯು ಅಶೋಕವನದಲ್ಲಿರುವ ಸಮಾಚಾರವನ್ನು ಹನುಮಂತ ನಿಂದರಿತ ರಾಮನು ಆಕೆಗೆ ಹನುಮಂತನ ಕೈಯಲ್ಲಿ ತನ್ನ ಮುದ್ರೆಯುಂಗುರವನ್ನು ಕಳಿಸುತ್ತಾನೆ. ಆಂಜನೇಯನು ಸೀತೆಯನ್ನು ರಹಸ್ಯವಾಗಿ ಭೇಟಿ ಮಾಡಿ ಶ್ರೀರಾಮನ ಕ್ಷೇಮ ಸಮಾಚಾರವನ್ನು ತಿಳಿಸಿ, ಶ್ರೀರಾಮನು ಇಷ್ಟರಲ್ಲಿಯೇ ಬಂದು ರಾವಣನನ್ನು ಸಂಹಾರ ಮಾಡಿ ಸೀತೆಯನ್ನು ಕರೆದೊಯ್ಯುವುದಾಗಿ ತಿಳಿಸಿ ಶ್ರೀರಾಮನ ಮುದ್ರೆಯುಂಗುರವನ್ನು ಆಕೆಗೆ ಒಪ್ಪಿಸಿ ಆಕೆಯು ಕೊಟ್ಟ ಚೂಡಾಮಣಿಯನ್ನು ಶ್ರೀರಾಮನ ಬಳಿಗೆ ಕೊಂಡೊಯ್ಯುತ್ತಾನೆ.

**ವಿಭೀಷಣಗೆ ರಾಜ್ಯಭಾರದಲ್ಲಿ ನಿಲ್ಲಿಸಿದೆ** : ರಾವಣನ ಸಂಹಾರವಾದ ಮೇಲೆ ವಿಭೀಷಣನು ರಾಮನಿಗೆ ಶರಣು ಬರುತ್ತಾನೆ. ಆಂಜನೇಯನು ವಿಭೀಷಣನ ಸಾತ್ವಿಕ ಸ್ವಭಾವವನ್ನು, ರಾಮನ ಬಗೆಗಿನ ಭಕ್ತಿಯನ್ನೂ ತಿಳಿಸಿ ಅವನಿಗೆ ಲಂಕೆಯ ರಾಜ್ಯಭಾರವನ್ನು ಕೊಡಿಸುತ್ತಾನೆ.

೧೭

**ಮಥನ ಮಾಡಲು ಸಮುದ್ರ ವಿಷಪಾನ ಮಾಡಿದೆಯೊ** : ದೇವಾಸುರರು ಅಮೃತಪ್ರಾಪ್ತಿಗಾಗಿ ಕ್ಷೀರ ಸಾಗರವನ್ನು ಮಥನ ಮಾಡಲು ಸಮುದ್ರದಿಂದ ಹಾಲಾಹಲ ವಿಷವು ಉಕ್ಕಿ ಬರುತ್ತದೆ. ಅದರ ವೇಗಕ್ಕೆ ದೇವ ದಾನವರೆಲ್ಲಾ ಹೆದರುತ್ತಾರೆ. ಆದರೆ ರುದ್ರದೇವರು ಅದನ್ನು ತಾವು ತೆಗೆದುಕೊಂಡು ಪಾನ ಮಾಡುತ್ತಾರೆ.

**ನೀಲಕಂಠನಾಮ ಬಂದನು** : ಹೀಗೆ ರುದ್ರದೇವರು ವಿಷಪಾನ ಮಾಡಲು ತೊಡಗಿದ್ದಾಗ ಪಾರ್ವತಿದೇವಿಯರು ಬಂದು ವಿಷವು ಹೊಟ್ಟೆಯೊಳಗೆ ಹೋಗದಂತೆ ಕೊರಳನ್ನು ಹಿಡಿದುಕೊಂಡು ಬಿಡುತ್ತಾರೆ. ವಿಷವು ಅಲ್ಲೇ ನಿಂತು ರುದ್ರದೇವರ ಕಂಠ ಕಪ್ಪಾಗುತ್ತದೆ. ಆದ್ದರಿಂದ ಅವರಿಗೆ ನೀಲಕಂಠನೆಂಬ ಹೆಸರು ಬಂದಿತು.

೧೯

**ವಂದಿಸುವೆನು ನಿಮಗೆ ನವವೃಂದಾವನದಲ್ಲಿರುವೋರು** : ಆನೆಗೊಂದಿಯ ಬಳಿ ತುಂಗಭದ್ರಾ ನದಿಯ ನಡುಗಡ್ಡೆಯಲ್ಲಿ ಶ್ರೀ ಮಧ್ವಾಚಾರ್ಯರ ಮೊಟ್ಟ ಮೊದಲ ಶಿಷ್ಯರಾದ ಪದ್ಮನಾಭತೀರ್ಥರೇ ಮೊದಲಾದವರ ಒಂಭತ್ತು ವೃಂದಾವನಗಳಿವೆ. ಅದರಲ್ಲಿ ವ್ಯಾಸರಾಯರ ವೃಂದಾವಬವೂ ಭವ್ಯವಾಗಿದೆ. ಈ ಪದದಲ್ಲಿ ವ್ಯಾಸರಾಯರ ವರ್ಣನೆಯನ್ನು ಮಾಡಿದ್ದಾರೆ.

೨೧

**ವಾದಿರಾಜ ವಾದಿರಾಜ** : ಭೂತರಾಜರಿಗೆ ಅನುಗ್ರಹ ಮಾಡಿದ್ದಾರೆ, ಸೋದೆಯಲ್ಲಿ ಇವರ ಬೃಂದಾವನ. ಈ ಪದದಲ್ಲಿ ವಾದಿರಾಜ ಗುರುಗಳ ಮಹಿಮೆ ವರ್ಣಿತವಾಗಿದೆ.

ಶಿರಸಿ ಹತ್ತಿರ ಇರುವ ವಾದಿರಾಜ ಗುರುಗಳು ಮುಂದಿನ ಭಾವೀಮರುತರು ಎಂದು ಸ್ಪಷ್ಟಪಡಿಸಿದ್ದಾರೆ.

### ೨೨

***ಅಷ್ಟಮಠದ ಯತಿಗಳು ಉಡುಪಿಯಲ್ಲಿ*** : ಕಳಸದ ಸುಂದ್ರಮ್ಮನವರು ಇದ್ದ ಕಾಲದಲ್ಲಿ ಉಡುಪಿಯ ಅಷ್ಟ ಮಠಗಳಲ್ಲಿ ಇದ್ದ ಯತಿಗಳನ್ನು ಸ್ತೋತ್ರ ಮಾಡಿದ್ದಾರೆ. ಆ ಯತಿಗಳು ಯಾರೆಂದರೆ :-

೧. ಸುಧೀಂದ್ರ ತೀರ್ಥರು
೨. ವಿಬುಧಪ್ರಿಯ ತೀರ್ಥರು
೩. ವಿದ್ಯಾಪುಣ್ಯ ತೀರ್ಥರು
೪. ವಿಶ್ವೇಂದ್ರ ತೀರ್ಥರು
೫. ವಿದ್ಯಾಸಮುದ್ರ ಶ್ರೀಪಾದಂಗಳವರು
೬. ರಘುಮಾನ್ಯ ತೀರ್ಥರು
೭. ಲಕ್ಷ್ಮೀಂದ್ರ ತೀರ್ಥರು
೮. ವಿಶ್ವಮಾನ್ಯ ತೀರ್ಥರು

### ೨೪

**ಮತ್ಸಾದ್ಯನಂತಾವತಾರದಿ** : ಭಗವಂತನು ಹತ್ತು ಅವತಾರಗಳನ್ನು ಎತ್ತಿದ್ದಾನೆ. ೧. ಮತ್ಸ್ಯ, ೨. ಕೂರ್ಮ, ೩. ವರಹ, ೪. ನಾರಸಿಂಹ, ೫. ವಾಮನ, ೬. ಪರಶುರಾಮ, ೭. ರಾಮ, ೮. ಕೃಷ್ಣ, ೯. ಬೌದ್ಧ, ೧೦. ಕಲ್ಕಿ.

### ೨೭

**ಕಾಳೀಯಮರ್ಧನ ಕೃಷ್ಣನೇ** : ಗೋಕುಲ ಬೃಂದಾವನದ ಬಳಿ ಹರಿಯುವ ಯಮುನಾ ನದಿಯಲ್ಲಿ ಕಾಳೀಯನೆಂಬ ಸರ್ಪ ಗರುಡನ ಭಯಕ್ಕೆ ಬಂದು ಸೇರಿ ಮಡುವೆಲ್ಲಾ ವಿಷಮಯವಾಗುವಂತಾದಾಗ ಜಲಚರ ಪ್ರಾಣಿಗಳು, ಮನುಜರು ನೀರನ್ನು ಕುಡಿಯಲಾಗದೆ ಕೃಷ್ಣನನ್ನು ಮೊರೆ ಹೊಕ್ಕರು. ಕಾಳಿಯ ಹೆಡೆಯನ್ನು ತುಳಿದು ಧ್ವಂಸ ಮಾಡಲು ನಾಟ್ಯವಾಡಿದಾಗ ಕಾಳೀ ಪತ್ನಿಯ ಬೇಡಿಕೆಯಿಂದ ಬಿಟ್ಟು ಬೇರೆಡೆಗೆ ಹೋಗೆಂದು ತಿಳಿಸಿ ಪ್ರಾಣಭಿಕ್ಷೆ ನೀಡುತ್ತಾನೆ.

## ೮. ಗುಂಡಮ್ಮನವರ ಕೀರ್ತನೆಗಳು

೧

**ಆಲದೆಲೆಯ ಮೇಲೆ ಮಲಗಿದ ಶಿಶು** : ವಟಪತ್ರಶಾಯಿಯಾಗಿ ಪ್ರಳಯಕಾಲದಲ್ಲಿ ಲಕ್ಷ್ಮೀದೇವಿಯನ್ನು ಆಲದೆಲೆಯಾಗಿಸಿ ಮಲಗಿದ ಶಿಶು ಶ್ರೀಹರಿ.

**ನಲಿಯುತ ಕನಕನ ಕಿಂಡಿಯಲಿ ನಿಂತು** : ಕನಕದಾಸರಿಗೆ ಉಡುಪಿಯ ಕೃಷ್ಣನು ಉಡುಪಿಯಲ್ಲಿ ದರ್ಶನ ಕೊಟ್ಟ (ಕಿಂಡಿ, ಕಿಟಕಿ, ಸಂದು)

೪

**ತ್ರೇತ್ರಾಯುಗದಲಿ ಜನಿಸಿ ರಘುನಾಥನ** : ತ್ರೇತ್ರಾಯುಗದಲಿ ಹನುಮಂತನಾಗಿ ರಾಮನ ಭಂಟನಾಗಿ ಸೀತೆಗೆ ಸೇತುವೆ ದಾಟಿ ಉಂಗುರವಿತ್ತು ಚೂಡಾಮಣಿ ರಾಮನಿಗೆ ಒಪ್ಪಿಸಿ ಪರಮ ಭಕ್ತನೆನಿಸಿದ

**ದ್ವಾಪರದಲಿ ಭೀಮನೆಂದೆನಿಸಿ (ಕುಂತಿಯಕುಮಾನೆಂದೆನಿಸಿ)** : ಎರಡನೆ ಅವತಾರ – ಭೀಮಸೇನ ದೇವರು ರಕ್ಕಸರನ್ನು ಸಂಹರಿಸಿದರು. ದುರುಳ ದುರ್ಯೋಧನನನ್ನು ಸಂಹರಿಸಿ ದ್ರೌಪದಿಯ ಪತಿಯಾಗಿ ಅವತರಿಸಿದನು

ಮೂರನೇ ಅವತಾರದಿ ಗುರು ಮಧ್ವರೆನಿಸಿ ಮೂರನೆ ಅವತಾರ – ಮಧ್ವಚಾರ್ಯರೆನಿಸಿ ಪಾಜಕಕ್ಷೇತ್ರ ಉಡುಪಿ ಸಮೀಪದಲ್ಲಿ ಮಧ್ಯೆ ಗೇಹ ಭಟ್ಟರ ಪುತ್ರರಾಗಿ ಜನಿಸಿ ಸಜ್ಜನರನ್ನುದ್ಧರಿಸಿ ಸುಜ್ಞಾನವನ್ನು ಬೀರಿ ಉಡುಪಿಯಲಿ ಕಷ್ಣನನ್ನು ಸ್ಥಾಪಿಸಿದರು.

ಪಾಜಕಾ ಕ್ಷೇತ್ರ – ಉಡುಪಿಯ ಸಮೀಪದಲ್ಲಿದೆ

ಘಟ್ಟದ ಕೆಳಗೆ – ಮಧ್ವರು ಹುಟ್ಟಿದ ಊರು (ಕೀ. ೫೪)

## ೯. ಸರಸ್ವತಿಬಾಯಿಯವರ ಕೀರ್ತನೆಗಳು

ಪ. ೧

೧. ಕರಿವರದ – ಗಣೇಶ, ಆನೆಯ ತಲೆಯನ್ನು ಹೊಂದಿ ಸುಪ್ರಸನ್ನನಾಗಿರುವವನು

೨. ಮೂಷಕವಾಹನ – ಇಲಿಯನ್ನು ವಾಹನವನ್ನಾಗಿ ಉಳ್ಳವನು ಗಣೇಶ

### ಪ. ೩

೩. ಮಾನುನಿ ದ್ರೌಪದಿಯ ಮೊರೆಯಕೇಳಕ್ಷಯ ನೀನೆ ಪಾಲಿಸಲಿಲ್ಲವೆ: ಕೌರವರ [illegible]ಲ್ಲಿ ಧರ್ಮರಾಯನು ಪಗಡೆಯಾಡುತ್ತಾ ರಾಜ್ಯ, ತಮ್ಮಂದಿರು ಮತ್ತು ಪತ್ನಿಯನ್ನು [illegible]ತ್ತಯಿಟ್ಟು ಸೋತಾಗ ದುಶ್ಯಾಸನನು ದ್ರೌಪದಿಯ ಮುಡಿ ಹಿಡಿದು ಅವಳನ್ನು ಸಭೆಗೆಳೆತಂದು ವಸ್ತ್ರಹರಣ ಮಾಡಲು ಪ್ರಯತ್ನಿಸುತ್ತಾನೆ. ದ್ರೌಪದಿ ಅಸಹಾಯಕಳಾಗಿ ಶ್ರೀ ಕೃಷ್ಣನಿಗೆ ಮೊರೆಯಿಟ್ಟಾಗ ಆಪದ್ಬಾಂಧವನಾದ ಆತ ದ್ರೌಪದಿಯ ವಸ್ತ್ರವನ್ನು ಅಕ್ಷಯವನ್ನಾಗಿ ಮಾಡುತ್ತಾನೆ. ವಸ್ತ್ರ ಎಳೆದಷ್ಟು ಬರುತ್ತಲೇ ಹೋಗುತ್ತದೆ.

೪. ಅಜಾಮಿಳ: ಬ್ರಾಹ್ಮಣನಾದ ಈತ ಹೊಲತಿಯೊಬ್ಬಳನ್ನು ಕಂಡು ಮೋಹಿಸಿ ಅವಳೊಂದಿಗೆ ಸಂಸಾರಸ್ಥನಾಗಿ ಮಕ್ಕಳನ್ನೂ ಪಡೆಯುತ್ತಾನೆ. ಈತ ಸಾಯುವಕಾಲದಲ್ಲಿ ಯಮ ಭಟರನ್ನು ಕಂಡು ಭಯಭೀತನಾಗಿ ನಾರಾಯಣ ಎಂದು ತನ್ನ ಕಿರಿಯಮಗನನ್ನು ಕೂಗಲು ಆ ಹರಿನಾಮಸ್ಮರಣೆಯಿಂದಲೇ ಆತನಿಗೆ ಮುಕ್ತಿ ಪ್ರಾಪ್ತವಾಗುತ್ತದೆ.

### ಪ. ೬

೫. ಉಂಗುಟದಿಂದ ಬಂದ ಗಂಗೆ: ಭೂಮಿಯನ್ನು ಅಳೆದ ಮೇಲೆ ತ್ರಿವಿಕ್ರಮನು ತನ್ನ ಪಾದದಿಂದ ಆಕಾಶವನ್ನಳೆಯಲು ಎತ್ತಲು ಆಗ ಬ್ರಹ್ಮನು ತನ್ನ ಕಮಂಡಲದ ನೀರಿನಿಂದ ಆತನ ಪಾದವನ್ನು ತೊಳೆದ ಆ ಉಂಗುಟದಿಂದ ಬಂದವಳೇ ಗಂಗೆ ಎಂಬ ಪ್ರತೀತಿ ಇದೆ.

### ಪ. ೭

೬. ಅಳಗಿರಿ: ಒಂದು ಪುಣ್ಯಸ್ಥಳ ಅಳಗಿರಿಯ ರಂಗ ಪ್ರಖ್ಯಾತವಾದ ದೇವಾಲಯ ಬೆಟ್ಟದ ಮೇಲಿದೆ.

### ಪ. ೯

೭. ಕಂಚಿ ವರದರಾಜ: ತಮಿಳು ನಾಡಿನಲ್ಲಿರುವ ಕಂಚಿ ಒಂದು ಪುಣ್ಯಕ್ಷೇತ್ರ. [illegible]ರಾಜಸ್ವಾಮಿ ಇಲ್ಲಿನ ದೇವತೆ.

### ಪ. ೧೧

೮. ಪುಟ್ಟಿದೇಳು ದಿವಸದಲ್ಲಿ ದುಷ್ಟ ಪೂತನಿ ಕೊಂದ ದೇವ : ಈಕೆ ಕಂಸನ ಪರಿವಾರದವಳು ಸುಂದರ ಸ್ತ್ರೀವೇಷದಿಂದ ನಂದನ ಮನೆಯನ್ನು ಹೊಕ್ಕು ಅಲ್ಲಿ ಶ್ರೀ ಕೃಷ್ಣನಿಗೆ ವಿಷಪೂರಿತವಾದ ಮೊಲೆಹಾಲನ್ನು ಕುಡಿಸತೊಡಗುತ್ತಾಳೆ. ಏಳುದಿನದ ಕಂದ ಶ್ರೀ ಕೃಷ್ಣ

ಆಕೆಯ ಜೀವವನ್ನೇ ಹೀರಿದಾಗ ಆಕೆ ರಾಕ್ಷಸಿಯ ಆಕಾರವನ್ನೇ ತಾಳಿ ಭಯಂಕರವಾಗಿ ಕೂಗುತ್ತಾ ಪ್ರಾಣಬಿಡುತ್ತಾಳೆ.

೯. ಪುಟ್ಟಕಾಲಲಿ ಶಕಟನಳಿದ: ಕಂಸನ ಸೇವಕ ಅಸುರ ಬಂಡಿಯಾಕಾರದಿ ಗೋಕುಲವನ್ನು ಹೊಕ್ಕು ಶ್ರೀ ಕೃಷ್ಣನ ಮೇಲೆ ಬೀಳಲು ಅವನು ತನ್ನ ಪುಟ್ಟ ಪಾದದಿಂದ ಅವನನ್ನು ತುಳಿದುಕೊಂದನು.

೧೦. ಕೇಶಿ : ಕಂಸನ ಪರಿವಾರದ ಒಬ್ಬ ರಾಕ್ಷಸ ಕುದುರೆಯಾಕಾರದ ಈತನು ಗೋಕುಲವನ್ನೇ ಪೀಡಿಸುತ್ತಿರಲು ಶ್ರೀ ಕೃಷ್ಣನು ಈತನನ್ನು ಕೊಂದು ಕೇಶವನೆಂಬ ನಾಮವನ್ನು ಪಡೆದನು.

೧೧. ತೃಣ: ಕಂಸನ ಪರಿವಾರದ ರಾಕ್ಷಸ. ಯಶೋದೆ ಮಗುವನ್ನು ಮಲಗಿಸಿ ತನ್ನ ಕೆಲಸಕ್ಕೆ ಹೋಗಿರುವಾಗ ಕಂಸನಿಂದ ಪ್ರೇರಿತನಾದ ಈತ ಸುಳಿಗಾಳಿಯ ರೂಪದಲ್ಲಿ ಬಂದು ಮಗುವನ್ನು ತರಗೆಲೆಯಂತೆ ಆಕಾಶಕ್ಕೆ ಹಾರಿಸಿಕೊಂಡು ಹೋಗುತ್ತಾನೆ. ಕೊನೆ ಕೊನೆಗೆ ಶ್ರೀ ಕೃಷ್ಣನ ಭಾರವನ್ನು ತಡೆಯಲಾರದೆ ಅವನ ವೇಗ ತಗ್ಗಿತು. ಇದು ಸಾಮಾನ್ಯ ಶಿಶುವಲ್ಲ ಇದೊಂದು ದೊಡ್ಡ ಕಲ್ಲು ಗುಂಡಾಗಿರಬೇಕು ಎಂದು ಆ ರಾಕ್ಷಸನು ಮಗುವನ್ನು ಕೆಳಗೆ ಬಿಸಾಡುವುದಕ್ಕೆ ಯತ್ನಿಸಿದನು. ಆದರೆ ಕೃಷ್ಣನು ಆತನ ಕುತ್ತಿಗೆಯನ್ನು ಬಲವಾಗಿ ಹಿಡಿದು ಬಿಟ್ಟಿದ್ದನು. ಇದರಿಂದ ರಾಕ್ಷಸನ ಉಸಿರಾಟ ನಿಂತು ಆತ ಮೃತನಾದನು.

## ಪ. ೧೩

೧೨. ಮಣ್ಣು ತಿಂದನೆಂದ್ಹೊಡೆದರೆ: ಕೃಷ್ಣನ ಬಾಲಲೀಲೆಗಳಲ್ಲಿ ಒಂದು. ಮಗು ಆಡುತ್ತಾ ಮಣ್ಣು ತಿನ್ನತೊಡಗಿದಾಗ ಜೊತೆಯಲ್ಲಿ ಆಡುತ್ತಿದ್ದ ಬಾಲಕರು ಬಂದು ಚಾಡಿ ಹೇಳುತ್ತಾರೆ. ತಾಯಿ ಯಶೋದೆ ಗದರಿಸಿ ಕೇಳಿದಾಗ ಕೃಷ್ಣ ಅದೆಲ್ಲಾ ಸುಳ್ಳು ಎನ್ನುತ್ತಾನೆ. ಬಲವಂತವಾಗಿ ಬೆಣ್ಣೆ ತೊಡುತ್ತೇನೆ ಎಂದು ಬಾಯಿ ತೆರೆಸಿದಾಗ ಆ ತಾಯಿಗೆ ಇಡೀ ಮೂರು ಲೋಕವೇ ಆ ಪುಟ್ಟ ಬಾಯಲ್ಲಿ ಕಾಣಿಸುತ್ತದೆ.

## ಪ. ೧೭

೧೩. ಒಡೆದು ಬಂದೆಯಾ ಗೋಪಿ ಚಂದನದಿಂದ: ದ್ವೈತ ಮತ ಪ್ರವರ್ತಕರಾದ ಮಧ್ವಾಚಾರ್ಯರಿಗೆ ಒಮ್ಮೆ ಸ್ವಪ್ನವಾಗಿ ಕೃಷ್ಣನು ಒಂದು ದೋಣಿಯಲ್ಲಿ ಮಣ್ಣಿನ ನಡುವೆ ಸಿಲುಕಿಕೊಂಡಂತೆಯೂ ತನ್ನನ್ನು ಮೇಲಕ್ಕೆತ್ತುವಂತೆ ಹೇಳಿದಂತೆ ಆಯಿತು. ಮಧ್ವಾಚಾರ್ಯರು

ಸಮುದ್ರತೀರಕ್ಕೆ ಬಂದು ಉತ್ತರದ ಸೌರಾಷ್ಟ್ರದಿಂದ ಬರುತ್ತಿದ್ದ ದೋಣಿಯನ್ನು ಕಂಡು ಅದರಲ್ಲಿದ್ದ ನಾವಿಕರನ್ನು ವರ್ತಕರನ್ನು ಬಿರುಗಾಳಿಯಿಂದ ಬದುಕಿಸಿ ಅವರಿಂದ ಆ ವಿಗ್ರಹವನ್ನು ಕೇಳಿ ಪಡೆದರಂತೆ. ಆ ವಿಗ್ರಹ ಗೋಪಿಚಂದನವೆಂಬ ಮಣ್ಣಿನಲ್ಲಿ ಅಡಗಿತ್ತು. ಅದೇ ಪುಟ್ಟ ಬಾಲಕೃಷ್ಣನ ಕಡಗೋಲಕೃಷ್ಣನ ವಿಗ್ರಹವನ್ನು ಮಧ್ವಚಾರ್ಯರು ಉಡುಪಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ. ಇಂದಿಗೂ ಆ ವಿಗ್ರಹ ಉಡುಪಿ ಕೃಷ್ಣನೆಂದು ಪ್ರಖ್ಯಾತವಾಗಿ ಪೂಜೆಗೊಳ್ಳುತ್ತಿದೆ.

## ಪ. ೨೬

೧೪. ನೀರ ಪೊಕ್ಕೆರು ಬಿಡೆ ನಿನ್ನ: ಮತ್ಸ್ಯಾವತಾರ ನಾರಾಯಣನ ದಶಾವತಾರಗಳಲ್ಲಿ ಮೊದಲನೆಯದು. ಸೋಮಕನೆಂಬ ರಾಕ್ಷಸನು ವೇದಗಳನ್ನು ಅಪಹರಿಸಲು ವಿಷ್ಣುವು ಮತ್ಸ್ಯವತಾರ ಹೊಂದಿ ಆ ರಕ್ಕಸನನ್ನು ಕೊಂದು ವೇದವನ್ನುದ್ಧರಿಸಿದನು

೧೫. ಭಾರ ಪೊತ್ತರೆ ನೀನೆ ಎನ್ನ: ಕೂರ್ಮ ನಾರಾಯಣನ ಎರಡನೆ ಅವತಾರ. ಸಮುದ್ರ ಮಥನ ಕಾಲದಲ್ಲಿ ದೇವತೆಗಳ ಪ್ರಾರ್ಥನೆಯಂತೆ ಮಂದರ ಪರ್ವತವನ್ನು ಸಮುದ್ರದಲ್ಲಿ ಮುಳುಗದಂತೆ ಕೂರ್ಮನಾಗಿ (ಒಂದು ಸರ್ಪವಾಗಿ) ಹರಿಯು ಎತ್ತಿಹಿಡಿದ.

೧೬. ಕಂಬದೊಳಡಗಲು ಬಿಡೆನು: ವಿಷ್ಣುವಿನ ನಾಲ್ಕನೆಯ ಅವತಾರ ಇದು. ವೈವಸ್ವತ ಮನ್ವಂತರದ ನಾಲ್ಕನೆಯ ಕೃತಯುಗದಲ್ಲಿ ನಡೆಯಿತು. ಪ್ರಹ್ಲಾದನ ಮೊರೆಯನ್ನು ಕೇಳಿ ವಿಷ್ಣುವು ಕಂಬದಿಂದ ಅವತರಿಸಿ, ಹಿರಣ್ಯಕಶಿಪುವನ್ನು ವಧಿಸಿದನು.

೧೭. ಸಂಭ್ರಮದೊಳು ಬ್ರಹ್ಮಚಾರಿಯಾಗಿರಲು: ದಶಾವತಾರಗಳಲ್ಲಿ ಐದನೆಯದು. ದೇವತೆಗಳಿಗೆ ಭಯವನ್ನುಂಟುಮಾಡಿದ ಬಲಿಯ ಯಜ್ಞಮಂಟಪಕ್ಕೆ ಬಂದು ಆತನಿಂದ ಮೂರು ಹೆಜ್ಜೆ ಸ್ಥಳವನ್ನು ದಾನವಾಗಿ ಪಡೆದು ಬಲಿಯನ್ನು ತ್ರಿವಿಕ್ರಮನಾಗಿ ರಸಾತಲಕ್ಕಟ್ಟಿದನು.

೧೮. ಕೊಡಲಿಯನು ತೋರಲು: ವಿಷ್ಣುವಿನ ಅವತಾರ. ಜಮದಗ್ನಿ ರೇಣುಕೆಯರ ಪುತ್ರ ಪರಶುರಾಮ. ಇಪ್ಪತ್ತೊಂದು ಸಾರಿ ಭೂಮಿಯನ್ನು ಸುಕ್ಷತ್ರಿಯರನ್ನು ನಾಶಮಾಡಿದವನು ತನ್ನ ತಂದೆಯ ಅಪ್ಪಣೆಯಂತೆ ತಾಯಿಯ ಶಿರಚ್ಛೇದಮಾಡಿದ.

೧೯. ನಾರಾಯಣನ ಮೂರನೆಅವತಾರ: ಮಹಾ ಬಲಿಷ್ಠನಾದ ಹಿರಣ್ಯಾಕ್ಷನು ಭೀಕರವಾದ ಗದೆಯನ್ನು ತೂಗುತ್ತಾ ಸಲಿಲಸಾರ್ವಭೌಮನಾದ ವರುಣನ ಅರಮನೆಯನ್ನು ಹೊಕ್ಕು ಅವನನ್ನು ಯುದ್ಧಕ್ಕೆ ಆಹ್ವಾನಿಸಲು ಅವನು ಶ್ರೀಹರಿಯೇ ನಿನ್ನೊಡನೆ ಸೆಣಸಾಡಲು ಸಮರ್ಥ ಎಂದು ಹೇಳಲು, ರಸಾತಲದಲ್ಲಿದ್ದ ಭುವನೋದ್ಧರಣ ಮಾಡುತ್ತಿದ್ದ ವರಹನೇ ಶ್ರೀಹರಿ ಎಂದು ತಿಳಿದು

ಅವನನ್ನು ಯುದ್ಧಕ್ಕೆ ಕರೆಯಲಾಗಿ ಶ್ರೀಹರಿಯು ಎಡಗಾಲಿನಿಂದ ಆ ರಕ್ಕಸನ ಮಹಾಗದೆಯನ್ನು ಒಡೆದು ಆತನನ್ನು ಸಂಹರಿಸಿದನು.(ಕೋರೆ ತೋರಲು ಅಂಜುವೆನೆ)

ಪ. ೩೫

೨೦. ಕಾಳಿಂಗ ಭಂಗ: ಕಾಳಿಂಗವೆಂಬ ಸರ್ಪವು ಗೋಕುಲದ ಗೋವುಗಳನ್ನೆಲ್ಲ ಹಿಂಸಿಸುತ್ತಿರಲಾಗಿ ಗೋಪಾಲರು ಕೃಷ್ಣನನ್ನು ಮೊರೆಯಿಡಲು ಕೃಷ್ಣನು ಆ ಕಾಳಿಂಗದ ಮೇಲೇರಿ ಅದನ್ನು ಮರ್ದಿಸಿದನು, ಅದರ ಮೇಲೆ ನಾಟ್ಯವಾಡಿದನು. ಕೃಷ್ಣನ ಬಾಲಲೀಲೆಗಳಲ್ಲಿ ಒಂದು.

ಪ. ೩೬

೨೧. ನಾಮಧರಿಸಿಹೆಯೊ: ತಿರುಪತಿಯ ವೆಂಕಟರಮಣ ನಾರಾಯಣನೇ ಶ್ರೀನಿವಾಸನೆಂದು ಭೂಲೋಕದಲ್ಲಿ ಅವತರಿಸಿ ಪದ್ಮಾವತಿಯನ್ನು ವಿವಾಹವಾಗುತ್ತಾನೆ. ತಿರುಪತಿಯಲ್ಲಿ ನೆಲಸುತ್ತಾನೆ, ಶ್ರೀದೇವಿ ಭೂದೇವಿಯರ ಸಹಿತವಾಗಿ.

ತ. ೩೯

೨೨. ಖಡ್ಗ ತೋರಿ ಖಳ ಪ್ರಹ್ಲಾದನಂಜಿಸೆ–ನರಸಿಂಹಾವತಾರ: ಹಿರಣ್ಯಕಶಿಪು ಖಡ್ಗ ತೋರಿ ತನ್ನ ಮಗ ಪ್ರಹ್ಲಾದನನ್ನು ಅಂಜಿಸಲು ಕಂಬದಿಂದೊಡೆದ ನರಹರಿ ಹಿರಣ್ಯಕಶಿಪುವನ್ನು ಸಂಹರಿಸುತ್ತಾನೆ.

೨೩. ತೊಡೆಯನು ಬಿಡು ಎನುತೊಡೆನೆ ನೂಕಲು: ಸ್ವಾಯಂಭುವ ಮನುವಿನ ಮೊಮ್ಮಗನಾದ ಉತ್ತಾನಪಾದನ ಮಗ ಧ್ರುವ ಸುನೀತೆ ತಾಯಿ. ಮತ್ತೊಬ್ಬ ಪತ್ನಿ ಸುರುಚಿಯ ಮಗ ಉತ್ತಮ ತಂದೆಯ ತೊಡೆಯೇರಿ ಕುಳಿತಿರಲು ಈ ಬಾಲಕನು, ಆ ಸ್ಥಾನಕ್ಕಾಗಿ ಆಸೆ ಪಟ್ಟನು ಆದರೆ ಮಲತಾಯಿಯಿಂದ ಹೀಯಾಳಿಸಲ್ಪಟ್ಟು ತಪಸ್ಸಿಗಾಗಿ ಹೊರಟು ಹೋದನು. ಚಕ್ರವರ್ತಿಯಾಗಿ ಬಹುಕಾಲ ಇದ್ದು ಮುಂದೆ ಧ್ರುವ ನಕ್ಷತ್ರದ ಶಾಶ್ವತ ಸ್ಥಾನ ಪಡೆದನು.

ಪ. ೪೨

೨೪. ಆರ್ಯರಾಮರಾಯರು: ಮಡದಿಸೀತಾಬಾಯಿ ಎಂಬುವರು– ಈ ಗ್ರಂಥದ ಕರ್ತೃಗಳಾದ ಸರಸ್ವತಿಬಾಯಿಯವರು ಇಲ್ಲಿ ತಮ್ಮ ಸೋದರಮಾವಂದಿರ ರಾಮರಾಯರನ್ನು ಅವರ ಪತ್ನಿ ಸೀತಾಬಾಯಿಯವರನ್ನು ನೆನೆದಿದ್ದಾರೆ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಅವರಿಗೆ ಈ ದಂಪತಿಗಳ ಆಶ್ರಯ ದೊರಕಿತು.

## ಪ. ೪೫

೨೫. ಮಳೂರಿನ ಅಪ್ರಮೇಯ: ಮೈಸೂರಿನ ಬಳಿ ಚನ್ನಪಟ್ಟಣದ ಹತ್ತಿರ ಮಳೂರು ಎಂಬ ಗ್ರಾಮದಲ್ಲಿ ಬಾಲಕೃಷ್ಣನ ದೇವಾಲಯವಿದೆ. ಆ ಕೃಷ್ಣನಿಗೆ ಅಪ್ರಮೇಯನೆಂದೇ ಹೆಸರು. ಪುರಂದರದಾಸರಾದಿಯಾಗಿ ಎಲ್ಲದಾಸರೂ ಮಳೂರಿನ ಅಪ್ರಮೇಯನನ್ನು ನೆನೆದಿದ್ದಾರೆ (ಜಗದೋದ್ಧಾರನಾ)

## ಪ. ೫೩

೨೬. ಬಲರಾಮ: ಶ್ರೀ ಕೃಷ್ಣನ ಅಣ್ಣ, ತಂದೆ ವಸುದೇವ ತಾಯಿ ದೇವಕಿ ಸಾಂದೀಪಿನಿ ಗುರುಗಳು ರೇವತಿ ಈತನ ಪತ್ನಿ. ಈತ ಮಹಾಶೇಷನ ಅವತಾರ ಗದಾವಿದ್ಯೆಗೆ ಹೆಸರಾದವನು.

೨೭. ಅಕ್ರೂರ: ಕ್ಷತ್ರಿಯ ನಹುಷನ ವಂಶಕ್ಕೆ ಸೇರಿದ ಸಾತ್ವತನ ಮನೆತನದ ಶ್ವಫಲ್ಕನ ಮಗ. ತಾಯಿ ಗಾಂಧಿನಿ ಕಂಸನ ಅಪ್ಪಣೆಯಂತೆ ಈತನೂ ರಾಮ ಮತ್ತು ಕೃಷ್ಣರನ್ನು ಮಥುರೆಗೆ ಕರೆದುಕೊಂಡು ಹೋಗುವಾಗ ಮಾರ್ಗದಲ್ಲಿದ್ದ ಯಮುನಾ ನದಿಯಲ್ಲಿ ಶ್ರೀ ಕೃಷ್ಣನು ಇವನಿಗೆ ತನ್ನ ದಿವ್ಯರೂಪವನ್ನ ತೋರಿಸಿದನು.

## ಪ. ೫೫

೨೮. ಕರಿಯು ಕೂಗೆ ಸಿರಿಗ್ಹೇಳದಲೆ: ಪಾಂಡ್ಯದೇಶದ ವೈಷ್ಣವರಾಜನಾದ ಇಂದ್ರದ್ಯುಮ್ನ ಅಗಸ್ತ್ಯನ ಶಾಪದಿಂದ ಗಜರಾಜನಾದ. ಒಂದು ದಿನ ಕೊಳದಲ್ಲಿ ನೀರು ಕುಡಿಯುತ್ತಿರಲು ಮೊಸಳೆಯಿಂದ ಎಳೆಯಲ್ಪಟ್ಟು ಶ್ರೀಹರಿಗೆ ಮೊರೆಯಿಟ್ಟು ವಿಪತ್ತನ್ನು ಪರಿಹರಿಸಿಕೊಂಡು ಸದ್ಗತಿಯನ್ನು ಪಡೆದ.

## ಪ. ೬೦

೨೯. ಕಾನನದೊಳು ವೃದ್ಧ ಶಬರಿಯೆಂಜಲನುಂಡ:

ಆನೆಗೊಂದಿಯಲ್ಲಿದ್ದ ಒಬ್ಬ ಬೇಡತಿ. ರಾಮ ಭಕ್ತೆಯಾದ ಈಕೆ ಸೀತೆಯನ್ನು ಹುಡುಕುತ್ತಾ ಬಂದ ಶ್ರೀರಾಮನನ್ನುಪಚರಿಸಿ, ತಾನು ರುಚಿ ನೋಡಿ ರುಚಿಯಾದ ಸಿಹಿಯಾದ ಹಣ್ಣುಗಳನ್ನು ಮಾತ್ರ ಶ್ರೀರಾಮನಿಗೆ ಅರ್ಪಿಸುತ್ತಿದ್ದಳಂತೆ ಮತಂಗ ಮುನಿಯ ಶಿಷ್ಯೆ. ಐದುನೂರು ವರ್ಷದ ವೃದ್ಧೆ.

## ಪ. ೬೪

೩೦. ಅಹಲ್ಯೆಯ ಶಾಪವ ಕಳೆದ: ಗೌತಮ ಋಷಿಯ ಪತ್ನಿ. ಈಕೆಯ ಸೌಂದರ್ಯಕ್ಕೆ ಮರುಳಾದ ದೇವೇಂದ್ರನು ಗೌತಮರು ಆಶ್ರಮದಲಿಲ್ಲದ ಸಮಯದಲ್ಲಿ, ಗೌತಮರಂತೆ ಕಪಟ

ವೇಷ ತಾಳಿ ಬಂದು ಆಕೆಯ ಪಾತಿವ್ರತ್ಯವನ್ನು ಕೆಡಿಸಿದುದರಿಂದ ಗೌತಮನು ಇಂದ್ರನಿಗೆ ಸಹಸ್ರಾಕ್ಷನಾಗುವಂತೇ ಅಹಲ್ಯೆಗೆ ಶಿಲೆಯಾಗುವಂತೆಯೂ ಶಾಪವಿತ್ತರು. ಮುಂದೆ ಶ್ರೀರಾಮನ ಪಾದಸ್ಪರ್ಶದಿಂದ ಶಿಲೆಯಾದ ಅಹಲ್ಯೆಯ ಶಾಪವಿಮೋಚನೆ ಆಯಿತು.

## ಪ. ೬೪

೩೧. ಶಿವನ ಧನುವ ಮುರಿದವನಿಜೆಯಳ ತಂದು....

ಶ್ರೀರಾಮನು ಸೀತಾಸ್ವಯಂವರಕ್ಕೆ ಬಂದು ಶಿವಧನಸ್ಸನ್ನು ಮುರಿದು ಸೀತೆಯನ್ನು ವರಿಸುತ್ತಾನೆ.

## ಪ. ೬೬

೩೨. ದಶಶಿರ ಸೀತೆಯ ಕದ್ದೊಯ್ಯಲು: ವನವಾಸದಲ್ಲಿದ್ದ ಶ್ರೀರಾಮ ಸೀತೆಯರು ಒಮ್ಮೆ ವಿಹರಿಸುತ್ತಿದ್ದಾಗ ಮಾರೀಚನೆಂಬ ರಾಕ್ಷಸ ಮಾಯಾಜಿಂಕೆಯಾಗಿ ಸೀತೆಯನ್ನು ಆಕರ್ಷಿಸುತ್ತಾನೆ. ಅದಕ್ಕೆ ಆಸೆ ಪಟ್ಟ ಸೀತೆ ಅದನ್ನು ಹಿಡಿದು ತರಲು ರಾಮನನ್ನು ಕಳುಹಿಸುತ್ತಾಳೆ ಅವನನ್ನು ಹುಡುಕುತ್ತಾ ಲಕ್ಷ್ಮಣ ಹೊರಡುತ್ತಾನೆ. ಆಗ ರಾವಣನೆಂಬ ರಾಕ್ಷಸ ಬ್ರಾಹ್ಮಣ ವೇಶದಿಂದ ಬಂದು ಸೀತೆಯನ್ನು ಕದ್ದೊಯ್ಯುತ್ತಾನೆ.

ಶರಧಿ ಲಂಘಿಸಿ ವರ ಹನುಮನು: ವಾಯುಪುತ್ರನಾದ ಆಂಜನೇಯು ಸೀತಾಪಹರಣವಾದ ನಂತರ ವಾನರನಾದ ಹನುಮನು ಸೀತೆಯನ್ನು ಅರಸುತ್ತಾ ರಾಮನ ಮುದ್ರೆಯುಂಗುರವನ್ನು ಹೊತ್ತು ಸಮುದ್ರವ ಲಂಘಿಸಿ ಲಂಕಾಪಟ್ಟಣಕ್ಕೆ ಬಂದು ಸೀತಾದೇವಿಗೆ ರಾಮನ ಸಂದೇಶವನ್ನು ಮುಟ್ಟಿಸುತ್ತಾನೆ.

## ಪ. ೭೭

೩೩. ಪುರಂದರದಾಸರು: ದಾಸವರೇಣ್ಯರು. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿದ್ದವರು. ಕನಕದಾಸರ ಸಮಕಾಲೀನರು. ವ್ಯಾಸರಾಯರ ಶಿಷ್ಯರು.

## ಪ. ೮೦

೩೪. ಅನುಸೂಯ– ಅತ್ರಿ. ಋಷಿ ದಂಪತಿಗಳು. ಈಕೆಯ ಪಾತಿವ್ರತ್ಯದ ಪರೀಕ್ಷೆಗೆ ಬಂದು ತ್ರಿಮೂರ್ತಿಗಳನ್ನು ಈಕೆ ಮೆಚ್ಚಿಸಿ ಅವರಿಂದಲೇ ದತ್ತಾತ್ರೇಯ, ಚಂದ್ರ, ದೂರ್ವಾಸರೆಂಬ ಮಕ್ಕಳನ್ನು ಪಡೆದಳು.

## ಪ. ೮೧

೩೫. ಶಿಶುಪಾಲನೊಲ್ಲೆನೆಂದು...............

ಯದುವಂಶದ ರಾಜ ಹಿರಣ್ಯಕಶಿಪುವಿನ ಅಂಶದವನು. ರುಕ್ಮಿಣಿ ಶಿಶುಪಾಲನನ್ನು ಮದುವೆಯಾಗಲು ನಿರಾಕರಿಸಿ ಕೃಷ್ಣನನ್ನು ವರಿಸುತ್ತಾಳೆ. ಕೃಷ್ಣನು ಶಿಶುಪಾಲನ ನೂರು ಅಪರಾಧಗಳನ್ನು ಕ್ಷಮಿಸುವುದಾಗಿ ಆತನ ತಾಯಿಗೆ ವರವಿತ್ತಿರುತ್ತಾನೆ. ಮುಂದೆ ಧರ್ಮರಾಯನ ರಾಜಸೂಯ ಯಾಗ ಸಂದರ್ಭದಲ್ಲಿ ಕೃಷ್ಣನನ್ನು ಹಳಿದು ಆತನಿಂದ ಹತನಾಗುತ್ತಾನೆ.

## ಪ. ೮೫

೩೬. ತುಂಬುರು ನಾರದರು

ದೇವರ್ಷಿ ವಿಶ್ವಾಮಿತ್ರನ ಮಗ. ಬ್ರಹ್ಮನ ಮಾನಸಪುತ್ರರಲ್ಲೊಬ್ಬ. ದೇವತೆಗಳಿಗೆ ಮಹಾಭಾರತದ ಕಥೆಯನ್ನು ಹೇಳಿದವನು. ಜ್ಞಾನವೃದ್ಧ, ಹರಿಭಕ್ತ, ಶ್ರೀಕೃಷ್ಣನನ್ನೇ ಗುರುವಾಗಿಟ್ಟುಕೊಂಡು ಸಂಗೀತಾಭ್ಯಾಸಮಾಡಿ ತುಂಬುರ (ಕೌಶಿಕ) ನಿಗೆ ಸರಿಸಾಟಿಯೆನಿಸಿದನು.

## ಪ. ೯೩

೩೭. ಹನುಮ–ಭೀಮ–ಮಧ್ವ

ಮಧ್ವ ಸಿದ್ಧಾಂತದ ಪ್ರಕಾರ ಇವರು ಮೂವರು ಒಬ್ಬರ ಅವತಾರ ಒಬ್ಬರು. ವಾಯುಪುತ್ರ ಹನುಮ, ಕುಂತೀಪುತ್ರನಾದ ಭೀಮ ಮತ್ತು ದ್ವೈತಮತ ಪ್ರವರ್ತಕರು ಮಧ್ವಾಚಾರ್ಯರು.

## ೯೬

೩೮. ತುಳಸಿ: ಲಕ್ಷ್ಮಿಯ ಅಂಶದಿಂದ ಹುಟ್ಟಿದವಳು. ಧರ್ಮಧ್ವಜ ಮತ್ತು ಮಾಧವಿಯರಪುತ್ರಿ. ಶಂಖಚೂಡನು ಈಕೆಯ ಪತಿ. ಸಮುದ್ರಮಥನ ಕಾಲದಲ್ಲಿ ಅಮೃತಕಲಶವು ಹುಟ್ಟಿಬರಲು ವಿಷ್ಣುವು ಅದನ್ನು ಹಿಡಿದುಕೊಂಡಾಗ ಅವನ ಕಣ್ಣುಗಳಿಂದ ಆನಂದಬಾಷ್ಪವು ಉದುರಿ ಆ ಕಲಶದಲ್ಲಿ ಬೀಳಲು ಅದರಿಂದ ಒಂದು ಸಣ್ಣಗಿಡ ಹುಟ್ಟಿತು. ಅದೇ ತುಲಸಿ. ತುಲನೆಯಿಲ್ಲದ ಈ ಗಿಡವನ್ನು ಲಕ್ಷ್ಮಿಯೊಂದಿಗೆ ಶ್ರೀವಿಷ್ಣುವು ವಿವಾಹವಾದ.

## ೧೦೧

೩೯. ಸರಸ್ವತಿ: ಬ್ರಹ್ಮನ ಪತ್ನಿ. ವಿದ್ಯಾಧಿದೇವತೆ. ವೀಣಾಪಾಣಿಯಾಗಿ ನವರಾತ್ರಿಯ ಸಂದರ್ಭದಲ್ಲಿ ವಿಶೇಷವಾಗಿ ಪೂಜಿಸಲ್ಪಡುತ್ತಾಳೆ.

೧೦೪

೪೦. ರುದ್ರದೇವರು: ಶಿವ,ಮಹಾದೇವ ಇವನು ಬ್ರಹ್ಮನ ಭ್ರೂಮಧ್ಯದಿಂದ ಜನಿಸುವಾಗಲೇಅಳುತ್ತಿದ್ದುದರಿಂದ ರುದ್ರನಾದ. ಸ್ಮಶಾನವಾಸಿ. ಮೃತ್ಯುಂಜಯ. ಈತನಹಣೆಗಣ್ಣಿನಿಂದ ಮನ್ಮಥನು ನಾಶವಾದನು. ಪಾರ್ವತಿಯ ಪತಿ (ಪರ್ವತರಾಜನಪುತ್ರಿ)

೧೧೬

೪೧. ಸುಭದ್ರೆ: ವಸುದೇವ ದೇವಕಿಯರ ಮಗಳು. ಕೃಷ್ಣನ ಸಹೋದರಿ. ಅರ್ಜುನ ಪತ್ನಿ. ಅಭಿಮನ್ಯುವಿನ ತಾಯಿ.

೧೧೭

೪೨. ರಾಘವೇಂದ್ರಯತಿಗಳು: ಮಂಚಾಲೆಯ ಯತಿವರ್ಯರು. ಈಗಿನ ಆಂಧ್ರಪ್ರದೇಶದ ಮಂತ್ರಾಲಯದಲ್ಲಿ ಇವರ ಬೃಂದಾವನವಿದೆ. ತುಂಬಾ ಜಾಗೃತ ಸ್ಥಾನವೆಂದು ಪ್ರಖ್ಯಾತವಾಗಿದೆ. ಪರಿಮಳಾಚಾರ್ಯರೆಂದು ಪ್ರಸಿದ್ಧರಾದ ಇವರು ಮಧ್ವಾಚಾರ್ಯರ ಗ್ರಂಥಗಳಿಗೆ. ಉಪನಿಷತ್ತು, ಬ್ರಹ್ಮಸೂತ್ರ ಗೀತಾದಿ ಗ್ರಂಥಗಳಿಗೂ ಟೀಕೆ ಟಿಪ್ಪಣಿಗಳನ್ನು ಬರೆದಿದ್ದಾರೆ.

# ಅನುಬಂಧ–೩

## ಕೀರ್ತನೆಗಳ ಅಕಾರಾದಿ

| ಕ್ರಮ ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|

## ೨. ಶಾಂತಿಬಾಯಿಯವರ ಕೀರ್ತನೆಗಳು

| ಕ್ರಮ ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|

## ೩. ಓರಬಾಯಿಲಕ್ಷ್ಮೀದೇವಮ್ಮ ಅವರ ಕೀರ್ತನೆಗಳು

## ೪. ಸರಸಾಬಾಯಿಯವರ ಕೀರ್ತನೆಗಳು

## ೫. ನಂಜನಗೂಡು ತಿರುಮಲಾಂಬಾ ಅವರ ಕೀರ್ತನೆಗಳು

### ಅ. ಭಕ್ತಿಗೀತಾವಳಿ

| ಕ್ರಮ ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೨. | ನೀತಿಯೇನಿದು ಕಾಂತೆ | ೬೦ |
| ೩೩. | ನೀರೆನೋಡಿವನಾರೆ | ೪೦ |
| ೩೪. | ನೀಲಮೇಘಶ್ಯಾಮ | ೯ |
| ೩೫. | ನಾರಗಾ ಎನುತೆಂದು | ೨೦ |
| ೩೬. | ನುಡಿಯಲ್ಲಿ ರಸತೋರೆ | ೩೦ |
| ೩೭. | ಪ್ರಾಣಾಧಿಕ ಬಾಬಾ | ೪೮ |
| ೩೮. | ಪ್ರಾಣೇಶನೆನ್ನೊಳಗೆ | ೩೨ |
| ೩೯. | ಪ್ರಿಯಸಖಿಯೆ ನೋಡೆನ್ನ | ೪೧ |
| ೪೦. | ಬೆಳಗುವೆನಾರತಿಯ ನಾಂ | ೫೧ |
| ೪೧. | ಬೇಡಿಕೊಂಬೆ ಹಸೆಗೇಳ್ಳೈ | ೬೩ |
| ೪೨. | ಭಳಿರೆ ಮೆಚ್ಚಿದೆ | ೬೧ |
| ೪೩. | ಬಾರೆಂದು ಹಸೆಗೆ ಕರೆವನು | ೬೪ |
| ೪೪. | ಭೃಗುವಂಶಸಂಭೂತ | ೮ |
| ೪೫. | ಮಂಗಳಂ ರಘುರಾಮಗೆ | ೭೦ |
| ೪೬. | ಮಂದರೋದ್ಧಾರ | ೧೭ |
| ೪೭. | ಮಣಿಹಾರಮಂತೊರೆದು | ೧೮ |
| ೪೮. | ಮಾತಿನೊಳು ಕಡುಜಾಣ | ೨೬ |
| ೪೯. | ಮಾನಿನೀ ವ್ರತಹರಣ | ೧೧ |
| ೫೦. | ಮುತ್ತಿನಾರತಿ | ೫೩ |
| ೫೧. | ಮೌನಮೇಪ್ರಾಣೇಶ | ೩೩ |
| ೫೨. | ರಮಣಿಮಂಜುಳವಾಣಿ | ೫೭ |
| ೫೩. | ರಮಣನಾ ವಿಭವವನು | ೪೬ |
| ೫೪. | ಲಕುಮೀಶ ನಿನಗಾರುತಿ | ೫೪ |
| ೫೫. | ಲಾಲಿಮನುಕುಲತಿಲಕ | ೬೮ |
| ೫೬. | ವನಜಗಂಧಿಯೆ ನಿನ್ನ | ೫೮ |
| ೫೭. | ವನಜಾಕ್ಷಿಕೇಳೆನ್ನ | ೩೬ |
| ೫೮. | ವರನ ಚಂದಮದೇನ | ೩೫ |

| ಕ್ರಮ ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| | **೭. ಸುಂದರಮ್ಮನವರ ಕೀರ್ತನೆಗಳು** | |
| ೧. | ಆವ ಮನುಜನು | ೩೦ |
| ೨. | ಇಂತು ಮರುಳಾದೆ | ೨೩ |
| ೩. | ಇಲ್ಲಿ ಬಾ ಇಲ್ಲಿ ಬಾ | ೨ |
| ೪. | ಈತನೇನೇ ಮುಖ್ಯಪ್ರಾಣ | ೧೪ |
| ೫. | ಎಂದಿಗು ಕಾಂಬುವೆನೋ | ೨೪ |
| ೬. | ಏನ ಪೇಳಲಿ ಗೋಪಿ | ೩ |
| ೭. | ಏಳು ಚೆನ್ನಿಗರಾಯ | ೪ |
| ೮. | ಗಜವದನ | ೧ |
| ೯. | ಗೋಪಾಲಕೃಷ್ಣ | ೧೯ |
| ೧೦. | ದಣಿಯ ನೋಡಿದೆನೊ | ೭ |
| ೧೧. | ದೂರ ನೋಡದಿರಲೊ | ೮ |
| ೧೨. | ನಾಮಮುದ್ರೆಗಳ | ೨೯ |
| ೧೩. | ನೋಡಿ ದಣಿದೆನೆ | ೨೨ |
| ೧೪. | ನೋಡಿದೆ ಹರನ | ೧೭ |
| ೧೫. | ಪುಟ್ಟಿಸಿದ್ದೇನೋ | ೨೫ |
| ೧೬. | ಬಂದು ನಿಲ್ಲೇ | ೧೩ |
| ೧೭. | ಭೂಮಿಯನು ಬಿಡಿಸು | ೨೬ |
| ೧೮. | ಮಧುರಾಪುರದಿಂದ | ೫ |
| ೧೯. | ಮಧುರೆಗೆ ಪೋಗಬ್ಯಾಡ | ೬ |
| ೨೦. | ಮೂಲನಾರಾಯಣ | ೯ |
| ೨೧. | ಯಂದೀಗೆ ಬರುತೀಯ | ೧೬ |
| ೨೨. | ಯಾವ ಪಾಪಿ ದೃಷ್ಟಿತಾಕಿತೋ | ೧೦ |
| ೨೩. | ವಾದಿರಾಜ ವಾದಿರಾಜ | ೨೧ |
| ೨೪. | ಶಂಭೋಶಂಕರ | ೧೮ |
| ೨೫. | ಸುಂದರ ಮೂರುತಿ | ೧೫ |
| ೨೬. | ಸುಂದರಾಂಗನೆ | ೧೧ |
| ೨೭. | ಸಾಗಿಬಾರಯ್ಯ | ೨೦ |
| ೨೮. | ಸಾಧನದ ಚಿಂತೆ | ೨೭ |
| ೨೯. | ಸಹಿಸಲಾರೆನೊ ವ್ಯಥೆಯ | ೨೮ |
| ೩೦. | ಸೃಷ್ಟಿಯೊಳಗೆ | ೧೨ |

# ಅನುಬಂಧ-೪

## ಸಹಾಯಕ ಸಾಹಿತ್ಯ

### ಓರಬಾಯಿಯವರ ಕೀರ್ತನೆಗಳು

| | | |
|---|---|---|
| ಕರ್ನಾಟಕ ಕವಿ ಚರಿತೆ _ ಭಾಗ ೩ | : | |
| ಕರ್ನಾಟಕದ ವೈಷ್ಣವ ಅನುಭಾವಿ | : | ನರಸಿಂಹಾಚಾರ್ಯರು |
| ಕವಯತ್ರಿಯರು | | ಡಾ|| ರುಕ್ಮಿಣಿ ಗಿರಿಮಾಜಿ |
| ದ್ವೈತ ವೇದಾಂತ ವಾಙ್ಮಯ ಹಾಗೂ | | ಮೂಲ ಡಾ|| ಬಿ.ಎನ್.ಕೆ. ಶರ್ಮ |
| ಇತಿಹಾಸ ಸಂಪುಟ -೧ | : | ಅ.ನು : ಡಾ|| ಎಂ. ಕೆ. ಭಾರತೀರಮಣಾ ಚಾರ್ಯ |
| ಪುರಾಣ ನಾಮ ಚೂಡಾಮಣಿ | : | ಬೆನಗಲ್ ರಾಮರಾವ್, ಪಾಣ್ಯಂ ಸುಂದರ ಶಾಸ್ತ್ರಿ |
| ಮಾಧ್ವ ವಾಙ್ಮಯ ತಪಸ್ವಿಗಳು (೧೯೬೯) | : | ಪಂಡರೀನಾಥಾಚಾರ್ಯ ಗಲಗಲಿ |
| ಕರ್ನಾಟಕ ಭಕ್ತ ವಿಜಯ | : | ಬೇಲೂರು ಕೇಶವದಾಸರು |
| ಶ್ರೀಮದ್ಭಾಗವತ - ದಶಮಸ್ಕಂಧ | : | ಘೂಳೀ ಕೃಷ್ಣಮೂರ್ತಾಚಾರ್ |
| ಹರಿ ಭಜನಾಮೃತಸಾರ | : | ಸೀಮಾಮಾ |
| ಹರಪನಹಳ್ಳಿ ಭೀಮವ್ವ | : | ಡಾ|| ಟಿ. ಎನ್. ನಾಗರತ್ನ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ |
| ಹೆಳವನಕಟ್ಟೆ ಗಿರಿಯಮ್ಮ | : | ಡಾ|| ಇಂದುಬಾಯಿ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ |

೧

## ಗಣಪತಿ ಸ್ತುತಿ

ಗಜವದನ ನಿನ್ನ ಚರಣಕೆ ನಮಿಸುವೆ
ಅಜನ ಅಯ್ಯನ ನಾಮ ಮರೆಯದೆ ನುತಿಸೈ ಪ.

ವೇದವ್ಯಾಸರಿಗೆ ದಾಸನೆಂದೆನಿಸಿ ವೇದಗಳೆಲ್ಲಾ
ಅತಿಮೋದದಿ ಬರೆದೇ ೧

ಜಗನ್ನಾಥ ದಾಸರಿಗೆ ಗುರುವು ನೀನೆಂದೆನಿಸಿ
ಜಗದೊಳಗೆ ಹರಿಕಥಾಮೃತ ಸುರಿಸಿದೆ ೨

ವಿಶ್ವಂಭರನೇ ಎನ್ನವಘ್ನಗಳ ಪರಿಹರಿಸಿ
ಯಜ್ಞವ್ಯಾಪಕನ ನಾಮವ ನುಡಿಸೈ ೩

ರಮಾವಲ್ಲಭ ವಿಠಲನ ನಾಮವ
ಅನುಗಾಲ ನುಡಿವಂಥ ವರಗಳ ನೀಡೈ ೪

೨

ಕೃಷ್ಣ ನಿನ್ನ ಸ್ಮರಣೆ ಎನಗೆ ಮರೆಸಬೇಡವೋ
ಎನಗೆ ಮರೆಸಬೇಡವೊ ಯನಗೆ ಮರಿರೆಸಬೇಡವೊ ಪ.

ಒಂದು ಅರಿಯದ ಮಂದ ಮತಿಯಳ ಬಂದು ಕಾಯೋ ನೀ
ಬಂದು ಕಾಯೋ ನೀ ಮಂದರೋದ್ಧರ ಸಿಂಧುಶಯನ
ಇಂದಿರೆ ರಮಣ ೧

ಸಮಯದಲ್ಲಿ ಅಲ್ಲಿ ।
ದೋಷರಹಿತ ತಾ ಗೋಚರಾನಾದನು । ಗೋಪಿಯರಿಗೆ ಆ
ಸಮಯದಲ್ಲಿ ವಾಸುದೇವನ ಕಂಡಾಸೆಯಿಂದ ।
ಸಂತೋಷದಲೀ ನುಡಿದರು ವಿನಯದಲಿ । ಬಾರಲೇ ।
ಸಖಿ ಇವ ಚೋರನು ದೊರಕಿಹ । ಶೀರಿ ಕದ್ದು
ಮರನೇರಿಹಾನು ಬಾರಲೇ । ಸಖಿ ಮರನೇರಿ ಇವನ ।
ಹಿಡತಾರೆಲೇ ಮುಂದಕ್ಕೇ ನೋಡೋಣ । ತಟ್ಟನೇ
ಮರನೇರಿ । ಕ್ರಿಷ್ಣನಾ ಹಿಡದು ಕಟ್ಟಲೂ ವಸ್ತ್ರದ
ಮಟ್ಟಿಯನೂ । ದಿಟ್ಟ ಶ್ರೀನರಸಿಂಹ ವಿಠ್ಠಲರಾಯನು
ಕೊಡದೇ ಮುಂದಕೇ ಹೋಗುವನು ॥

ಚಂದವೇನೋ ಮಂದಿವಳಗೆ । ಹೀಂಗೇ
ಮಾಡೋಡು ಇಂದು ನಮ್ಮ ಮರಿಯಾದಿ ।
ಹೀಂಗೆ ಕಳೆವೋದು ಪ

ಉಟ್ಟ ಶೀರಿ ಕದ್ದು ಬಚ್ಚಿಟ್ಟು ಕೊಂಬೋದು
ಶ್ರೇಷ್ಟವಲ್ಲ ನಿನಗೆ ಉತ್ಕೃಷ್ಟವೇನಿದು ೧

ಯಾರು ನೀನು ಶೀರೆಗಳ ಚೋರಮಾಡೋರು ।
ನಾರಿರೊಡನೇ ಪೋರಾಟಗಳ ॥ ಸಾರೆಬಿಡು
ಶೀರೆ ಕೊಡೋ ೨

ಅತ್ತಿಮಾವ ಭಾವ ಮೈದುನ । ಮತ್ತೆಜನರೆಲ್ಲ ।
ಹೊತ್ತುಬಾಳ ಹೋಯಿತೆಂದು । ಹತ್ತಿಬಡಿವರೋ ೩

ಹೊತ್ತುಬಾಳ ಸಣ್ಣವಾನು ನಮ್ಮ ಕೂಡ ಸರಸವ್ಯಾಕೆಲೋ ಬೆಣ್ಣೆ
ಕೊಡುವೆನಯ್ಯಾ ನಿನಗೆ । ನಮ್ಮವಸ್ತ್ರನೀಡೆಲಾ ೪

ನಾರಸಿಂಹವಿಠ್ಠಲ ನಿಮ್ಮ । ಪೋರಾಟಗಳನಾ ಬಾರೋ
ನಿಮ್ಮ ಜನನಿಗ್ಹೇಳಿ ದೂರುಮಾಳ್ಪೆವೋ ೫

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**




ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು